# ಇತಿಹಾಸ ದರ್ಶನ

ಸಂಪುಟ ೭ / ೧೯೯೨




ಕರ್ನಾಟಕ ಇತಿಹಾಸ ಅಕಾದೆಮಿ (ರಿ) ಬೆಂಗಳೂರು

# ಇತಿಹಾಸ ದರ್ಶನ

ಸಂಪುಟ ೭ / ೧೯೯೨

೧೯೯೧ರಲ್ಲಿ ಚಿತ್ರದುರ್ಗದಲ್ಲಿ ಸಮಾವೇಶಗೊಂಡ ಅಕಾಡೆಮಿಯ
ಐದನೆಯ ವಾರ್ಷಿಕ ಸಮ್ಮೇಳನದಲ್ಲಿ ಸಾದರಪಡಿಸಿದ ಪ್ರಬಂಧಗಳ ಸಂಪುಟ.

ಸಂಪಾದಕರು

ಡಾ|| ಸೂರ್ಯನಾಥ ಕಾಮತ್.

ದೇವರಕೊಂಡಾರೆಡ್ಡಿ.

ಜಗನ್ನಾಥ ಎಸ್.ಎ.




ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು.

**ITIHASA DARSHANA**

Proceedings of the fifth Annual
Conference of the Karnataka Ithihasa
Academy (Regd.) held at Chitradurga,
on 12th, 13th and 14th July 1991.

**Vol. 7. 1992.**

Edited by Dr. Suryanath Kamath
Devarakonda Reddy & S.A. Jagannath

Published by Karnataka Ithihasa Academy (Regd.)

'Ranganatha Nilaya' No.13 (Old No.4)
15th Cross, New Temple Road,
Malleswaram, Bangalore - 560 003.



ರೂ. ೧೦೦-೦೦

ಪರಿಶ್ರೀ ಪ್ರಿಂಟರ್ಸ್,
೧೦೦/೩, ನಾಗಪ್ಪ ಸ್ಟ್ರೀಟ್
ಪ್ಯಾಲಿಸ್ ಗುಟ್ಟಹಳ್ಳಿ,
ಬೆಂಗಳೂರು - 560 003

# ಸಂಪಾದಕೀಯ

ಚಿತ್ರದುರ್ಗದ ಬೃಹನ್ಮಠದ ಆಶ್ರಯದಲ್ಲಿ ಅಭೂತಪೂರ್ವ ವೈಭವದಿಂದ 1991ರಲ್ಲಿ ನಡೆದ ಕರ್ನಾಟಕ ಇತಿಹಾಸ ಅಕಾದೆಮಿಯ ಐದನೇಯ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧಗಳ ಸಂಕಲನವನ್ನು ನಿಮ್ಮ ಕೈಗಿಡುತ್ತಿದ್ದೇವೆ. ಸಮ್ಮೇಳನದಲ್ಲಿ ೭೦ಕ್ಕೂ ಮೇಲ್ಪಟ್ಟು ಮಂಡಿಸಲಾದ ಪ್ರಬಂಧಗಳಲ್ಲಿ ಕೆಲವು ಸಕಾಲದಲ್ಲಿ ತಲಪದ್ದರಿಂದ ಹಾಗೂ ಕೆಲವು ತೀರ ದೀರ್ಘವಾಗಿದ್ದುದರಿಂದ ಇಲ್ಲಿ ಪ್ರಕಟಿಸಲಾಗಲಿಲ್ಲ. ಸಂಪುಟ ೬ರ ಮುದ್ರಣ ಮುಗಿಯುತ್ತಿದ್ದಂತೆಯೇ ಒಂದೇ ತಿಂಗಳಲ್ಲಿ, ಅನೇಕ ಇತಿಗಿಂತಿಗಳಲ್ಲಿ ಈ ಸಂಪುಟವನ್ನು ಮುದ್ರಿಸಬೇಕಾಗಿ ಬಂತು. ಕೈಬಿಟ್ಟ ಪ್ರಬಂಧಗಳ ಲೇಖಕರಲ್ಲಿ ಕ್ಷಮೆಯಾಚಿಸುತ್ತೇವೆ. ಸಂಪುಟ ೬-೭ ಒಟ್ಟೊಟ್ಟಿಗೆ ರಾಯಚೂರಿನಲ್ಲಿ ಬಿಡುಗಡೆಯಾಗುತ್ತಿದೆ. ಅತ್ಯಂತ ಅದ್ದೂರಿಯಿಂದ ಚಿತ್ರದುರ್ಗದ ಬೃಹನ್ಮಠದವರು ಸಮ್ಮೇಳನವನ್ನು ನಡೆಸಿದ್ದಲ್ಲದೆ ಪೂಜ್ಯರಾದ ಶ್ರೀ ಮಲ್ಲಿಕಾರ್ಜುನ ಮುರುಘಾರಾಜೇಂದ್ರಸ್ವಾಮಿಗಳು ಈ ಸಂಪುಟದ ಪ್ರಕಟಣೆಗೂ ರೂ ೫೦೦೦ ಉದಾರದಾನ ನೀಡಿದ್ದು ಕೃತಜ್ಞತೆಯಿಂದ ಸ್ಮರಿಸಬೇಕಾದ ಸಂಗತಿ.

ಇದರ ಮುದ್ರಣವನ್ನು ಸಕಾಲದಲ್ಲಿ ಮಾಡಿಕೊಟ್ಟ ಪರಿಶ್ರೀ ಪ್ರಿಂಟರ್ಸ್ ಮಾಲಿಕರಿಗೂ ಸಿಬ್ಬಂದಿ ವರ್ಗದವರಿಗೂ ನಮ್ಮ ಕೃತಜ್ಞತೆಗಳು ಸಲ್ಲಬೇಕು. ಕೆಲವು ಆಂಗ್ಲ ಪ್ರಬಂಧಗಳ ಭಾಷಾಂತರವನ್ನು ಮಾಡಿಕೊಟ್ಟ ಕು॥ ಕೊ. ವಸಂತಲಕ್ಷ್ಮಿ ಕು॥ ಕೂ.ಸ. ಅಪರ್ಣಾ, ಭಾವಚಿತ್ರಗಳನ್ನು ಸಂಯೋಜಿಸಿಕೊಟ್ಟ ಶ್ರೀ ಅ.ಲ. ನರಸಿಂಹನ್ ಇವರುಗಳ ಉಪಕಾರ ಸ್ಮರಿಸುತ್ತೇವೆ.

ಡಾ॥ ಸೂರ್ಯನಾಥ ಕಾಮತ್

ದೇವರಕೊಂಡಾರೆಡ್ಡಿ

ಎಸ್.ಎ. ಜಗನ್ನಾಥ

## ಕರ್ನಾಟಕ ಇತಿಹಾಸ ಅಕಾದೆಮಿ (ರಿ)

ಬೆಂಗಳೂರು

### ಕಾರ್ಯಕಾರಿ ಸಮಿತಿ

(ದಿನಾಂಕ 10 ಜುಲೈ 1992)

ಡಾ॥ ಜಿ.ಎಸ್. ದೀಕ್ಷಿತ್, ಬೆಂಗಳೂರು

**ಅಧ್ಯಕ್ಷರು**

ಡಾ॥ ಸದ್ಯೋಜಾತ ಶಿವಾಚಾರ್ಯ ಸ್ವಾಮಿಗಳು, ದಾವಣಗೆರೆ

ಡಾ॥ ಎ.ವಿ. ನರಸಿಂಹಮೂರ್ತಿ, ಮೈಸೂರು

**ಉಪಾಧ್ಯಕ್ಷರುಗಳು**

ಡಾ॥ ಎಚ್.ಎಸ್. ಗೋಪಾಲರಾವ್, ಬೆಂಗಳೂರು

**ಪ್ರಧಾನ ಕಾರ್ಯದರ್ಶಿ**

ಡಾ॥ ಅ. ಸುಂದರ, ಧಾರವಾಡ

ಕೆ.ಎನ್. ಹಿರಣ್ಣಯ್ಯ, ಬೆಂಗಳೂರು

**ಕಾರ್ಯದರ್ಶಿಗಳು**

ಎಂ.ಬಿ. ಪಾಟೀಲ, ಬೆಂಗಳೂರು

**ಕೋಶಾಧ್ಯಕ್ಷರು**

ಡಾ॥ ಸೂರ್ಯನಾಥ ಕಾಮತ್, ಬೆಂಗಳೂರು

ಕೆ. ಅಭಿಶಂಕರ್, ಬೆಂಗಳೂರು

ಎಂ.ಜಿ. ನಾಗರಾಜ್, ಬೆಂಗಳೂರು

ಲಕ್ಷ್ಮಣ್ ತೆಲಗಾವಿ, ಬೆಂಗಳೂರು

ಸಿ.ಎಸ್. ಶ್ಯಾಮಲಾಂಬಿಕಾ, ಬೆಂಗಳೂರು

ಡಾ॥ ಎಂ.ವಿ. ಕೃಷ್ಣಪ್ಪ, ಮೈಸೂರು

ಡಾ॥ ಆರ್.ಎಂ. ಷಡಕ್ಷರಯ್ಯ, ಧಾರವಾಡ

ಸಿ.ವ್ಹಿ. ಮಠದ, ಧಾರವಾಡ

ಡಾ॥ ರಾಜಾರಾಮ ಹೆಗ್ಗಡೆ, ಶಿವಮೊಗ್ಗ

ಬಿ. ರಾಜಶೇಖರಪ್ಪ, ಚಿತ್ರದುರ್ಗ

ಪ್ರೊ॥ ಜಿ.ಎಂ. ಶ್ರೀನಿವಾಸಯ್ಯ, ತುಮಕೂರು

ಪ್ರೊ॥ ವಸಂತ ಕುಷ್ಟಗಿ, ಗುಲಬರ್ಗಾ

ಪರ್ವಿನ್ ರುಕ್ಸಾನಾ, ಗುಲಬರ್ಗಾ

ಡಾ॥ ಬಿ. ವಸಂತಶೆಟ್ಟಿ, ಬ್ರಹ್ಮಾವರ

ವಿಜಯಕುಮಾರ್, ಕೂಡ್ಲಿಗಿ

ಡಾ॥ ಶ್ರೀನಿವಾಸ ಹಾವನೂರ, ಮುಂಬಯಿ

ಸದಸ್ಯರುಗಳು



ಡಾ॥ ಬಾ.ರಾ. ಗೋಪಾಲ್ ಸಮ್ಮೇಳನಾಧ್ಯಕ್ಷರು

## ಪರಿವಿಡಿ

## ಕರ್ನಾಟಕ ಇತಿಹಾಸ ಅಕಾದೆಮಿ

## ಇತಿಹಾಸ ಪ್ರೇಮಿಗಳಿಗೆ ಕರೆ

# 'ಐತಿಹಾಸಿಕ ಪರಂಪರೆ ಉಳಿಸಿ'

ಕರ್ನಾಟಕದಲ್ಲಿ 'ಐತಿಹಾಸಿಕ ಪರಂಪರೆ ಉಳಿಸಿ' ಎಂಬ ಜನಜಾಗೃತಿ ಚಳವಳಿ ನಡೆಸಲು ಕರ್ನಾಟಕ ಇತಿಹಾಸ ಅಕಾದೆಮಿ ಯತ್ನಿಸುತ್ತಿದೆ. ಪ್ರಾಚೀನ ಕೋಟೆಗಳು, ಕಟ್ಟಡಗಳು, ದೇವಾಲಯಗಳು, ಮಸೀದಿಗಳು, ಇಗರ್ಜಿ(ಚರ್ಚು) ಗಳು, ಶಾಸನಗಳು, ವೀರಗಲ್ಲು ಮುಂತಾದ ಸ್ಮಾರಕಶಿಲೆಗಳು, ತಾಮ್ರಪಟಗಳು, ತಾಳೆಗರಿಯ ಹೊತ್ತಿಗೆಗಳು, ಐತಿಹಾಸಿಕ ದಾಖಲೆಗಳಾಗಬಲ್ಲ ಕಾಗದಪತ್ರಗಳು, ನಾಣ್ಯಗಳು, ಕಲಾಕೃತಿಗಳು (ಶಿಲ್ಪ, ಕರ-ಕುಶಲ ಕಲೆಯ ವಸ್ತುಗಳು, ವರ್ಣಚಿತ್ರಗಳು), ಆಯುಧಗಳು ಮುಂತಾದ ಪ್ರಾಚೀನ ವಸ್ತುಗಳ ರಕ್ಷಣೆಗಾಗಿ ಪ್ರಚಾರ ಮಾಡುವುದು ಈ ಚಳವಳಿಯ ಉದ್ದೇಶ.

## ಚಟುವಟಿಕೆಯ ಸ್ವರೂಪ

ಪ್ರಾಚೀನ ವಸ್ತು ಮತ್ತು ಕಲಾಕೃತಿಗಳ (ಯಾಂಟಿಕ್ವಿಟೀಸ್) ನೋಂದಾವಣೆಗೆ ಪ್ರೇರಣೆ ನೀಡುವುದು.

ಪ್ರಾಚೀನ ಶಾಸನ, ಪ್ರತಿಮೆ, ಸ್ಮಾರಕಶಿಲೆಗಳ ರಕ್ಷಣೆಯ ಅವಶ್ಯಕತೆಯ ಬಗೆಗೆ ಅವುಗಳ ಪರಿಸರದ ಜನರಿಗೆ ತಿಳುವಳಿಕೆ ನೀಡುವುದು.

ಪ್ರಾಚೀನ ಕಟ್ಟಡಗಳ ನಾಶ, ದುರುಪಯೋಗ, ಅವುಗಳ ಪರಿಸರದ ಮೇಲೆ ಒತ್ತುವರಿ ನಡೆಸುವುದರ ವಿರುದ್ಧ ಧ್ವನಿಯೆತ್ತುವುದು (ಪ್ರಚಾರ, ಸರಕಾರಕ್ಕೆ ಬರೆಯುವುದು, ಪತ್ರಿಕೆಗಳಿಗೆ ಬರೆಯುವುದು).

ಓಲೆಗರಿಗಳ ಅಸ್ತಿತ್ವದ ಬಗೆಗೆ ಅಧಿಕೃತ ಸಂಗ್ರಾಹಕರಿಗೆ (ಸಾಹಿತ್ಯ ಪರಿಷತ್ತು, ವಿಶ್ವವಿದ್ಯಾಲಯಗಳ ಸಂಬಂಧಿಸಿದ ಶಾಖೆಗಳು) ಮಾಹಿತಿ ನೀಡುವುದು. ಐತಿಹಾಸಿಕ ಮಹತ್ವದ ಕಾಗದ ಪತ್ರಗಳ ಬಗೆಗೆ ರಾಜ್ಯ ಪಾತ್ರಾಗಾರಕ್ಕೆ ಮಾಹಿತಿ ನೀಡುವುದು.

ಅಧ್ಯಾಪಕರು, ವಿದ್ಯಾರ್ಥಿಗಳು, ಬುದ್ಧಿಜೀವಿಗಳು ಈ ಚಟುವಟಿಕೆಯಲ್ಲಿ ವಿಶೇಷವಾಗಿ ಪಾಲುಗೊಳ್ಳಲು ಅಕಾದೆಮಿ ಕರೆ ನೀಡುತ್ತದೆ.

## ಸಮ್ಮೇಳನದಲ್ಲಿ ಮಂಡಿತವಾಗಿ ಮುದ್ರಣವಾಗದ ಲೇಖನಗಳು :-

1. ಚಿತ್ರದುರ್ಗ ಪರಿಸರದ ಪ್ರಾಕ್ಚಾರಿತ್ರಿಕ ಬಯಲು ಬಂಡೆಯ ಚಿತ್ರಗಳು : ಹೊಸ ಶೋಧನೆಗಳು .
   – ಲಕ್ಷ್ಮಣ ತೆಲಗಾವಿ.
2. ಬೆಂಗಳೂರು ಜಿಲ್ಲೆಯಲ್ಲಿನ ಸೂರ್ಯಾರಾಧನೆಯ ಕೇಂದ್ರಗಳು.
   – ಕೆ.ಬಿ.ಸುದರ್ಶನ.
3. ಶಾಸನಗಳಲ್ಲಿ ಪ್ರತಿಭಟನೆಯ ಅಂಶಗಳು.
   – ಕೆ.ಎಲ್.ರಾಜಶೇಖರ.
4. ಕದಂಬರ ಕಾಲದ ಶಿಕ್ಷಣ ಪದ್ಧತಿ
   – ಡಾ॥ ಮಂದಾಕಿನೀ ಪುರೋಹಿತ.
5. ಆದಿಲ್ ಶಾಹಿ ಆಸ್ಥಾನದ ಒಬ್ಬ ಜೋತಿಷಿ
   – ಕೃಷ್ಣ ಕೊಲ್ಹಾರ ಕುಲಕರ್ಣಿ.
6. ಲಕ್ಷ್ಮೇಶ್ವರ ದೇಶಗತಿ
   – ಡಾ॥ ಸರೋಜಿನಿ ಚವಲಾರ.
7. Same Political and Religious Problems in the Chalukyas of Badami
   - Dr. Ishi Kawa Kan
8. ಉದ್ಧರಣೆ ವಚನಗಳು ಮತ್ತು ಪಟಗಳು – ಒಂದು ಟಿಪ್ಪಣಿ
   – ಕ.ವೆಂ.ರಾಜಗೋಪಾಲ್.
9. ಅಮರಗೊಂಡಗುಬ್ಬಿ – ಕೆಲವು ಟಿಪ್ಪಣಿಗಳು
   – ಡಾ॥ ಸಿ.ನಾಗಭೂಷಣ.
10. Raghunatha Vilasa - A Historial Drama of Tanjore Nayaka
    - S.Ranganath.
11. ಬೆಂಗಳೂರು ನಗರ ಜನಸಂಖ್ಯೆಯ ಬೆಳವಣಿಗೆ 1901-1981.
    - ಬಿ.ನಾರಾಯಣಮ್ಮ.
12. ಮಾಡನಾಣ್ಯದ ಪ್ರಭೇದಗಳು
    – ಡಾ॥ ಎ.ವಿ.ನರಸಿಂಹಮೂರ್ತಿ.
13. ಭಾರತದ ಪ್ರಾಚೀನ ಅಳತೆಗೋಲು
    – ಶಿ.ರಾಜೇಂದ್ರಪ್ಪ.



ಜಗದ್ಗುರು ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಸ್ವಾಮಿಗಳವರು
ಸಮ್ಮೇಳನದ ಉದ್ಘಾಟಕರು



ಸಮ್ಮೇಳನಾಧ್ಯಕ್ಷರ ಮೆರವಣಿಗೆ



ಸಮ್ಮೇಳನದ ವೇದಿಕೆಯಕೆಯಲ್ಲಿ ಶ್ರೀ
ಜಗದ್ಗುರುಗಳೊಂದಿಗೆ ಇತರೆ ಗಣ್ಯರು



ಸಮೇಳನದ ಉದ್ಘಾಟನಾ ಸಮಾರಂಭದಲ್ಲಿ
ಭಾಗವಹಿಸಿದ ಪ್ರೇಕ್ಷಕರು




ಶ್ರೀ ನಿಜಲಿಂಗಪ್ಪನವರು ಉದ್ಘಾಟನಾ ಭಾಷಣ
ಮಾಡುತ್ತಿರುವುದು



ಸಮ್ಮೇಳನಾಧ್ಯಕ್ಷರ ಭಾಷಣ




ಶ್ರೀ ಮುರುಘರಾಜೇಂದ್ರ ಮಲ್ಲಿಕಾರ್ಜುನ
ಸ್ವಾಮಿಗಳವರ ಆಶೀರ್ವಚನ



ಮಠದಲ್ಲಿ ನಡೆದ ಗೋಷ್ಠಿಯೊಂದರಲ್ಲಿ
ಪಾಲ್ಗೊಂಡ ಪ್ರತಿನಿಧಿಗಳು




ಶ್ರೀ ಮುರುಘಾ ಮಠದ ಕಿರಿಯ ಸ್ವಾಮಿಗಳಾದ
ಶಿವಮೂರ್ತಿ ಸ್ವಾಮಿಗಳ ಆಶೀರ್ವಚನ

ಡಾ॥ ಬಾ.ರಾ.ಗೋಪಾಲ್

# ಕರ್ನಾಟಕ ಇತಿಹಾಸ ಅಕಾಡೆಮಿಯ ಐದನೆಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷ ಭಾಷಣ

ಸನ್ಮಾನ್ಯ ಶ್ರೀ ಜಗದ್ಗುರು ಬೃಹನ್ಮಠದ ಮುರುಘ ರಾಜೇಂದ್ರಸ್ವಾಮಿಗಳೇ, ಸ್ವಾಗತಸಮಿತಿಯ ಸದಸ್ಯರೇ, ಕರ್ನಾಟಕ ಇತಿಹಾಸಅಕಾಡಮಿಯ ಅಧ್ಯಕ್ಷರು ಹಾಗೂ ಕಾರ್ಯಕಾರಿ ಸಮಿತಿಯ ಸದಸ್ಯರೇ, ಹಿರಿಯ ಕಿರಿಯ ಸಂಶೋಧಕರೇ ಕನ್ನಡನಾಡಿನ ಮಕ್ಕಳೇ.

ಈ ಐದನೆಯ ಸಮ್ಮೇಳನಕ್ಕೆ ನನ್ನನ್ನು ಆಯ್ಕೆ ಮಾಡಿ ನಾನು ನಿಮಗೆ ಆಭಾರಿಯಾಗಿರುವಂತೆ ಮಾಡಿದ್ದೀರಿ. ನಾನು ದೊಡ್ಡವನಾಗಿದ್ದೇನೆ ಎಂಬ ಭಾವನೆಯನ್ನು ನನ್ನಲ್ಲುಂಟುಮಾಡಿದ್ದೀರಿ. ನನಗೆ ಗೊತ್ತು ನಾನು ಕನ್ನಡಮ್ಮನಿಗೆ ಸಲ್ಲಿಸಿರುವುದು ಅಳಿಲಸೇವೆ ಎಂದು. ಅಷ್ಟಕ್ಕೆ ಇಷ್ಟು ದೊಡ್ಡ ಗೌರವ ಕೊಟ್ಟು ನನ್ನನ್ನು ಕುಗ್ಗಿಸಿದ್ದೀರಿ. ಆದರೂ ಇದು ಹೆಮ್ಮೆಪಡುವ ಸಂತೋಷದ ವಿಷಯ. ನನ್ನ ಮುಂದಿನ ಕೆಲಮಾತುಗಳನ್ನು ಒಪ್ಪಿಸಿಕೊಳ್ಳಿ, ಆ ಮಾತುಗಳು ನಮ್ಮೆಲ್ಲರ ಅನಿಸಿಕೆಗಳು. ಆದರೆ ಅದಕ್ಕೊಂದು ಮೂರ್ತಸ್ವರೂಪ ಕೊಡುತ್ತಿದ್ದೇನೆ. ಅಹುದಾದ ರಹುದೆನ್ನಿ, ಅಲ್ಲವಾದ ರಲ್ಲವೆನ್ನಿ.

ಇಂದು ನಾವು ನಾಡಿನ ಐಕ್ಯತೆಯ ಬಗೆಗೆ, ಸಮಗ್ರತೆಯ ಬಗೆಗೆ, ಸಂಸ್ಕೃತಿಯ ರಕ್ಷಣೆಯ ಬಗೆಗೆ ಪುಂಖಾನುಪುಂಖವಾಗಿ ಮಾತನಾಡುತ್ತಿದ್ದೇವೆ. ನಮ್ಮ ದೇಶ ವಿವಿಧತೆಯಲ್ಲಿಯೂ ಏಕತೆಯನ್ನು ಸಾಧಿಸಿದ ದೇಶವೆಂಬುದು ನಮಗೆ ತಿಳಿದಿದೆ. ರಾಮ–ಕೃಷ್ಣರು ಭಾರತದಾದ್ಯಂತ ಮಾನ್ಯರಾದ ಅವತಾರಪುರುಷರು. ದೇಶದ ಎಲ್ಲೆಡೆಯಲ್ಲಿಯೂ ಹಿಂದೂಧರ್ಮ ಎಂಬ ಮಾತಿಗೆ ನೀಡುವ ವ್ಯಾಖ್ಯಾನ ಒಂದೇ. ಭಾಷೆಗಳು ಹಲವಷ್ಟೆ. ಆದರೂ ದೇಶದ ಭಿನ್ನ ಭಿನ್ನ ಪ್ರದೇಶಗಳು ಇದರ ಜೊತೆಗೆ ತಮ್ಮದೇ ಆದ ವೈವಿಧ್ಯಮಯ ಸಂಸ್ಕೃತಿಗಳನ್ನು ರೂಪಿಸಿಕೊಂಡಿವೆ. ಎಂತಲೇ ಬಂಗಾಲೀ, ಪಂಜಾಬಿ, ಕಾಶ್ಮೀರೀ,ಮರಾಠೀ ಮುಂತಾದ ಭಿನ್ನ ಭಿನ್ನ ಸಂಸ್ಕೃತಿಗಳು ಬೆಳೆದುಬಂದಿವೆ.

ಆದರೆ ದಕ್ಷಿಣ ಭಾರತಕ್ಕೆ ಸಂಬಂಧಿಸಿದಂತೆ ಎಲ್ಲೆಲ್ಲೂ ಪ್ರಚಲಿತವಾಗಿರುವ ಮಾತು ದ್ರಾವಿಡ ಸಂಸ್ಕೃತಿ ಎಂಬುದು – ಔತ್ತರೇಯರು ಮದರಾಸೀ ಎಂದೂ ಇದಕ್ಕೆ ಹೆಸರಿಸಿದ್ದಾರೆ. ಇದರಲ್ಲಿ ಆಂಧ್ರ ಪ್ರದೇಶದ, ಕರ್ನಾಟಕದ ಸಂಸ್ಕೃತಿ ಎಂಬುದು ಆಯಾ ರಾಜ್ಯಗಳಲ್ಲಿರುವ ಪ್ರಜೆಗಳಿಗಷ್ಟೇ ತಿಳಿದ ವಿಷಯವಾಗಿದ್ದು ಹೊರಗೆಲ್ಲ ಇದು ದಕ್ಷಿಣಭಾರತ – ದ್ರಾವಿಡ ಸಮಸ್ಕೃತಿ ಎಂದೇ ಪ್ರಸಿದ್ಧವಾಗಿದೆ. ಆಂಧ್ರರಿಗಾಗಲೀ, ಕನ್ನಡದವರಿಗಾಗಲೀ ವಿಶಿಷ್ಟವಾದ ಸಂಸ್ಕೃತಿ ಇಲ್ಲ ಎಂಬ ಧ್ವನಿ ಇದರಿಂದ ಹೊರಡುತ್ತದೆ. ನನ್ನ ಮಟ್ಟಿಗೆ ಇದೊಂದು ವಿಚಿತ್ರ ಸನ್ನಿವೇಶ. ಇದು ಏಕೆ ಹೀಗೆ?

ಇಲ್ಲಿ 'ದಕ್ಷಿಣ ಭಾರತ' ಎಂಬ ಮಾತಿನ ಅರ್ಥವನ್ನೂ ಪರಿಶೀಲಿಸಬೇಕು. ಪ್ರೊ. ನೀಲಕಂಠಶಾಸ್ತ್ರಿಗಳು 9-10ನೆಯ ಶತಮಾನಗಳವರೆಗೆ ವೇಂಗಡಮ್ ಬೆಟ್ಟ ತಮಿಳುನಾಡಿನ ಉತ್ತರ ಸೀಮೆಯಾಗಿದ್ದ ಪಶ್ಚಿಮ ಸಮುದ್ರತೀರದ ಭಾಗಗಳನ್ನೊಳಗೊಂಡಂತೆ ಹಿಂದಿನ ಮೈಸೂರು ರಾಜ್ಯದ ಬಹುಭಾಗವನ್ನಾಕ್ರಮಿಸಿತ್ತು ಎಂದಿದ್ದಾರೆ. Burton Stein ಎಂಬಾತ ಈಗಿನ ಕೇರಳವನ್ನೊಳಗೊಂಡಂತೆ ಪಶ್ಚಿಮದಲ್ಲಿ ಕರ್ನಾಟಕದ ಜಲಾನಯನ ಭೂಮಿಯನ್ನೂ ಪೂರ್ವದಲ್ಲಿ ಕೃಷ್ಣ –ಗೋದಾವರೀ ಮುಖಜ ಪ್ರದೇಶವನ್ನೂ ಒಳಗೊಂಡಿದೆ ಎಂಬ ಅಭಿಪ್ರಾಯ ಹೊಂದಿದ್ದಾರೆ. ಅದರನ್ವಯ ದಕ್ಷಿಣ ಭಾರತವು ದ್ರಾವಿಡ ಸಂಸ್ಕೃತಿಯ ಕ್ಷೇತ್ರ ಎಂದು ವರ್ಣಿಸಲಾದ ವಿಸ್ತಾರವಾದ ಪ್ರದೇಶವನ್ನೊಳಗೊಳ್ಳುತ್ತದೆ. ಎಂದ ಮೇಲೆ ತಮಿಳುನಾಡೇ ಅಲ್ಲದೆ ಆಂಧ್ರಪ್ರದೇಶ ಹಾಗೂ ಕರ್ನಾಟಕಗಳ ದಕ್ಷಿಣ ಭಾಗಗಳು ಈ ಪ್ರಾಂತಕ್ಕೊಳಪಟ್ಟಂತಾಗುತ್ತದೆ. ಪ್ರೊ. ಶಾಸ್ತ್ರಿಗಳೇ ಒಂದೆಡೆ ದಕ್ಷಿಣ ಭಾರತವೆಂದರೆ ವಿಂಧ್ಯಕ್ಕೆ ದಕ್ಷಿಣಕ್ಕಿರುವ ಪ್ರದೇಶ ಎಂಬ ವಿಶಾಲಾರ್ಥವನ್ನೂ ಕೊಟ್ಟಿದ್ದಾರೆ. ಡೇವಿಡ್ ಲುಡ್ಡನ್ ದಕ್ಷಿಣ ಭಾರತದ ಗ್ರಾಮೀಣ ಸಮಾಜವೆಂದರೆ ತಮಿಳು ಸಮಾಜವೆಂದು

ಆರ್ಥೈಸಿದ್ದಾರೆ, ಇದನ್ನು ಗಮನಿಸಿದರೆ ಈ ಎಲ್ಲ ವಿದ್ವಾಂಸರೂ ದಕ್ಷಿಣ ಭಾರತವನ್ನು ತಮಿಳುನಾಡಿನೊಡನೆ ಸಮೀಕರಿಸಿದ್ದಾರೆ ಎಂಬ ಭಾವನೆ ಉಂಟಾಗುತ್ತದೆ. ದಕ್ಷಿಣ ಭಾರತದ ಇತಿಹಾಸ ಹಾಗೂ ಸಮಾಜವನ್ನು ಕುರಿತು ಬರೆದ ಕರಾಷಿಮರವರು ಸಹ ಇದು ವಿಶೇಷವಾಗಿ ತಮಿಳುನಾಡಿಗೆ ಸಂಬಂಧಿಸಿದ ಪದ ಎಂದಿದ್ದಾರೆ. ಇದರಿಂದ ಸಂಕುಚಿತಾರ್ಥದಲಲ್ಲಿ ಇವರೆಲ್ಲರೂ ದಕ್ಷಿಣ ಭಾರತವನ್ನು ತಮಿಳುನಾಡಿಗೆ ಸೀಮಿತಗೊಳಿಸಿದ್ದಾರೆ.

ಆದರೆ ದಕ್ಷಿಣ ಭಾರತ ಎಂಬ ಮಾತು ಈಗಿನ ಆಂಧ್ರಪ್ರದೇಶ, ಕರ್ನಾಟಕ, ತಮಿಳುನಾಡು ಹಾಗೂ ಕೇರಳಗಳನ್ನೊಳಗೊಂಡ ಪ್ರದೇಶವೆಂಬುದು ಸಾಮಾನ್ಯವಾಗಿ ಒಪ್ಪತಕ್ಕದ್ದು. ಇದರಲ್ಲಿ ಮಹಾರಾಷ್ಟ್ರದ ಭಾಗಗಳು, ಕೆಲವು ಪಂಡಿತರ ಅಭಿಪ್ರಾಯದಂತೆ, ಸೇರಿದ್ದರೂ, ಇದು ಮೇಲೆ ಹೇಳಿದ ರಾಜ್ಯಗಳಿಗೆ ಸ್ಪಷ್ಟವಾಗಿ ಅನ್ವಯಿಸುತ್ತದೆ ಎಂದರೆ ತಪ್ಪೇನೂ ಆಗಲಾರದು. ಕೇರಳ ಕಳೆದ ಎರಡು ಶತಮಾನಗಳಿಂದ ರೂಪುಗೊಂಡ ರಾಜ್ಯವಾಗಿದ್ದು ಅದು ಆ ಮೊದಲು ತಮಿಳುನಾಡಿನ ಭಾಗವೇ ಆಗಿತ್ತು. ಮಲೆಯಾಳ ಭಾಷೆ ಸಹ ಹೊಸತಾಗಿ ರೂಪುಗೊಂಡ ಭಾಷೆಯೇ ಆದುದರಿಂದಐತಿಹಾಸಿಕ ಕಾಲದಿಂದ ದಕ್ಷಿಣ ಭಾರತ ಆಂಧ್ರರು, ಕನ್ನಡಿಗರು ಹಾಗೂ ತಮಿಳರು ನೆಲೆಸಿದ್ದ ಪ್ರದೇಶವಷ್ಟೆ!

ಈ ಮೂವರು ಜನಗಳ ಸಂಸ್ಕೃತಿಯಲ್ಲಿ ಭಿನ್ನತೆಗಳಿವೆ. ಇವರ ಗುಣ ನಡತೆಗಳು ಇವರು ವಾಸಿಸುವ ನೆಲದ ವಾಯುಗುಣ, ಭೌಗೋಳಿಕ ಪರಿಸರ ಇತ್ಯಾದಿಗಳಿಂದ ಬಹುಮಟ್ಟಿಗೆ ರೂಪುಗೊಂಡಿವೆ. ಆಂಧ್ರಪ್ರದೇಶ ಹಿರಿದಾದ ರಾಜ್ಯ. ಒರಿಸ್ಸಾದ ದಕ್ಷಿಣಕ್ಕೆ ಬಂಗಾಳ ಕೊಲ್ಲಿಯುದ್ದಕ್ಕೂ ತಮಿಳುನಾಡಿನ ಉತ್ತರ ಆರ್ಕಾಟ್ ಜಿಲ್ಲೆಯವರೆಗೂ ಹಬ್ಬಿ ಈ ರಾಜ್ಯ, ಪಶ್ಚಿಮಕ್ಕೆ ಹಿಂದಿನ ನೈಜಾಮ್ ರಾಜ್ಯದ ಭಾಗಗಳನ್ನು 'ರಾಯಲಸೀಮ' ಎನಿಸಿದ ದಕ್ಷಿಣದ ಪ್ರದೇಶವನ್ನೂ ಒಳಗೊಂಡಿದೆ. ಕೃಷ್ಣಾ-ಗೋದಾವರೀ ನದಿಗಳು ಈ ರಾಜ್ಯದ ಹಿರಿದಾದ ನದಿಗಳು. ಕರ್ನಾಟಕದಲ್ಲಿ ಜನಿಸಿದ ತುಂಗಭದ್ರೆಯರು ಕೃಷ್ಣೆಯನ್ನು ಸೇರುತ್ತಾರೆ. ಆಂಧ್ರಪ್ರದೇಶದ ತೀರದ ಜಿಲ್ಲೆಗಳು ವಾರ್ಷಿಕ ಮೂರುಬಾರಿ ಸಹ ಬೆಳೆ ನೀಡುವಷ್ಟು ಬಹು ಫಲವತ್ತಾದ ಪ್ರದೇಶಗಳು. ಆದರೆ ನೈಜಾಮ್‌ರಾಜ್ಯಕ್ಕೆ ಸೇರಿದ ಹಾಗೂ ಅವುಗಳ ದಕ್ಷಿಣದ ರಾಯಲಸೀಮ ಪ್ರದೇಶಗಳು ಬರಗಾಲಪೀಡಿತ ಜಿಲ್ಲೆಗಳು. ಬಹುಮಟ್ಟಿಗೆ ಮಳೆ ಹಾಗೂ ಬಾವಿ ನೀರನ್ನು ಆಧರಿಸಿದ ಇವುಗಳು ಜನರನ್ನು ಕಷ್ಟಜೀವಿಗಳನ್ನಾಗಿ ಮಾಡಿವೆ. ಆಂಧ್ರಪ್ರದೇಶದ ಜನರು ಶೂರರು. ಆದರೂ ತಮ್ಮ ಪರಿಧಿಯೊಳಗೇ ಜೀವಿಸಿದ್ದರು. ರಾಜಕೀಯವಾಗಿ ಈ ಪ್ರದೇಶ ಅನ್ಯಾಕ್ರಾಂತ. ಮೊಟ್ಟಮೊದಲ ಸಾತವಾಹನ ರಾಜ್ಯ ಹೊರತುಪಡಿಸಿದರೆ, ಕಾಕತೀಯರ ವರೆಗೆ ಆಳಿದ ಉಳಿದ ಮನೆತನಗಳು ಬಹುಕಾಲ ತಮಿಳುನಾಡಿನ ಹಾಗೂ ಕರ್ನಾಟಕಗಳ ನಡುವಣ ಕದನಗಳಿಗೆ ತುತ್ತಾದುವು :

ಆಗಿನ ಮೈಸೂರು ಸಂಸ್ಥಾನ-ಈಗಿನ ದಕ್ಷಿಣ ಕರ್ನಾಟಕದ ಬಹುಭಾಗಗಳು ತಮಿಳು ದೇಶದ ಭಾಗವಾಗಿತ್ತು ಎಂದು ಹೇಳಿರುವುದು ತಪ್ಪು. ಪಲ್ಲವರು ಸಾತವಾಹನರ ರಾಜಕೀಯ ಉತ್ತರಾಧಿಕಾರಿಗಳಾಗಿದ್ದಾಗ ಅತಿ ಸ್ವಲ್ಪಕಾಲ ಕರ್ನಾಟಕದ ಬಳ್ಳಾರಿ ಮತ್ತು ಸುತ್ತಲಿನ ಪ್ರದೇಶಗಳ ಮೇಲೆ ಒಡೆತನ ಸ್ಥಾಪಿಸಿದ್ದರು. ಆದರೆ ತದನಂತರ ಆ ಭಾಗ ಕರ್ನಾಟಕದ ಕದಂಬ ರಾಜ್ಯದ ಭಾಗವಾಯಿತು. ಅಂತೆಯೇ ಕಾವೇರಿಯ ದಕ್ಷಿಣದಲ್ಲಿನ ಗಂಗರ ರಾಜ್ಯ ಆರಂಭದಲ್ಲಿ ಪಲ್ಲವರಿಂದ ಸ್ಫೂರ್ತಿಪಡೆದು ಅವರ ಆಶ್ರಯ ಪಡೆದಿತ್ತು. ಆದರೆ ಅವರು ಗಂಗರನ್ನು ಕದಂಬರ ವಿರುದ್ಧ ಅಸ್ತ್ರವನ್ನಾಗಿ ಬಳಸತೊಡಗಿದರು. ಕೆಲಕಾಲಾನಂತರ ಗಂಗರು ತಮ್ಮ ಕಾಲಮೇಲೆ ನಿಂತು ಪಲ್ಲವರ ಬದಲು ಬಾದಾಮಿಯ ಚಾಲುಕ್ಯರೊಂದಿಗೆ ಸಂಬಂಧ ಬೆಳೆಸಿಕೊಂಡರು. ಚಾಲುಕ್ಯ ಇಮ್ಮಡಿ ಪುಲಕೇಶಿ ಪಲ್ಲವರ ಮಹೇಂದ್ರನನ್ನು ಸೋಲಿಸಿದಂದಿ ನಿಂದ ಕರ್ನಾಟಕ-ತಮಿಳುನಾಡುಗಳ ನಡುವಣ ರಾಜಕೀಯ ಹೋರಾಟಗಳು ಆರಂಭವಾದುವು. ಇದು ನಂತರದ ನಾಲ್ಕೈದು ಶತಮಾನಗಳವರೆಗೂ ಮುಂದುವರೆದುವು. ಪಲ್ಲವ-ರಾಷ್ಟ್ರಕೂಟ, ಚೋಳ- ಚಾಲುಕ್ಯ, ಪಾಂಡ್ಯ-ಹೊಯ್ಸಳ ಇತ್ಯಾದಿ ತಮಿಳುನಾಡಿನ, ಕರ್ನಾಟಕದ ಅರಸುಮನೆತನಗಳ ನಡುವೆ ಸ್ಪರ್ಧೆಗಳು, ಜಗಳಗಳು ನಡೆದುಕೊಂಡೇ ಹೋದುವು. ಇವುಗಳಲ್ಲಿ ಸಾರ್ವಭೌಮತ್ವದ ಪ್ರಶ್ನೆಯಷ್ಟೇ ಅಡಗಿರಲಿಲ್ಲ. ಆರ್ಥಿಕ ಲಾಭದ ಪ್ರಶ್ನೆಯೂ ಅಡಗಿತ್ತು.

ಆರ್ಥಿಕದೃಷ್ಟಿಯಿಂದ ಈ ಕದನಗಳು ನಡೆದುವೆನ್ನಲು ಪರಿಸರ ಹಾಗೂ ಭೌಗೋಳಿಕ ಅಂಶಗಳೇ ಕಾರಣ. ಯಾವುದೇ ಒಂದು ಸಮಾಜದ ವರ್ತನೆ ಈ ಅಂಶಗಳನ್ನವಲಂಬಿಸಿರುತ್ತವೆ. ಮೇಲೆ ಸೂಕ್ಷ್ಮವಾಗಿ ಆಂಧ್ರಪ್ರದೇಶದ ಪರಿಸ್ಥಿತಿಗಳ ಪ್ರಸ್ತಾಪಮಾಡಿದ್ದೇನೆ, 'ಭತ್ತದ ಕಣಜ' ಎಂದು ಕರೆಯಲಾದ ಆಂಧ್ರಪ್ರದೇಶದ

ಒಂದು ಭಾಗದ ಜನ ಬಿತ್ತಿ ಬೆಳೆದದ್ದು ಪ್ರಾಂತದ ಜನರಿಗೂ ಸಾಕಾಗಿ ಹೊರಗೂ ರಫ್ತುಮಾಡುವಷ್ಟು ಆಗು ತ್ತಿತ್ತು. ಆದುದರಿಂದ ಆಂಧ್ರದ ಅರಸರು ವಿಶೇಷವಾಗಿ ರಾಜಕೀಯದಲ್ಲಿ ಆಸಕ್ತಿವಹಿಸಿರಲಿಲ್ಲ. ಪೂರ್ವಚಾಲುಕ್ಯರು ಬಾದಾಮಿಯ ಚಾಲುಕ್ಯರ ಸೋದರ ಸಂಬಂಧಿಗಳು. ಸುಮಾರು ನಾಲ್ಕು ಶತಮಾನಗಳಿಗೂ ಹೆಚ್ಚಿನ ಕಾಲ ಆಳಿದ ಈ ಅರಸರಲ್ಲಿ ಒಬ್ಬಿಬ್ಬರನ್ನು ಹೊರತುಪಡಿಸಿ ಇತರರು ತಮ್ಮ ರಾಜ್ಯವನ್ನು ಅನ್ಯಾಕ್ರಾಂತವಾಗದಂತೆ ನೋಡಿಕೊಳ್ಳುವುದರಲ್ಲಿ ಕಾಲವನ್ನು ವಿನಿಯೋಗಿಸಿದರು. ಕರ್ನಾಟಕ – ತಮಿಳುನಾಡಿನ ಅರಸುಮನೆತನಗಳವರ ಈ ಕದನಗಳಲ್ಲಿ ಪೂರ್ವ ಚಾಲುಕ್ಯ ರಾಜ್ಯದ ಭಾಗಗಳು–ಕೃಷ್ಣೆ–ತುಂಗಭದ್ರೆಗಳ ಮುಖಜ ಪ್ರದೇಶಗಳು–ಅವರ ರಣ ರಂಗಗಳಾದುವು. ಆಂಧ್ರ ಪ್ರದೇಶದ ದಕ್ಷಿಣ ಭಾಗ–ರಾಯಲುಸೀಮೆ–ಬಹುಕಾಲ ಕರ್ನಾಟಕದ ಅರಸರ ಅಧೀನದಲ್ಲಿತ್ತು. ಅದು ಬರಪೀಡಿತ ಹಿಂದುಳಿದ ಪ್ರದೇಶವಾಗಿದ್ದ ಕಾರಣ ಇತರರು ಯಾರೂ ಅದರಲ್ಲಿ ಆಸಕ್ತಿ ವಹಿಸಿರಲಿಲ್ಲ.

ಪಶ್ಚಿಮ ಘಟ್ಟಗಳು ದಕ್ಷಿಣ ಭಾರತವನ್ನು ಎರಡು ಉಷ್ಣವಲಯದ ಪರಿಸರಗಳಾಗಿ ವಿಭಜಿಸಿವೆ, ಒಂದು ಆರ್ದ್ರ : ಮತ್ತೊಂದು ಅರೆಶುಷ್ಕ. ತಮಿಳುನಾಡಿನಲ್ಲಿ ಅಕ್ಟೋಬರ್‌ನಿಂದ ಡಿಸೆಂಬರ್‌ವರೆಗೆ ಬಂಗಾಳ ಕೊಲ್ಲಿಯಲ್ಲಿ ಕಾಲ ಕಾಲಕ್ಕೆ ಉಂಟಾಗುವ ಮಾರುತದ ಕುಗ್ಗುವಿಕೆಯ ಫಲವಾಗಿ ಈಶಾನ್ಯ ಮಾರುತಗಳ ಮಳೆ ಬರುತ್ತದೆ. ಆದುದರಿಂದ ಘಟ್ಟಗಳ ಪೂರ್ವ ಭಾಗ ಅರೆಶುಷ್ಕ. ಗಟ್ಟಿಮುಟ್ಟಾದ ಕುರುಚಲು ಗಿಡಗಳು ನೈಸರ್ಗಿಕ ಸಸ್ಯವರ್ಗ, ಧೂಳು ತುಂಬಿದ ಕಂದುಭೂಮಿ. ಅತಿ ವಿರಳವಾದ ನೀರನ್ನು ಅದಷ್ಟು ಬಳಸಲು ಹಗಲು ರಾತ್ರಿ ದುಡಿಯುವ ಈ ಪ್ರದೇಶದ ಜನರು ಒಂದು ವಿಧದ ಮುಚ್ಚಿದ ಸಂಸ್ಕೃತಿಯನ್ನು ರೂಪಿಸಿಕೊಂಡಿದ್ದಾರೆ. ತಮಿಳುನಾಡಿನ ಜನ ಬಿಸಿಲಿನಲ್ಲಿ ಕಂದಿದವರು, ಕಷ್ಟಪಟ್ಟು ದುಡಿಯುವವರು ಮತ್ತು ಸಾಹಸಿಗಳು. ತೀರಪ್ರದೇಶ ಉಪ್ಪಿನ ಜೌಗಾಗಿದ್ದು ಫಲವತ್ತಾಗಿಲ್ಲದ ಕಾರಣ ಅವರು ಹೊಸಸ್ಥಳಗಳಿಗೆ ವಲಸೆ ಹೋಗಬೇಕಾಯಿತು. ಸಮುದ್ರ ಸಂಚಾರಿಗಳಾಗಿ ಆಗ್ನೇಯ ಪ್ರದೇಶಗಳಲ್ಲಿದ್ದವರೊಂದಿಗೆ ವಾಣಿಜ್ಯ ಸಂಬಂಧಗಳನ್ನು ಬೆಳೆಸಿದರು. ಚೋಳರಂತೆ ಹೆಚ್ಚು ಸಾಹಸಿಗಳಾದವರು ಸಮುದ್ರದಾಚೆ ಸ್ವತಂತ್ರ ರಾಜ್ಯಗಳನ್ನು, ನಗರಗಳನ್ನು ಸ್ಥಾಪಿಸಿದರು.

ಕರ್ನಾಟಕ ಹಸಿರಾದ ಪಚ್ಚೆಯ ನಾಡು ಕಾವೇರಿ, ತುಂಗಭದ್ರೆ, ಕೃಷ್ಣೆಯರಂತಹ ಸುತ್ತಿ ಹರಿಯುವ ನದಿಗಳು, ಸುಂದರ ಬೆಟ್ಟಗುಡ್ಡಗಳು, ಕಣಿವೆಗಳು ಜನರನ್ನು ವೀರ್ಯವಂತರನ್ನಾಗಿ ಸೌಂದರ್ಯೋಪಾಸಕರನ್ನಾಗಿ ಮಾಡಿವೆ. ಕನ್ನಡಿಗರು ನಿಸ್ಸೀಮಯೋಧರು. ಬಾದಾಮಿಯ ಚಾಲುಕ್ಯರ ಕಾಲದಿಂದಲೂ ಕರ್ನಾಟಬಲವೆಂಬ ಕನ್ನಡ ಸೈನ್ಯ ಸಾಹಸಕ್ಕೆ ಮೈವೆತ್ತುದು. ನದೀ ಜಲ ಹಾಗೂ ಕೆರೆ ನೀರುಗಳಿಂದ ಫಲವತ್ತಾದ ಭೂಮಿಯಲ್ಲಿ ಒಣ ಹಾಗೂ ನೀರಾವರೀ ಬೆಳೆಗಳನ್ನು ಬೆಳೆಸಿ, ಸುಖ ಜೀವನ ನಡೆಸುತ್ತಿದ್ದ ಪ್ರಜೆಗಳು ಹಿತ–ಮಿತ ಭಾಷಿಗಳು, ಅಲ್ಪತೃಪ್ತರು ಧಾರಾಳಿಗಳು ಆಗಿದ್ದರು. ಪರ್ಯಾಯ ದ್ವೀಪದ ಮಧ್ಯದಲ್ಲಿದ್ದ ಕಾರಣ ಉತ್ತರ, ದಕ್ಷಿಣ ಭಾಗಗಳೆರಡರ ಜೊತೆಯಲ್ಲೂ ಉತ್ತಮ ಬಾಂಧವ್ಯಗಳನ್ನು ರೂಪಿಸಿ ಕೊಂಡು ಆರ್ಯ–ದ್ರಾವಿಡ ಸಂಸ್ಕೃತಿಗಳೆರಡನ್ನೂ ಸಮೀಕರಿಸಿ ತಮ್ಮದಾಗಿಸಿಕೊಂಡರು. ಎಲ್ಲ ಧರ್ಮಗಳ ಬಗೆಗೆ ಗೌರವ, ಸಹನೆ, ಪರಮತಸಹಿಷ್ಣುತೆಗಳನ್ನು ಹೊಂದಿದ್ದರು, ಎಂತಲೇ ಕರ್ನಾಟಕ ಎಲ್ಲ ಧಾರ್ಮಿಕ ನಂಬಿಕೆಗಳೂ ಒಂದುಗೂಡವ ಪ್ರಾಂತವಾಗಿತ್ತು.

ಈ ಹಿನ್ನೆಲೆಯಲ್ಲಿ ಆರ್ಯ ದ್ರಾವಿಡ ಜನರ ಮನೋಭಾವಗಳನ್ನು ವಿಶ್ಲೇಷಿಸಬಹುದು. ರಾಜಕೀಯವಾಗಿ ತಮ್ಮದಲ್ಲದ ಪ್ರದೇಶದ ಮೇಲೆ ದಾಳಿಮಾಡಿ ವಶಪಡಿಸಿಕೊಳ್ಳುವುದು ತಮಿಳರಿಗೆ ಅವಶ್ಯವಾಗಿತ್ತು. ಅವರು ಕನ್ನಡನಾಡಿನ ಅರಸು ಮನೆತನಗಳವರೊಡನೆ ಹೂಡಿದ ಪ್ರತಿಯೊಂದ ಕದನವೂ ಆಕ್ರಮಣ ಪ್ರವೃತ್ತಿಯದಾಗಿದ್ದು ಕರ್ನಾಟಕದ ಅರಸರು ಸ್ವರಕ್ಷಣೆಗಾಗಿಯೇ ಪ್ರತಿಬಾರಿ ಹೋರಾಡಬೇಕಾಯಿತು. ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ತಮಿಳುನಾಡು ಮೇಲಿನ ದಾಳಿ ಮಾತ್ರ ಇದಕ್ಕೆ ಹೊರತಾಗಿ ಕದನ ಹೂಡಿ ತನ್ನ ಮೇಲ್ಮೆಯನ್ನು ತೋರಿಸಿಕೊಳ್ಳಬೇಕೆಂಬ ಚಟದಿಂದ ಕೂಡಿತ್ತು. ಚೋಳರ ಕಾಲದಿಂದ ತಮಿಳುನಾಡಿನ ರಾಜಕೀಯ ಧೋರಣೆಯಲ್ಲಿ ಮತ್ತಷ್ಟು ಬದಲಾವಣೆಗಳು ಕಂಡುಬಂದವು. ಪಲ್ಲವರ ನರಸಿಂಹವರ್ಮ ಸೇಡು ತೀರಿಸಿಕೊಳ್ಳಲು ಬಾದಾಮಿಯನ್ನು ಮುತ್ತಿ ಅಲ್ಲಿ ವಿಜಯ ಸ್ತಂಭವೊಂದನ್ನು ನೆಡಿಸಿದ. ವಿಕ್ರಮಾದಿತ್ಯ (I ಮತ್ತು II) ರು, ವಿನಯಾದಿತ್ಯ–ವಿಜಯಾದಿತ್ಯರು ಸಹ ಪಲ್ಲವರೊಡನೆ ಕಾದಿದರು.

ಆದರೆ ಚೋಳರು ಅಧಿಕಾರಕ್ಕೆ ಬಂದಾಗ ರಾಜಾಧಿರಾಜನ ಕಾಲದಿಂದ ತಮಿಳು ಅರಸರ ಧೋರಣೆ

ಯಲ್ಲಿ ಬಹಳಷ್ಟು ಮಾರ್ಪಾಡುಗಳು ಕಂಡುಬಂದುವು. ಅವರು ರಾಜ್ಯದ ಸಂಪತ್ತನ್ನು ವರ್ಧಿಸಲು ಯತ್ನಿಸಿ ದರು. ಎಂತಲೇ ಪೂರ್ವಸಮುದ್ರ (ಬಂಗಾಲಕೊಲ್ಲಿ) ದಾಚೆ, ಜಾವಾ, ಸುಮಾತ್ರ, ಬಾಲಿ ದ್ವೀಪಗಳನ್ನು ಆಕ್ರಮಿಸಿ ಅಲ್ಲಿ ತಮಿಳು ರಾಜ್ಯಗಳನ್ನು ಸಂಸ್ಕೃತಿಗಳನ್ನು ಅಸ್ತಿತ್ವಕ್ಕೆ ತಂದರು. ಶ್ರೀಲಂಕಾವನ್ನು ಗೆದ್ದುಕೊಂಡರು. ಪಶ್ಚಿಮದಲ್ಲಿ ಚಾಲುಕ್ಯ ರಾಜ್ಯದ ವಿರುದ್ಧ ಸಾಗಿದರು. ಸತತವಾದ ಹೋರಾಟಗಳು ನಡೆದವು ಇಲ್ಲಿ ನಾವು ಗಮನಿಸಬ ಹುದಾದದು ಈ ಎರಡು ಮನೋಭಾವಗ ಳನ್ನು,

ತಮಿಳರು ತಾವು ಹೋದಲ್ಲೆಲ್ಲ ಊರುಗಳನ್ನು, ನಗರಗಳನ್ನು, ರಾಜಧಾನಿಗಳನ್ನು, ಸುಟ್ಟುದಾಗಿ, ದೇವಾಲಯಗಳನ್ನು ಹಾಳುಗೆಡವಿ ಸಂಪತ್ತನ್ನು ಸೂರೆ ಗೊಂಡುದಾಗಿ, ತಮ್ಮ ಕಣ್ಣಿಗೆ ಬಿದ್ದ ಅಮೂಲ್ಯ ಶಿಲ್ಪ ಗಳನ್ನು ತಮ್ಮ ರಾಜ್ಯಕ್ಕೆ ಸಾಗಿಸಿ ಅಲ್ಲಿ ಪ್ರತಿಷ್ಠಾಪಿಸಿ ದುದಾಗಿ ಹೇಳಿಕೊಂಡಿದ್ದಾರೆ, ಉತ್ಪ್ರೇಕ್ಷೆ ಈ ಹೇಳಿಕೆಗ ಳಲ್ಲಿ ಸಾಕಷ್ಟಿದೆ. ಆದರೆ ನಮ್ಮ ಅರಸರು ತಾವು ಗೆದ್ದುದನ್ನೂ ಸಹ ಹಲವಾರು ಸಂದರ್ಭಗಳಲ್ಲಿ ತಮ್ಮ ಶಾಸನಗಳಲ್ಲಿ ಹೇಳಿಕೊಂಡಿಲ್ಲ. ಹಾಗೆ ಹೇಳಿಕೊಳ್ಳಲು ಸಂಕೋಚಪಟ್ಟಿದ್ದಾರೆನ್ನೋಣವೇ? ಕ್ರಿ.ಶ. 1054ರಲ್ಲಿ ನಡೆದ ಕೊಪ್ಪಮ್ (ಕೊಪ್ಪಳ) ಕದನದಲ್ಲಿ ಚೋಳರ ರಾಜಾಧಿರಾಜ (II) ಕೊಲ್ಲಲ್ಪಟ್ಟ. ಆದರೆ ಚಾಲುಕ್ಯ ಸೋಮೇಶ್ವರ (I) ಕನ್ನಡ ಶಾಸನಗಳಲ್ಲಿ ಇದರ ಪ್ರಸ್ತಾಪ ಮಾಡಿಲ್ಲ ಅವನ ದಂಡನಾಯಕನು ಪಡೆದು ಕೊಂಡಿದ್ದ ರಾಜಾಧಿರಾಜ ಚೋಳುಗೊಡ್ಡಿ ಎಂಬ ಬಿರುದಿನಿಂದ, ಚೋಳ ಶಾಸನಗಳೇ ರಾಜಾಧಿರಾಜನನ್ನು ಆನೆಯ ಮೇಲೆ ಕುಳಿತು ಅಸುನೀಗಿದಾತ (ಆನ್ಯೆ ಮೇಲ್ ತುಂಜಿಯರುಳಿನ ವಿಜಯ ರಾಜೇಂದ್ರ ದೇವ) ಎಂದು ವರ್ಣಿಸಿರುವುದರಿಂದಷ್ಟೆ ಈ ವಿವರ ಗಳು ನಮಗೆ ತಿಳಿದದ್ದು

ಹೊಯ್ಸಳರ ವಿಷ್ಣುವರ್ಧನ ಚೋಳರನ್ನು ಯಶಸ್ವಿ ಯಾಗಿ ಗಂಗವಾಡಿಯಿಂದ ಹೊರದೂಡಿದ. ಅವನ ನಂತರ ಬಂದ ಅರಸರು ತಮಿಳು ನಾಡಿನ ರಾಜಕೀ ಯದಲ್ಲಿ ಪಾಂಡ್ಯ-ಚೋಳರ ನಡುವಣ ಕದನಗಳಲ್ಲಿ ಅವರ ಆಹ್ವಾನ ಸ್ವೀಕರಿಸಿ ತಲೆಹಾಕಿದರು. ಆದರೆ ಅವರು ಒಬ್ಬೊಬ್ಬರೂ ಹೊಯ್ಸಳರ ಸಹಾಯ ಪಡೆದ ಬಳಿಕ ಅವರನ್ನು ಹೊರಗಿಟ್ಟರು. ಚೋಳರ ಅರಸಿಗೆ ಜನಿಸಿದ ಸೋಮೇಶ್ವರ ಅಲ್ಲಿಯೇ ಬೆಳೆದ. ಹೊಯ್ಸಳ ಅರಸನಾದ ಬಳಿಕವೂ ಚೋಳ ರಾಜ್ಯದಲ್ಲಿಯೇ ಬಹು ಕಾಲವನ್ನು ಕಳೆದ. ತಿರುವಣ್ಣಾಮಲೈ ಅವನ ಇನ್ನೊಂದು ರಾಜಧಾನಿಯಾಯಿತು. ದೋರಸಮುದ್ರಕ್ಕೆ ಆಗಾಗ ಭೇಟಿನೀಡುತ್ತಿದ್ದ. ಈ ರಾಜನೀತಿಯ ಫಲ ವೆಂಬಂತೆ ಹೊಯ್ಸಳರ ಬಲ ಕರ್ನಾಟಕದಲ್ಲಿ ಕುಗ್ಗಿತು. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದಾಗ ದಕ್ಷಿಣ ಭಾರತವೆಲ್ಲವೂ ಏಕಚಕ್ರಾಧಿಪತ್ಯಕ್ಕೆ ಒಳಪಟ್ಟಿತು. ಆದರೆ ರಾಜಧಾನಿ ಹಂಪೆಯಿಂದ ದೂರದ ತಮಿಳು ನಾಡನ್ನು ನೇರವಾಗಿ ಆಳುವುದು ದುಸ್ಸಾಧ್ಯವಾಗಿ ಅಲ್ಲಿ ಮಾತ್ರ ನಾಯಕರ, ಪಾಳೆಯಗಾರರ ಆಡಳಿತ ಪ್ರಬಲಗೊಂಡಿತು. ವಿಜಯನಗರದ ಅರಸರ ನೇರ ಆಡಳಿತಕ್ಕೊಳಪಟ್ಟ ಪ್ರದೇ ಶಗಳು ಕರ್ನಾಟಕ ಮತ್ತು ರಾಯಲಸೀಮೆಯ ಪ್ರದೇಶ ಗಳು ಮಾತ್ರ, ಇದರ ಫಲವಾಗಿ ತಮಿಳು ರಾಜಕೀಯ ಪ್ರಮುಖ ಪ್ರವಾಹದ ಹೊರಗೇ ನಿಂತಿತು.

ಕರ್ನಾಟಕ-ಆಂಧ್ರಪ್ರದೇಶಗಳ ಶಾಸನಗಳಿಗಿಂತ ಭಿನ್ನವಾಗಿರುವುದು ತಮಿಳುನಾಡಿನ ಶಾಸನಗಳು. ಅವರ ಶಾಸನಗಳಲ್ಲಿ ಅರಸರ ಆಳ್ವಿಕೆಯ ವರ್ಷವನ್ನು ಉಲ್ಲೇ ಖಿಸಿರುವುದು ಒಂದು ವೈಶಿಷ್ಟ್ಯ. ಅದಕ್ಕೂ ಹೆಚ್ಚಾಗಿ ಚೋಳರ ಕಾಲದಿಂದ ನೀಡಲಾದ ದತ್ತಿಗಳಲ್ಲಿ ವಿಶಿಷ್ಟ ವಿವರಗಳನ್ನು ನೀಡಲಾಗಿದೆ. ದಾನವಾಗಿ ಕೊಟ್ಟ ಭೂಮಿಯ ಮೇಲೆ ಅದನ್ನು ವೃತ್ತಿಗಳಾಗಿ ವಿಂಗಡಿಸಿ ಯಾರು ಯಾರಿಗೆ ಯಾವ ಯಾವ ಭಾಗಗಳನ್ನು ಕೊಡಲಾಯಿತು ಎಂಬ ವಿವರವಾದ ಪ್ರಸ್ತಾಪಗಳು, ಪ್ರತಿಗ್ರಹಿಗಳು ತಾವು ಪಡೆದ ದಾನಕ್ಕೆ ಬದಲಾಗಿ ಸಲ್ಲಿ ಸಬೇಕಾದ ಸೇವೆ ಈ ಮುಂತಾದ ವಿವರಗಳು ಶಾಸನ ಗಳಲ್ಲಿವೆ. ದಾನ ನೀಡಲಾದ ಭೂಮಿಯ ಇತಿಹಾಸ ವನ್ನು ಇದರಿಂದ ಸ್ವಲ್ಪಮಟ್ಟಿಗೆ ಇದರ ನೆರವಿನಿಂದ ರಚಿಸಬಹುದಾಗಿದೆ. ಭೂಮಿಯನ್ನು ದತ್ತಿಯಾಗಿ ದೇವ ಸ್ಥಾನಕ್ಕೆ ನೀಡಲಾದರೂ ಅವುಗಳ ಫಲಾನುಭವಿಗಳ ವಿವರಗಳು ನಮಗೆ ಸಿಗುತ್ತವೆ. ಹೀಗೆ ದಾನವಾಗಿ ಪಡೆದ ಭೂಮಿಗಳ ಫಲಾನುಭವಿಗಳನ್ನು ಅವರ ವಶ ದಿಂದ ತಪ್ಪಿಸುವುದು ಸುಲಭವಾಗಿರಲಿಲ್ಲ. ಅದಕ್ಕಾಗಿ ಅವರಿಗೆ ಪರಿಹಾರಗಳನ್ನು ನೀಡಿ ಅವುಗಳನ್ನು ಅವ ರಿಂದ ಮುಕ್ತಿಗೊಳಿಸಿ (ಕುಡಿ ನೀಂಗಿ) ದ ನಂತರವೇ ಅನ್ಯರಿಗೆ ದಾನವಾಗಿ ನೀಡಬೇಕಾಗಿತ್ತು ಎಂಬ ವಿವರ ಗಳೂ ಶಾಸನಗಳಲ್ಲಿ ಕೊಡಲ್ಪಟ್ಟಿರುತ್ತವೆ. ಇವರ ಶಾಸ ನಗಳನ್ನು ಮೈಕೀರ್ತಿಗಳೆಂದು ಕರೆಯಬಹುದು. ಪ್ರತಿ ಯೊಬ್ಬ ಅರಸನೂ ತನ್ನ ಆಳಿಕೆಯ ಒಂದೊಂದು ವರ್ಷದುದಕ್ಕೂ ಗಳಿಸಿದ ಸಾಧನೆಗಳನ್ನೂ ಶಕ್ತಿರೂಪ ವಾಗಿ ಪಟ್ಟಿಮಾಡಲಾಗುತ್ತಿತ್ತು. ಉತ್ಪ್ರೇಕ್ಷೆಗಳಂತೂ ಸರ್ವಸಾಮಾನ್ಯವಾಗಿದ್ದುವು. ಇವು ಇವರ ರಾಜಕೀಯ

ಾಧನೆಗಳನ್ನು ಕುರಿತಾದ ಪ್ರಶಸ್ತಿಗಳು. ಇತಿಹಾಸದ ಪುನ
ಚನೆಗೆ ಅತ್ಯಮೂಲ್ಯವಾದ ಆಧಾರಗಳು. ಆದರೂ
ತರ, ಮೇಲೆ ಉಲ್ಲೇಖಿಸಲಾದಂತಹ ವಿವರಗಳು
ಾಮಾಜಿಕ ಇತಿಹಾಸವನ್ನರಿಯಲು ಸಹಾಯ ಕವಾಗಿ
ದ್ದುವು. ಇವರ ಕೆಲವು ಶಾಸನಗಳಲ್ಲಿ ದೇವಾಲಯಗ ಳಲ್ಲಿ
ೂಜೆ ಹಾಗೂ ಸಂಸ್ಕಾರಪಂಚಗವ್ಯ, ಪೂರ್ಣಕುಂಭ,
ದೀಪಾರಾಧನೆ ಇತ್ಯಾದಿಗಳಿಗೆ ಬೇಕಾದ ಪಾತ್ರೆಗಳು,
ುತ್ವಿ ಕರಿಗೆ ನೀಡಬೇಕಾದ ಸಂಭಾವನೆಗಳು.ಇವುಗಳನ್ನೂ
ವರಿಸಿ ಅದಕ್ಕಾಗಿ ಭತ್ತದ ಆಗುವ ವೆಚ್ಚ ಮುಂತಾದ
ವರಗಳನ್ನು ನೀಡಲಾಗಿದೆ. ದತ್ತಿನೀಡಿದ ಭೂಮಿಗಳ
ೂಪದಲ್ಲಿ ನೀರಾವರಿ ಸೌಲಭ್ಯಗಳು, ಹಾಗೂ ಫಲಾನು
ವಿಗಳು ಅದಕ್ಕಾಗಿ ನೀಡಬೇಕಾದ ವಿಶೇಷ ತೆರಿಗೆಗಳನ್ನು
ುಲ್ಲೇಖಿಸಲಾಗಿದೆ. ಒಪ್ಪಂದಗಳಿಗೆ ಸಂಬಂಧಿಸಿದ ಶಾಸನ
ಳು (ಚಿಜುಮುಜು), ಭೂಮಿಯ ಅಧಿಕೃತ ಬೆಲೆಯನ್ನು
ೂಚಿಸುವ ಒಪ್ಪಂದ ಪತ್ರಗಳು (ನಿಲವಿಲೈ ಪ್ರಮಾಣ
ಡೈತ್ತತೀಟ್ಟು), ಸಾಲ ಪತ್ರ (ಕೈಯೆಟುತ್ತೋಲೈ), ನಿಗದಿ
ೂಳಿಸಿದ ದತ್ತಿಯನ್ನು ಪೂರೈಸುವ ಒಪ್ಪಂದ ಪತ್ರ (ಉಭೈ
ುತ್ತೀಟ್ಟು), ಮುಂತಾಗಿ ಶಾಸನಗಳನ್ನು ವರ್ಣಿಸಿ
ಂಗಡಿಸಲಾಗಿದೆ.

ಕರ್ನಾಟಕದ ಶಾಸನಗಳಲ್ಲಿ, ತಮಿಳು ಶಾಸನಗ
ಂದ ಪ್ರಭಾವಿತರಾದ ಕೆಲವು ಶಾಸನಗಳು ಹೊರತು
ಡಿಸಿ (ಉದಾ : ಹಳೇಬೀಡಿನ ಶಾಸನ) ಇಂತಹ
ವರಗಳು ಕಾಣಸಿಗುವುದಿಲ್ಲ. ದಾನ ನೀಡಲಾದ
ೂಮಿಯ ಒಟ್ಟು ವಿಸ್ತೀರ್ಣ (ಮತ್ತರುಗಳು) ವನ್ನು
ುಲ್ಲೇಖಿಸಿ ಅದನ್ನು ದೇವರ ಪೂಜೆ, ನೈವೇದ್ಯ,
ಂಗರಂಗಭೋಗಗಳಿಗಾಗಿ ದೇವಾಲಯದ ಪ್ರಮುಖ
ಧಿಕಾರಿ-ಆಚಾರ್ಯ-ಯಾ-ಸ್ಥಾನಪತಿಗೆ ನೀಡಲಾಯಿ
ಂದು ಹೇಳಿರುತ್ತದೆಯೇ ಹೊರತು ಯಾವ ಯಾವ
ೀತಿಯಲ್ಲಿ ವಿನಿಯೋಗಿಸಬೇಕೆಂಬ ಷರತ್ತುಗಳು ಇರು
ುದಿಲ್ಲ. ಇದಕ್ಕೆ ಕೆಲವು ಅಪವಾದಗಳು ಇವೆ ಎಂಬು
ನ್ನು ಹೇಳಬೇಕು ಇದರಿಂದ ತಮಿಳರ ಹಾಗೂ
ನ್ನಡಿಗರ ಮನೋಭಾವದ ಪರಿಚಯವಾಗುತ್ತದೆ
ಂಬುದು ನನ್ನ ಅನಿಸಿಕೆ. ತಮಿಳರು ಇತರರನ್ನು
ುಲಭವಾಗಿ ನಂಬುವಂತಹವರಲ್ಲ. ಮುಖ್ಯವಾಗಿ
ಾನಿ ಮತ್ತು ಪ್ರತಿಗ್ರಹಿಗಳಿಬ್ಬರಿಗೂ ಇದರಿಂದರಕ್ಷಣೆ
ೂರಕುತ್ತಿತ್ತು. ಫಲಾನುಭವಿಗಳಾದ ಹಿಡುವಳಿದಾರ
ನ್ನು ಭೂಮಿಯಿಂದ ಬಿಡಿಸುವುದು ದಾನಿಗೆ ಕಷ್ಟವಾ
ರೆ, ಭೂಮಿಯನ್ನು ಪರಭಾರೆ ಮಾಡುವ ಹಕ್ಕು
ಪ್ರತಿಗ್ರಹಿಗಿರಲಿಲ್ಲ. ಇದರಿಂದ ಇಬ್ಬರಿಗೂ ರಕ್ಷಣೆ.

ಉಳಿದಂತೆ ಇತರ ನಿಂಬಂಧನೆಗಳು ಸೇವಾನಿಯಮಗ ಳಾಗಿದ್ದವು. ಅವೂ ಸಹ ಪರಸ್ಪರ ರಕ್ಷಣೆ ಒದಗಿ ಸುತ್ತಿತ್ತು. ಕರ್ನಾಟಕದಲ್ಲಿ ಇಂತಹ ನಿಬಂಧನೆಗಳಿರಲಿಲ್ಲ. ತಾನು ಬಯಸಿದಷ್ಟು ಕಾಲ ದಾನಿಯು ಪ್ರತಿಗ್ರಹಿಯನ್ನು ರಕ್ಷಿಸಬಹುದಿತ್ತು. ಆದರೆ ಫಲಾನುಭವಿಯಾದ ಭೂಹಿಡು ವಳಿದಾರನಿಗೆ ಪರಭಾರೆ ಮಾಡುವ ಹಕ್ಕಿದ್ದ ಕಾರಣ ಅವನಿಗೆ ಕಿರುಕುಳ ಕೊಡುವುದರಿಂದ ದಾನಿಗೆ ಯಾವ ತೆರ ನಾದ ಲಾಭವೂ ಇರುತ್ತಿರಲಿಲ್ಲ. ಆದರೂ ಇವೆಲ್ಲವೂ ಸಾಂಪ್ರದಾಯಿಕವಾಗಿ ಅಂಗೀಕೃತವಾದ ಪದ್ಧತಿಗಳು. ಶಾಸನಗಳಲ್ಲಿ ಇವುಗಳನ್ನು ಬಿಡಿಸಿ ಹೇಳಿಲ್ಲ. ಅನೂಚಾನ ವಾಗಿ ರೂಢಿಯಲ್ಲಿದ್ದಿರಬಹುದಾದ ಈ ಪದ್ದತಿಗೆ ಪುನಃ ಸ್ಪಷ್ಟೀಕರಣ ಅವಶ್ಯವಿಲ್ಲವೆಂದು ಭಾವಿಸಿದ್ದಿರಬೇಕು. ಜೊತೆಗೆ ಎರಡೂ ಪಕ್ಷಗಳಲ್ಲಿ ಸ್ವಭಾವತಃ ಮೂಡಿಬಂದಿದ್ದ ನಂಬುಗೆ, ಆದರೆ ಇದು ವ್ಯವಹಾರ ಚತುರ ತೆಯಾಗಿರಲಿಲ್ಲ.

ಶಾಸನಗಳನ್ನು ಕೊರೆಯಲು ಕರ್ನಾಟಕದಲ್ಲಿ ಬಿಡಿಗಲ್ಲುಗಳೋ, ಕಂಬಗಳೋ, ಭಿತ್ತಿಯಲ್ಲಿ ಮೊದಲೇ ಕೊರೆದು ನೆಟ್ಟಿರಬಹುದಾದ ಕಲ್ಲುಗಳೋ ಸಾಕಾಗಿದ್ದುವು. ಕಾರಣ ಕನ್ನಡದ ಅಕ್ಷರಗಳು ದುಂಡು. ಆಕಾರದಲ್ಲಿ ಸಣ್ಣ. ಕದಂಬರ ಕಾಲದಿಂದ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ತನಕವೂ ಶಿಲ್ಪಿಗಳು ಅಕ್ಷರಗಳ ಸೌಂದರ್ಯದ ಬಗೆಗೆ ಕಾಳಜಿ ವಹಿಸಿದ್ದರು. ಕನ್ನಡದಲ್ಲಿ ಒತ್ತಕ್ಷರಗಳನ್ನು ಬಳಸಬಹುದಾದ ಕಾರಣ ಕನ್ನಡದ ನಾಲ್ಕು ಸಾಲುಗಳಷ್ಟು ಬರಹಕ್ಕೆ ತಮಿಳು ಲಿಪಿಯಲ್ಲಿ 6-7 ಸಾಲುಗಳಾದರೂ ಬೇಕಾಗುತ್ತಿತ್ತು. ಬಿಡಿಗಲ್ಲುಗಳಲ್ಲಿ ಶಾಸನವೆಲ್ಲವನ್ನೂ ಕಂಡರಿಸಲು ಸಾಧ್ಯವಿರಲಿಲ್ಲ. ಆದುದರಿಂದ ಅವರು ಮುಂದಿನ ಅಧಿಷ್ಠಾನ ಭಾಗದಿಂದ ಹಿಡಿದು ಭಿತ್ತಿಗಳ ಒಳಭಾಗಗಳೆಲ್ಲವನ್ನೂ ಬಳಸಿದರು. ಈ ಶಾಸನಗಳು ಹಸ್ತಾಂತರವಾಗುವ ಭೂಮಿಯ ಇತಿಹಾಸದ ವಿವರಗಳನ್ನು ಕೊಡುತ್ತಿದ್ದುದರಿಂದ ಅನೇಕ ಸಂದರ್ಭಗಳಲ್ಲಿ ಅವು ಪರಸ್ಪರ ಸಂಬಂಧಗಳನ್ನು ಹೊಂದಿರುತ್ತಿದ್ದುವು. ದೇವಾಲಯಗಳ ಜೀರ್ಣೋದ್ಧಾರ ಸಮಯದಲ್ಲಿ ಶಾಸನವಿದ್ದ ಪ್ರತಿ ಕಲ್ಲನ್ನೂ ಜತನದಿಂದಿರಿಸಿ ಯಾವ ಕಲ್ಲು ಪೇರಿಸಿದ ಬಳಿಕ ಯಾವ ಕಲ್ಲು ಎಂಬುದನ್ನು ಗುರುತು ಮಾಡಿರುತ್ತಿದ್ದರು. ಹಾಗೆಯೇ ಜೋಡಿಸುತ್ತಿದ್ದರು. ನಮ್ಮಲ್ಲಿ ಇಂತಹ ಯಾವ ಜಾಗರೂಕತೆಯನ್ನು ನಾವುಗಳು ವಹಿಸುತ್ತಿರಲಿಲ್ಲ. ವಹಿಸಬೇಕಾಗಿಯೂ ಇರುತ್ತಿರಲಿಲ್ಲ :

ಒಂದು ಪ್ರಕಾರ ಕನ್ನಡದಲ್ಲಿ ಆರಂಭವಾಯಿತು. ಹಲವಾರು ಸಾಹಿತ್ಯ ಕೃತಿಗಳು ಈ ಶಾಸನಗಳಲ್ಲಿ ಅಡಕವಾಗಿವೆ. ಸಾಹಿತ್ಯಕ ಮೌಲ್ಯದ ದೃಷ್ಟಿಯಿಂದ ಅವು ಉತ್ಕೃಷ್ಟವಾಗಿಲ್ಲ ದಿರಬಹುದು. ಆದರೆ ಅದರಿಂದ ಗ್ರಾಮಗಳ ಶಾನು ಭೋಗರಿಂದ ಹಿಡಿದು ಎಲ್ಲ ಕನ್ನಡ ಪಂಡಿತರಿಗೆ ತಮ್ಮ ಪಾಂಡಿತ್ಯ ಪ್ರದರ್ಶನಕ್ಕೆ ಅವಕಾಶ ದೊರಕಿ ದಂತಾಯ್ತು. ಹೊಯ್ಸಳರ ಕಾಲಕ್ಕೆ ಶಾಸನಗಳ ಕಂಡ ರಣೆ ಒಂದು ರೇಖಾ ಕಲೆಯಾಗಿ ಮಾರ್ಪಟ್ಟು, ಅಕ್ಷರ ವಿನ್ಯಾಸಗಳಲ್ಲಿ ಪ್ರಾಣಿಗಳ, ಹೂ–ಬಳ್ಳಿಗಳ ಚಿತ್ರಗಳನ್ನು ಕಾಣಬಹುದು. ಆದರೆ ಇಂತಹವು ಸಂಖ್ಯೆಯಲ್ಲಿ ಕಡಿಮೆ. ಭಾಷಾದೃಷ್ಟಿ ಯಿಂದ ಗಮನಿಸಿದರೆ ಕನ್ನಡಿ ಗರು ಸಂಸ್ಕೃತವನ್ನು ಯಥೇಚ್ಛವಾಗಿ ಬಳಸಿದರು. ಸಂಸ್ಕೃತದ ಪ್ರಭಾವ ಕನ್ನಡದ ಮೇಲೆ ಬಹಳಷ್ಟಾಗಿ ತ್ತೆಂಬುದು ಎಲ್ಲರಿಗೂ ತಿಳಿದ ವಿಷಯವೇ. ಸಂಸ್ಕೃತ–ಕನ್ನಡಗಳು ಮಿಳಿತವಾದ ಶಾಸನಗಳಲ್ಲಿ ಕನ್ನಡದ ಭಾಗವನ್ನು 'ದೇಶಭಾಷೆಯಾ ಲಿಖ್ಯತೇ' ಎಂದು ಹೇಳಿದ್ದಾರೆ. ಇದರಿಂದ ಕನ್ನಡಕ್ಕೆ ದೇಶ ಭಾಷೆಯ ಸ್ಥಾನ ನೀಡಿ ಸಂಸ್ಕೃತವನ್ನು ಬಹುಶಃ ರಾಷ್ಟ್ರಭಾಷೆ ಎಂದು ಪರಿಗಣಿಸುತ್ತಿದ್ದಿರಬೇಕು. ಆದರೆ ತಮಿಳು ಶಾಸನಗಳಲ್ಲಿ ಸಂಸ್ಕೃತ ಸೇರ್ಪಡೆ ತುಂಬಾ ಕಡಮೆ. ಸಂಸ್ಕೃತವನ್ನು ಬಳಸಬೇಕಾದಾಗ ಅದಕ್ಕೆಂದೇ ಗ್ರಂಥ ಎಂಬ ಒಂದು ಲಿಪಿಯನ್ನು ರೂಪಿಸಿದರು. ಶಾಸನಗಳಲ್ಲಿ ಹಸ್ತಪ್ರತಿಗ ಳಲ್ಲಿ ಸಂಸ್ಕೃತವನ್ನು ಬಳಸಬೇಕಾಗಿ ಬಂದಾಗ ಈ ಲಿಪಿಯನ್ನು ಬಳಸಿದರು. ಒಂದೇ ಶಾಸನದಲ್ಲಿ ಈ ಎರಡೂ ಲಿಪಿಗಳ ಬಳಕೆ ಸಾಮಾನ್ಯ. ಇದು ಅನ್ಯ ಭಾಷೆ ನಮ್ಮದರೊಡನೆ ಸೇರತಕ್ಕದ್ದಲ್ಲವೆಂಬ ಮನೋ ಭಾವಕ್ಕೆ ಸಾಕ್ಷಿ.

ವಾಸ್ತುಶಿಲ್ಪದ ದೃಷ್ಟಿಯಿಂದ ತಮಿಳು ನಾಡಿನಲ್ಲಿ ಕಂಡುಬಂದಿರುವ ದೇವಾಲಯಗಳು ದ್ರಾವಿಡ ಶೈಲಿ ಯವು. ಉತ್ತರದ ಶೈಲಿಯಾದ ನಾಗರವನ್ನೂ ಇದರೊಡನೆ ಸಂಯೋಜಿಸಿ ಕನ್ನಡಿಗರು ವೇಸರವೆಂಬ ಶೈಲಿಯನನ್ನು ರೂಪಿಸಿದರು. ವಾಸ್ತುಶಿಲ್ಪ ಗ್ರಂಥಗಳನ್ನು ಆಧರಿಸಿ ಈ ಶೈಲಿಗಳನ್ನು ರೂಪಿಸಲಾಯಿತು ಎಂದು ಹೇಳುವುದು ಕಷ್ಟ. ಶಿಲ್ಪಶಾಸ್ತ್ರಗಳುಮೊದಲೋ ಕಟ್ಟಡ ಗಳು ಮೊದಲೋ ಎಂಬ ಸಂದೇಹ ಇದ್ದೇ ಇದೆ. 10ನೆಯ ಶತಮಾನದ ನಂತರ ಸ್ಥಪತಿಗಳು ವಾಸ್ತುಶಿಲ್ಪ ಶಾಸ್ತ್ರಗಳನ್ನು ಅವಲೋಕಿಸಿರಬಹುದು. ಮಾರ್ಗದರ್ಶನ ಕ್ಕಾಗಿ ನೆರವು ಪಡೆದಿರಬಹುದು ಆದರೆ ನನಗೆ ತಿಳಿದಂತೆ ಯಾವ ದೇವಾಲಯವೂ ಸಂಪೂರ್ಣವಾಗಿ ಶಿಲ್ಪಶಾಸ್ತ್ರಗಳ, ಆಗಮಗಳ ವಿಧಿ, ನಿಷೇಧಗಳನ್ನನು ಸರಿಸಿಲ್ಲ. ಇದಂತಿರಲಿ, ಇಲ್ಲೂ ಸಹ ಭೌಗೋಳಿಕ ಅಂಶಗಳು ಭಿನ್ನತೆಗಳಿಗೆ ಕಾರಣವಾಗಿವೆ.

ಗುಹಾಲಯ ವಾಸ್ತುಶಿಲ್ಪ ಚಾಲುಕ್ಯರ ಮೊದಲ ನೆಯ ಕೀರ್ತಿವರ್ಮನ ಕಾಲಕ್ಕಾಗಲೇ ಕರ್ನಾಟಕದಲ್ಲಿ ಅಸ್ತಿತ್ವಕ್ಕೆ ಬಂದುಇದನ್ನೇ ಪಲ್ಲವ ಮಹೇಂದ್ರನು ಮಾದರಿಯನ್ನಾಗಿ ಮಾಡಿಕೊಂಡು ಈ ಕಲೆಯನ್ನು ತಮಿಳುನಾಡಿನಲ್ಲಿ ಪೋಷಿಸಿದ. ಪಲ್ಲವರ ಗುಹಾಲಯ ಗಳನ್ನು ಗಡುಸಾದ ಕಗ್ಗಲ್ಲುಗಳಲ್ಲಿ ಕೊರೆಯಲಾಗಿತ್ತು. ಚಾಲುಕ್ಯರು ತಮಗೆ ಸುಲಭವಾಗಿ ಲಭ್ಯವಿದ್ದ ಮೃದು ವಾದ ಮರಳುಗಲ್ಲನ್ನು ಬಳಸಿದರು ಇದರ ಪರಿಣಾಮವಾಗಿ ಚಾಲುಕ್ಯರು ಹಾಗೂ ನಂತರ ಆಳಿದ ಕರ್ನಾಟಕದ ಅರಸು ಕಟ್ಟಿಸಿದ ದೇವಾಲಯಗಳಲ್ಲಿ ಮೂರ್ತಿ ಶಿಲ್ಪದ ಶಿಲ್ಪಿಯ ಹೊಡೆತಕ್ಕೆ ಸುಲಭವಾಗಿ ಸ್ಪಂದಿಸುತ್ತಿತ್ತು. ತಮಿಳುನಾಡಿನಲ್ಲಿ ಕಲ್ಲುಗಳ ಗಡಸುತನ ದಿಂದ ಶಿಲ್ಪಿ ವಿಶೇಷವಾದ ಆಯುಧಗಳನ್ನೇ ರೂಪಿಸಿ ಕೊಳ್ಳಬೇಕಾಯಿತು. ಉತ್ತರದಲ್ಲಿ ಆರ್ಯಸಂಸ್ಕೃತಿಯ ಪ್ರಭಾವದಿಂದ ಔತ್ತರೇಯ ಶೈಲಿಯನ್ನು ದ್ರಾವಿಡ ಶೈಲಿಯೊಂದಿಗೆ ಮೇಳೈಸಿ ತಮ್ಮದೇ ಆದ ಶೈಲಿಯನ್ನು ರೂಪಿಸುವುದು ಕರ್ನಾಟಕದ ಶಿಲ್ಪಿಗಳಿಗೆ ಸಾಧ್ಯವಾ ಯಿತು. ಈ ಎರಡೂ ಶೈಲಿಗಳ ಗುಡಿಗಳನ್ನು ನಾವು ಕರ್ನಾಟಕದಲ್ಲಿ ಕಾಣುತ್ತೇವೆ. ತಮಿಳುನಾಡಿನಲ್ಲಿ ನಾಗರ ಶೈಲಿಯ ದೇವಾಲಯಗಳು ವಿರಳ. ಮೂರ್ತಿ ಶಿಲ್ಪಗ ಳಲ್ಲೂ ಸಹ ವ್ಯತ್ಯಾಸಗಳನ್ನು ಗುರ್ತಿಸಬಹುದು. ಪಲ್ಲ ವರ ಮೂರ್ತಿಶಿಲ್ಪಗಳು ಆಕಾರದಲ್ಲಿ ಹಿರಿದು ಮುಖ ಭಾವದಲ್ಲಿ ಶೌರ್ಯ ಸಾಹಸಗಳನ್ನು, ಒಂದು ವಿಧದ ಕಾಠಿಣ್ಯತೆಯನ್ನು ಕಾಣಬಹುದು. ಬಹುಮಟ್ಟಿನ ಗಂಡು ಶಿಲ್ಪಗಳು ಮೀಸೆಗಳನ್ನು ಧರಿಸಿದವುಗಳಾಗಿದ್ದವು – ಬಳಸಿದ ಶಿಲೆಯೂ ಅಲ್ಲದೆ ಶಿಲ್ಪಿಯ ಮನೋ ಭಾವ. ಆತನು ಬೆಳೆದು ಬಂದ ಪರಿಸರಗಳು ಇದಕ್ಕೆ ಕಾರಣ. ಕರ್ನಾಟಕದ ಮೂರ್ತಿಶಿಲ್ಪಗಳಲ್ಲಿ ನವರಸಗ ಳನ್ನೂ ಕಾಣುತ್ತೇವೆ. ಸಾಧರಣವಾಗಿ ಎಲ್ಲವೂ ಹೆಣ್ಣು ಮುಖಗಳು. ಹೆಚ್ಚು ಲಾಲಿತ್ಯ ಹಾಗೂ ಬಳಕುಗಳು. ಹೊಯ್ಸಳರ ಮೂರ್ತಿ ಶಿಲ್ಪದಲ್ಲಿ ಈ ಶೈಲಿ ತನ್ನ ಪರಾಕಾಷ್ಠೆಯನ್ನು ಮುಟ್ಟಿದೆ.

ಈ ತೆರನ ಭಿನ್ನತೆಗಳನ್ನು ಜೀವನದ ಅನ್ಯಕ್ಷೇತ್ರಗ ಳಲ್ಲಿ ಕಾಣಬಹುದು. ಆದರೆ ಈಗಾಗಲೇ ನಿಮ್ಮ ಬಹಳ ಅಮೂಲ್ಯ ವೇಳೆಯನ್ನು ಕಸಿದಿದ್ದೇನಾಗಿ ಅವು ಗಳನ್ನು ಇಲ್ಲಿ ಪ್ರಸ್ತಾಪಿಸುವುದಿಲ್ಲ, ನನ್ನ ಉದ್ದೇಶ

ಇಷ್ಟೇ. ದಕ್ಷಿಣ ಭಾರತದಲ್ಲಿ ಕರ್ನಾಟಕಸಂಸ್ಕೃತಿ ಎಂಬ ಒಂದು ಸಂಸ್ಕೃತಿಯೂ ಇದೆ ಎಂಬುದನ್ನು ಪಂಡಿತರು ಮನಗಾಣಬೇಕು. ಕೇವಲ ಕನ್ನಡಿಗರು ಇದನ್ನು ಅರಿತುಕೊಂಡರೆ ಸಾಲದು. ನಮ್ಮ ನಾಡಿನ ಜನ ಕೊಟ್ಟು ಕೆಟ್ಟರು. ವಿಜಯನಗರದ ಕಾಲದಿಂದಲಂತೂ ಪರಸ್ಪರ ಕಾದು ಕೆಟ್ಟವರು. ಏಕೋ ಏನೋ ನಾವೆಲ್ಲರೂ ಮುಂದಾಗಬೇಕು ಎಂಬ ಮನೋಭಾವ, ಅದಕ್ಕೆ ಅಗತ್ಯವಾದ ಒಗ್ಗಟ್ಟುನಮ್ಮಲಿಲ್ಲ. ಅನ್ಯರೂ ಪರಸ್ಪರ ಕಾದಾಡಿದರೂ, ತಮ್ಮ ಒಟ್ಟಾರೆ ಸಮಾಜಕ್ಕೆ ತೊಂದರೆ ಉಂಟಾಗಬಹುದಾದ ಸಂದರ್ಭಗಳಲ್ಲಿ ಏಕೀಭವಿಸಿ ಹೋರಾಡುತ್ತಾರೆ. ನಾವು ಎಲ್ಲವನ್ನೂ ಕಳೆದುಕೊಳ್ಳುತ್ತಿದ್ದರೂ ಪರಸ್ಪರ ಕಾದಾಟಗಳಲ್ಲಿ ಮುನ್ನುಗ್ಗುವರ ಕಾಲನ್ನು ಹಿಡಿದು ಜಗ್ಗುವಲ್ಲಿ ನಿರತರಾಗಿದ್ದೇವೆ. ಈ ಮಾತುಗಳು ಕಹಿ ಎನಿಸಬಹುದಾದರೂ ಕಟು ಸತ್ಯ. ಈಗ ನಾವು ಈ ನಮ್ಮ 'ಒಳ್ಳೆಯತನ'ದಿಂದ ಮುಕ್ತರಾಗಿಲ್ಲ. ಕರ್ನಾಟಕದಲ್ಲಿ ಕನ್ನಡಿಗರಿಗೆ ಕೆಲಸಗಳಲ್ಲಿ ಆದ್ಯತೆ ಕೊಡಲು ಸರ್ಕಾರ ಒಂದು ಮಂಡಲಿಯನ್ನು ರಚಿಸಬೇಕೆ? ಇಲ್ಲಿನ ಕೈಗಾರಿಕೆಗಳು ಕೇಂದ್ರ ಸರ್ಕಾರದವು ಇಲ್ಲವೆ ಹೊರಗಿನಿಂದ ಬಂದ ಬಂಡವಾಳಗಾರರದು, ಇವರು ನಮ್ಮ ರಾಜ್ಯದ ನೈಸರ್ಗಿಕ ಸಂಪತ್ತನ್ನು ಸೂರೆಹೊಡೆದು ಧನಿಕರಾಗಿದ್ದಾರೆ. ಆದರೆ ಈ ರಾಜ್ಯದಲ್ಲಿ ನೆಲೆಸಿರುವ ಶಾಂತಿ ಸೌಲಭ್ಯ ಗಳನ್ನುಪಯೋಗಿಸಿ ಇಲ್ಲಿಯೇ ನೆಲೆಸುತ್ತಾರೆ. ಈ ರಾಜ್ಯದಲ್ಲಿರುವಷ್ಟು ಕೇಂದ್ರ ಸರ್ಕಾರದ, ಅನ್ಯ ಪ್ರಾಂತಗಳ ಕೈಗಾರಿಕೋದ್ಯಮಿಗಳು ತಮಿಳುನಾಡಿನಲ್ಲಿ ಕಾಣಲಾರರು.

ಕನ್ನಡ ವಿಶ್ವವಿದ್ಯಾಲಯ ಸ್ಥಾಪನೆಗಾಗಿ ಸರ್ಕಾರ ಮುಂದೆ ಬಂದಾಗ ನಮ್ಮಲ್ಲಿನ ಹಿರಿಯರು ಏಕಮುಖವಾಗಿ ಸ್ವಾಗತಿಸುವ ಬದಲು ಪರಸ್ಪರ ವಿರೋದದ ಹೇಳಿಕೆಗಳನ್ನು ನೀಡುತ್ತಿದ್ದಾರೆ. ಇರುವ ವಿಶ್ವವಿದ್ಯಾಲಯಗಳಲ್ಲಿ ನಡೆಯುತ್ತಿರುವ ಕೆಲಸಗಳ ಪುನರಾವರ್ತನೆ ಇದು ಎನ್ನುತ್ತಾರೆ. ಆದರೆ ಹಿಂದೊಮ್ಮೆ ನಿಜವಾಗಿ ಆಸ್ಥೆಯಿದ್ದ ವಿದ್ವಾಂಸರು ವಿಶ್ವವಿದ್ಯಾಲಯಗಳಲ್ಲಿ ಆರಂಭಿಸಿದ ಯೋಜನೆಗಳು ಈಗ ಎಲ್ಲೆಲ್ಲೂ ಕುಂಠಿತವಾಗಿಲ್ಲವೇ? ಹಣದ ಅಭಾವ ಎನ್ನುವುದು ಹಾರಿಕೆಯ ಕಾರಣ. ಸರ್ಕಾರಕ್ಕೆ ಸರಿಯಾಗಿ ತಿಳಿಸಿಕೊಟ್ಟು ಅದನ್ನು ಒಪ್ಪಿಸಲು ನಮ್ಮಲ್ಲಿಯೇ ಒಂದು ದೃಢಸಂಕಲ್ಪ,ನಂಬಿಕೆ ಅವಶ್ಯಕ. ಇದನ್ನು ಇಂತಹ ವಿಷಯಗಳನ್ನು ಹೀಗೆಯೇ ಬೆಳಸಬಹುದು. ಆದರೆ ಸದ್ಯಕ್ಕೆ ಇಷ್ಟು ಸಾಕು, ನನ್ನ ಈ ಧೋರಣೆ ಸಂಕುಚಿತ ಎನ್ನುವವರಿದ್ದಾರೆಂಬುದನ್ನು ಬಲ್ಲೆ. ಆದರೆ ಈ ಮೊದಲೇ ಹೇಳಿದಂತೆ ಅಹುದಾದರಹುದೆನ್ನಿ.

ಇತಿಹಾಸ ಸಂಶೋಧನೆಯತ್ತ ಕಣ್ಣುಹಾಯಿಸಿದಾಗ ನಮ್ಮ ನಾಡಿನ ಇತಿಹಾಸದ ಪ್ರಮುಖ ರೂಪರೇಷೆಗಳ ಪರಿಚಯ ನಮಗೆ ಸಾಕಾಷ್ಟಾಗಿದೆ ಎನ್ನಬೇಕು. ಈಗ ನಾವು ಮಂಡಲೇಶ್ವರ, ಪಾಳೆಯಗಾರರ ಅವರು ಆಳಿದ ಸಣ್ಣ ಪ್ರದೇಶಗಳ ಇತಿಹಾಸವನ್ನರಿಯಲು ಶ್ರಮಿಸಬೇಕು. ಪ್ರಾದೇಶಿಕ ಇತಿಹಾಸದತ್ತ ಗಮನಹರಿಸಬೇಕು. ಈ ಸಣ್ಣ ನಾಯಕರು ನೀಡಿದ ನೆರವೇದೊಡ್ಡ ಸಾಮ್ರಾಜ್ಯಗಳ ಅಸ್ತಿತ್ವಕ್ಕೆ ಬೆಳವಣಿಗೆಗೆ ಪೋಷಕಗಳಾದುವು. ಹಿರಿಯ ಮನೆತನದ ಅರಸ ಇವರ ಮುಲಕವೇ ಜನಸಾಮಾನ್ಯನನ್ನು ಮುಟ್ಟಬೇಕಾಯಿತು. ಆದುದರಿಂದ ಇವರ ಬಾಂಧವ್ಯಗಳನ್ನು ವಿಶ್ಲೇಷಣೆಗೊಳಪಡಿಸಬೇಕು. ರಾಜಕೀಯ ಇತಿಹಾಸ ಕಾಲ ಮುಗಿದು ಸಾಮಾಜಿಕ, ಆರ್ಥಿಕ ಇತಿಹಾಸಗಳನ್ನೂ ಆ ದೃಷ್ಟಿಕೋನದಿಂದ ಸಮಾಜದ ಅಳಿವು-ಉಳಿವುಗಳಲ್ಲಿ ಅವರು ವಹಿಸಿದ ಪಾತ್ರ ಇತ್ಯಾದಿಗಳ ಅಧ್ಯಯನದ ಕೆಲಸ ಆಗಬೇಕು. ಚಿತ್ರದುರ್ಗದ ಪಾಳೆಯಗಾರರು ಯಾರಾರಾಗಿದ್ದರು ಎಂಬುದು ನಮಗೆ ತಿಳಿದಿರಬಹುದಾದರೂ ಒಟ್ಟಾರೆ ಇತಿಹಾಸದಲ್ಲಿ ಅವರು ವಹಿಸಿದ ಪಾತ್ರವೆಂತಹುದಾಗಿತ್ತು ಎಂಬುದರ ವಿಶ್ಲೇಷಣೆ ಆಗಬೇಕು. ಸ್ಥಳೀಯ ಸಂಶೋಧಕರು, ಕಾಲೇಜುಗಳ ಅಧ್ಯಾಪಕರು, ಯುವಜನಾಂಗ ಇಂತಹವುಗಳಲ್ಲಿ ಹೆಚ್ಚಿನ ಆಸಕ್ತಿ ವಹಿಸಬೇಕು.

ಬನವಾಸಿ ನಮ್ಮ ಪ್ರಾಚೀನ ನಗರ. ಅದರ ಬಗೆಗೆ ಸ್ಥಳೀಯ ಜನರು ತೋರಿಸಿದ ಆಸ್ಥೆಯ ಪರಿಣಾಮವಾಗಿ ಅಲ್ಲಿ ಬಹಳ ಕೆಲಸವಾಗಿದೆ. ಅವರು ನನ್ನ ಆಪ್ತಮಿತ್ರರಾಗಿದ್ದ ದಿವಂಗತ ಲಿಂಗೇಶ ಶರ್ಮರ ನೇತೃತ್ವದಲ್ಲಿ ಹಲವಾರು ವಿಚಾರಸಂಕಿರಣಗಳನ್ನು ಸಮ್ಮೇಳನಗಳನ್ನು ಏರ್ಪಡಿಸಿದ್ದಾರೆ. ಅದರ ನೆನಪೇ ಸಿಹಿ. ಪರಿಣಾಮವಾಗಿ 'ಬನವಾಸಿ ಕದಂಬರು', Corpus of Kadamba Inscriptions ಇತ್ಯಾದಿ ಗ್ರಂಥಗಳು ಹೊರಬಂದವು. ಹೊಸಶಾಸನಗಳು ಪುರಾತತ್ವ ನಿವೇಶನಗಳು ಬೆಳಕು ಕಂಡವು. ಹಿಂದೆ ಗೆಜಿಟಿಯರ್‌ಗಳ ಸಂಪಾದಕರಾಗಿದ್ದ, ಶ್ರೀ ಅಭಿಶಂಕರರು ಬನವಾಸಿವಲಯ ಅಭ್ಯುದು ಸಮಿತಿಯನ್ನು ಸ್ಥಾಪಿಸಿ ತನ್ಮೂಲಕ ಸರ್ಕಾರದೊಡನೆ ಈ ಪ್ರಾಂತದಲ್ಲಿ, ಇನ್ನೂ ಆಗಬೇಕಾದ ಕಾರ್ಯಗಳ ಬಗೆಗೆ ಹೋರಾಡುತ್ತಲೇ ಇದ್ದಾರೆ.

ಪ್ರಾಚ್ಯವಸ್ತುಗಳ, ಶಿಲ್ಪಗಳ, ಗುಡಿಗಳ ರಕ್ಷಣೆಯ ಬಗೆಗೆ ಸ್ಥಳೀಯರು ಹೆಚ್ಚಿನ ಆಸಕ್ತಿ ವಹಿಸಬೇಕು. ಜನ ಸಾಮಾನ್ಯರಲ್ಲಿಇತಿಹಾಸಿದ ಪ್ರಜ್ಞೆ ಮೂಡಿಸಬೇಕು. ಇಂತಹ ಕೆಲಸಗಳಲ್ಲಿ ಸರ್ಕಾರದ ಮೇಲಿನ ಅವಲಂಬನ ನಿರರ್ಥಕವೆನಿಸುತ್ತದೆ. ಸನ್ನತಿ ಒಂದು ಪ್ರಾಚೀನ ಬೌದ್ಧ ಕ್ಷೇತ್ರವೆಂದು ತಿಳಿದು, ದಶಕವೇ ಕಳೆದಿದೆ. ಅಲ್ಲಿ ಉತ್ಖನನ, ಕ್ಷೇತ್ರ ಪರಿಶೋಧನ ಕಾರ್ಯ ಗಳಾಗಬೇಕಾಗಿದೆ. ಬನವಾಸಿಯಲ್ಲಿ ಒಂದು ಉತ್ಖನನ ನಡೆದು 20 ವರ್ಷಗಳೇ ಸಂದಿವೆ. ಅದರ ವರದಿ ಎಲ್ಲಿ! ಈಗಿನ ಪುರಾತತ್ವ ಇಲಾಖೆಯ ನಿರ್ದೇಶಕರಾದ ದೇವರಾಜನು ಉತ್ಸುಕರು, ಅವರಿಗೆ ಕೆಲಸಮಾಡಿ ತೋರಿಸಬಹುದಾ ದಂತಹಕ್ಷೇತ್ರಗಳು ಬಹಳ ಇವೆ. ಮಾಡಿಯಾರು ಎಂಬ ಭರವಸೆ ನನಗಿದೆ. ಈಗ ಪ್ರಕಟವಾಗುತ್ತಿರುವ ಸಂಶೋಧಿತ ಜಿಲ್ಲಾಗೆಝೆಟಿಯರುಗಳು ಉತ್ತಮ ಪರಾಮರ್ಶಕ ಗ್ರಂಥಗಳಾಗಿವೆ. ಹಲವಾರು ಸಂಸ್ಥೆಗಳಲ್ಲಿ ಚಟುವಟಿಕೆಯಿಂದ ಸಂಶೋಧನೆ ಕೈಗೊಂಡಿರುವ, ಸಂಶೋಧನೆಗೆ ನೆರವಾಗಿರುವ ಡಾ॥ ಸೂರ್ಯನಾಥ ಕಾಮತರಿಗೆ ಈ ದಿಶೆಯಲ್ಲಿ ಸರ್ಕಾರ ನೆರವು ನೀಡ ಬೇಕು, ನಾಡಿನ ಈಗಿನ ವಿಶ್ವವಿದ್ಯಾಲಯಗಳಲ್ಲಿ ಒಳ್ಳೆಯ ಕೆಲ ಸಗಳಾಗುತ್ತಿದ್ದುವು. ಈಗ ಅವುಗಳು ನಿಂತಿವೆ.ಕೇವಲ ಅಧ್ಯಯನ, ಅಧ್ಯಾಪನ ಕೇಂದ್ರಗಳಾಗಿ ಬದಲಾ ಗಿರುವ ಇವು ಯಾವ ಯೋಜನೆಗಳಿಗೂ, ಪ್ರೋತ್ಸಾಹ ನೀಡದೆ ತಾತ್ಸಾರಮನೋಭಾವದಿಂದ ಕೂಡಿವೆ. ಇವು ಕನ್ನಡ ವಿಶ್ವವಿದ್ಯಾಲಯದ ಅವಶ್ಯಕತೆಗೆ ಇಂಬುಕೊಡು ತ್ತದೆ. ಇದು ಕೇವಲ ಕನ್ನಡ ಸಾಹಿತ್ಯ, ಗ್ರಂಥಸಂಪಾ ದನೆ ಮುಂತಾದವುಗಳಿಗಷ್ಟೇ ಅಲ್ಲದೆ, ಇತಿಹಾಸ, ವಾಸ್ತುಶಿಲ್ಪ, ಮೂರ್ತಿಶಿಲ್ಪ, ಶಾಸನ ಶಾಸ್ತ್ರ ಇತ್ಯಾದಿಗಳಲ್ಲಿ ಸಂಶೋಧನೆ. ಅವುಗಳ ಪ್ರಕಟಣೆಗೆ ಒತ್ತುಕೊಡಬೇಕು. ಇದರಲ್ಲಿ ಆರ್ಥಿಕ, ಸಾಮಾಜಿಕ, ರಾಜನೀತಿ ಇತ್ಯಾದಿ ಶಾಸ್ತ್ರಗಳಿಗೂ ಸ್ಥಳವಿರಬೇಕು.

ಬಾಂಧವರೇ, ಶ್ರೀ ಬೃಹನ್ಮಠದ ಮುರುಘ ರಾಜೇಂದ್ರ ಸ್ವಾಮಿಗಳು ಒಂದು ಧಾರ್ಮಿಕ ಸಂಸ್ಥೆ ವಿದ್ಯೆಯನ್ನೂ ಹೇಗೆ ಪೋಷಿಸಬಹುದು ಎಂಬುದನ್ನು ತೋರಿಸಿದ್ದಾರೆ. ಅವರೊಬ್ಬ ವ್ಯಕ್ತಿಯಲ್ಲ, ಶಕ್ತಿ. ಅವರ ಔದಾರ್ಯದ ಫಲವಾಗಿ ನಾವು ಇಂದು ಇಲ್ಲಿ ಸೇರಿದ್ದೇವೆ. ನಮ್ಮ ನಾಡಿನಲ್ಲಿ, ಹಲವಾರು ಇಂತಹ ಬೇರ ಬೇರೆ ಮತ, ಧರ್ಮಗಳ ಮಠಗಳಿವೆ. ಕಳೆದ ವರ್ಷ ದಾವಣಗೆರೆಯ ಮಠ ಆಶ್ರಯ ನೀಡಿತ್ತು ಅದಕ್ಕೆ ಮೊದಲು ಗದಗು. ಇವು ಸಂಶೋಧನೆ ಪ್ರಕಟಣೆಗಳಿಗೂ ಪ್ರೋತ್ಸಾಹ ನೀಡಲ ಎಂದು ಕೋರುತ್ತೇನೆ. ಇಲ್ಲಿಯೇ ಸುತ್ತಮುತ್ತಲೂ ಯಾವ ಸಂಶೋಧಕರಿದ್ದಾರೆ. ಅವರಿಗೆ ಬೇಕಿರುವುದು ನೈತಿಕ. ಮತ್ತು ಸ್ವಲ್ಪಮಟ್ಟಿಗಾದರೂ ಆರ್ಥಿಕ ಬೆಂಬಲಗಳು. ಮಠಾಧಿಪತಿಗಳು ಈ ಕಾರ್ಯದಲ್ಲಿ ತೊಡಗಿಸಿಕೊಳ್ಳುತ್ತಾರೆಂಬ ಆಸೆ, ಭರವಸೆ ನನಗಿದೆ.

ಬೇಸರ ತಂದರೂ, ನನ್ನ ಈ ಉದ್ಗಾರಗಳಿಗೆ ಕಿವಿಕೊಟ್ಟಿದ್ದೀರಿ. ಕ್ಷಮಸ್ವ, ಭದ್ರಂ ಭೂಯಾತ್, ಶುಭಂ ಭೂಯಾತ್, ನಮಸ್ಕಾರ.

ಎ.ಬಿ. ಶಿವತಾರಕ್

# ತುಮಕೂರು ಜಿಲ್ಲೆಯಲ್ಲಿ ಇತ್ತೀಚೆಗೆ ದೊರೆತ ಕೆಲವು ಪ್ರಾಗೈತಿಹಾಸಿಕ ನೆಲೆಗಳು

ತುಮಕೂರು ಜಿಲ್ಲೆ ಕರ್ನಾಟಕದ ಕೆಲವೇ ಪ್ರದೇಶಗಳಂತೆ ಇತಿಹಾಸ ಪೂರ್ವ ಕಾಲದುದ್ದಕ್ಕೂ ಆದಿ ಮಾನವ ನಿವಾಸ ಸ್ಥಾನವಾಗಿತ್ತೆಂಬುದನ್ನು ಇಲ್ಲಿ ದೊರೆಯುವ ಹಲವಾರು ಅವಶೇಷಗಳಿಂದ ತಿಳಿಯ ಬಹುದಾಗಿದೆ. ಮಾನವನ ಮುನ್ನಡೆಗೆ ಇಲ್ಲಿನ ಪ್ರಾಕೃತಿಕ ಲಕ್ಷಣಗಳೂ ಸಹಾಯಕವಾಗಿ ಬಂದಿವೆ. ಪ್ರಾಗೈತಿಹಾಸಿಕ ಮಾನವನ ಜೀವನದ ಚಿತ್ರವನ್ನು ಪಡೆಯಲು ಇಲ್ಲಿ ದೊರಕುವ ಹಲವಾರು ಅವಶೇಷಗಳು ಸಹಕಾರಿಯಾಗಿವೆ.

ಈ ಜಿಲ್ಲೆಯ ಕೆಲವು ನೆಲೆಗಳಲ್ಲಿ ಪೂರ್ವ ಶಿಲಾಯುಗದ ಕಾಲದ ಅವಶೇಷಗಳನ್ನು ಶೋಧಿಸಲಾಗಿದೆ. ಈ ಶೋಧನೆಗಳಿಂದ ಮಾನವನ ವಿವಿಧ ಸಂಸ್ಕೃತಿಗಳ ಹಂತವನ್ನು ಕಾಣಬಹುದಾಗಿದೆ. ಅವು ಗಳೆಂದರೆ ಹಳೆ ಶಿಲಾಯುಗ ಸಂಸ್ಕೃತಿಯ ಮೂರು ಹಂತಗಳನ್ನು ಕಿಬ್ಬನಹಳ್ಳಿ[1] ಮತ್ತು ಬಿಳಿಗೆರೆ (ತಿಪಟೂರು ತಾಲ್ಲೂಕು) ಗಳಲ್ಲಿಯೂ, ಸೂಕ್ಷ್ಮಶಿಲಾ ಯುಗದ ಅವಶೇಷಗಳನ್ನು ಕಿಬ್ಬನಹಳ್ಳಿ[2], ಮಾನಾಕ್ಷಯ್ಯ ಎಸ್ಟೇಟ್[3] ಮತ್ತು ಹಿರೇಗುಂಡಗಲ್ಲು[4] (ತುಮಕೂರು ತಾಲ್ಲೂಕು) ನಲ್ಲೂ, ನೂತನ ಶಿಲಾಯುಗದ ಆಯುಧಗಳನ್ನು ವೈ.ಎನ್. ಹೊಸಕೋಟೆ[5] (ಪಾವಗಡ ತಾಲ್ಲೂಕು) ಯಲ್ಲಿಯೂ ಬೃಹತ್ ಶಿಲಾಯುಗದ ಅವಶೇಷ ಗಳನ್ನು ಬೆಳ್ಳಿಬಟ್ಟಲು (ತುಮಕೂರು ತಾಲ್ಲೂಕು), ಕ್ಷೇರಳಕಟ್ಟೆ[6] ಮತ್ತು ಚಿಕ್ಕನಹಳ್ಳಿ[7] (ತಿಪಟೂರು ತಾಲ್ಲೂಕು) ಗಳಲ್ಲಿಯೂ ಕಾಣಬಹುದಾಗಿದೆ.

ಈ ಜಿಲ್ಲೆಯಲ್ಲಿ ನಡೆಸಿದ ಇತ್ತೀಚಿನ ಹಲವು ಸ್ಥಳಗಳ ಸರ್ವೇಕ್ಷಣೆಯಿಂದ ಪ್ರಾಗೈತಿಹಾಸದ ಹೆಚ್ಚು ಮಾಹಿತಿಯನ್ನು ತಿಳಿಯಬಹುದಾಗಿದೆ.

**ಬೆಳ್ಳಿಬಟ್ಟಲಹಳ್ಳಿ:** ಇದು ತುಮಕೂರು ತಾಲ್ಲೂಕು ಊರಡಗೆರೆ ಹೋಬಳಿಯಲ್ಲಿರುವ ಒಂದು ಪುಟ್ಟ ಗ್ರಾಮ. ತುಮಕೂರಿನ ಪೂರ್ವಕ್ಕೆ ಸುಮಾರು 15 ಕಿ.ಮೀ. ದೂರದಲ್ಲಿದೆ. ಇಲ್ಲಿ ಈಗಾಗಲೇ ಬಿ.ಎಲ್. ರೈಸ್‌ರವರು ಬೃಹತ್ ಶಿಲಾಯುಗದ ಗೋರಿಗಳಿರುವುದನ್ನು ತಿಳಿಸಿದ್ದಾರೆ. ಇವುಗಳು ವೃತ್ತಾಕಾರದ ಶಿಲಾಗೋರಿಗಳಾಗಿದ್ದು ಇವುಗಳಲ್ಲೊಂದನ್ನು ಅಗೆದು ತೆಗೆಯಲಾಗಿದ್ದು ಅದರಲ್ಲಿ ಬೃಹತ್ ಶಿಲಾಯುಗದ ಕಾಲದ ಮಡಕೆ ಚೂರುಗಳು ಸಿಕ್ಕಿವೆ ಎಂದು ತಿಳಿಸಿದ್ದಾರೆ.

ಇತ್ತೀಚೆಗೆ ಒಂದು ಶಿಲಾಗೋರಿಯನ್ನು ಅಗೆಯಲಾಗಿದ್ದು ಅಲ್ಲಿ ದೊರೆತ ಕೆಂಪಾದ ಮಡಕೆಯ ಚೂರುಗಳ ಮೇಲೆ ಬಿಳಿಬಣ್ಣದಿಂದ ಗೆರೆ ಮತ್ತು ಚುಕ್ಕಿಗಳನ್ನು ಹಾಕಿರುವುದು ಒಂದು ವೈಶಿಷ್ಟ್ಯ ಪೂರ್ಣವಾಗಿದ್ದು ಬೃಹತ್ ಶಿಲಾಯುಗದ ಕಾಲದಲ್ಲಿಯೂ ಬಣ್ಣವನ್ನು ಉಪಯೋಗಿಸಿ ಮಡಕೆಯ ಹೊರಮೈಯನ್ನು ಚಿತ್ರಿಸಲಾಗುತ್ತಿತ್ತೆಂದು ತಿಳಿಯ ಬಹುದಾಗಿದೆ. ಇಂತಹ ಚಿತ್ರಣಗಳಿಂದ ಕೂಡಿದ ಬೃಹತ್ ಶಿಲಾಯುಗದ ಮಡಕೆ ಚೂರುಗಳು ಭಾರತದ ಕೆಲವೇ ಸ್ಥಳಗಳಲ್ಲಿ ದೊರೆತಿವೆ[8].

ಇದೇ ಸ್ಥಳದಲ್ಲಿ ದೊರೆತ ನೂತನ ಶಿಲಾಯುಗದ ವೃತ್ತಾಕಾರದ ಕಲ್ಲಿನ ಚಕ್ರ (Ring Stone or Mace head) ಮತ್ತು ಕಾಗೆ ಬಂಗಾರ ಮಿಶ್ರಿತ ಮಡಕೆ ಚೂರುಗಳು ಪ್ರಮುಖ ವಾದವು. ಈ ಕಲ್ಲಿನ ಚಕ್ರವನ್ನು ಮರದ ಕೋಲಿಗೆ ಸಿಕ್ಕಿಸಿ ಕೊಂಡು ಮೊನಚಾದ ಭಾಗದಿಂದ ಅಗೆಯುತ್ತಿದ್ದರು. ಈ ಚಕ್ರದಿಂದಾಗಿ ಅಗೆಯಲು ಭಾರವು ದೊರತಿದಂತಾ ಗುತ್ತಿತ್ತು. ವಿವಿಧ ರೀತಿಯ ಶಿಲಾ ಕೊಡಲಿಗಳು ದೊರೆತಿದ್ದು ಸಿಕ್ಕಿದ ಎಲ್ಲವೂ ಕೂಡ ಒಂದಲ್ಲೊಂದು ಭಾಗ ತುಂಡಾಗಿದೆ. ಇಲ್ಲಿ ದೊರೆತ ಮಡಕೆ ಚೂರುಗಳು ಮತ್ತು ಆಯುಧಗಳಿಂದಾಗಿ ಈ ಸ್ಥಳವು ನೂತನ ಶಿಲಾಯುಗದ ಜನರ ನಿವಾಸ ಸ್ಥಾನವಾಗಿತ್ತೆಂದು ತಿಳಿಯಬಹುದಾಗಿದೆ.

**ರಾಚಮಾರನಹಳ್ಳಿ:** ರಾಚಮಾರನ ಹಳ್ಳಿಯು ಪಾವಗಡ ತಾಲ್ಲೂಕಿನ ವೈ.ಎನ್. ಹೊಸಕೋಟೆ ಹೋಬಳಿಯಲ್ಲಿರುವ ಒಂದು ಬೇಚಿರಾಕ್ ಗ್ರಾಮ. ಚಾರಿತ್ರಿಕ ಯುಗದ ಆರಂಭದ ಮಡಕೆ ಚೂರುಗಳು

ದೊರೆತಿವೆ. ಈ ಮಡಕೆ ಚೂರುಗಳ ಮೇಲೆ ಬಿಳಿ ಕಂದು ಮತ್ತು ನಸುಗೆಂಪು ಬಣ್ಣಗಳನ್ನು ಉಪಯೋಗಿಸಿ ಹಲ ವಾರು ರೀತಿಯ ಚಿತ್ರಗಳನ್ನು ಬಿಡಿಸಲಾಗಿದೆ. ಸರಳ ರೇಖೆ ಮತ್ತು ವಕ್ರ ರೇಖೆಗಳನ್ನು ಎಳೆದು ಮಾಡಲಾಗಿದೆ. ಸರಳ ರೇಖೆಗೆ ಚುಕ್ಕಿಗಳನ್ನಿಟ್ಟಿರುವುದು, ಚೌಕಾಕಾರವಾಗಿ ಮಾಡಲು ಎಳೆದಂತಹ ಗೆರೆಗಳು, ಒಂದು ಸಾಲು ಸರಳ ರೇಖೆ ಮತ್ತೊಂದು ಸಾಲು ಚುಕ್ಕಿಗಳನ್ನಿಟಿ ರುವುದು ಒಂದು ರೀತಿಯ ಚಿತ್ರಗಳಾದರೆ ಇವುಗಳೆಲ್ಲ ವಕ್ಕಿಂತಲೂ ಅಪರೂಪವಾದುದೆಂದರೆ "ಚೇಳಿನಾ ಕೃತಿ"(?)ಯ ಚಿತ್ರವನ್ನು ಬಿಡಿಸಿರುವುದು. ಒಟ್ಟಿನಲ್ಲಿ ಇದು ಚಾರಿತ್ರಿಕ ಯುಗದಲ್ಲಿ ಬಹು ಪ್ರಸಿದ್ಧಿಪಡೆದ ಸ್ಥಳವಾಗಿತ್ತೆಂದು ತಿಳಿಯಬಹುದು. ಬೃಹತ್ ಶಿಲಾಯು ಗದ ಕಪ್ಪು-ಕೆಂಪು ಮಡಕೆ ಚೂರುಗಳು ದೊರೆತಿವೆ. ನೂತನ ಶಿಲಾಯುಗದ ಮಡಕೆ ಚೂರುಗಳು ಮತ್ತು ಆಯುಧಗಳೂ ಕೂಡ ಇಲ್ಲಿ ದೊರೆತಿದ್ದು ಮಡಕೆಗ ಳನ್ನು ಕಾಗೆಬಂಗಾರದ ಮಿಶ್ರಣದಲ್ಲಿ ಮಾಡಲಾಗಿದೆ.

ನಾಗಲಾಪುರ: ನಾಗಲಾಪುರವು[9] ಈಗಾಗಲೇ ಕರ್ನಾಟಕದ ಪ್ರಾಗೈತಿಹಾಸಿಕ ಭೂಪಟದಲ್ಲಿ ಹೆಸರು ಮಾಡಿರುವ ಗ್ರಾಮ. ಕಾರಣ ತಿರುಪತಿಯ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾಲಯದ ಡಾ॥ ರಾಮಿರೆಡ್ಡಿ ಇಲ್ಲಿ ಬೂದಿಗುಡ್ಡೆ (Ash Mound) ಇರುವುದನ್ನು ಗುರಿತಿ ಸಿರುವುದು. ನಾಗಲಾಪುರವು ತುಮಕೂರು ಜಿಲ್ಲೆ, ಪಾವಗಡ ತಾಲ್ಲೂಕು, ವೈ.ಎನ್. ಹೊಸಕೋಟೆ ಹೋಬಳಿಯಲ್ಲಿರುವ ಒಂದು ಗ್ರಾಮ. ಇದು ಪಾವಗ ಡ-ಕಲ್ಯಾಣದುರ್ಗ ರಸ್ತೆಯಲ್ಲಿ ಪಾವಗಡದಿಂದ ಸುಮಾರು 17 ಕಿ.ಮೀ. ದೂರದಲ್ಲಿದೆ. ಮುಖ್ಯರಸ್ತೆ ಯಿಂದ 2ಕಿ.ಮೀ. ಪೂರ್ವಕ್ಕೆ ಗ್ರಾಮವಿದ್ದು ಗ್ರಾಮಕ್ಕೆ ಮುಂಚೆ ಶ್ರೀ ಗುಪ್ತ ಅವರ ಹೊಲದಲ್ಲಿ ಈ ಬೂದಿ ಗುಡ್ಡೆಯನ್ನು ಕಾಣಬಹುದಾಗಿದೆ. ಇದೇ ಸ್ಥಳದಲ್ಲಿ ಒಂದು ಗುಡ್ಡವಿದ್ದು ಇದರ ತಪ್ಪಲಿನಲ್ಲಿ ಹಲವು ಪ್ರಾಗೈತಿಹಾಸಿಕ ಅವಶೇಷಗಳನ್ನು ಕಾನಬಹುದಾಗಿದೆ.

ಇಲ್ಲಿ ಅತ್ಯಂತ ಹಳೆಯ ಶಿಲಾಯುಗದ ಆಯು ಧವೊಂದು ದೊರೆತಿದೆ. ಇದನ್ನು ವಿಶ್ಲೇಷಿ ಸುವಲ್ಲಿ ಈ ಆಯುಧವು ಸಾಮಾನ್ಯ ಚಕ್ಕೆ ಕಲ್ಲಿನ ಆಯುಧವಾ ಗಿದ್ದು, ಎರಡೂ ಕಡೆ ಹರಿತವಾದ ಅಲಗುಗಳನ್ನು ಹೊಂದಿದೆ. ಮದ್ಯದ ಭಾಗ ಉಬ್ಬಾಗಿದೆ.

ಇಲ್ಲಿ ಸೂಕ್ಷ್ಮ ಶಿಲಾಯುಗದ ಕೆಲವು ಆಯುಧಗಳು ದೊರೆತಿವೆ. ಇವು ಚಕ್ಕೆ ತೆಗೆದು ಮಾಡಲಾದ ಆಯು ಧಗಳಾಗಿವೆ. ಒಂದು ಬದಿ ಮೊಂಡಾದ ತೆಳುವಾದ ಚಕ್ಕೆ ಗಳು, ಎರಡೂ ಬದಿಯೂ ಹರಿತವುಳ್ಳ ತೆಳುವಾದ ಚಕ್ಕೆ ಮತ್ತು ಮೊನೆಗಳುಳ್ಳ ಆಯುಧಗಳು ದೊರೆತಿವೆ. ಈ ಆಯುಧಗಳೆಲ್ಲವೂ ಬೆಣಚುಕಲ್ಲಿನವು.

ಇದರ ಜೊತೆಗೆ ನೂತನ ಶಿಲಾಯುಗಕ್ಕೆ ಸೇರಿದ ಕೆಲವು ಶಿಲಾಕೊಡಲಿಗಳು ಮತ್ತು ಮಡಕೆಚೂರು ಗಳನ್ನು ಕಾಣಬಹುದಾಗಿದೆ. ಇವು ತೀಡಿ ನಯಮಾಡಿದ ಶಿಲಾಯುಧಗಳು ಇಲ್ಲಿ ದೊರೆತ ಎಲ್ಲಾ ಶಿಲಾಯುಧ ಗಳು ಒಂದಲ್ಲೊಂದು ಭಾಗ ಮುರಿದು ಹೋಗಿದೆ. ಇವುಗಳಲ್ಲಿ ಎರಡು ಆಯುಧಗಳ ಮೊನಚಾದ ಭಾಗ ವಿದ್ದು ಕೆಳಗಿನ ಅಲಗು ಅಗಲ ಆಕಾರದಲ್ಲಿದೆ. ಇನ್ನೆ ರಡು ಆಯುಧಗಳ ಮಧ್ಯ ಭಾಗದವುಗಳಾಗಿದ್ದು ಈ ಎರಡನ್ನು ತೀಡಿ ನಯ ಮಾಡಿರುವುದನ್ನು ಕಾಣ ಬಹುದು. ಉಳಿದೆರಡು ಆಯುಧಗಳ ಮೇಲ್ಭಾಗವಾ ಗಿದ್ದು ಬಟ್ಟತಲೆಯನ್ನು ಹೊಂದಿವೆ. ಒಟ್ಟಿನಲ್ಲಿ ಇಲ್ಲಿ ದೊರೆತ ಬೂದಿಗುಡ್ಡೆ, ನಯವಾದ ಶಿಲಾಯುಧಗಳು ಮತ್ತು ಮಡಕೆಚೂರುಗಳಿಂದಾಗಿ ನೂತನ ಶಿಲಾ ಯುಗದ ಸಂಸ್ಕೃತಿಯ ನೆಲೆಯಾಗಿತ್ತೆಂದು ತಿಳಿಯ ಬಹುದಾಗಿದೆ.

ಯಲ್ಲಪ್ಪನಾಯಕನಹಳ್ಳಿ: ಇದು ಪಾವಗಡ ತಾಲ್ಲೂಕು ವೈ.ಎನ್. ಹೊಸಕೋಟೆ ಹೋಬಳಿಯಲ್ಲಿ ರುವ ಒಂದು ಪುಟ್ಟ ಗ್ರಾಮ. ಇದು ಹೋಬಳೀ ಕೇಂದ್ರದಿಂದ ಪಶ್ಚಿಮಕ್ಕೆ 2 ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಹತ್ತಿರವಿರುವ ಗುಡ್ಡದ ಬಳಿಯಲ್ಲಿ ಹಲವಾರು ಪ್ರಾಗೈತಿಹಾಸಿಕ ಅವಶೇಷಗಳನ್ನು ಕಾಣಬಹುದು.

ಇಲ್ಲಿ ದೊರೆತ ಒಂದು ಪ್ರಮುಖ ಅವಶೇಷವೆಂ ದರೆ ಬೂದಿದಿಬ್ಬ. ಇದು ನೂತನ ಶಿಲಾಯುಗದ್ದಾ ಗಿದ್ದು, ಆ ಕಾಲದ ಜನರು ದನದ ಸಗಣೆಯನ್ನು ಒಟ್ಟುಮಾಡಿ ಸುಡುವುದು ಪದ್ಧತಿ ಯಾಗಿದ್ದಿತು. ಇಂತ ಹುದೇ ಒಂದು ಬೂದಿಗುಡ್ಡೆಯು ವೈ.ಎನ್. ಹೊಸ ಕೋಟೆಯಲ್ಲಿಯೂ ದೊರೆತಿದ್ದು, ಈ ಎರಡೂ ಬೂದಿ ಗುಡ್ಡೆಗಳೂ ಹೊಸದಾಗಿ ದೊರೆತ ಪ್ರಾಗೈತಿಹಾಸಿಕ ಅವಶೇಷಗಳಾಗಿವೆ. ದುರದೃಷ್ಟ ವಶಾತ್ ಈ ಎರಡೂ ಬೂದಿಗುಡ್ಡೆಗಳನ್ನು ನಲುಗಿಸಲಾಗಿದೆ. ಇದೇ ರೀತಿಯ ಎರಡು ಬೂದಿ ಗುಡ್ಡೆಗಳು ಇದೇ ತಾಲ್ಲೂಕಿನ ನಾಗ ಲಾಪುರ ಮತ್ತು ಕೊಲಮಿಪಾಳ್ಯಗಳಲ್ಲಿ ಇದ್ದುದನ್ನು ಡಾ. ರಾಮಿರೆಡ್ಡಿಯವರು ತಿಳಿಸಿರುವರು[10].

ಇಲ್ಲಿ ನಯಮಾಡಿದ ಶಿಲಾಯುಧಗಳು ದೊರೆತಿದ್ದು ಒಂದು ಚಾಣದ ಆಕೃತಿಯಲ್ಲಿರುವುದು ವೈಶಿಷ್ಟ ಪೂರ್ಣವಾದುದು. ಎರಡು ಪೂರ್ಣ ಪ್ರಮಾಣದ ಕೊಡಲಿಗಳಾಗಿದ್ದು ಕೆಳಗಿನ ಅಲಗು ಮೊನಚಾಗಿ ಅಗಲ ಅಕಾರದಲ್ಲಿದೆ. ಉಳಿದವು ಆಯುಧದ ಒಂದಲ್ಲೊಂದು ಭಾಗಗಳಾಗಿವೆ.

ಇದೇ ಸ್ಥಳದಲ್ಲಿ ಬೃಹತ್ ಶಿಲಾಯುಗದ ಹೊಳಪುಳ್ಳ ಕೆಂಪು, ಕಪ್ಪು, ಕೆಂಪು ಮತ್ತು ಕಪ್ಪು ಬಣ್ಣದ ಮಡಕೆಯ ಚೂರುಗಳು ದೊರೆತಿವೆ. ಇದರಿಂದಾಗಿ ಈ ಸ್ಥಳವು ಬೃಹತ್ ಶಿಲಾಯುಗದ ಮಾನವನ ನಿವಾಸ ಸ್ಥಾನವಾಗಿರಬೇಕೆಂದು ತಿಳಿಯ ಬಹುದಾಗಿದೆ.

ಇದೇ ಪ್ರದೇಶದಲ್ಲಿ ಚಾರಿತ್ರಿಕಯುಗದ ಆರಂಭದ ಕಾಲದ ಮಡಕೆ ಚೂರುಗಳು ದೊರೆತಿವೆ. ಈ ಮಡಕೆ ಚೂರುಗಳು ವಿಶಿಷ್ಟವಾದವುಗಳು. ಇಂತಹದೇ ಮಡಕೆ ಚೂರುಗಳು ಬ್ರಹ್ಮಗಿರಿ ಮತ್ತು ಚಂದ್ರವಳ್ಳಿಗಳಲ್ಲಿ ದೊರೆತಿದ್ದು ಇಂತಹ ಮಡಕೆಗಳುಳ್ಳ ಸಂಸ್ಕೃತಿಯನ್ನು ಮಾರ್ಟಿಮರ್ ವೀಲ್ಹರ್‌ರವರು "ಆಂದ್ರ ಸಂಸ್ಕೃತಿ"[1] ಎಂದು ಕರೆಯುವರು. ಇತ್ತೀಚೆಗೆ ಈ ಸಂಸ್ಕೃತಿಯನ್ನು ಆದಿಚಾರಿತ್ರಿಕ ಕಾಲದ ಸಂಸ್ಕೃತಿ ಎಂದು ಕರೆಯಲಾಗುತ್ತದೆ.

ಒಟ್ಟಿನಲ್ಲಿ ಈ ಸ್ಥಳವು ಪ್ರಾಗೈತಿಹಾಸದ ಮಾನವನಿಗೆ ಮತ್ತು ಆದಿಚರಿತ್ರೆಯ ಜನರಿಗೆ ಪ್ರಾಶಸ್ತ್ಯವಾದ ಸ್ಥಳವಾಗಿತ್ತೆಂಬುದು ತಿಳಿಯುತ್ತದೆ.

ಮರಿದಾಸನಹಳ್ಳಿ: ಇದು ಪಾವಗಡ ತಾಲ್ಲೂಕಿನ ವೈ.ಎನ್. ಹೊಸಕೋಟೆ ಹೋಬಳಿಯಲ್ಲಿರುವ ಒಂದು ಗ್ರಾಮ. ಇದು ಪಾವಗಡದಿಂದ ಸುಮಾರು 18 ಕಿ.ಮೀ. ದೂರದಲ್ಲಿದೆ. ಇಲ್ಲಿ ಚಾರಿತ್ರಿಕಯುಗದ, ಬೃಹತ್ ಶಿಲಾಯುಗದ ಮತ್ತು ಕೈನಲ್ಲಿ ಮಾಡಿದ ನೂತನ ಶಿಲಾಯುಗದ ಮಡಕೆ ಚೂರುಗಳು ದೊರತಿವೆ.

ನೂತನಶಿಲಾಯುಗದ ಕೊಡಲಿಗಳು ಮತ್ತು ಕೈನಲ್ಲಿ ಮಾಡಿದ ಮಡಕೆ ಚೂರುಗಳು ದೊರೆತಿವೆ. ಬೃಹತ್ ಶಿಲಾಯುಗದ ಕಪ್ಪು, ಕೆಂಪು ಮತ್ತು ಕಪ್ಪು -ಕೆಂಪು ಬಣ್ಣದ ಹೊಳಪುಳ್ಳ ಮಡಕೆ ಚೂರುಗಳು ದೊರೆತಿವೆ. ಚಾರಿತ್ರಿಕ ಯುಗದ ಹೊಳಪುಳ್ಳ ಕೆಂಪು ಬಣ್ಣದ ಮಡಕೆ ಚೂರುಗಳು ದೊರೆತಿವೆ.

ಹೀಗೆ ತುಮಕೂರು ಜಿಲ್ಲೆಯು ಪ್ರಾಗೈತಿಹಾಸಿಕವಾಗಿ ಸಂಪದ್ಭರಿತವಾಗಿದ್ದು ಹುಡುಕಿದಕಷ್ಟೂ ಅವಶೇಷಗಳು ಸಿಗುತ್ತಿದ್ದು, ಒಟ್ಟಿನಲ್ಲಿ ಇದು ಒಂದು ಪ್ರಾಗೈತಿಹಾಸದ ಆಗರವೆಂದರೆ ತಪ್ಪಾಗಲಾರದು.

---

## ಅಡಿ ಟಿಪ್ಪಣಿಗಳು

1) ಶೇಷಾದ್ರಿ.ಎಂ., 'ದಿ ಸ್ಟೋನ್‌ಯೂಸಿಂಗ್ ಕಲ್ಚರ್ ಆಫ್ ಪ್ರಿ ಹಿಸ್ಟಾರಿಕ್ ಅಂಡ್ ಪ್ರೋಟೋ ಹಿಸ್ಟಾರಿಕ್ ಮೈಸೂರ್' (1956-ಲಂಡನ್)

2) ಶೇಷಾದ್ರಿ, ಎಂ. "ಮೈಕ್ರೋಲಿಥಿಕ್ ಇಂಡಸ್ಟ್ರಿ ಆಫ್ ಕಿಬ್ಬನಹಳ್ಳಿ, ಮೈಸೂರ್ ಸ್ಟೇಟ್", 'ಕರೆಂಟ್ ಸೈನ್ಸ್' ಅಕ್ಟೋಬರ್; 1954, ಸಂಪುಟ-23 ಪುಟ 326-7.

3) ಫೂಟ್.ಆರ್.ಬಿ. - 'ದಿ ಫೂಟ್ ಕಲೆಕ್ಷನ್ಸ್ ಅಪ್ ಇಂಡಿಯನ್ ಪ್ರಿ ಹಿಸ್ಟಾರಿಕ್ ಆಂಡ್ ಪ್ರೋಟೋ ಹಿಸ್ಟಾರಿಕ್ ಅಂಟಿಕ್ವಿಟಿಸ್, ನೋಟ್ಸ್ ಆನ್ ದೇರ್ ಏಜಸ್ ಅಂಡ್ ಡಿಸ್ಟ್ರಿಬ್ಯೂಶನ್' (1916-ಮದ್ರಾಸ್)

4) 'ಪ್ರಜಾವಾಣಿ' ಕನ್ನಡ ದಿನಪತ್ರಿಕೆ ದಿನಾಂಕ ಜೂನ್ 1, 1988 ಮತ್ತು ಕನ್ನಡ ಪ್ರಭ ದಿನಪತ್ರಿಕೆ ದಿನಾಂಕ 30ನೇ ಮೇ ಮತ್ತು 16ನೇ ಜುಲೈ 1988ರಲ್ಲಿ ವರದಿ ಪ್ರಕಟಗೊಂಡಿತ್ತು.

5) ಶ್ರೀವತ್ಸ ಎಸ್.ವಟಿ. - 'ಕನ್ನಡಪ್ರಭ' ದಿನಪತ್ರಿಕೆಯ ವಾರದ ವಿಭಾಗ ದಿನಾಂಕ 27ನೇ ಮೇ 1979ರಲ್ಲಿ ಪ್ರಕಟಗೊಂಡ ಲೇಖನ.

6) ಮೈಸೂರು ಜಿಯಲಾಜಿಕಲ್ ಡಿಪಾರ್ಟ್‌ಮೆಂಟ್ ರೆಕಾರ್ಡ್ಸ್ VIII ಪುಟ 72

7) 'ಪ್ರಜಾವಾಣಿ' ಕನ್ನಡ ದಿನಪತ್ರಿಕೆ ದಿನಾಂಕ 23ನೇ ಜೂನ್ 1982 ಮತ್ತು 'ಕನ್ನಡಪ್ರಭ' ದಿನ ಪತ್ರಿಕೆ 5ನೇ ಜೂನ್ 1982ರಲ್ಲಿ ವರದಿ ಪ್ರಕಟಗೊಂಡಿತ್ತು.

8) ಗುರುಮೂರ್ತಿ ಎಸ್. 'ಸಿರಾಮಿಕ್ ಟ್ರೆಡಿಶನ್ಸ್ ಇನ್ ಸೌತ್ ಇಂಡಿಯಾ, ಪುಟ 193, 196 ಮತ್ತು 242 (1981-ಮದ್ರಾಸ್)

9) ರಾಮಿರೆಡ್ಡಿ ವಿ. 'ಆಶ್ ಮೌಂಡ್ಸ್ ಇನ್ ಸೌತ್ ಇಂಡಿಯ: ಎ ರಿವ್ಯೂ', 'ಆರ್ಕಿಯಾಲಜಿ ಇನ್ ಕರ್ನಾಟಕ' ಸುಂದರ.ಎ. (1990 ಮೈಸೂರು)

10) ಮೇಲಿನಂತೆಯೇ

11) ವ್ಹೀಲರ್, ಆರ್.ಇ.ಎಂ. - 'ಏನ್ಶಿಯಂಟ್ ಇಂಡಿಯಾ ಸಂಪುಟ' - 4 ಪುಟ 187 ಮತ್ತು 271 (1947 ನ್ಯೂಡೆಲ್ಲಿ)

ಗಣಪತಿಗೌಡ

# ಸಿದ್ದಾಪುರ : ಇತ್ತೀಚಿನ ಕೆಲವು ಪುರಾತತ್ವಶೋಧನೆಗಳು

ಸಿದ್ದಾಪುರವು ಉತ್ತರಕನ್ನಡ ಜಿಲ್ಲೆಯ ಒಂದು ತಾಲ್ಲೂಕು. ಸಮೃದ್ಧ ಪುರಾತತ್ವ ಅವಶೇಷಗಳನ್ನು ಹೊಂದಿರುವ ಈ ಜಿಲ್ಲೆ ಇತಿಹಾಸಕಾರರಿಗೆ ಅನೇಕ ವಿಷಯಗಳನ್ನು ಒದಗಿಸಬಲ್ಲದು. ನಾನು ಕೈಗೊಂಡ ಅನ್ವೇಷಣೆಯ ಸಮಯದಲ್ಲಿ ಇಲ್ಲಿಯ ಸುಮಾರು, 15 ಬೇರೆ ಬೇರೆ ಸ್ಥಳಗಳಿಗೆ ಭೆಟ್ಟಿಕೊಟ್ಟು ಅಲ್ಲಿಯ ಅವಶೇಷಗಳನ್ನು ತಕ್ಕಮಟ್ಟಿಗೆ ಕ್ರೋಢೀಕರಿಸಿ ಈ ಪ್ರಬಂಧದಲ್ಲಿ ವಿವರಸಿದ್ದೇನೆ. ಅವುಗಳೆಂದರೆ:

1. ಇತಿಹಾಸ ಪೂರ್ವಕಾಲದ ಅವಶೇಷಗಳು. 2. ಐತಿಹಾಸಿಕ ಅವಶೇಷಗಳು 3. ವಾಸ್ತು ಶಿಲ್ಪಕ್ಕೆ ಸಂಬಂಧಪಟ್ಟಂತಹಅವಶೇಷಗಳು; ಇವುಗಳನ್ನು ಕ್ರಮವಾಗಿ ಈ ಕೆಳಗಿನಂತೆ ವಿಂಗಡಿಸಬಹುದು: ಅ) ಇತಿಹಾಸಪೂರ್ವಕಾಲಕ್ಕೆ ಸೇರಿದ್ದೆನ್ನಬಹುದಾದ ಶಿರಳಗಿಯ ಬೃಹತ್‌ಶಿಲಾ ಸಂಸ್ಕೃತಿಯ ಅವಶೇಷಗಳು ಬ) ಬೆಳ್ಳಟ್ಟಿಯಲ್ಲಿ ದೊರೆತ ಹಾನಗಲ್ ಕದಂಬರ ಹೊಸ ಶಿಲಾಶಾಸನ ಕ) ಸುಮಾರು ಕ್ರಿಶ 6-7, 9-10, 15-17ನೇ ಶತಮಾನಕ್ಕೆ ಸೇರ ಬಹುದಾದ ಮೂರ್ತಿ ಮತ್ತು ವಾಸ್ತುಶಿಲ್ಪಗಳು

**ಶಿರಳಗಿಯ ಅವಶೇಷಗಳು:** ಶಿರಳಗಿಯು ಸಿದ್ದಾಪುರ ತಾಲೂಕಿನಿಂದ ಸುಮಾರು 5 ಕಿ.ಮಿ. ದೂರದಲ್ಲಿರುವ ಒಂದು ಹಳ್ಳಿ. ಸಿದ್ದಾಪುರ ದಿಂದ ಚಂದ್ರಗುತ್ತಿಗೆ ಹೋಗುವ ರಸ್ತೆಯು ಶಿರಳಗಿಯ ಮಧ್ಯೆ ಹಾದು ಹೋಗುತ್ತದೆ. ದಿಬ್ಬದಂತಿರುವ ಈ ಶಿರಳಗಿಯನ್ನು ರಸ್ತೆಯ ಇಬ್ಭಾಗ ಮಾಡಿದ್ದರಿಂದ ರಸ್ತೆಯ ಎರಡು ಪಕ್ಕಗಳ ಸ್ತರದಲ್ಲಿ ಅನೇಕ ಮಡಿಕೆ ಚೂರುಗಳು ಇರುವದು ನನ್ನ ಗಮನಕ್ಕೆ ಬಂದಿತು. ಇಂತಹ ಅನೇಕ ಮಡಿಕೆ ಚೂರುಗಳು ನೆಲದ ಮೇಲಿನಿಂದ ಸುಮಾರು 51/2 ಅಡಿ ಆಳದವರೆಗೆ ದೊರೆತಿವೆ. ಇಲ್ಲಿಯೇ ಹತ್ತಿರ ಸುಮಾರು 100 ಅಡಿ ಅಂತರದಲ್ಲಿ 'ಹೊಗೆ ಕುಣಿ' ಎಂದು ಕರೆಯುವ ಜಂಬಿ ಟ್ಟಿಗೆ ಬೇಣದಲ್ಲಿ ಹಂಡೆಯಾಕಾರದಲ್ಲಿ ಕೊರೆದ ಒಂದು ಕುಣಿ ಇದೆ. ಇಂತಹ ಅನೇಕ ಕುಣಿಗಳು ಬೃಹತ್ ಶಿಲಾ ಸಂಸ್ಕೃತಿಗೆ ಸಂಬಂಧಿಸಿದ್ದೆಂದು ಈಗಾಗಲೇ ಬೇರೆ ಕಡೆಗಳಲ್ಲಿ ಗುರುತಿಸಲಾಗಿದೆ. ಉದಾಃ ದಕ್ಷಿಣ ಕನ್ನ ಡದಲ್ಲಿ ಹಿರಿಯಡಕವೆಂದು, ಉತ್ತರ ಕನ್ನಡದ ಕೆಲವು ಭಾಗದಲ್ಲಿ 'ಕೊಟ್ಟ' ಎಂದು ಕರೆಯಲಾಗುವ ಕುಣಿಗಳೂ ಬೃಹತ್ ಶಿಲಾಯುಗಕ್ಕೆ ಸಂಬಂದಿಸಿರಬಹುದೆಂದು ತಜ್ಞರು ಅಭಿಪ್ರಾಯ ಪಟ್ಟಿದ್ದಾರೆ.

ಇಲ್ಲಿ ದೊರೆತ ಮಡಿಕೆ ಚೂರುಗಳಲ್ಲಿ ಮುಖ್ಯವಾಗಿ ಮಧ್ಯಕಾಲೀನ ಇತಿಹಾಸ ಹಾಗೂ ಬೃಹತ್ ಶಿಲಾ ಸಂಸ್ಕೃತಿಗೆ ಸಂಬಂಧಪಟ್ಟಂತಹ ಅವಶೇಷಗಳೆಂದು ವಿಭಾಗಿಸಬಹುದು. ಇಂತಹ ಮಡಿಕೆ ಚೂರುಗಳು ಈಗ ದೊರೆತಿರವ ಸ್ತರಗಳಿಗಿಂತ ಕೆಳಗಡೆಯೂ ಸಿಗತ್ತವೆಂದು ಸ್ಥಳಿಕರು ತಿಳಿಸುತ್ತಾರೆ. ಇಲ್ಲಿಯೇ ಸ್ವಲ್ಪ ದೂರದಲ್ಲಿ ಅರಣ್ಯದಿಂದಾವೃತ್ತವಾದ ಪ್ರದೇಶವನ್ನು ಅಗೆದಾಗ ಇಲ್ಲಿಯೂ ಕೂಡ ಹೇರಳವಾಗಿ ಮಡಿಕೆ ಚೂರುಗಳು ದೊರೆತಿವೆ.

ಈ ಮೇಲೆ ದೊರೆತ ಪುರಾತತ್ವ ಅವಶೇಷಗಳಿಂದ ಬೃಹತ್ ಶಿಲಾ ಸಂಸ್ಕೃತಿಗೆ ಸಂಬಂಧಪಟ್ಟ ಜನರು ಈ ಪ್ರದೇಶದಲ್ಲಿ ನೆಲೆಸಿದ್ದರೆಂದು ಖಚಿತವಾಗಿ ಹೇಳಬಹುದು ನಂತರ ಬಂದ ಮಧ್ಯಕಾಲೀನ ಜನರು ತಮ್ಮ ವಾಸಸ್ಥಳಕ್ಕೆ ಈ ಪ್ರದೇಶವನ್ನು ಆಯ್ದುಕೊಂಡು ಕ್ರಮೇಣ ಅವಶ್ಯವಿದ್ದಲ್ಲಿ ಅಗೆಯಲು ಪ್ರಾರಂಭಿಸಿದರು. ಇದರಿಂದ ಮಧ್ಯಕಾಲೀನ ಜನರು ಉಪಯೋಗಿಸುತ್ತಿದ್ದ ಮಡಿಕೆ-ಕುಡಿಕೆಗಳು ಬೃಹತ್ ಶಿಲಾ ಸಂಸ್ಕೃತಿಯ ಅವ ಶೇಷದೊಂದಿಗೆ ಬೆರೆತವು.

ಈಗಾಗಲೇ ಡಾ॥ ರಘುನಾಥ ಭಟ್ಟರು ಶಿರಳಗೆ ಸಮಿಪದ ಕಿಲಾರೆಯೆಂಬಲ್ಲಿ ಬೃಹತ್ ಶಿಲಾ ಸಂಸ್ಕೃತಿಗೆ ಸಂಬಂಧಿಸಿದ ಮಡಿಕೆ ಚೂರುಗಳನ್ನು ಅಲ್ಲಿಯ ಕೊಟ್ಟ ದಲ್ಲಿ ಶೋಧಿಸಿದ್ದಾರೆ. ಹಾಗೆಯೇ ಡಾ॥ ಎಸ್.ವ್ಹಿ. ಪಾಡಿಗಾರ ಮತ್ತು ಕಲ್ಲೂರ ಇವರು ಬೃಹತ್ ಶಿಲಾ ಸಂಸ್ಕೃತಿಗೆ ಸೇರಬಹುದಾದ ಅವಶೇಷಗಳನ್ನು ದಾಂಡೇಲಿಯ ಹತ್ತಿರ ಗುರುತಿಸಿದ್ದಾರೆ.

ಈವರೆಗೆ ಉತ್ತರ ಕನ್ನಡಜಿಲ್ಲೆಯಲ್ಲಿ ಒಂದೆರಡು ನೆಲೆಗಳಲ್ಲಿ ಮಾತ್ರ ಬೃಹತ್-ಶಿಲಾ ಸಂಸ್ಕೃತಿಯ ಅವಶೇಷಗಳು ದೊರೆತಿದ್ದು ಶಿರಳಗಿಯ ನೆಲೆ ಇನ್ನೊಂದು ಉದಾಹರಣೆಯಾಗಿದೆ. ಉತ್ತರಕನ್ನಡ ಜಿಲ್ಲೆಯಲ್ಲಿ ಬೃಹತ್ ಶಿಲಾಸಂಸ್ಕೃತಿ ಸಾಕಷ್ಟು ಪ್ರಮಾಣದಲ್ಲಿ ಪ್ರಚಲಿತವಿತ್ತೆಂಬುದಕ್ಕೆ ಈ ಸೂಚಕವಾಗಿದೆ. ಶಿರಳಗಿಯ ವಿಷಯವಾಗಿ ಹೆಚ್ಚಿನ ಸಂಶೋಧನೆ ಕೈಗೊಂಡರೆ ಇನ್ನೂ ಹೆಚ್ಚಿನ ವಿಷಯಗಳನ್ನು ಬೆಳಕಿಗೆ ತರಬಹುದೆಂಬುದು ನನ್ನ ಅನಿಸಿಕೆ.

ಶಾಸನ:

ಬೆಳ್ಳಟ್ಟಿಯಲ್ಲಿ ದೊರೆತ ಶಿಲಾಶಾಸನವು ಹಾನಗಲ್ಲ ಕದಂಬ ಮಾವುಲಿದೇವರಸನ ವಿವರಣೆ ನೀಡುತ್ತದೆ. ಇದರ ಕಾಲ ಶಕ 1020 ಬಹಳ ತ್ರುಟಿತವಾಗಿರುವದರಿಂದ ಹೆಚ್ಚಿನ ವಿಷಯಗಳು ತಿಳಿಯದು.

### ಕಲೆ ಮತ್ತು ವಾಸ್ತು ಶಿಲ್ಪ:

ಮುಗ್ದೂರಿನಲ್ಲಿ ದೊರೆತ ವಿಷ್ಣು ಮತ್ತು ನರಸಿಂಹನ ಮೂರ್ತಿಯು ವಾಸ್ತು ಶಿಲ್ಪ ಶೈಲಿಯಲ್ಲಿ ಬಹಳ ಗಮನಾರ್ಹ, ಮಾಧವ ರೂಪದಲ್ಲಿನ ವಿಷ್ಣುವಿನ ಮೂರ್ತಿಯು ಚತುರ್ಭುಜನಾಗಿ ಸಮಭಂಗದಲ್ಲಿರುವ ದುಂಡು ಶಿಲ್ಪ. ಇಂತಹದೇ ಮೂರ್ತಿಯನ್ನು ಅ ಡಾ॥ ಸುಂದರವರು ಅಂಕೋಲಾ ತಾಲ್ಲೂಕಿನ ಸುಂಕೇರಿಯಲ್ಲಿ ಶೋಧಿಸಿದ್ದು ಇದರ ಕಾಲವನ್ನು ಕ್ರಿಶ 6ನೇಯ ಶತಮಾನವೆಂದು ಹೇಳಬಹುದು.

ಸುಖಾಸನದಲ್ಲಿ ಕುಳಿತಿರುವ ದ್ವಿಬುಜ ನರಸಿಂಹನು ಬಲಗಾಲನ್ನು ಪೀಠದ ಮೇಲೆ ಊರ್ದ್ವವಾಗಿಯೂ ಎಡಗಾಲನ್ನು ಅಡ್ಡಲಾಗಿ ಮಡಚಿದ್ದಾನೆ. ಬಲಗೈಯನ್ನು ಮೊಣಕಾಲ ಮೇಲೆ ಸಡಿಲವಾಗಿ ಬಿಟ್ಟು, ಬಿಚ್ಚಿದ ಎಡಗೈಯನ್ನು ತೊಡೆಯ ಮೇಲೆ ಊರಿದ್ದಾನೆ. ಈ ನರ ಸಿಂಹ ವಿಗ್ರಹವು ಬಿದನೂರು, ಕುಪ್ಪಗದ್ದೆ, ಪಲಸಿ, ಬೆಂಗಣೆ, ಕಾರಗಲ್ ಮೊದಲಾದ ಸ್ಥಳದಲ್ಲಿ ದೊರೆತ ಒಂದೆರಡು ಆಭರಣಗಳಿಂದ ಅಲಂಕೃತವಾದ ಸರಳ ಶೈಲಿಯ ವಿಗ್ರಹಕ್ಕೆ ಹೋಲುತ್ತದೆ. ಇವೆಲ್ಲದರ ಆಧಾರದ ಮೇಲೆ ಈ ಮೂರ್ತಿಯ ಕಾಲಮಾನ ಕ್ರಿಶ 5-6ನೇ ಶತಮಾನವೆಂದು ತರ್ಕಿಸಬಹುದು.

ಸಿದ್ದಾಪುರದ ಜೌರಗುಪ್ಪದಲ್ಲಿ ದೊರೆತಿರುವ ದುರ್ಗಾಮೂರ್ತಿಗಳು ವೈಶಿಷ್ಟ್ಯಪೂರ್ಣವಾಗಿವೆ. ಇಲ್ಲಿ ಒಟ್ಟು 6 ದುರ್ಗಾಮೂರ್ತಿಗಳು ದೊರೆತಿದ್ದು ಒಂದಕ್ಕೊಂದು ಅತೀ ಹತ್ತಿರದ ಸಾಮ್ಯ ವನ್ನು ಹೊಂದಿದೆ. ಕುಳಿತಿರುವ ಈ ದುರ್ಗಾವಿಗ್ರಹಗಳ ಪೀಠದ ಮೇಲೆ ಪ್ರೇತವಿರುವದರಿಂದ ಇದು ಸ್ಮಶಾನದುರ್ಗೆ ಆಗಿರುವ ಸಾಧ್ಯತೆ ಇದೆ. ಈ ವಿಗ್ರಹಗಳಲ್ಲಿ ಒಂದೆರಡು ರೌದ್ರಾಕಾರವಾಗಿ ಕಣ್ಣನ್ನು ತೆರೆದಿವೆ. ಇವೆಲ್ಲವೂ ಸುಮಾರು ಒಂದೇ ಕಾಲಕ್ಕೆ ಅನ್ವಯಿಸುವದರಿಂದ ಮತ್ತು ಒಂದೇ ಕಡೆಯಲ್ಲಿ ಇರುವುದು ವೈಶಿಷ್ಟ್ಯಪೂರ್ಣವಾಗಿದೆ. ಅಲ್ಲದೇ ಇದು ಮೂರ್ತಿಗಳನ್ನು ತಯಾರಿಸುವ ಕೇಂದ್ರ ಸ್ಥಳವಾಗಿತ್ತೇ? ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಅಥವಾ ಸಪ್ತ ಮಾತೃಕೆಯ ಗುಂಪಿಗೆ ಸೇರಿತ್ತೆ? ಒಂದು ವೇಳೆ ಸಪ್ತ ಮಾತೃಕೆಯ ಗುಂಪಿಗೆ ಸೇರಿದ್ದರೆ ಒಂದೇ ವಿಧವಾಗಿ ಎಲ್ಲ ಮೂರ್ತಿಗಳನ್ನು ಯಾಕೆ ಕೆತ್ತುತ್ತಿದ್ದರು? ಅಥವಾ ಸಪ್ತಮಾತೃಕೆಯರನ್ನು ಬೇರೆ ಬೇರೆ ರೂಪದಲ್ಲಿ ಕೆತ್ತು ತ್ತಿದ್ದ ಕಾಲಮಾನದ ನಂತರ ಕೇವಲ ಗುಪ್ಪೆ-ಗುಪ್ಪೆ ಯಾಗಿ ತೋರಿಸುತ್ತಿದ್ದುದರ ನಡುವಿನ ಒಂದು ವಿಧ ವಾಗಿರಬಹುದೇ? ಇವೆಲ್ಲ ಪ್ರಶ್ನೆಗೆ ಉತ್ತರ ಇನ್ನು ಹುಡುಕಬೇಕಾಗಿದೆ.

ಬೆಳ್ಳಟ್ಟಿಯಲ್ಲಿ ದೊರೆತ ಸೂರ್ಯನ ಮೂರ್ತಿಯು ಕಲೆಯಲ್ಲಿ ಅಷ್ಟೇ ಸುಂದರವಾಗಿದ್ದು ರಥಾರೂಢನಾದ ಇವನ ರಥವನ್ನು ಅರುಣನು ಚಲಿಸುತ್ತಿದ್ದಾನೆ. ಸೂರ್ಯನ ಕೊರಳಲ್ಲಿ ತೋರುವ ವನಮಾಲೆ ಈ ಶಿಲ್ಪದ ಮುಖ್ಯ ಲಕ್ಷಣ. ಇಂತಹ ವನಮಾಲೆಯು ಉತ್ತರಭಾರತದ ಶಿಲ್ಪಶೈಲಿ ಯಲ್ಲಿ ಸಾಮಾನ್ಯ. ಈ ಮೂರ್ತಿಯಲ್ಲಿ ಉತ್ತರ ಭಾರತದ ಕಲಾಪ್ರಭಾವವನ್ನು ಕಾಣಬಹುದಾಗಿದೆ.

ಭಾರತೀಯ-ಇಸ್ಲಾಮ್ ಶೈಲಿಯಲ್ಲಿ ರಚಿಸಲ್ಪಟ್ಟ ನಾರಗುಡಿಯ ಶಿವಾಲಯ ಕೆಳದಿ ವಾಸ್ತುಶಿಲ್ಪದ ಒಂದು ವೈಶಿಷ್ಟ್ಯವಾಗಿದೆ. ಇದೇ ಕಾಲಮಾನಕ್ಕೆ ಸೇರಬಹುದಾದ ಶಿರಳಗಿಯ ವೀರಭದ್ರ ಹಾಗೂ ಗರುಡ ಉತ್ತಮ ಕಲಾಕೃತಿಗಳಲ್ಲೊಂದಾಗಿದೆ.

## ಆಧಾರ ಗ್ರಂಥಗಳು

ಗುರುರಾಜ ಭಟ್ಟ ಪಿ. 'ಸ್ಟಡೀಸ್ ಇನ್ ತುಳುವ ಹಿಸ್ಟ್ರಿ ಅಂಡ್ ಕಲ್ಚರ್' ಉಡುಪಿ 1975.
ಸುಂದರ ಅ. 'ಇತ್ತೀಚಿನ ಕೆಲವು ಮುಖ್ಯ ಪುರಾತತ್ವ ಶೋಧನೆಗಳು', 'ಕರ್ನಾಟಕ ಭಾರತಿ', ಸಂ.೮. ಸಂಚಿಕೆ-೭, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ 1976.
ಸುಂದರ ಅ. 'ಸಿದ್ಧರ ಮತ್ತು ಸುಂಕೇರಿ ಗ್ರಾಮಗಳಲ್ಲಿರುವ ಎರಡು ಅಪರೂಪದ ಶಿಲಾಮೂರ್ತಿಗಳು', 'ಕರ್ನಾಟಕ ಭಾರತಿ' ಸಂ.೨೨, ಸಂಚಿಕೆ-೩ ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1990.

ಎಸ್.ಎಂ. ನಾಗಭೂಷಣ

# ರಟ್ಟ ಲಕ್ಷ್ಮೀದೇವರಸನ ಅಂಬೇವಾಡಿ ಶಿಲಾಶಾಸನ

ಕರ್ನಾಟಕ ಮಾಂಡಲಿಕ ಅರಸು ಮನೆತನದಲ್ಲಿ ಸೌಂದತ್ತಿಯ ರಟ್ಟರು ಪ್ರಮುಖರಾಗಿದ್ದಾರೆ. "ಕೂಹೂಂಡಿ ಮೂಸಾಸಿರ" ಅಥವ "ಕೂಹೂಂಡಿ ಮಂಡಲ" ರಾಜ್ಯವನ್ನು ಮೊದಲು ಸುಗಂಧವರ್ತಿ (ಸೌದತ್ತಿ) ನಂತರ ವೇಣುಗ್ರಾಮ (ಬೆಳಗಾವಿ) ವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು,[1] ಕ್ರಿ.ಶ. 930 ರಿಂದ 1230ರ ವರೆಗೆ ಸುಮಾರು ಮೂರು ಶತಮಾನಗಳಕಾಲ[2] ಆಳಿದ್ದು ಈಗಾಗಲೇ ವಿದಿತ, ಇವರು ಕ್ರಮವಾಗಿ ರಾಷ್ಟ್ರಕೂಟ, ಕಲ್ಯಾಣಚಾಲುಕ್ಯ ಕಳಚೂರ್‍ಯರಿಗೆ ಸಾಮಂತರಾಗಿ, ಮಹಾ ಮಾಂಡಳಿಕ ರಾಗಿ ಕೊನೆಕೊನೆಗೆ ಸ್ವತಂತ್ರವಾಗಿ ಆಳಿದರೆಂದು ಶಾಸ ನಗಳಿಂದ ತಿಳಿದು ಬರುತ್ತದೆ[3].

"ಕೂಹೂಂಡಿ ಮಂಡಲ" ಅಥವಾ "ಕೂಹೂಂಡಿ ಮೂಸಾಸಿರ" ಇಂದಿನ ಬೆಳಗಾವಿ ಜಿಲ್ಲೆ, ಮಹಾ ರಾಷ್ಟ್ರದ ಗಡಹಿಂಗ್ಲಜ ಹಾಗೂ ಚಂದಗಡ ತಾಲ್ಲೂಕು ಗಳು ಮತ್ತು ಬಿಜಾಪುರ ಜಿಲ್ಲೆಯ ಮುಧೋಳ ಹಾಗೂ ಜಮಖಂಡಿ ತಾಲೂಕುಗಳನ್ನೊಳಗೊಂಡ ಭಾಗದಲಿತ್ತು[3]. ರಟ್ಟರು ಸಮಕಾಲೀನ ಸಂಸ್ಕೃತಿ ಬೆಳವಣಿಗೆಗೆ ಶ್ರಮಿಸಿದ್ದಾರೆ.

ಕ್ರಿ.ಶ. 980ರ ಕಲ್ಯಾಣ ಚಾಲುಕ್ಯರ 2ನೇ ತೈಲ ಪನ ಸೊಗಲ ಹಾಗೂ ಸೌಂದತ್ತಿಯ ಶಾಸಗಳಿಂದ ರಟ್ಟರ ಇತಿಹಾಸ ಪ್ರಾರಂಭವಾಗುತ್ತದೆ.[4] 3ನೇ ಕಾರ್ತ ವೀರ್ಯನ ಕ್ರಿ.ಶ. 1171ನೇ ಏಕ್ಕಸಂಬಿಗ ಶಾಸನ ನಂತರ ಕ್ರಿ.ಶ. 1197ರ ಬಡ್ಲಿ ಶಾಶನದ ನಂತರ ರಟ್ಟ ಲಕ್ಷ್ಮಿದೇವರಸನಿಗೆ ಸಂಬಂಧಿಸಿದ ಯಾವ ಶಾಸನಗಳು ಲಭ್ಯವಾದಂತೆ ಈವರೆಗೆ ಕಂಡುಬಂದಿಲ್ಲ. ಈಗ ಲಭ್ಯ ವಾಗಿರುವ ಅಂಬೇವಾಡಿ ಸಾಸನ ಶಕವರ್ಷ 1109ನೇ (1107) ವಿಶ್ವಾವಸು ಸಂವತ್ಸರದ (ಕ್ರಿ.ಶ. 1187 ಅಥವಾ 85) 1ನೇ ಲಕ್ಷ್ಮೀದೇವರಸನ ದಾನ ಶಾಶನ ವಾಗಿದೆ. 1ನೇ ಲಕ್ಷ್ಮೀದೇವರಸ 3ನೇ ಕಾರ್ತಿವೀರ್ಯನ ರಾಣಿ ಪದ್ಮಲಾದೇವಿಯವರ ಪುತ್ರ[5]. 1ನೇ ಲಕ್ಷ್ಮೀದೇವರ ಸನ ಆಡಳಿತಕಾಲ ಇದುವರೆಗೂ ಸ್ಪಷ್ಟವಾಗುವುದಿಲ್ಲ[6]. ಪ್ರಸ್ತುತ ಶಾಸನದಿಂದ ಅವನ ಆಡಳಿತ ಕಾಲವನ್ನು ಅಲ್ಲದೇ ಅವನ ಆಡಳಿತಕ್ಕೊಳಪಟ್ಟ ಭೌಗೋಳಿಕ ಗಡಿ ಯನ್ನು ಗುರುತಿಸಬಹುದಾಗಿದೆ.

ಅಂಬೇವಾಡಿ ಬೆಳಗಾವಿಯಿಂದ ಪಶ್ಚಿಮಕ್ಕೆ 15 ಕಿ.ಮಿ. ಅಂತರದಲ್ಲಿರುವ ಒಂದು ಪ್ರಾಚೀನ ಗ್ರಾಮ. ಗ್ರಾಮದ ದಕ್ಷಿಣ ಪಕ್ಕದಲ್ಲಿರುವ ಗದ್ದೆಯಲ್ಲಿ ಪ್ರಸ್ತುತ ಶಿಲಾ ಶಾಸನವಿದೆ. ಕೆಂಪು ಮರಳುಗಲ್ಲಿನ ಹೆಬ್ಬಂಡೆ ಶಾಸನ 5 ಅಡಿ ಉದ್ದ 3 ಅಡಿ ಅಗಲ ಹಾಗೂ 2 ಅಡಿ ದಪ್ಪವಾಗಿರುವ ಎಡಭಾಗದ ಅಂಚು ಸವೆದು ನುಣುಪಾಗಿದೆ. ಶಾಸನದ ಮೇಲಭಾಗದಲ್ಲಿ ಸೂರ್ಯ ಚಂದ್ರ ಮಧ್ಯದಲ್ಲಿ ಈಶ್ವರ ಹಾಗೂ ಎಡಭಾಗದಲ್ಲಿ ಗೋವಿನ ರೇಖಾಚಿತ್ರಗಳಿವೆ. ಶಾಸನ ಭಾಷೆ ಹಾಗೂ ಶಾಸನ ಲಿಪಿ ಕನ್ನಡ.

ಶಾಸನ ಪಾಠ:

1. ಸ್ವಸ್ತಿ ಶ್ರೀಸಕವರ್ಷ 1109ನೆಯ ವಿಶ್ವಾವಸು.
2. ಸಂವಸ್ತರದ ಜೇಷ್ಟ ಬಹುಳದ 5ನೇಯು.... ಸೋ
3. ಮವಾರದಂದು ಶ್ರೀಮನ್ ತ್ರಿಬುವನ... ಭೂಬುಜ....
4. ಮಂಡಳೇಶ್ವರ ಲಕ್ಷ್ಮಿದೇವರಸರ .... ಸಿಮುಗಯತು ...ಗ
5. ಳಗೇಶ್ವರ ದೇವರಿಗೆ 10.... ಮತ್ತು ಭತ್ತದೆ... ಕೈ.
6. ಯ್ಯ..... ಅ ಚಂದ್ರಾ... ಕಸ್ಯೆಯಾಗಿ
7. ಕೊಟ್ಟರು

ಶಾಸನ ತಿಥಿ: ಪ್ರಸ್ತುತ ಶಾಸನ ಶಕವರ್ಷ 1109ನೇ ವಿಶ್ವಾವಸು ಸಂವತ್ಸರದ ಜೇಷ್ಠ ಬಹುಳ 5ನೇ ಸೋಮವಾರ. ಇದು ಶಕವರ್ಷ 1109ಕ್ಕೆ ಸರಿ ಹೊಂದುವುದಿಲ್ಲ. ವಿಶ್ವಾವಸು ಸಂವತ್ಸರ ಶಕವರ್ಷ 1107ಕ್ಕೆ ಸರಿಹೊಂದುತ್ತದೆ. ಆದ್ದರಿಂದ ಶಕವರ್ಷ 1107ನೇ ವಿಶ್ವವಸು ಸಂವತ್ಸರದ ಜೇಷ್ಠ ಬಹುಳ 5ನೇ

1. * ಮಹಾ"
2. ಸೀಮೆಯ

ೋಮವಾರ, ಕ್ರಿ.ಶ. 1185ನೇ ಮೇ 5 ಸೋಮ ಾರಕ್ಕೆ ಸರಿಹೊಂದುತ್ತದೆ[7].

ಸಾರಾಂಶ: ಪ್ರಸ್ತುತ ಶಾಸನ 7 ಸಾಲುಗಳ ಕನ್ನಡ ಪಿ ಹಾಗೂ ಭಾಷೆಯಲ್ಲಿದೆ. 1ನೇ ಮತ್ತು 2ನೇ ಾಲಿನಲ್ಲಿ ಶಾಸನ ತಿಥಿ ಶಕವರ್ಷ 1107ನೇ ವಿಶ್ವಾ ಸು ಸಂವತ್ಸರ ಜೇಷ್ಠ ಬಹುಳ 5ನೇ ಸೋಮವಾರ ಂದು ಉಲ್ಲೇಖಿಸಿದೆ 3ನೇ ಸಾಲಿನಲ್ಲಿ ಶ್ರಿಮನ್ ತ್ರಿಭು ನ ಭೂಬುಜ... ಎಂದು ಕೊನೆಗೆ. ಎರಡು ಅಕ್ಷರ ಳು ಹಾಳಾಗಿದೆ. ಮುಂದಿನ ಪದ · ಮಂಡಳೇಶ್ವರ ರುವುದರಿಂದ ಅಲ್ಲಿ "ಮಹಾ" ಎಂದು ಓದಿಕೊಳ್ಳ ಹುದಾಗಿದೆ. 4ನೇ ಸಾಲಿನಲ್ಲಿ ಮಂಡಳೇಶ್ವರ ಲಕ್ಷ್ಮೀ ೇವರಸರ ಎಂದಿದ್ದು ಮುಂದಿನ ಅಕ್ಷರಗಳು ಸ್ಪಷ್ಟವಾ ರದೆ ಕೊನೆಯ ಅಕ್ಷರ "ಗ" ಎಂಬುದಾಗಿದೆ. 5ನೇ ಾಲಿನಲ್ಲಿ "..ಳಗೇಶ್ವರ ವೇವರಿಗೆ 10... ಎಂದಿದ್ದು ುಂದಿನ 3 ಅಕ್ಷರಗಳು ಹಾಳಾಗಿದೆ ನಂತರ "ಮತ್ತು ತ್ತದ" ಎಂಬುದಾಗಿ ಮುಂದಿನ ಅಕ್ಷರಗಳು ಹಾಳಾ ವೆ. 6ನೇ ಸಾಲಿನಲ್ಲಿ ಮೊದಲ ಅಕ್ಷರ "ಯ್ಯ" ಾತ್ರ ಸ್ಪಷ್ಟವಾಗಿದೆ. ನಂತರ "ಚಂದ್ರಾ" ನಂತರದ ಕ್ಷರಗಳು ಸಹ ಸ್ಪಷ್ಟವಾಗಿಲ್ಲ ಕೊನೆಗೆ "ಯಾಗಿ" ಂಬುದಾಗಿ 7ನೇ ಸಾಲಿನಲ್ಲಿ "ಕೊಟ್ಟರು" ಎಂದು ೊನೆಗೆ ಮಂಗಳ ಚಿಹ್ನೆಗಳಾದ ಎರಡು ಚಕ್ರಗಳನ್ನು ತ್ತಿದ್ದಾರೆ.

ಒಟ್ಟಿನಲ್ಲಿ ಈ ಶಾಸನದ ಸಾರಾಂಶ, ಶಕವರ್ಷ 109 (1107) ವಿಶ್ವಾವಸು ಸಂವತ್ಸರ ಜೇಷ್ಠ ಬಹುಳ ನೇ ದಿನ ಸೋಮವಾರ (1185 ಮೇ 6, ಸೋಮ ಾರ) ದಂದು ಅಂಬೇವಾಡಿಯಲ್ಲಿ ಶಾಸನದಲ್ಲಿ ಉಲ್ಲೇಖಿಸಿರುವ ಗಳಿಗೇಶ್ವರ ದೇವಸ್ಥಾನವಿದೆ. ಗ್ರಾಮದ ಳಿಗೇಶ್ವರ ದೇವರಿಗೆ ದತ್ತಿ ದಾನ ಕೊಟ್ಟ ವಿವರಗಳಿವೆ.

ಪ್ರಸ್ತುತ ಶಾಸನಾಧಾರದಿಂದ 1ನೇ ಲಕ್ಷ್ಮೀದೇವರಸನ ಆಡಳಿತದ ಆರಂಭಕಾಲವನ್ನು ನಿರೂಪಿಸುವುದು ುಖ್ಯ ಉದ್ದೇಶ. ಈ ನಿಟ್ಟಿನಲ್ಲಿ ಇದುವರೆಗೆ ಪ್ರಕಟ ಾದ ಶಾಸನಗಳಲ್ಲಿ ಲಕ್ಷ್ಮೀದೇವರಸನಿಗೆ ಸಂಬಂಧಿಸಿದ ಲವು ಶಾಸನಗಳ ಉಲ್ಲೇಖಗಳು ಇಂತಿವೆ; 1) ನಾದ ಕ್ರಿ.ಶ. 1197) (2) ಬೆಳಗಾವಿ ಶಾಸನ (ಕ್ರಿ.ಶ. 1199) 3) ಬೆಳಗಾವಿ ಶಾಸನ ಎ (ಕ್ರಿ.ಶ. 1204) (4) ಬೆಳ ಾವಿ ಶಾಸನ ಬಿ (ಕ್ರಿ.ಶ. 1204) (5) ಹಣ್ಣುಕೇರಿ ಾಶನ ಕ್ರಿ.ಶ. 1208) (6) ಬಡ್ಲಿ ಶಾಸನ ಕ್ರಿ.ಶ. 219

### 1. ನಾದ ಶಾಸನ ಕ್ರಿ.ಶ. 1197: [8]

ಬಿಜಾಪುರ ಜಿಲ್ಲೆಯ ಇಂಡಿ ತಾಲೂಕಿನಲ್ಲಿರುವ ನಾದ ಗ್ರಾಮದಲ್ಲಿಯ ಸೇವುಣ 1ನೇ ಜೈತುಗಿಯ ಕಾಲ (ಕ್ರಿ.ಶ. 1192-1200)ದ ಈ ಶಾಸನದಲ್ಲಿ 4ನೇ ಸಾಲಿನಲ್ಲಿ "ಮಹಾ ಮಂಡಳೇಶ್ವರ ಮಾಂಡಳಕ ದಾಮೋದರ ಲಕ್ಷ್ಮೀದೇವರಸರ ಅಧಿಕಾರ" ಎಂಬ ಉಲ್ಲೇಖವಿದೆ. ಇದರಿಂದ ಲಕ್ಷ್ಮೀದೇವರಸ ಸೇವುಣ ಜೈತುಗಿಯ ಮಾಂಡಳಿ ಕನೆಂದು ಕ್ರಿ.ಶ. 1197ರಲ್ಲಿ ಆಡಳಿತದಲ್ಲಿದ್ದನೆಂದು ಸ್ಪಷ್ಟವಾಗುತ್ತದೆ.

### 2. ಬೆಳಗಾವಿ ಶಾಸನ ಕ್ರಿ.ಶ. 1199: [9]

ಬೆಳಗಾವಿ ಕೋಟೆಯೊಳಗಿನ ಸಾಫಾ ಮಸೀದಿಯ 1ನೇ ಕಂಬದಲ್ಲಿರುವ ದೇವನಾಗರಿ ಲಿಪಿಯ ಶಾಸನ. ಇದರ ಕಾಲ ಕ್ರಿ.ಶ. 1199 ಇದರಲ್ಲಿ ಲಕ್ಷ್ಮೀದೇವರಸ ರಿಗೆ ಸಂಬಂಧಿಸಿದ ಉಲ್ಲೇಖವಿಲ್ಲವಾದರೂ ಅವರ ಮಗ "ಶ್ರೀಮನ್ ಮಹಾಮಂಡಳೇಶ್ವರ ಕಾರ್ತೀ ವಿರ್ಯದೇವ ಅರಸರು ವೇಣುಗ್ರಾಮ ನೆಲೆವೀಡಿನಲ್ಲಿ ಸುಖಸಂಕಥಾವಿನೋದದಿಂದ ರಾಜ್ಯಂ ಗೈಯುತ್ತ" ಎಂಬ ಉಲ್ಲೇಖವಿದೆ. ಇದರಿಂದ ಲಕ್ಷ್ಮೀದೇವರಸನ ರಾಜಧಾನಿ ಸುಗಂಧವರ್ತಿಯಲ್ಲದ್ದುಕೊಂಡು ಗೋವೆ ಕದಂಬರಿಂದ ವಶಪಡಿಸಿಕೊಂಡ ವೇಣುಗ್ರಾಮಕ್ಕೆ[10] ತನ್ನ ಮಗ ಕಾರ್ತೀವೀರ್ಯನನ್ನು ಮಹಾ ಮಂಡಳಿಕ ನೆಂದು ನೇಮಿಸಿದ್ದನೆಂದು ತಿಳಿಯುತ್ತದೆ.

### 3. ಬೆಳಗಾವಿ ಶಾಸನ 'ಎ' ಕ್ರಿ.ಶ. 1204 [11]

ಮಹಾಮಂಡಳೇಶ್ವರ 4ನೇ ಕಾರ್ತೀವೀರ್ಯನ ಈ ಶಾಸನದಲ್ಲಿ ತನ್ನ ತಂದೆ ಲಕ್ಷ್ಮೀದೇವರಸನ ಹಾಗೂ ತಾಯಿ ಚಂದಲದೇವಿಯವರನ್ನು ಕುರಿತು 12ನೇ ಸಾಲಿನಿಂದ ಈ ರೀತಿ ವರ್ಣಿಸಿದ್ದಾನೆ. "ನರಪತಿ ಲಕ್ಷ್ಮೀದೇವ ಸತಿ ಚಂದಲದೇವಿ ನಿಜೋದ್ಭವಹಸ್ತದಿಂದರೆ ಗೆಳೆಯಲ್ಕೆ" ಎಂದು ಮುಂತಾಗಿ ವರ್ಣಿಸಿದೆ. ಇವರ ಪುತ್ರರಾದ 4ನೇ ಕಾರ್ತಿವೀರ್ಯ ಹಾಗೂ ವೀರಮಲ್ಲಿ ಕಾರ್ಜುನನ ಶೌರ್ಯ ಸಾಹಸಗಳನ್ನು ಹೇಳುತ್ತಾ ಮುಂದೆ 37-39ನೇ ಸಾಲುಗಳಲ್ಲಿ "ಕಾರ್ತಿವೀರ್ಯ ಹಾಗೂ ಮಲ್ಲಿಕಾರ್ಜುನ ವೇಣುಗ್ರಾಮದಲ್ಲಿ; ರಾಜ್ಯಂಗೈ ಯುತ್ತಾ" ಎಂಬ ಉಲ್ಲೇಖವಿದೆ. ಇದರಿಂದ ತಾನು ರಾಜಧಾನಿ ಯಲ್ಲಿದ್ದು ತನ್ನ ಮಕ್ಕಳನ್ನು ವೇಣುಗ್ರಾಮಕ್ಕೆ ನೇಮಿಸಿರಬೇಕು.

### 4. ಬೆಳಗಾವಿ ಶಾಸನ 'ಬಿ' ಕ್ರಿ.ಶ. 1204 [12]

ಈ ಶಾಸನದಲ್ಲಿ ಲಕ್ಷ್ಮಿದೇವರಸನಿಗೆ ಸಂಬಂಧಿಸಿದ ವಿಷಯವೆಂದರೆ "ಕಾರ್ತವೀರ್ಯ್ಯ ವಿಭುಗಂ ಸುತಂ ಸಮಸ್ತ ಗುಣ ಸಂಕುಳ ಲಕ್ಷ್ಮೀಭೂಮಿಪ ಜನಸುತ" ಎಂದು ಅಲ್ಲದೆ ಲಕ್ಷ್ಮೀದೇವರಸನ ಆಡಳಿತ, ಸಾಂಸ್ಕೃತಿಕ ಆಸಕ್ತಿ, ಸತಿ ಚಂದ್ರಿಕಾದೇವಿಯ ಸೌಂದರ್ಯ, ಶೀಲ, ಔದಾರ್ಯಗಳನ್ನು ವರ್ಣಿಸಲಾಗಿದೆ. ನಂತರ 31ನೇ ಸಾಲಿನಲ್ಲಿ "ಸ್ವಸ್ತಿ ಸಮಾದಿಗತ ಪಂಚಮಹಾಶಬ್ದ ಮಹಾ ಮಂಡಳೇಶ್ವರಂ ಕಾರ್ತಿವೀರ್ಯ್ಯ ದೇವಂ ನಿಜಾನುಜಯ ಯುವರಾಜ ವೀರಮಲ್ಲಿಕಾರ್ಜುನ ದೇವಂ ಬೆರಸು ವೇಣುಗ್ರಾಮ ಸ್ಕಂದವಾರದೋ ಸಾಮ್ರಾಜ್ಯ ಸುಖ ಮನನುಭವಿಸುತ್ತ" ಎಂದುದರಿಂದ ವೇಣುಗ್ರಾಮದಲ್ಲಿ ತನ್ನ ಪುತ್ರರನ್ನು ನೇಮಿಸಿ ತಾನು ಸುಗಂಧವರ್ತಿ ಯಲ್ಲಿದ್ದನೆಂದು ಹೇಳ ಬಹುದಾಗಿದೆ.

### 5. ಹಣ್ಣಿಕೇರಿ ಶಾಸನ ಕ್ರಿ.ಶ. 1208 [13]

ಬೆಳಗಾವಿ ಜಿಲ್ಲೆ ಬೈಲಹೊಂಗಲ ತಾಲೂಕಿನಲ್ಲಿರುವ ಪಣ್ಣೆಕೇರಿ ಗ್ರಾಮದ ಈ ಶಾಸನದಲ್ಲಿ ಲಕ್ಷ್ಮೀದೇವರಸರು ವೇಣು ಗ್ರಾಮದಿಂದ ಆಡಳಿತ ಮಾಡುತ್ತಿದ್ದಾನೆಂದು ಉಲ್ಲೇಖಿಸುತ್ತಾ ಹಣ್ಣಿಕೇರಿ ಗ್ರಾಮದಲ್ಲಿ "ಶ್ರೀ ಪಾರ್ಶ್ವ ಜಿನೇಂದ್ರ ಭವನಮಂ 1130ನೆಯ ವಿಭವ ಸಂವತ್ಸರದ ಪಾಲ್ಗುಣ ಶುದ್ಧದ 2ನೇ ಸೋಮವಾರದಂದು ಶ್ರೀಮನ್ ಮಹಾ ಮಂಡಳೇಶ್ವರಂ ವೀರ ಲಕ್ಷ್ಮೀದೇವ ರಸರ ನಿಯ (ಯಾ) ಮ ದಿಂದ ಆಹಾರ... ಬೈಷಜ್ಯ ಶಾಸ್ತ್ರ ದಾನಾರ್ಥಂ ಖಿಂಡಸ್ಫುಟಿತ ಜೀರ್ನ್ನಜೇನಾ ಲಯೇಥರ ಣಾರ್ಥ" ಎಂದು ಮುಂತಾಗಿ ಲಕ್ಷ್ಮೀ ದೇವರಸನ ದತ್ತಿ ದಾನವನ್ನು ವಿವರಿಸಿದೆ

### 6. ಬಡ್ಲಿ ಶಾಸನ ಕ್ರಿ.ಶ. 1219 [14]

ಬೆಳಗಾವಿ ಜಿಲ್ಲೆ ಸೌಂದತ್ರಿ ತಾಲೂಕಿನಲ್ಲಿರುವ ಬಡ್ಲಿ ಗ್ರಾಮದಲ್ಲಿನ ಶಾಸನದದಲ್ಲಿ 15ನೇ ಸಾಲಿನಲ್ಲಿ ರಟ್ಟ ಕುಲೋದ್ಭವ ಲಕ್ಷ್ಮೀಭೂಭುಜನನ್ನ ಉಲ್ಲೇಖಿಸಿದೆ. 19ನೇ ಸಾಲಿನಲ್ಲಿ ಶಾಸನ ಕಾಲವನ್ನು "1141ನೇ ಪ್ರಮಾದಿ ಸಂವತ್ಸರ" ಎಂದು ಉಲ್ಲೇಖಿಸಿದೆ ಇದರಿಂದ ಲಕ್ಷ್ಮೀದೇವರಸ ಶಕ ವರ್ಷ 1141 ಅಂದರೆ 1219ರಲ್ಲಿ ವೇಣುಗ್ರಾಮದಲ್ಲಿ ಅಧಿಕಾರದಲ್ಲಿದ್ದನೆಂದು ಸ್ಪಷ್ಟವಾಗುತ್ತದೆ.

ದಿನಕರ ದೇಸಾಯಿಯವರು ಕ್ರಿ.ಶ. 1951ರಲ್ಲಿ ಲಕ್ಷೀ ದೇವರಸನ ಸಂಗತಿಯನ್ನು ತಿಳಿಸುವ ಹಣ್ಣೀಕೇರಿ ಏಕೈಕ ಶಾಸನವೆಂದು ಹೇಳುತ್ತಾ ಅವನ ಆಡಳಿತ ಕಾಲ ಕ್ರಿ.ಶ. 1190 ರಿಂದ 1209 ಎಂದು[15] ಊಹಿಸಿದ್ದಾರೆ. ಸೂರ್ಯನಾಥ ಯು. ಕಾಮತ್ ಇವರು ಸಹ ಲಕ್ಷ್ಮೀದೇವರಸನ ಆಡಳಿತ ಕಾಲವನ್ನು ಕ್ರಿ.ಶ. 1209 ಎಂದು ಉಲ್ಲೇಖಿಸಿದ್ದಾರೆ[16]. ಫ್ಲೀಟ್‌ರವರು ಲಕ್ಷೀದೇವರಸನ ಆಡಳಿತ ಕಾಲ ಕ್ರಿ.ಶ. 1199 ರಿಂದ 1208 ಅಥವ 1218ಎಂದು ಅಭಿಪ್ರಾಯ ಪಟ್ಟಿದ್ದಾರೆ[17].

3ನೇ ಕಾರ್ತಿವೀರ್ಯನು ಕ್ರಿ.ಶ. 1171ರವರೆಗೆ ಆಡಳಿತದಲ್ಲಿದ್ದನೆಂದು ಏಕ್ಸಾಂಬಾ ಶಾಸನದಿಂದ ತಿಳಿದು ಬರುತ್ತದೆ.[18]. ಕ್ರಿ.ಶ.1171ರ ಏಕ್ಸಾಂಬಾ ಶಾನಸದ ನಂತರ ಕ್ರಿ.ಶ. 1197ರ ಬಡ್ಲಿ ಶಾಸನದ ವರಿಗಿನ ಕಾಲದಲ್ಲಿ ಈ ಅರಸನ ಯಾವ ಶಾಸನಗಳು ಈ ವರೆಗೆ ನನಗೆ ತಿಳಿದಂತೆ ಲಭ್ಯವಾದಂತೆ ಕಾಣುವುದಿಲ್ಲ. ಪ್ರಸ್ತುತ ಶಾಸನ ನನ್ನ ಕಾರ್ಯ ಕ್ಷೇತ್ರದಲ್ಲಿ ಹೊಸದಾಗಿ ಲಭ್ಯವಾಗಿದ್ದು ಕ್ರಿ.ಶ, 1185ರ ಶ್ರೀಮನ್ ಮಹಾಮಂಡಳೇಶ್ವರ ತ್ರಿಭುವನ ಭೂಭುಜ) ಲಕ್ಷ್ಮೀದೇವರಸನ ಉಲ್ಲೇಖ ಸಿಕ್ಕಿರವುದುರಿಂದ ಕ್ರಿ.ಶ. 1185ರಲ್ಲಿಯೇ ಇವನ ಆಡಳಿತ ಪ್ರಾರಂಭ ವಾಯಿತೆಂದು ಸ್ಪಷ್ಟವಾಗುತ್ತದೆ. ಇದಲ್ಲದೆ ಬೆಳಗಾವಿಯಿಂದ ಪಶ್ಚಿಮದ ಅಂಬೇವಾಡಿ ಗ್ರಾಮದಲ್ಲಿ ಸಿಕ್ಕಿರುವುದರಿಂದ ಈ ಕಾಲಕ್ಕೆ ರಟ್ಟರ ರಾಜ್ಯ ಬೆಳಗಾವಿಯನ್ನು ದಾಟಿ ಅಂಬೇವಾಡಿ ದಾಟಿ ಗಡಿ ವಿಸ್ತಾರವಾಗಿತ್ತು ಎಂದು ಹೇಳ ಬಹುದಾಗಿದೆ.

ಒಟ್ಟಿನಲ್ಲಿ ಈ ಶಾಸನಾಧಾರದಿಂದ ನಮಗೆ ಎರಡು ಮುಖ್ಯಾಂಶಗಳು ತಿಳಿದು ಬರುತ್ತದೆ.

1. ಲಕ್ಷ್ಮೀದೇವರಸನ ಆಡಳಿತ ಕಾಲ ಕ್ರಿ.ಶ. 1185 ರಿಂದಲೇ ಪ್ರಾರಂಭವಾಯಿತು.

2. ರಟ್ಟರ ರಾಜ್ಯ ಕ್ರಿ.ಶ. 1185ರ ವೇಳೆಗೆ ವೇಣುಗ್ರಾಮ ಮತ್ತು ಅದನ್ನು ದಾಟಿ ಅಂಬೇವಾಡಿವರೆಗೆ ರಾಜ್ಯ ವಿಸ್ತಾರವಾಗಿತ್ತು ಎಂದು ತಿಳಿದು ಬರುತ್ತದೆ.*

---

*ಈ ಲೇಖನ ಬರೆಯಲು ಸಹಕರಿಸಿ ಪ್ರೋತ್ಸಾಹಿಸಿದ ಗುರುಗಳಾದ ಡಾ॥ ಹೆಚ್.ಆರ್. ರಘುನಾಥ್ ಭಟ್ ರೀಡರ್, ಪ್ರಾಚೀನ ಭಾರತದ ಚರಿತ್ರೆ ಮತ್ತು ಶಾಸನ ವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರಿಗೆ ನನ್ನ ಅನಂತ ಧನ್ಯವಾದಗಳು

## ಟಿಪ್ಪಣಿಗಳು


1. ಪಾಟೀಲ್ .ಎಸ್.ಬಿ. 'ಕೂಹೂಂಡಿ ನಾಡು' ಬೆಳಗಾವಿ – 1989 ಪು: 64
2. ಅದೇ ಪು: 7
3. ಅದೇ ಪು: 17
4. ಕೃಷ್ಣಮುರಾರಿ, 'ಚಾಲುಕ್ಯಸ್ ಆಪ್ ಕಲ್ಯಾಣಿ' – ದೆಹಲಿ – 1977 ಪು: 42
5. ಕುಂದಣಗಾರ.ಕೆ.ಜಿ. 'ಇನ್ಸ್‌ಕ್ರಿಪ್ಶನ್ಸ್ ಇನ್ ನಾರ್ತ್ ಕರ್ನಾಟಕ ಅಂಡ್ ಕೊಲ್ಲಾಪುರ ಸ್ಟೇಟ್', ಧಾರವಾಡ – 1939, ನಂ. 23, ಪುಟ: 103
6. ದಿನಕರ ದೇಸಾಯಿ, 'ಮಹಾ ಮಂಡಳೇಶ್ವರಾಸ್ ಅಂಡರ್ ಚಾಲುಕ್ಯಾಸ್' – ಮುಂಬೈ, 1951, ಪು: 179
7. ಇಂಡಿಯನ್ ಎಫಿಮೆರಿಸ್ III ಪು. 372
8. ಸೌ.ಇ.ಇ. XX, ನಂ. 183, ಪು. 232
9. ಕ.ಇ. II, ನಂ. 30, ಪು. 115
10. ಜೆ.ಬಿ.ಬಿ.ಆರ್.ಎ.ಎಸ್. X ಪು. 189
11. ಎ.ಇ. XIII - ಬೆಳಗಾವಿ ಶಾಸನ ಎ ಕ್ರಿ.ಶ. 1204 ಪು. 18
12. ಅದೇ ಕ್ರಿ.ಶ. 1204 ಪು. 28
13. ಕುಂದಣಗಾರ, ಹಣ್ಣಿಕೇರಿ ಶಾಸನ ನಂ. 22, ಪು. 99
14. ಕ.ಇ. I, ಧಾರವಾಡ, ನಂ. 32, ಪು. 75
15. ದಿನಕರ ದೇಸಾಯಿ, 'ಮಹಾ ಮಂಡಳೇಶ್ವರಾಸ್ ಅಂಡರ್ ಚಾಲುಕ್ಯಾಸ್', ಮುಂಬೈ ಪು. 179
16. ಸೂರ್ಯನಾಥ. ಯು. ಕಾಮತ್(ಸಂ.), ಕರ್ನಾಟಕ ಗ್ಯಾಜೆಟಿಯರ್ ಬೆಳಗಾವಿ ಜಿಲ್ಲೆ 1987, ಪು.91
17. ಇಂ. ಎಂಟಿಕ್ವೆರಿ, ನಂ. 32, ಪು. 219
18. ಕ.ಗ್ಯಾ. ಬೆಳಗಾವಿ ಜಿಲ್ಲೆ – 1987, ಪು. 91

ಎಂ.ಎಂ. ಮೀನಾಕ್ಷಿ

# ಇಮ್ಮಡಿ ಹರಿಹರನ ಬೇಲೂರಿನ ಅಪೂರ್ವ ಶಾಸನ

ವಿಜಯನಗರ ದೊರೆ ಇಮ್ಮಡಿ ಹರಿಹರನ ಕಾಲಕ್ಕೆ ಸೇರಿದ ಈ ತಾಮ್ರ ಶಾಸನ ಬೇಲೂರಿನ ಚೆನ್ನಕೇಶವ ದೇವಾಲಯದಲ್ಲಿದೆ.[1] ಇದರ ಕಾಲ ಶಕ 1304, ದುಂದುಭಿ ಕಾರ್ತಿಕ ಬಹುಳ ದಶಮಿ. ಇದು ಕ್ರಿ.ಶ. 1382, ನವೆಂಬರ್ ಒಂದಕ್ಕೆ ಸರಿಹೊಂದುತ್ತದೆ. ಈ ಶಾಸನದಲ್ಲಿ ರಾಜಕೀಯವಾದ ಮಹತ್ವವಾದ ವಿಷಯವೇನೂ ಕಾಣಬರುವುದಿಲ್ಲ. ಆದರೆ ಇದು ಸಾಂಸ್ಕೃತಿಕ ಇತಿಹಾಸ ಹಾಗೂ ಆರ್ಥಿಕ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ. ಆದುದರಿಂದ ಅದನ್ನು ಇಲ್ಲಿ ಗಮನಿಸಿ ಇದರ ಪ್ರಾಮುಖ್ಯವನ್ನು ವಿವರಿಸಲಾಗಿದೆ[2]. ಇಮ್ಮಡಿ ಹರಿಹರನ ಮಹಾಪ್ರಧಾನ ಮುದಯ ದಂಡ ನಾಯಕನನ್ನು ಇದು ಹೆಸರಿಸುತ್ತದೆ. ಹಾಗೂ ಆತನಿಗೆ ಸ್ಥಳೀಯ ಸಂಸ್ಥೆಗಳಾದ ನಕರ, ಮುಮ್ಮುರಿದಂಡ, ಹಲರು ಮುಂತಾದವು ಹಂಪೆಯ ವಿರೂಪಾಕ್ಷನ ಸಾನ್ನಿಧ್ಯದಲ್ಲಿ ಸಭೆ ಸೇರಿ, ಪೃಥ್ವೀಶೆಟ್ಟಿ ಎಂಬ ಬಿರುದನ್ನು ಕೊಟ್ಟು ಅವನಿಗೆ ಊರಿನ ಅನೇಕ ತೆರಿಗೆಗಳನ್ನು ಸ್ವಾಮ್ಯವಾಗಿ ಕೊಟ್ಟ ವಿಷಯವನ್ನು ತಿಳಿಸುತ್ತದೆ. ಅಂದರೆ ಅದರ ಉಪಯೋಗಕ್ಕಾಗಿ ಈ ಸಂಸ್ಥೆಗಳು ಅವನಿಗ ಕೊಟ್ಟ ತೆರಿಗೆ ವಿವರಗಳೇ ಈ ಶಾಸನದ ಮುಖ್ಯಾಂಶ.

ಇಲ್ಲಿ ಇನ್ನೊಂದು ಸ್ವಾರಸ್ಯಕರ ಹಾಗೂ ಮುಖ್ಯ ವಿಷಯವನ್ನು ಗಮನಿಸಬೇಕು. ಶಾಸನ ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿದೆ. ಶಾಸನದ ಪ್ರಾರಂಭ, ವಂಶಾವಳಿಗಳು ಸಂಸ್ಕೃತದಲ್ಲಿದ್ದು, ದಾನದ ವಿವರಗಳು ಮಾತ್ರ ಕನ್ನಡದಲ್ಲಿವೆ. ಸಮಸ್ತ ಜನಗಳಿಗೂ ಈ ದಾನದ ವಿವರಗಳು ತಿಳಿಯಬೇಕು ಎನ್ನುವ ಉದ್ದೇಶದಿಂದ, ಈ ಭಾಗವನ್ನು ಕರ್ಣಾಟ ಭಾಷೆಯಲ್ಲಿ ಬರೆದಿರುವುದಾಗಿ ಈ ಶಾಸನವೇ ತಿಳಿಸುತ್ತದೆ. (ಸರ್ವಜನ ವಿಜ್ಞಾನಾಯ ಕರ್ಣಾಟ ಭಾಷೆಯಾಂ ಲಿಖ್ಯತೇ)[3]. ಇದೊಂದು ಮಹತ್ವದ ವಿಷಯ. ಅಂದರೆ ಸಾಮಾನ್ಯ ಜನಗಳಿಗೆ ಸಂಸ್ಕೃತ ಅರ್ಥವಾಗುತ್ತಿರಲಿಲ್ಲ. ಆದುದರಿಂದ ಅವರಿಗಾಗಿ ಈ ವಿಷಯಗಳನ್ನು ಕರ್ಣಾಟ ಭಾಷೆ ಅಂದರೆ ಕನ್ನಡ ಭಾಷೆಯಲ್ಲಿ ಬರೆಸಬೇಕು ಎನ್ನುವ ಪರಿಜ್ಞಾನ ಈಗ್ಗೆ 700 ವರ್ಷಗಳ ಹಿಂದೆ ಇದ್ದ ವಿಜಯನಗರ ಸರಕಾರದ ಅಧಿಕಾರಿಗಳಿಗೆ ಇದ್ದಿತು ಎಂಬುದು ಶ್ಲಾಘನೀಯವಾದ ಮತ್ತು ಇಂದಿಗೂ ಅನುಕರಣೀಯವಾದ ವಿಷಯ

ಇನ್ನು ಕೊಟ್ಟ ಸ್ವಾಮ್ಯದ ವಿಷಯ ಬಹಳ ವಿವರವಾಗಿ ಹೇಳಿದೆ: ನಗದು ಗುತ್ತಗೆಯ ಗ್ರಾಮಗಳಿಗೆ ಒಂದು ಗದ್ಯಾಣಕ್ಕೆ ಒಂದು ಬೇಳೆ, ವಾರದ ಗ್ರಾಮಗಳಿಗೆ 1 ಗದ್ಯಾಣಕ್ಕೆ 1 ಬೇಳೆ, ಹಣವನ್ನು ತೆರಿಗೆಯಾಗಿ ಕೊಡುವ ಗ್ರಾಮಗಳಿಗೆ 1 ಗದ್ಯಾಣಕ್ಕೆ 1 ಬೇಳೆ, ಭತ್ತ ಮುಂತಾದವುಗಳಿಗೆ ಪ್ರತಿ ಖಂಡುಗಕ್ಕೆ ಒಂದು ಬಳ್ಳ, ವಜ್ರ ವೈಢೂರ್ಯ ಮುಂತಾದವುಗಳಿಗೆ 100 ಗಕ್ಕೆ 2 ಪಣ. ಅನಂತರ ಸುಗಂಧದ್ರವ್ಯಗಳನ್ನು ವಿವರಿಸಲಾಗಿದೆ: ಒಂದು ಕಟ್ಟು ಕರ್ಪೂರದ ಕೂರು ಮತ್ತು ಪನ್ನೆಕೂರುಗಳಿಗೆ ಒಂದು ಹಾಗ, ಒಂದು ತೊಲ ಕಸ್ತೂರಿಗೆ 1 ಬೇಳೆ – ಒಂದು ಪನ್ನು(?) ಕೇಸರಿಗೆ 1 ಹಾಗ, ಒಂದು ತೊಲ ಪುನುಗಿಗೆ ಒಂದು ಬೇಳೆ, ಒಂದು ತೊಲ ಶ್ರೀಗಂಧಕ್ಕೆ 1 ಅಡ್ಡ, ಒಂದು ತೊಲ ಅಗಿಲಿಗೆ ಅರ್ಧ ಅಡ್ಡ, ಮೂರು ಕಣಂಜು ತೂಕದ ಸಾಂದುವಿಗೆ 1 ಹಾಗ.

ಈ ಮೇಲಿನ ಪದಾರ್ಥಳಿಂದೆ ತಿಳಿಯುವ ಅಂಶವೆಂದರೆ ಭತ್ತ ಮುಂತಾದ ದವಸ ಧಾನ್ಯಗಳನ್ನು ಖಂಡುಗದಲ್ಲಿ ಅಳೆಯುತ್ತಿದ್ದರು. ಕಸ್ತೂರಿ, ಕೇಸರಿ, ಪುನುಗು ಮುಂತಾದ ವಸ್ತುಗಳನ್ನು ತೊಲದಿಂದ ತೂಗುತ್ತಿದ್ದರು. ಹಾಗೆಯೇ ಕಣಂಜು ಅಥವಾ ಕಳಿಂಜು ಅನ್ನುವುದು ನಾಣ್ಯವಾಗಿರದೆ, ತೂಕವಾಗಿದ್ದಿತೆಂದೂ ಗೊತ್ತಾಗುತ್ತದೆ. ಇಷ್ಟೊಂದು ಸುಗಂಧದ್ರವ್ಯಗಳ ವ್ಯಾಪಾರ – ವಿನಿಮಯ ಇಲ್ಲಿ ಆಗುತ್ತಿದ್ದಿತೆಂದೂ ತಿಳಿಯುತ್ತದೆ. ಅಂದರೆ ಹೆಚ್ಚು ಹಣವನ್ನು ಕೊಟ್ಟು ಈ ವಸ್ತುಗಳನ್ನು ಕೊಳ್ಳುವ ಶ್ರೀಮಂತರಿದ್ದರೆಂದೂ ಇದರಿಂದ ವ್ಯಕ್ತವಾಗುತ್ತದೆ.

ಇದಾದನಂತರ ಶಾಸನದಲ್ಲಿ ಬಟ್ಟೆಗಳ ವಿಷಯ ಪ್ರಸ್ತಾಪಿತವಾಗಿದೆ. ಒಂದು ಜೊತೆ ದೇವಗಿರಿ ಬಟ್ಟೆಗೆ 1 ಬೇಳೆ – ಇಲ್ಲಿ ದೇವಗಿರಿ ಬಟ್ಟೆಯೆಂದರೆ ಏನು

ಎಂದು ಖಚಿವಾಗಿ ಗೊತ್ತಾಗುವುದಿಲ್ಲ. ಸೇವುಣರ ರಾಜಧಾನಿಯಾಗಿದ್ದ ದೇವಗಿರಿಯು ಬಹಳ ಮೃದುವಾದ ಬಟ್ಟೆಗೆ ಪ್ರಸಿದ್ಧಿಯಾಗಿದ್ದಿತು. ಅದುದರಿಂದ ಅಲ್ಲಿಂದ ಬಂದ ಬಟ್ಟೆಯನ್ನು ದೇವಗಿರಿ ಬಟ್ಟೆಯೆಂದು ಕರೆಯುತ್ತಿದ್ದಿರ ಬಹುದು ಎಂದು ಊಹಿಸಬಹುದು.

ಮದುವೆಯ ಬಟ್ಟೆಯ ಜೊತೆಗೆ 1 ವೀಸ, ಉಬ್ಬೆಗೆ ಹಾಕಿದ ಬಟ್ಟೆ 80 ಮೊಳಕ್ಕೆ 1 ಅಡ್ಡ ಅಂದರೆ ಹೊಲಿಯದ ಬಟ್ಟೆಯನ್ನು ಮೊಳಗಳಲ್ಲಿ ಅಳೆಯುತ್ತಿದ್ದರೆಂದು ತಿಳಿಯುತ್ತದೆ. ಪಟ್ಟೆನೂಲು ಅಂದರೆ ರೇಷ್ಮೆ ನೂಲಿಗೆ ತೊಲಕ್ಕೆ ಒಂದು ಅಡ್ಡ – ಅಂದರೆ ರೇಷ್ಮೆಯ ನೂಲನ್ನು ತೊಲದಲ್ಲಿ ತೂಗುತ್ತಿದ್ದರು, ಅದೇ ರೀತಿಯಲ್ಲಿ ರೇಷ್ಮೆ ಬಟ್ಟೆಯನ್ನೂ ತೊಲದಲ್ಲಿ ತೂಗುತ್ತಿದ್ದರು. ದಾಸರಿ ಎಂಬ ರೇಷ್ಮೆ ಬಟ್ಟೆಗೆ ತೊಲಕ್ಕೆ 1 ಹಾಗ – ಒಂದು ಮಳವಿ ಹತ್ತಿಗೆ 1 ಹಾಗ, ಇಲ್ಲಿ ಮಳವಿ ಎನ್ನುವುದು ತೂಕದ ಬಟ್ಟು. ಒಂದು ಮಳವಿ ಉಣ್ಣೆಯ ಹೊದಿಕೆಗಳಿಗೆ 1 ಹಾಗ, ಒಂದು ಕಾಗೆಯ ಪಟ್ಟೆಗೆ 1 ವೀಸ – ಇಲ್ಲಿ ಕಾಗೆಯ ಪಟ್ಟೆ ಎಂದರೆ ಕರಿಯ ಬಟ್ಟೆ ಅಥವಾ ಒರಟು ಬಟ್ಟೆ ಎಂದು ಅರ್ಥಮಾಡಬಹುದು. ರತ್ನಗಂಬಳಿ ಮತ್ತು ಜಮಖಾನೆ ಒಂದು ಮಳವಿಗೆ 1 ಹಾಗ – ಜಮಖಾನದ ಉಲ್ಲೇಖ ಇಲ್ಲಿ ಗಮನಿಸ ಬೇಕಾದುದು. ಒಂದು ಮಳವೆ ಒಲಿಗರಿಗೆ 1 ಹಾಗ – ಒಲಿಗರಿಯೂ ವಿಶೇಷವಾಗಿ ಮಾರಾಟ ವಾಗುತ್ತಿದ್ದ ವಸ್ತುವಾಗಿದ್ದಿತೆಂದು ಗಮನಿಸಬೇಕು. ಒಂದು ಮಳವೆ ಗೋಣಿಚೀಲಕ್ಕೆ 1 ಹಾಗ. ಆಗಿನ ಕಾಲದಲ್ಲಿಯೂ ಗೋಣಿಚೀಲವನ್ನು ಉಪಯೋಗಿಸುತ್ತಿದ್ದರೆಂದು ತಿಳಿದು ಬರುತ್ತದೆ.

ಈ ಮೇಲಿನ ಅಳತೆಗಳಲ್ಲಿ ಮಳವೆ ಅಥವಾ ಮಳವಿ ಎಂಬ ಪದವನ್ನು ಉಪಯೋಗಿಸಲಾಗಿ ಅದರ ಸರಿಯಾದ ಅರ್ಥ ತಿಳಿದಿಲ್ಲ. ಅನಂತರ ದವಸ ಧಾನ್ಯಗಳ ವಿವರಗಳು ಹೇಳಲ್ಪಟ್ಟಿವೆ. ಭತ್ತ, ಜೋಳ, ರಾಗಿ, ನವಣೆ, ಬರಗು, ಸಾವೆ ಮುಂತಾದ ಧಾನ್ಯಗಳಿಗೆ ಹೇರು 1 ಕ್ಕೆ ಬೇಳೆ 1. ಗೋಧಿ, ಕಡಲೆ, ಎಳ್ಳು, ಅಗಸೆ, ಕುಸುಬೆ, ಹೆಸರು, ಉದ್ದು, ತೊಗರಿ ಈ ಧಾನ್ಯಗಳಿಗೆ 1 ಹೇರಿಗೆ 1 ಹಾಗ, ಅಕ್ಕಿ ಹೇರೊಂದಕ್ಕೆ 1 ಬೇಳೆ. ಎಣ್ಣೆ ಮತ್ತು ತುಪ್ಪಗಳಿಗೆ ಒಂದು ಹೇರಿಗೆ ಒಂದು ಅಡ್ಡ. ಇಲ್ಲಿ ಒಂದು ಹೇರು ಉಪ್ಪಿಗೆ 1 ಬೇಳೆ, ಬೆಲ್ಲ ಹೇರಿಗೆ 1 ಹಾಗ, ಸಕ್ಕರೆ ಒಂದು ಹೇರಿಗೆ ಅಡ್ಡ – ಇಲ್ಲಿ ಬೆಲ್ಲ ಮತ್ತು ಸಕ್ಕರೆಗಳನ್ನು ಬೇರೆಯಾಗಿ ಹೆಸರಿಸಿರುವುದನ್ನು ಗಮನಿಸಬೇಕು. ಒಂದು ಹೇರು ಅಡಕೆಗೆ 1 ಹಾಗ, ವಿಳ್ಳೇದೆಲೆಯ ಹೇರು ಒಂದಕ್ಕೆ 1 ಹಾಗ.

ಇತರ ವಸ್ತುಗಳೆಂದರೆ ಕರಿಮೆಣಸು, ಅರಿಶಿನ, ಈರುಳ್ಳಿ, ಜೀರಿಗೆ, ಮೆಂತ್ಯ, ಸಬ್ಬಸಿಗೆ, ಸಾಸುವೆ, ಶುಂಠಿ ಇವುಗಳಿಗೆ ಒಂದು ಹೇರಿಗೆ 1 ಹಾಗ; ಈ ಮೇಲಿನ ಎಲ್ಲ ವಸ್ತುಗಳನ್ನೂ ಹೊರೆಯ ರೂಪದಲ್ಲಿ ಅಳಿಯಲಾಗುತ್ತಿದ್ದಿತು. ಅದರ ಮೇಲೆ ತೆರಿಗೆ ಹಾಕಲ್‌ಪಟ್ಟಿತ್ತು. ಇದರಲ್ಲಿ ಈರುಳ್ಳಿ ಅಥವಾ ಬೆಳ್ಳುಳ್ಳಿಯ ಪ್ರಸ್ತಾಪ ಬಂದಿರುವುದು ಕುತೂಹಲ ಕಾರಿಯಾದುದು. 'ಲೋಕೋಪಕಾರ'ದಲ್ಲಿ ಅದರ ಪ್ರಸ್ತಾಪವಿದೆ. ಅದರೆ ಶಾಸನಗಳಲ್ಲಿ ಇದರ ಉಲ್ಲೇಖ ವಿರಳ. ಆದರೆ ಕಬ್ಬನ್ನು ಹಾಗೂ ತೆಂಗಿನಕಾಯಿ ಯನ್ನು ಹೇಳುವಾಗ ಒಂದು ಬಂಡಿಗೆ ಒಂದು ಹಾಗ ತೆರಿಗೆ ಹಾಕಲಾಗಿತ್ತು. ಮೋಲೋಗರ ಮಾಡುವ ತರಕಾರಿಯನ್ನೂ ಇಲ್ಲಿ ಒಂದು ಬಂಡಿಗೆ 1 ಹುಲುವೀಸ ತೆರಿಗೆ. ಹುಲುವೀಸ ಎನ್ನುವ ನಾಣ್ಯವನ್ನು ಇದುವರೆವಿಗೂ ನಾಣ್ಯಶಾಸ್ತ್ರಜ್ಞರು ಗಮನಿಸಿಲ್ಲ[4]. ಬಹುಶಃ ಇದು ವೀಸದ ಒಂದು ಭಾಗವಿರಬೇಕೆಂದು ಮಾತ್ರ ಹೇಳಬಹುದು. ಇದರ ನಿಜವಾದ ಮೌಲ್ಯ ಗೊತ್ತಾಗಿಲ್ಲ.

ಸಂತೆ ಮುಂತಾದ ಸಮಯಗಳಲ್ಲಿ ರಸ್ತೆಯಲ್ಲಿ ಇಟ್ಟು ಮಾರುವ ಕೆಲವು ವಸ್ತುಗಳ ಮೇಲೂ ಇಲ್ಲಿ ತೆರಿಗೆ ಹಾಕಿರುವುದು ಗಮನಾರ್ಹ. ಇಂತಹ ವಿಳ್ಯದೆಲೆ ಅಂಗಡಿಗೆ ಒಂದು ದಿನಕ್ಕೆ ಒಂದು ಎಲೆ; ಅಡಿಕೆಯ ಅಂಗಡಿಗೆ ಒಂದು ದಿನಕ್ಕೆ ಒಂದು ಅಡಿಕೆ; ಒಂದು ಗಾಡಿ ಹೊರೆಯ ಮರಕ್ಕೆ ಒಂದು ಬೇಳೆ; ಹುಲ್ಲು ಮತ್ತು ಸೌದೆ ಹೊರೆ 1ಕ್ಕೆ 1 ಬೇಳೆ. ಇನ್ನು ಪ್ರಾಣಿಗಳನ್ನು ಗಮನಿಸಬಹುದು. ಹೊರಗಡೆಯಿಂದ ಬಂದ ಮಾನ್ಯದ ಎತ್ತಿಗೆ ಒಂದಕ್ಕೆ 1 ಹಾಗ; ಕುದುರೆಗಳನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಹೊಲಿಯ ಕುದುರೆ, ಖಡಿಲೆಯ ಕುದುರೆ ಮತ್ತು ನಾಡಕುದುರೆ – ಇವುಗಳಿಗೆ ಇವುಗಳ ಬೆಲೆಯ 1 ಗದ್ಯಾನಕ್ಕೆ 1 ಬೇಳೆ; ಆನೆಗೆ ಮತ್ತು ಒಂಟೆಗಳಿಗೆ 1 ಹಾಗ; ಗಾಡಿಗೆ ಅದರ ಬೆಲೆಯ ಗದ್ಯಾಣಕ್ಕೆ 1 ಬೇಳೆ; ಎಮ್ಮೆಗೆ 1 ಹಾಗ; ಕುರಿ ಮತ್ತು ಆಡುಗಳಿಗೆ 1 ಹುಲುವೀಸ; ಎರಡೂ ಕಡೆಗಳಲ್ಲಿ ಕೊಡಲಾಗುವ ಸುಂಕ ಗದ್ಯಾಣಕ್ಕೆ 1 ಬೇಳೆ; ಪರಿವಾರದ ಒಬ್ಬ ಮನುಷ್ಯನಿಗೆ ಒಂದು ವರ್ಷಕ್ಕೆ 1 ಪಣ. ಅಮರ ಧಂಡನಾಯಕರ ಕಟ್ಟಲೆಗಾಗಿ ಒಂದು ಕುದುರೆಗೆ

ವರ್ಷಕ್ಕೆ 5 ಪಣ. ಅನಂತರ ಜೀವಿತಗಾರರೆಂಬುವರ ವಿಷಯ ಪ್ರಸ್ತಾಪಿತವಾಗಿದೆ. ಪ್ರತಿ ವರ್ಷ ಹತ್ತರಿಂದ ನೂರು ಹೊನ್ನನ್ನು ಸಂಪಾದಿಸುವ ಜೀವಿತಗಾರನು ವರ್ಷಕ್ಕೆ 1 ಪಣ ಕೊಡಬೇಕು; ನೂರಕ್ಕೂ ಹೆಚ್ಚು ಹೊನ್ನು ಸಂಪಾಸುವವನು ಎರಡು ಪಣವನ್ನು ಕೊಡಬೇಕು; ಹಾಗೆಯೇ ರಾಜ ಅಥವಾ ರಾಜಕುಮಾರರಿಂದ ಉಂಬಳಿಗಾಗಿ ನೂರು ಗದ್ಯಾಣಗಳಿಗೆ ಎರಡು ಪಣ. ಇಷ್ಟೆಲ್ಲವನ್ನೂ ಅವರು ಸ್ವಸಂತೋಷದಿಂದ ಮರ್ಯಾದೆಯ ಸ್ವಾಮ್ಯವಾಗಿ ಮುದ್ದಯ ದಂಡನಾಯಕನಿಗೆ ಬಿಟ್ಟುಕೊಟ್ಟರು. ಇಷ್ಟೆಲ್ಲವನ್ನೂ ಒಬ್ಬ ದಂಡನಾಯಕನ ಜೀವನಕ್ಕಾಗಿ ಬಿಟ್ಟು ಕೊಡಬೇಕಾಯಿತು ಎನ್ನುವುದು ಗಮನಾರ್ಹವಾದ ಸಂಗತಿ.

ಈ ಶಾಸನದಲ್ಲಿ ಇನ್ನೊಂದು ಮಹತ್ವವಿದೆ. ವಿಜಯನಗರ ಕಾಲದಲ್ಲಿ ಚಲಾವಣೆಯಲ್ಲಿದ್ದ ಬಹುತೇಕ ನಾಣ್ಯಗಳ ಉಲ್ಲೇಖ ಇಲ್ಲಿ ಬಂದಿದೆ. ಅವುಗಳು ಗದ್ಯಾಣ, ಹೊನ್, ಹಣ, ವೀಸ, ಬೇಳೆ, ಹಾಗ ಮತ್ತು ಹುಲುವೀಸ. ಇಲ್ಲಿ ಅಷ್ಟೊಂದು ವ್ಯವಹಾರಗಳಿದ್ದಾಗ್ಯೂ ವರಹದ ಪ್ರಸ್ತಾಪವೇ ಇಲ್ಲ. ಅದರ ಬದಲು ಗದ್ಯಾಣವಿದೆ. ಅಂದರೆ ವರಹ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿದ್ದಿತೇ ಅಥವಾ ಈ ಪ್ರದೇಶದಲ್ಲಿ ಗದ್ಯಾಣವೇ ವಿಶೇಷ ಚಲಾವಣೆಯಲ್ಲಿದ್ದಿತೇ ಎನ್ನುವುದು ನಾಣ್ಯ ಶಾಸ್ತ್ರಜ್ಞರು ನಿರ್ಧರಿಸಬೇಕು.

ಈ ಶಾಸನದಲ್ಲಿ ಕಾಣಸಿಗುವ ಅನೇಕ ದವಸ ಧಾನ್ಯ, ಹೂವುಹಣ್ಣು ಮತ್ತು ಇತರ ಪದಾರ್ಥಗಳು, ಪ್ರಾಚೀನತೆಯ ದೃಷ್ಟಿಯಿಂದಲೂ ಗಮನಾರ್ಹ ತಾಳೆಯನ್ನು ಕುರಿತು ಬರೆಯುವಾಗ ಬಿ.ಜಿ.ಎಲ್. ಸ್ವಾಮಿಯವರು 16ನೆಯ ಶತಮಾನದ ಶಾಸನವನ್ನು ಉದ್ಧರಿಸಿ ತಾಳೆ ತೋಪನ್ನು ಕೊಂಡಿ ಶೆಟ್ಟಿ ಬೆಳೆಸಿದ ಎನ್ನುತ್ತಾರೆ[5]. ಆದರೆ ಈ ಶಾಸನದಲ್ಲಿ ಅದಕ್ಕೂ ಮುಂಚೆಯೇ ತಾಳೆಯ ಎಲೆಯ ಪ್ರಸ್ತಾಪ ಬಂದಿರುವುದು ಗಮನಾರ್ಹ. ಹಾಗೆಯೇ ತೆಂಗಿನ ಬಗೆಗೆ ಬರೆಯುತ್ತಾ ಅವರು ಯಾವ ಶಾಸನವನ್ನೂ ಉದ್ಧರಿಸಿಲ್ಲ. ಅದು ಇಲ್ಲಿ ದೊರೆಯುತ್ತದೆ. ಹಾಗೆಯೇ ಕಡಲೆಯ ಬಗೆಗೆ ಬರೆಯುತ್ತಾ ಕ್ರಿ.ಶ. 1161ರ ಶಾಸನವು ಕಡಲೆಯ ಕಡುಬನ್ನು ಹೆಸರಿಸುತ್ತದೆ, ಎಂದಿದ್ದಾರೆ[6]. ಈ ಶಾಸನದಲ್ಲಿ ಕಡಲೆಯೇ ಉಕ್ತವಾಗಿದೆ. ಅದೇ ರೀತಿ ಕೇಸರಿಯ ವಿಷಯವನ್ನು ಚರ್ಚಿಸುತ್ತ ಒಂದು ಕಾಲವಿಲ್ಲದ ವೀರಪಾಂಡ್ಯದೇವನ ಶಾಸನವನ್ನು ಅವರು ಉಲ್ಲೇಖಿಸಿದ್ದಾರೆ[7]. ಅನೇಕ ವಸ್ತುಗಳಾದ ಸಕ್ಕರೆ, ಶುಂಠಿ, ಪುನುಗು, ಕರ್ಪೂರ ಮುಂತಾದ ಅನೇಕ ವಸ್ತುಗಳಿಗೆ ಈ ಶಾಸನ ಒಂದು ಪ್ರಾಚೀನತೇಯನ್ನು ಒದಗಿಸುತ್ತದೆ. ಹೀಗಾಗಿ ಆ ದೃಷ್ಟಿಯಿಂದಲೂ ಈ ಶಾಸನ ಆಳವಾಗಿ ಅಭ್ಯಾಸಮಾಡಲು ಯೋಗ್ಯವೆನಿಸಿದೆ.

---

## ಟಿಪ್ಪಣಿ

1. ಇದು ಎ.ಕ. ಸಂ. 9, ಸಂಖ್ಯೆ 171ರಲ್ಲಿ ಪ್ರಕಟವಾಗಿದೆ (ಪರಿಷ್ಕೃತ ಆವೃತ್ತಿ; ಮೈಸೂರು ವಿಶ್ವವಿದ್ಯಾನಿಲಯ)
2. ಒಂದು ಶಾಸನ ಎಷ್ಟೊಂದು ಮಾಹಿತಿಯನ್ನು ಕೊಡಬಹುದು ಎನ್ನುವುದಕ್ಕೆ ಇದೊಂದು ಉತ್ತಮ ಉದಾರಣೆ.
3. ಶಾಸನದ ಸಾಲು 40-41
4. ಎ.ವಿ. ನರಸಿಂಹಮೂರ್ತಿ, 'ಕಾಯಿನ್ಸ್ ಆಫ್ ಕರ್ನಾಟಕ', ಪು 142, ಅವರು ಕೊಟ್ಟಿರುವ ಪಟ್ಟಿಯಲ್ಲಿ ಹುಲುವೀಸ ಸೇರಿಲ್ಲ.
5. ಬಿ.ಜಿ.ಎಲ್. ಸ್ವಾಮಿ, 'ಶಾಸನಗಳಲ್ಲಿ ಗಿಡಮರಗಳು' ಪು 18-19
6. ಅದೇ, ಪು.21
7. ಅದೇ ಪು. 32

ಡಾ|| ಬಿ. ವಸಂತ ಶೆಟ್ಟಿ

# ಬಾರಕೂರಿನ ತಾಮ್ರ ಶಾಸನಗಳು

ತುಳುನಾಡಿನ ರಾಜಧಾನಿಯಾಗಿದ್ದ ಬಾರ ಕೂರಿನಲ್ಲಿ ನೂರಕ್ಕೂ ಮಿಕ್ಕಿ ಶಾಸನಗಳು ದೊರೆತಿವೆ. ಇವು ಸಾಂತರ, ಅಳುಪ, ಹೊಯ್ಸಳ, ವಿಜಯನಗರ ಮತ್ತು ಕೆಳದಿ ಅರಸರ ಆಳ್ವಿಕೆಗೆ ಸೇರಿದವುಗಳು. ಇವುಗಳಲ್ಲಿ ಕೆಲವೇ ಕೆಲವು ಶಾಸನಗಳನ್ನು ಹೊರತುಪಡಿಸಿದರೆ ಉಳಿದವುಗಳು ದತ್ತಿ ಶಾಸನಗಳು. ಈ ಶಾಸಗಳೆಲ್ಲ ಹೆಚ್ಚಾಗಿ ಕಂಡು ಬರುವುದು ಶಿಲಾಫಲಕಗಳ ಮೇಲೆ. ಯಾವುದೇ ರಕ್ಷಣೆಯಿಲ್ಲದೆ ವೇಗವಾಗಿ ನಶಿಸಿ ಹೋಗುತ್ತಿರುವ ರಾಜಧಾನಿ ಬಾರಕೂರಿನ ಅವಶೇಷಗಳ ಪೈಕಿ ಶಾಸನಗಳಿಗೆ ಅಗ್ರಸ್ಥಾನ. ತಾಮ್ರ ಶಾಸನಗಳೂ ಇದಕ್ಕೆ ಹೊರತಲ್ಲ.

ಬಾರಕೂರು ಪತ್ತು ಕೇರಿಗಳನ್ನು ಹೊಂದಿತ್ತು. ಅವುಗಳಲ್ಲೊಂದು ಮೂಡುಕೇರಿ (ಮೂಜುಕೇರಿ) ಈ ಕೇರಿಯ ಪ್ರಧಾನ ದೇವಾಲಯ ಸೋಮೇಶ್ವರ ದೇವಾಲಯ. ಬಾರಕೂರಿನ ತಾಮ್ರ ಶಾಸನಗಳೆಂದರೆ ಇಲ್ಲಿ ಇನ್ನೂ ಉಳಿದುಕೊಂಡಿರುವ 5 ಶಾಸನಗಳು. ಈ ಶಾಸನಗಳು ಮಹತ್ವವನ್ನು ಪರಿಶೀಲಿಸುವುದು ಈ ಪ್ರಬಂಧದ ಉದ್ದೇಶ.

**ಒಂದನೆಯ ಶಾಸನ**

50 ಸೆಂಟಿಮಿಟರ್ ಉದ್ದ ಮತ್ತು 81/2 ಸೆಂಟಿಮಿಟರ್ ಅಗಲದ ತಾಮ್ರಪಟದಲ್ಲಿ ಎರಡೂ ಮೈಯಲ್ಲಿ ಬರೆಯಲಾದ ಈ ಶಾಸನ ಶಕವರ್ಷ 1275 ರದ್ದು (ನಂದನ ಸಂವತ್ಸರ ಕ್ರಿ.ಶ. 1353). ತುಳುನಾಡಿನ ಪ್ರಾಚೀನ ತಾಮ್ರಶಾಸನಗಳ ಪೈಕಿ ಇದೂ ಒಂದು[1]. ವಿಜಯನಗರದ ರಾಜ್ಯಪಾಲ ಮಲೆಯ ದಣ್ಣಾಯಕನು ಬಾರಕುರು ರಾಜ್ಯವನ್ನಾಳುತ್ತಿದ್ದಾಗ ಬರೆಸಿದ ಈ ತಾಮ್ರಶಾಸನದ ಉದ್ದೇಶ ಹಾನೆಹಳ್ಳಿಯ ಮೂವರು – ದೇಯಕ್ಕ, ತಮ್ಮಿ ಸೆಟ್ಟಿ, ತುಳು ವಂಚ – ತಮ್ಮ ಪಾಲಿನ ಭೂಮಿಯನ್ನು ತಮ್ಮೊಳಗೆ ಪಾಲು ಮಾಡಿಕೊಂಡದ್ದನ್ನು ದಾಖಲಿಸುವುದಾಗಿದೆ. ಈ ವಿಭಾಗಪತ್ರದಲ್ಲಿ ಒಳಗೊಂಡಿರುವ ಭೂಮಿಯಲ್ಲಿ ಮೂಲ ಹಕ್ಕಿನ ಭೂಮಿಯಲ್ಲದೆ ಅಡವು (ಆರುವಾರ) ಹಿಡಿದ ಭೂಮಿಯೂ ಸೇರಿದೆ. ಭೂಮಿಯ ವಿವರ ನೀಡುವಾಗ ಬಯಲು, ಮಕ್ಕಿ ಇತ್ಯಾದಿ ಬೇರೆ ಬೇರೆ ರೀತಿಯ ಭೂಮಿಯನ್ನು ಹೆಸರಿಸುವುದರಿಂದ ಹಾಗೂ ಗದ್ದೆಗಳ ವಿವಿಧ ಹೆಸರು ಗಳನ್ನು ತಿಳಿಸುವುದರಿಂದ, ಭೂ ಸ್ಥಿತಿ ಮತ್ತು ಕೃಷಿಯ ಬಗೆಗಿನ ಅಧ್ಯಯನಕ್ಕೆ ಈ ದಾಖಲೆ ಬಹಳ ಉಪ ಯುಕ್ತವಾಗಿದೆ. ಇಲ್ಲಿ ಭೂಮಿಯನ್ನು ಪಾಲು ಮಾಡಿ ಕೊಂಡವರನ್ನು ಹೆಸರಿಸುವಾಗ ಅವರು ಇಂಥವರ ಅಳಿಯಂದಿರು ಎಂದಿರುವುದು ಅವರು 'ಅಳಿಯ ಸಂತಾನ ಕಟ್ಟ'ನವರು ಎಂಬುದನ್ನು ಸೂಚಿಸುತ್ತದೆ. ಮಾಬಿಸೆಟ್ಟಿಯ ಬಳಿಯ ಪ್ರಸ್ತಾಪ ಆಗಿನ ಸಮಾಜದಲ್ಲಿ 'ಬಳಿಯ ಮಹತ್ವದ ಸೂಚಕ. ಭೂಮಿಯನ್ನೂ ಮೂರು ವಿಭಾಗ ಮಾಡಿ ಹಂಚಿಕೊಡಲು ಮೂವರ ಪರವಾಗಿ ಹೊಣೆಕಾರರನ್ನು ಹೆಸರಿಸಲಾಗಿದೆ. (ದುದನಿ ಸೆಟ್ಟಿ ಮತ್ತು ಅಜ್ಜಿಸೆಟ್ಟಿ) ಆಗ ಭೂಮಿಯೊಂದಿಗೆ ಬಿಡಿಸಲಾಗದ ಸಂಬಂಧವನ್ನು ಹೊಂದಿದ್ದ ಆಳುಗಳನ್ನೂ ಸಹ ಹಂಚಿ ಕೊಂಡದಕ್ಕೆ ಇಲ್ಲಿ ಉಲ್ಲೇಖವಿರುವುದರಿಂದ ಈ ದಾಖಲೆ ಆಗಿನ ಸಾಮಾಜಿಕ ಪರಿಸ್ಥಿತಿಯನ್ನು ತಿಳಿಯಲು ಸಹಕಾರಿಯಾಗಿದೆ. ಈ ವಿಭಾಗ ಪತ್ರಕ್ಕೆ ತಪ್ಪಿದರೆ ಅರಸಿಗೆ ತಪ್ಪುದಂಡ ನೀಡಬೇಕಾಗುತ್ತದೆಂಬುದೂ ಗಮನಾರ್ಹವಾಗಿದೆ. ಭೂಮಿ ಯ ಕ್ರಯ – ವಿಕ್ರಯ ನಡೆಸುವಾಗ ''ಊರಿಗೆ' ಮತ್ತು 'ಅಧಿಕಾರಿ'ಗಳಿಗೆ ಎಷ್ಟು ಮಹತ್ವವಿತ್ತೆಂಬುದರ ಅರಿವಾಗುತ್ತದೆ. ಜನನವನ್ನು (ಭೂಮಿಯನ್ನು) ಮಾರುವ ಕಾಲಕ್ಕೆ ಊರು ತನ್ನ 'ಮರ್ಯಾದೆ' ವಸೂಲು ಮಾಡುವ ಕ್ರಮವಿತ್ತು. ಅಧಿಕಾರಿಗಳಿಗೆ 'ಕಾಣಿಕೆ' ಸಲ್ಲಬೇಕಾಗಿತ್ತು. ಹೀಗೆ ಭೂಮಿಯಿಂದ ತೆರಿಗೆ ಮಾತ್ರವಲ್ಲದೆ ಭೂವ್ಯವಹಾರ ನಡೆದಾಗಲೂ ಸರಕಾರಕ್ಕೆ ಆದಾಯ ಬರುತ್ತಿತ್ತು. ಈ ವ್ಯವಹಾರದ ಕಟ್ಟಳೆಗೆ ತಪ್ಪಿದರೂ ಸರಕಾರಕ್ಕೆ ತಪ್ಪು ದಂಡ ತೆರಬೇಕಾಗಿತ್ತು. ಶಾಸನದಲ್ಲಿ ನಮೂದಿಸಿದ ಗಡಿಗೆ ಸಂಬಂಧಿಸಿ ಸಂಬಂಧ ಪಟ್ಟವರು ಕಾದತೊಡಗಿದರೆ ಅದನ್ನು ನಿಲ್ಲಿಸಿಕೊಡುವ ಜವಾಬ್ದಾರಿ ಶಾಸನದಲ್ಲಿ ನಮೂದಿಸಿದ ಹೊಣೆಕಾರರದ್ದು ಎಂಬುದೂ ಗಮನಾರ್ಹ ಅಂಶ. ಈ ತಾಮ್ರ ಪಟದ ಮೊದಲ ಪುಟದಲ್ಲಿ 11 ಮತ್ತು ಎರಡನೆಯ ಪುಟದಲ್ಲಿ 12 ಸಾಲುಗಳಿದ್ದು ಕೊನೆಯಲ್ಲಿ ಪೂರಾಳ

ಮಾಬುಸೆಟ್ಟಿ ಮತ್ತು ಬಿಮ್ಮುಕೊರಾಶಿ ಇವರನ್ನು ಸಾಕ್ಷಿಗಳಾಗಿ ಹೆಸರಿಸಲಾಗಿದೆ. ಈಗ ಹೆಚ್ಚಾಗಿ ಬ್ರಾಹ್ಮಣರಲ್ಲಿ ಕಂಡುಬರುವ ಅಡ್ಡ ಹೆಸರು (ಸರ್‌ನೇಮ್) 'ಉರಾಳ' ಮೂಲತಃ ಊರಿನಲ್ಲಿ ಹೊಂದಿದ್ದ ಅಧಿಕಾರ ಸ್ಥಾನದಿಂದ ಬಂದುದೆಂಬುದನ್ನೂ ನಾವಿಲ್ಲಿ ಗಮನಿಸಬಹುದು. ಈ ಶಾಸನವನ್ನು ಬರೆದಾತ ಕೋಟಿಯಾಚಾರಿ.

**ಎರಡನೆಯ ಶಾಸನ :** 37 ಸೆಂ.ಮೀ. ಉದ್ದ ಮತ್ತು 20 ಸೆಂ.ಮೀ. ಅಗಲದ ತಾಮ್ರದ ಹಾಳೆಯಲ್ಲಿ ಎರಡೂ ಮೈಯಲ್ಲಿ ಒಟ್ಟು 34 ಸಾಲುಗಳಲ್ಲಿ ಬರೆದ ಈ ಶಾಸನ ಶಕವರ್ಷ 1312ರದ್ದು (ಕ್ರಿ.ಶ.1390) ಇಮ್ಮಡಿ ಹರಿಹರನ ಆಳ್ವಿಕೆಯ ಕಾಲದಲ್ಲಿ ಹೊನ್ನಾವರದ ಮಲ್ಲಪ್ಪ ಒಡೆಯನು ಬಾರಕೂರು ರಾಜ್ಯವನ್ನು ಆಳುತ್ತಿದ್ದಾಗ ಮಾಯಣ್ಣ ಎಂಬುವನು ಬಾರಕೂರಿನ ಮೂಡು ಕೇರಿಯಲ್ಲಿ ಧರ್ಮಛತ್ರವನ್ನು ಮಾಡಿಸಿದ. ಅಲ್ಲಿ ಆಹಾರ ದಾನಕ್ಕಾಗಿ ಬ್ರಹ್ಮಾವರದ ಪಶ್ಚಿಮ ಭಾಗದಲ್ಲಿ ಮಾಯಣ್ಣನ ಬ್ರಹ್ಮಾದಾಯದ ಮೂಲದ ಬಾಳನ್ನು ಸಾಗುವಳಿ ಮಾಡುತ್ತಿದ್ದ ಇವರು ತಮ್ಮ ಪಾಲಿನ ತೆಱುವನ್ನು (ತೆರಿಗೆಯನ್ನು) ಸಂದಾಯ ಮಾಡುವ ಬಗ್ಗೆ ನಿರ್ದೇಶಿಸುವುದೇ ಈ ಶಾಸನದ ಉದ್ದೇಶ. ಬಾರಕೂರು ರಾಜ್ಯದ ರಾಜಕೀಯ ಇತಿಹಾಸದ ದೃಷ್ಟಿಯಿಂದ ಈ ಶಾಸನ ಮಹತ್ವದ್ದಾಗಿದೆ. ಕ್ರಿ.ಶ. 1390ರಲ್ಲಿ ಮಲ್ಲಪ್ಪ ಒಡೆಯನು ಬಾರಕೂರಿನ ರಾಜ್ಯಪಾಲನಾಗಿದ್ದನೆಂಬುದು ಈ ಶಾಸನದಿಂದ ತಿಳಿಯುತ್ತದೆ. ಕುಂದಾಪುರ ತಾಲೂಕಿನ ಕೊರ್ಗಿಯಲ್ಲಿ ಈ ಲೇಖಕನಿಗೆ ದೊರೆತ ಕ್ರಿ.ಶ. 1390ರ ಶಾಸನದಿಂದಲೂ ಇದಕ್ಕೆ ಪುಷ್ಟಿ ದೊರೆಯುತ್ತದೆ. 1389ರಲ್ಲಿ ವಿರುಗಪ್ಪ ದಣ್ಣಾಯಕ ಇಲ್ಲಿ ರಾಜ್ಯಪಾಲನಾಗಿದ್ದುದನ್ನು ಹಟ್ಟಿಯಂಗಡಿಯ ಶಾಸನ[2] ತಿಳಿಸುತ್ತದಾದರೂ 1390ರಲ್ಲಿ ಪುನಃ ಮಲ್ಲಪ್ಪ ಒಡೆಯ ಬಾರಕೂರಿಗೆ ರಾಜ್ಯಪಾಲನಾಗಿ ಮರಳಿರಬೇಕೆಂದು ತಿಳಿಯಬಹುದಾಗಿದೆ.

ಗಡಿಯನ್ನು ಹೇಳುವಾಗ ಭೂ ಒಡೆತನ ಹೊಂದಿದ್ದ ವಿವಿಧ ವ್ಯಕ್ತಿಗಳ ಉಲ್ಲೇಖ, ಮಕ್ಕಿ, ಕೊಳಕೆಯ ಬಯಲು, ಮೆಕ್ಕೆ ಮೊದಲಾದ ಬೇರೆ ಬೇರೆ ರೀತಿಯ ಗದ್ದೆಗಳ ವಿವರ, ಬಿತ್ತನೆಯ ಆಧಾರದಲ್ಲಿ ಭೂಮಿಯ ವಿಸ್ತೀರ್ಣದ ಅಳತೆಯ ಕ್ರಮ, 18 ಮುಡಿ ಭೂಮಿಗೆ 13 ಮುಡಿ ಗೇಣಿ ನಿರ್ಣಯ ಇತ್ಯಾದಿ ವಿವರಗಳು ಆರ್ಥಿಕ ಇತಿಹಾಸದ ದೃಷ್ಟಿಯಿಂದ ಮಹತ್ವ ಪಡೆದಿವೆ[3]. ಭೂಮಿಯನ್ನು ಸಾಗುವಳಿಗೆ ಪಡೆದು ಕೊಂಡವರು 'ಕಟುಂದೆಱು' ಸಂದಾಯ ಮಾಡುವ ಬಗ್ಗೆ ಉಲ್ಲೇಖ ಇಲ್ಲಿ ದೊರೆಯುತ್ತದೆ. ಮೇಲೆ ನಮೂದಿಸಿದ, ಭೂಮಿಯನ್ನು ಸಾಗುವಳಿಗೆ ಪಡೆದುಕೊಂಡ, ಐವರಲ್ಲಿ ಪ್ರತಿಯೊಬ್ಬರೂ ತಮ್ಮ ತಮ್ಮ ಭೂಮಿಯ ಮೇಲಿನ ಗೇಣಿಗೆ ಅನುಗುಣವಾಗಿ, ಭೂಮಿಯ ವಿಸ್ತಾರಕ್ಕೆ ಅನುಗುಣವಾಗಿ ಕಟುಂದೆಱು ತೆರಬೇಕೆಂಬ ನಿರ್ದೇಶನವಿದೆ. ಹೀಗೆ ಇಲ್ಲಿ ಸ್ಪಷ್ಟವಾಗುವ ಅಂಶವೆಂದರೆ ಇದು ಭೂಮಿಯನ್ನು ಸಾಗುವಳಿಗೆ ವಹಿಸಿಕೊಂಡಾಗ ಅಂದರೆ 'ಕಟ್ಟಿಕೊಂಡಾಗ' ಆ ಬಗ್ಗೆ ನೀಡುವ ತೆಱು, ಹಾಗಾಗಿ ಇದನ್ನು ಕಟುಂದೆಱು ಎಂಬುದಾಗಿ ಕರೆಯಲಾಗುತ್ತಿತ್ತು. ಇದು ದಕ್ಷಿಣ ಕನ್ನಡದಲ್ಲಿ ಸಾಕಷ್ಟು ಪ್ರಚಲಿತವಿತ್ತು[4].

**ಮೂರನೆಯ ಶಾಸನ :** 22 ಸೆಂ.ಮೀ. ಉದ್ದ ಹಾಗೂ 15 ಸೆಂ.ಮೀ. ಅಗಲದ ಎರಡು ತಗಡುಗಳಲ್ಲಿ ಒಂದೊಂದು ಮೈಯಲ್ಲಿ ಮಾತ್ರ ಬರೆಯಲಾದ ಶಕ ವರ್ಷ 1346 ಕ್ರೋಧಿ ಸಂವತ್ಸರದ (1424 ಕ್ರಿ.ಶ.) ಈ ಶಾಸನ ವಿಜಯ ನಗರದ ದೊರೆ ಇಮ್ಮಡಿ ದೇವರಾಯನದು. ಬಾರಕೂರು ನಾಡಿನ ವರಾಂಗದಲ್ಲಿರುವ ನೇಮಿನಾಥ ದೇವರಿಗೆ ವರಾಂಗ ಗ್ರಾಮದ ಆದಾಯವನ್ನು ಈ ಮೊದಲೇ ದಾನವಾಗಿತ್ತಿರಬೇಕು. ಈಗ ಮೇಲು ಹೊನ್ನಾಗಿ ಎತ್ತುವ ಕುಳಕಾಟಿ 12 ಹೊನ್ನು ಮತ್ತು ಅದಕ್ಕೆ ಬೆಂಬಲವಾಗಿ ಎತ್ತುವ ಹಡಿಕೆ ಮೇಲಾಯ. ಇಷ್ಟನ್ನು ನೇಮಿನಾಥ ದೇವರ ಅಮೃತ ಪಡಿಗಾಗಿ ಬಿಡಬೇಕೆಂದು ವರ್ಧಮಾನ ಭಟ್ಟಾಚಾರ್ಯರು ವಿನಂತಿಸಿದ ಮೇರೆಗೆ ದೇವರಾಯನು ಈ ದಾನವನ್ನು ನೀಡಿದ್ದಾಗಿ ಶಾಸನ ತಿಳಿಸುತ್ತದೆ. ಈ ಆದಾಯವು ಅಮೃತ ಪಡಿಗಲ್ಲದೆ ವರ್ಧಮಾನ ಭಟ್ಟಾಚಾರ್ಯರ ಋಷಿಸಮುದಾಯದ ಆಹಾರ ದಾನಕ್ಕೂ ವ್ಯಯವಾಗಬೇಕೆಂದು ತಿಳಿಸಲಾಗಿದೆ. ಹೀಗೆ ನೀಡಲಾದ ಹಣವು ಅಧಿಕಾರಿ ಮತ್ತು ಸೇನಭೋವರ ಜೋಡಿ ವರ್ತನೆಗೆ ಸಲ್ಲುವ ಹಣವೆಂದು ನಮೂದಿಸಲಾಗಿದೆ. ಒಟ್ಟು 41 ಸಾಲುಗಳ ಈ ಶಾಸನ – ಬಾರಕೂರು ನಾಡು, ವರಾಂಗ ಗ್ರಾಮ ಇತ್ಯಾದಿ ಆಡಳಿತ ವಿಭಾಗಗಳು, ಅಧಿಕಾರಿ ಸೇನಭೋವರ ಜೋಡಿ ವರ್ತನೆ, ಈಗಾಗಲೇ ಒಂದು ಭೂಮಿಯಿಂದ ಬರುವ ಆದಾಯ ದಾನವಾಗಿ ನೀಡಿದ್ದರೂ ಅದೇ ಭೂಮಿಯ ಮೇಲೆ ಹೆಚ್ಚಿನ ತೆರಿಗೆ (ಮೇಲು ಹೊನ್ನು) ವಸೂಲು ಮಾಡುವ ಕ್ರಮ

ತ್ಯಾದಿಗಳ ಉಲ್ಲೇಖ ಹೊಂದಿರುವುದರಿಂದ ಈ ತಾಮ್ರ ಶಾಸನ ಮಹತ್ವದ ದಾಖಲೆಯೆನ್ನಿಸುತ್ತದೆ. ಅಲ್ಲದೆ ಆ ಪ್ರದೇಶದಲ್ಲಿ ಆಗ ಜೈನ ಧರ್ಮದ ಮಹತ್ವವನ್ನು ತಿಳಿದು ಕೊಳ್ಳಲೂ ಈ ಶಾಸನ ಉಪಯುಕ್ತವಾಗಿದೆ[5].

**ನಾಲ್ಕನೆಯ ಶಾಸನ :** ಸುಮಾರು 15ನೆಯ ಶತಮಾನದ ತಾಮ್ರ ಶಾಸನವೊಂದರ ಒಂದು ಹಾಳೆ ಮೂಡುಕೇರಿಯ ಸೋಮೇಶ್ವರ ದೇವಾಲಯದಲ್ಲಿದೆ. ಇದರ ಗಾತ್ರ 21 ಸೆಂ.ಮೀ. X 13 ಸೆಂ.ಮೀ. 12 ಪಂಕ್ತಿಗಳಿರುವ ಈ ಶಾಸನ ಉಂಗುರಪಳ್ಳಿ ಮುಕ್ಕಾಲ ಕುಂಜರಣ್ಣ, ಚಾಂತಾರ ಮಧ್ಯಸ್ಥನಾದ ಈಶ್ವರ – ಇವರ ಸಮ್ಮುಖದಲ್ಲಿ ವೈಶ್ಯ ಸೆಟ್ಟಿಗಳು ಶಾಸನದಲ್ಲಿ ಉಲ್ಲೇಖಿಸಿದ ಭೂಮಿಯನ್ನು ಪಾಲುಮಾಡಿಕೊಂಡ ದನ್ನು ದಾಖಲಿ ಸುತ್ತದೆ. ಅವರು, ತಮ್ಮ ಬಾಳಿನ ತೆರಿಗೆ ಹೆಚ್ಚಿದರೆ, ಆ ಬಾಳಿನ ತೆರಿಗೆಯನ್ನು ಸಲ್ಲಿಸಿ ಭೂಮಿಯನ್ನು ಅನುಭವಿಸಿಕೊಂಡು ಬರುವರೆಂದು ಉಲ್ಲೇಖವಿದೆ. ಮಟಪಾಡಿಯ ವೀರಭದ್ರ ದೇವರು, ಶ್ರೀ ಮಹಾದೇವರು, ಶ್ರೀ ಕೃಷ್ಣ, ಶಂಕರದೇವರು ಮತ್ತು ಕಾಳಿಕಾ ದೇವಿಯರ ಒಪ್ಪಿಗೆಯನ್ನೂ ನಮೂದಿಸುವ ಈ ದಾಖಲೆ ಧಾರ್ಮಿಕ ಪರಿಸ್ಥಿಯ ಪುನಾರಚನೆಗೆ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತದೆ. ಇಲ್ಲಿ ಆದಾಯ ವಸೂಲಿ ಮಾಡಿ ಸಲ್ಲಿಸಿಕೊಂಡು ಬರುವ ಜವಾಬ್ದಾರಿ ಮಧ್ಯಸ್ಥನದ್ದೆಂದು ತಿಳಿಸುವುದರಿಂದ ಈ ಅಧಿಕಾರಿಯ ಬಗ್ಗೆಯೂ ಹೆಚ್ಚಿನ ವಿವರ ದೊರೆಯುತ್ತದೆ[6].

**ಐದನೆಯ ಶಾಸನ :** ಈ ಶಾಸನವನ್ನು 27.5 X 11.4 ಸೆಂ.ಮೀ.ನ ಒಂದು ಹಾಳೆ ಮತ್ತು 25.7X12.3 ಸೆಂ.ಮೀ.ನ 2 ಹಾಳೆ – ಹೀಗೆ ಮೂರು ತಾಮ್ರದ ತಗಡುಗಳ ಮೇಲೆ ಬರೆಯಲಾಗಿದೆ. ಮೊದಲಿನ ಎರಡು ಪುಟಗಳಲ್ಲಿ ಪ್ರತಿಯೊಂದರಲ್ಲೂ 11 ಸಾಲುಗಳಿದ್ದು ಕೊನೆಯ ಹಾಳೆಯಲ್ಲಿ 2 ಸಾಲುಗಳಿವೆ. ಕಾಲವನ್ನು ರಕ್ತಾಕ್ಷಿ ಸಂವತ್ಸರ ಕಾರ್ತಿಕ–ಶು–5 ಬುಧವಾರ ಎಂದು ನಮೂದಿಸಲಾಗಿದೆ. ಶಕ ವರ್ಷವನ್ನು ಹೇಳಲಾಗಿಲ್ಲವಾದರೂ ಈ ಶಾಸನದಲ್ಲಿ – ಈಶ್ವರಉಂಗುರಪಳ್ಳಿಯನ್ನು ಬ್ರಹ್ಮಾವರಧ ಮೂಡು ಭಾಗದ ಗ್ರಾಮಿಣಿ ಎಂದು ಹೆಸರಿಸಲಾಗಿದೆ. 1447ರ ಜಾಂತಾರಿನ ಶಾಸನದಲ್ಲೂ ಇದೇ ಗ್ರಾಮಿಣೀಯ ಉಲ್ಲೇಖವಿರುವುದರಿಂದ ಇದರಲ್ಲೆ ಬರುವ ರಕ್ತಾಕ್ಷಿ ಸಂವತ್ಸರವು ಕ್ರಿ.ಶ. 1445ರಲ್ಲಿ ಬಂದ ರಕ್ತಾಕ್ಷಿ ಸಂವತ್ಸರವೆಂದು ತಿಳಿಯಬಹುದು. ಶಾಸನದ ಲಿಪಿಯೂ ಈ ಕಾಲವನ್ನು ದೃಢಪಡಿಸುತ್ತದೆ.

ಚಾಂತಾರಿನ ಉಂಗುರ ಪಳ್ಳಿ ಮನೆತನದ ಇಬ್ಬರು – ಈಶ್ವರ ಮತ್ತು ಉಂಗುರಪಳ್ಳಿ ಸೋಮಪ್ಪ ಸೆಟ್ಟಿ ಮತ್ತು ಮಲ್ಲಪ್ಪ ಸೆಟ್ಟಿಗೆ ಈ ಶಾಸನವನ್ನು ಬರೆಸಿಕೊಟ್ಟರು. ಇಲ್ಲಿ ಹೇಳಿರುವ ಬ್ರಹ್ಮಾವರದ ಮೂಡುಭಾಗದಲ್ಲಿನ ತಮ್ಮ ಬ್ರಹ್ಮಾದಾಯದ ಭೂಮಿಯನ್ನು ಅವರು ಸೋಮಪ್ಪ ಸೆಟ್ಟಿಗೆ ಮಾರಾಟ ಮಾಡಿದರು. ಸೋಮಪ್ಪ ಸೆಟ್ಟಿ ಈ ಭೂಮಿಯನ್ನು ಮಲ್ಲಪ್ಪ ಸೆಟ್ಟಿಯಲ್ಲಿ 'ಆರುವಾರ' (ಅಡವು) ಇರಿಸಿದ ಭೂಮಿಯನ್ನು ಬಿಡಿಸಿಕೊಳ್ಳುವಾಗ ಸೋಮಪ್ಪ ಸೆಟ್ಟಿ ತೆರಬೇಕಾದ ತೆಱ 9 ಮುಡಿ ಹತ್ತು ಹಾನೆಯೊಳಗೆ 2 ಮುಡಿಯನ್ನು ಕಾವುದಕ್ಕೆ(?) ಜನನಿಕೊಂಡ ಗದ್ಯಾಣ 150. ಇದನ್ನು ನಡೆಸದಿದ್ದರೆ ದಂಡ 150ಕ್ಕೆ 300 ಹೊನ್ನು. ಈ ನೂರೈವತ್ತು ಹೊನ್ನನ್ನು ತಂದೆ ಮಕ್ಕಳಿಬ್ಬರು ಉಂಗುರ ಪಳ್ಳಿಗಳಿಗೂ (ಈಶ್ವರ ಮತ್ತು ನಾರಣ) ಕೊಟ್ಟು ಸೋಮಪ್ಪ ಸೆಟ್ಟಿಯ 2 ಮುಡಿ ತೆಱವನ್ನು ಕಾದುಕೊಂಡನೆಂದು ಶಾಸನ ತಿಳಿಸುತ್ತದೆ. ಈ ನೂರೈವತ್ತು ಹೊನ್ನಿನಲ್ಲಿ 30 ಹೊನ್ನು ಉಪಚಾರ ಎಂಬುದಾಗಿ ಶಾಸನ ನಮೂದಿಸುತ್ತದೆ[7].

ವಿಜಯನಗರದ ಕಾಲದ ಗ್ರಾಮಡಳಿತ ಮತ್ತು ಭೂವ್ಯವಹಾರದಲ್ಲಿ 'ಗ್ರಾಮಿಣಿ' ಮತ್ತು 'ಜನನಿ'ಯ ಮಹತ್ವ, ಭೂಮಿಯನ್ನು ಅಡವಿಡುವ 'ಆರುವಾರ' ಪದ್ಧತಿ, ಬ್ರಹ್ಮಾದಾಯದ ಭೂಮಿಯನ್ನು ಬ್ರಾಹ್ಮಣೇತರರಿಗೆ ಮಾರಾಟ ಮಾಡುವುದು, ಭೂಮಿಯನ್ನು ಹಸ್ತಾಂತರಿಸುವಾಟಗ ನಿಮ್ನ ವರ್ಗದ ಆಳುಗಳನ್ನು ಸಹ ಹಸ್ತಾಂತರಿಸುವ ಕ್ರಮ, ಶ್ರಮಿಕ ವರ್ಗದ ಪರಿಸ್ಥಿತಿ, ಮತ್ತು ಕೆರೆಯ 1/3ಭಾಗ ನೀರು ಇಂತಪ ಭೂಮಿಗೇ ಸಲ್ಲಬೇಕೆಂಬಲ್ಲಿಯ ನೀರಿನ ಹಂಚಿಕೆಯಲ್ಲಿನ ಕಟ್ಟುನಿಟ್ಟಾದ ವ್ಯವಸ್ಥೆ ಇತ್ಯಾದಿ ವಿವರಗಳನ್ನು ತಿಳಿದು ಕೊಳ್ಳಲು ಈ ತಾಮ್ರ ಶಾಸನ ಉಪಯುಕ್ತವಾಗಿದೆ[7].

ಹೀಗೆ ಈ ಎಲ್ಲಾ 5 ಶಾಸನಗಳು ವಿಜಯನಗರ ಕಾಲದ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಯ ಚಿತ್ರಣವನ್ನು ನೀಡಲು ನಾವು ಬಳಸಿಕೊಳ್ಳಬಹುದಾದ ಅಪೂರ್ವ ಆಕರಗಳಾಗವೆ.

## ಅಡಿ ಟಿಪ್ಪಣಿಗಳು

1. Vasantha Shetty B. - Barakuru - Its History and Culture (Ph.D. Thesis, unpublished) PP. 567-571.
2. Gururaja Bhat, P. Studies in Tuluva History & Culture (Kallianpur, 1975) P.46
3. ವಸಂತ ಶಟ್ಟಿ, 'ಬ್ರಹ್ಮಾವರದ ಇತಿಹಾಸ' (ಬ್ರಹ್ಮಾವರ, 1988), ಪು. 36-39
4. Ramesh K.V., A History of South Kanara (Dharwad 1970) P.278
5. Vasantha Shetty B., Thesis, P. 575-576
6. ವಸಂತ ಶೆಟ್ಟಿ, ಬ್ರಹ್ಮಾವರದ ಇತಿಹಾಸ, ಪು.39
7. ಮೇಲಿನದೆ – ಪು. 45-47

ತಿ. ಶಂಭುಲಿಂಗಪ್ಪ

# ತರೀಕೆರೆಯ ಹೊಸ ಶಾಸನಗಳು

ನನ್ನ ಇತ್ತೀಚಿನ ಎಂದರೆ ಕಳೆದ ಮೂರು ವರ್ಷಗಳ ಸಂಶೋಧನೆಯ ಫಲದಿಂದಾಗಿ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲೂಕೊಂದರಲ್ಲಿಯೇ 20 ಶಿಲಾ ಶಾಸನಗಳು, 5 ತಾಮ್ರ ಶಾಸನಗಳು 8 ವೀರಗಲ್ಲುಗಳು 2 ಮಾಸ್ತಿ ಗಲ್ಲುಗಳು ಒಂದು ಗುಂಡ ಬ್ರಹ್ಮಯ್ಯಂಗಳ ವಿಗ್ರಹ – ಇವು ಹೊಸದಾಗಿ ಉಪಲಬ್ದವಾಗಿವೆ. ಬಿ.ಎಲ್.ರೈಸ್ ರವರೂ ಈ ತಾಲೂಕಿನಲ್ಲಿ ಒಟ್ಟು 91 ಶಾಸನಗಳನ್ನು ಸಂಶೋಧಿಸಿ ಎ.ಕ. ಸಂಪುಟ 6ರಲ್ಲಿ ಪ್ರಕಟಿಸಿರುತ್ತಾರೆ. ನನಗೆ ದೊರೆತ ಶಾಸನಗಳಲ್ಲಿ ಹಲವು ಶಾಸನಗಳು ಸುಂದರವಾಗಿದ್ದು ಕನ್ನಡ ನಾಡು – ನುಡಿಯ ಪ್ರಾಚೀನತೆ ಮತ್ತು ಸಂಸ್ಕೃತಿಯ ಕುರುಹುಗಳಾಗಿವೆ. ಅವುಗಳಲ್ಲಿ ಪ್ರಮುಖವಾದ ಶಾಸನಗಳ ವೈಶಿಷ್ಟ್ಯವನ್ನು ಸಹೃದಯರಿಗೆ ತಿಳಿಯ ಪಡಿಸುವುದೇ ಈ ಪ್ರಬಂಧದ ಉದ್ದೇಶ.

ಈ ತಾಲ್ಲೂಕಿನಲ್ಲಿ ದೊರೆತ ಬಹುತೇಕ ಶಾಸನಗಳು ದತ್ತಿ ಶಾಸನಗಳೇ ಆಗಿವೆ. ಅದರಲ್ಲೂ ಹೊಯ್ಸಳ ರಾಜರ ಕಾಲದ ಶಾಸನಗಳೇ ಹೆಚ್ಚು. ಹಾದಿಕೆರೆ, ಇಟ್ಟಿಗೆ, ನಾಗಮಂಗಲ, ಅಜ್ಜಂಪುರ, ಕುಡ್ಲೂರು, ಕಾಟಿಗನೆರೆ, ಸೊಕ್ಕೆ ಈ ಗ್ರಾಮಗಳು ನನಗೆ ದೊರೆತ ಶಾಸನ ಪ್ರದೇಶಗಳು, ದೊರೆತ ಹೊಸ ಶಾಸನಗಳ ಮೂಲಕ ಹಲವಾರು ವಿಷಯಗಳು ಗೋಚರಿಸಿದ್ದು ಅವು ಸಂಶೋಧಕರಿಗೆ ಸಹಾಯಕವೆಸಗುವಂತಹಗಳು.

ಮೊದಲನೆಯದಾಗಿ ಉಪಲಬ್ದ ಕೆಲವು ಶಾಸನಗಳು ನಾಳ್ಪ್ರಭುಗಳ ಇತಿಹಾಸದ ಮೇಲೆ ಹೊಸ ಬೆಳಕನ್ನು ಚೆಲ್ಲುತ್ತವೆ. ನಾಡಿನ ಪ್ರಭುಗಳೇ ನಾಳ್ಪ್ರಭುಗಳು; ಅವರು ಪರಾಕ್ರಮ, ಸತ್ಯಸಂಧತೆ ಮೊದಲಾದ ಸದ್ಗುಣಗಳನ್ನು ಪಡೆದು ನಾಡಿನ ಜನರ ಶ್ರೇಯೋಭಿಲಾಷೆಗಾಗಿ ನಾಡನ್ನು ಆಳಿದವರು ಇವರು. ಉದಾಹರಣೆಗೆ ಹಾದಿಕೆರೆ ಎಂಬ ಗ್ರಾಮದಲ್ಲಿ ದೊರೆತ ಶಾಸನವೊಂದು ನಾಳ್ಪ್ರಭುಗಳ ಏಳೆಂಟು ತಲೆಮಾರುಗಳ ವಂಶವೃಕ್ಷವನ್ನು ಕೊಡುತ್ತದೆ.. ಅದರ ಕಾಲ ಶಾ.ಶ 1105 ಎಂದರೆ ಕ್ರಿ.ಶ. 1183, ಹಿರಿಯ ಬೊಮ್ಮೆಗೌಡ, ಅವನ ಮಗ ಕೇತಗೌಡ, ಅವನ ಮಗ ಮಾಳಗೌಡ, ಅವನ ಮಗ ಕಿರಿಯ ಕೇತಗೌಡ, ಅವರ ಮಕ್ಕಳು ನಾಗಗೌಡ, ಮಾಕಗೌಡ. ಹೀಗೆ ಕೊನೆಯ ಮಕ್ಕಳಾದ ನಾಗಗೌಡ ಮತ್ತು ಮಾಕಗೌಡರು ಸಹೋದರರು. ಅವರು "ಪರನಾರಿ ಸಹೋದರರು ಬಲು ವಿದ್ಯಾವಂತರು ಸರಣಾಗತ ವಜ್ರ ಪಂಜರರುಂ ಮಲೆವರ್ಗ ಕುಠಾರರು ಸತ್ಯ ಪರಾಕ್ರಮರುಂ ಚಲದಂಕ ರಾಮರ ಗೋತ್ರಾ ವಾತಾರರು ಧರ್ಮ ಪ್ರತಿ ಪಾಳುರುಂ". ಹೀಗೆ ಇನ್ನೂ ಹಲವಾರು ಬಿರುದಾಂಕಿತರು ಇವರು.

ತಮ್ಮ ಹೊಲದಲ್ಲಿ ಶಿವಾಲಯವೊಂದನ್ನು ಕಟ್ಟಿಸಿ, ಕುಲದೀಪಕರಪ್ಪ ಸೂರ್ಯಭರಣ ಪಂಡಿತ ದೇವರ ಕಾಲಂ ಕರ್ಚಿ ಧಾರಾಪೂರ್ವಕವಾಗಿ ದೇವಾಲಯಕ್ಕೆ ದತ್ತಿಯನ್ನು ಬಿಟ್ಟದ್ದಾರೆ. ಪ್ರಾದೇಶಿಕವಾಗಿ ನಾಳ್ಪ್ರಭುಗಳ ಸಮಗ್ರ ಇತಿಹಾಸ ಇಂಥ ಶಾಸನಗಳಿಂದ ತಿಳಿಯಬಹುದಾಗಿದೆ. ಚಕ್ರವರ್ತಿ, ರಾಜ, ಮಹಾರಾಜರುಗಳು ಹೇಗೋ ಹಾಗೆಯೇ ನಾಡಿನ ಪ್ರಭುಗಳಾದ ಈ ನಾಳ್ಪ್ರಭುಗಳು ಒಂದು ನಾಡಿಗೆ ಅಷ್ಟೇ ಪ್ರಮುಖರು ಕೂಡ. ನಾಳ್ಪ್ರಭುಗಳ ಇತಿಹಾಸದ ಬಗ್ಗೆ ನಮ್ಮಲ್ಲಿ ಸಾಕಷ್ಟು ಕೆಲಸವಾಗಿಲ್ಲ ಎಂದು ಈ ಸಮ್ಮೇಳನದಲ್ಲಿ ತಿಳಿಸಲು ವಿಷಾದಿಸುತ್ತೇನೆ ವಿದ್ವಾಂಸರು ಇತ್ತ ಗಮನ ಹರಿಸಿ ಈ ಕೊರತೆಯನ್ನು ಈಗ ತುಂಬ ಬೇಕಾಗಿದ.

ಲಕುಲೀಶ ಶೈವ ಪಂಥಕ್ಕೆ ಸಂಬಂಧಿಸಿದ ಕಾಳಮುಖ ಆಚಾರ್ಯರ ಪರಿಚಯ ಉಪಲಬ್ದ ಶಾಸನಿಂದಲೂ ವ್ಯಕ್ತವಾಗುತ್ತದೆ. ಉದಾಹರಣೆಗೆ ಇಟ್ಟಿಗೆ ಶಾಸನವೊಂದನ್ನು ನೋಡಬಹುದು. ಅಂತೆಯೇ ಹಾದಿಕೆರೆ ಮತ್ತು ಕಾಟಿಗನೆರೆ ಶಾಸನಗಳು ಶಾಸನಗಳಲ್ಲಿ ವ್ಯಕ್ತವಾಗುವ ಶ್ರೀ ರುದ್ರಶಕ್ತಿ ದೇವರು, ಸಕರಾಶಿ ಪಂಡಿತರು, ಸೂರ್ಯಾಭರಣಪಂಡಿತ, ಅನಂತ ಶಕ್ತಿ ದೇವರು, ಕಲ್ಯಾಣ ಶಕ್ತಿ ಧೇವರು ಈ ಮೊದಲಾದ ವ್ಯಕ್ತಿಗಳನ್ನು ಪರಿಚಯಿಸುವುದು ಮಾತ್ರವಲ್ಲದೆ ಅವರ ಕಾಲ ನಿರ್ಣಯದಲ್ಲಿ ಇವು ಪ್ರಮುಖವಾದುವು. ಅಲ್ಲದ ಸ್ಥಾನಿಕ ಆಚಾರ್ಯರುಗಳಾದ ಇವರು ಶಾಸನವನ್ನು ರಚಿಸುತ್ತಿದ್ದರೆಂದು ಕೂಡ ತಿಳಿದು ಬರುತ್ತದೆ. ಉದಾಹರಣೆಗೆ ಹಾದಿಕೆರೆಯ ಶಾಸನವನ್ನು ಬರೆದವನು (ಸ) ಶಂಭಶಕ್ತಿ ಪಂಡಿತ, 'ಶಕ್ತಿ', 'ಪಂಡಿತ' ಹಾಗೂ

'ದೇವರು' – ಶೈವ ಪಂಥದ ಆಚಾರ್ಯರಿಗೆ ಇರುವ ಬಿರುದುಗಳಾಗಿರಬೇಕು.

ಉಪಲಬ್ಧ ಶಾಸನಗಳಲ್ಲಿ ವರ್ಣನೆಯ ದೃಷ್ಟಿಯಿಂದ ಅಪೂರ್ವವಾದುದು ಮತ್ತು ಅಸಂಪೂರ್ಣವಾದುದು ಸೊಕ್ಕೆಯು ಶಾಸನ. ಸೊಕ್ಕೆ ಎಂಬುದು ತರೀಕೆರ ತಾಲ್ಲೂಕಿನ ತರೀಕೆರೆ – ಅಜ್ಜಂಪುರದ ಮಾರ್ಗದಲ್ಲೆ ಬರುತ್ತದೆ. ಅದು ಹಿಂದೆ ಪ್ರಸಿದ್ಧಪುರವಾಗಿತ್ತು. ಐತಿಹಾಸಿಕ ಪ್ರಸಿದ್ಧ ಪ್ರದೇಶಗಳಾದ ಅಮೃತಾಪುರ ಮತ್ತು ಬಗ್ಗವಳ್ಳಿಗಳು ಈ ಗ್ರಾಮಕ್ಕೆ ತೀರ ಹತ್ತಿರವಾಗಿವೆ. ಸೊಕ್ಕೆಪುರದ ವರ್ಣನೆ ಶಾಸನದ ಒಂದು ವೈಶಿಷ್ಟ್ಯ. ಅದು ವಿಷ್ಣುವರ್ಧನನ ಮಗನಾದ ನರಸಿಂಹ ನೃಪಾಲನ ಕಾಲದ್ದು. ಸೊಕ್ಕೆಯಾ ಪುರದ ವರ್ಣನೆ ಸಾಗುತ್ತಿದ್ದಂತೆಯೇ ತಟ್ಟನೆ ಶಾಸನ ನಿಂತುಬಿಡುತ್ತದೆ. ಮುಂದೆ ಪ್ರಾಯಶಃ ಯಾವುದೋ ಕಾರಣಗಳಿಂದ ಶಾಸನವನ್ನು ಕೊರೆಯಲಾಗಿಲ್ಲ. ಕಂದ ಹಾಗೂ ವೃತ್ತಗಳಲ್ಲಿ ವರ್ಣನೆ ಸೊಗಸಾಗಿ ಮೂಡಿದೆ. ಗದ್ಯ ಪದ್ಯ ಮಿಶ್ರಿತವಾದ ಸಾಹಿತ್ಯ ಬಲು ಸುಂದರ. ಉದಾಃ ಒಂದೆರಡು ವ್ಯಾಕ್ಯಗಳನ್ನು ನೋಡಬಹುದು.

"ಭೂಲಲನೆಗೆ ಚಾರು ಕುಂತಳದವೋಲ್ ಪಿರಿದೊಪ್ಪ ಗಂಗವಾಡಿ ಕುಂತಗಳದಲ್ಲಿ ಎಲ್ಲರೂ ಬಹುಧಾನ್ಯರ್ ಧನ ಸರೇನ್ವಿತರು ನಿರಂತರಂ" – ಎಂಬ ವರ್ಣನೆಯಲ್ಲಿ ಪುರದ ನಿವಾಸಿಗಳೆಲ್ಲರೂ ಶ್ರೀಮಂತರಾಗಿದ್ದಿರಬೇಕು. ಅಂಥ ಕುಂತಳ ದೇಶದಲ್ಲಿ ಕುಂತಳದ ಕೀರ್ತಿ ಪೆರ್ಮೆಯನ್ನು ಹೆಚ್ಚಿಸುವಂತೆ" ಶ್ರೀ ಕೀರ್ತಿ ಶ್ರೀ ಕಾಂತೋ ಕಾಂತನಮಳ ಚಾರು ಚರಿತಂ, ಶ್ರೀ ಕಾಂತೋ ಕಾಂತ ಜಯ ಶ್ರೀ ಕಾಂತೋ ಕಾಂತನ್ ಆಳ್ವನ್ ಉದಾಯಾದಿತ್ಯನ್" ಅಲ್ಲಿ (ಸೊಕ್ಕೆಯಾ ಮರ) ಪೂತ ಪೊಸ ಮಲ್ಲಿಗೆ ಕಬ್ಬಿನ ತೋಂಟ ಪೋರಕಂಗಳಿಂದ ಶೋಭಿಸುವ ಜೋತು ಬಿದ್ದ ರಸಮಾದುಫಲಂಗಳು ಬಹುತ್ತರವಾಗಿ ಬೆಳೆದು ನಿಂತ ತೆಂಗು ಕೌಂಗು – ಹೀಗೆ ಚಲುವ ನಾಡು ಧರಿತ್ರಿಗೆ ಸೊಕ್ಕೆಯಾ ಪುರಂ ರಂಜಿಸಿತು. ಅಲ್ಲಿಯ ಜನರು ಚದುರರು. ಸುಭಟರು, ವಿಶಿಷ್ಟ ಸಂಪದ ಪಡೆದು ನಿಂತ ವಿಪ್ರಕುಲಜರು, ವಣಿಜಿಗರು, ವೈಶ್ಯರು – ಎಲ್ಲರಿಂದಲೂ ಚೆಲ್ವನಾದದು, ಸೊಕ್ಕೆಯಾಪುರಂ, ಸಂಪದದ ಮೊಡಗಳಿಂದ ತರುಣಿ ಜನ ಸಂದೋಹದಿಂದ ಸೊಕ್ಕೆಯಾಪುರವು ರಂಜಿಸಿತಂತೆ. ಶಾಸನದಲ್ಲಿ ವರ್ಷವಾಗಲಿ ನಾಳ್ಗಭುವಿನ ಹೆಸರಾಗಲಿ ಎಲ್ಲೂ ಉಲ್ಲೇಖಿಸಿಲ್ಲ, ಪುರದ ವರ್ಣನೆ ಹಾಗೂ ಭಾಷಾ ಶೈಲಿಯ ದೃಷ್ಟಿಯಿಂದ ತರೀಕೆರೆಯ ಶಾಸನಗಳ ಪೈಕಿ ಇದೊಂದು ಅಪೂರ್ವ ಶಾಸನವೇ ಸರಿ! ಈ ಶಾಸನವನ್ನು ರಚಿಸಿದವನು ಓರ್ವ ಶ್ರೇಷ್ಠ ಕವಿಯಾಗಿರಬೇಕು!

ಇಲ್ಲಿಯವರೆವಿಗೂ ಚಿಕ್ಕಮಗಳೂರು ಜಿಲ್ಲೆಯ ಉಪಲಬ್ದ ಶಾಸಗಳಲ್ಲಿ ಶೃಂಗೇರಿಯ ಕಿಗ್ಗ ಶಾಸನವೇ ಅತಿ ಪ್ರಾಚೀನವೆಂದು ಚಿಕ್ಕ ಮಗಳೂರು ಜಿಲ್ಲಾ ದರ್ಶನ ಎಂಬ ಕೃತಿಯಿಂದ ವ್ಯಕ್ತವಾಗಿತ್ತು. ಆದರೆ ಈಗ ನನಗೆ ದೊರೆತ ಶಾಸನಗಳ ಪೈಕಿ ತರೀಕೆರೆಯ ನಾಗಮಂಗಲ ಶಾಸನವೇ ಅತಿ ಪ್ರಾಚೀನವೆಂದು ಲಿಪಿಯ ಸಾದೃಶ್ಯದಿಂದ ತಿಳಿದು ಬರುತ್ತದೆ.

ತರೀಕೆರೆ 5 ಕಿ.ಮೀ. ದೂರದಲ್ಲಿ ಇಟ್ಟಿಗೆ ಎಂಬ ಸಣ್ಣ ಊರು. ಅಲ್ಲಿ ಕಳೆದ ವರ್ಷ 1 ಶಾಸನ ಹಾಗೂ 4 ವೀರಗಲ್ಲುಗಳು ಒಂದೇ ಸ್ಥಳದಲ್ಲಿ ದೊರೆತವು. ಅಲ್ಲಿಯವರೆವಿಗೂ ಅವು ಭೂಗತವಾಗಿದ್ದವು. ವೀರಗಲ್ಲುಗಳಲ್ಲಿ ಶ್ರೇಷ್ಠವಾದುದು ಬಸವೇಗೌಡನೆಂಬುವನ ವೀರಗಲ್ಲು. ಅಲ್ಲಿಯ ಅಕ್ಷರಗಳು ದುಂಡಾಗಿವೆ. ಯಾವುದೇ ಅಕ್ಷರಗಳು ತೃಟಿತವಾಗಿಲ್ಲ. ಸುಲಭವಾಗಿ ಓದಬಹುದು. ವೀರಗಲ್ಲು 3 ಪಟ್ಟಿಕೆಗಳಿಂದ ಕೂಡಿದ್ದು 4' ಉದ್ದ 3' ಅಗಲವಿದ್ದು ಕೆಂಪುಗಲ್ಲಿನ ಮೃದು ಕಲ್ಲಾಗಿದೆ. ಶಾಸನದಲ್ಲಿ ಒಟ್ಟು 18 ಸಾಲುಗಳಿವೆ.

ಶಕ ವರ್ಷ 1094 ರಲ್ಲಿ ಇಟ್ಟಿಗೆಯ ಬಸವನಗೌಡನೆಂಬ ವೀರನೊಬ್ಬನು ಊರಳಿವಿನ ಪ್ರಸಂಗದಲ್ಲಿ ಸ್ವಾಮಿ ಕಾರ್ಯಕ್ಕಾಗಿ ( ಯಾವ ಸ್ವಾಮಿ ಎಂದು ಲಿಖಿತವಾಗಿಲ್ಲ) ಶತ್ರುಗಳೊಂದಿಗೆ ಹೋರಾಡಿ ಅವರನ್ನಿರಿದು ತಾನು ಸುರಲೋಕ ಪ್ರಾಪ್ತನಾಗುತ್ತಾನೆ. ಅವನ ಶ್ರೇಯಾರ್ಥವಾಗಿ ಬೀರಗೌಡ ಮತ್ತು ಬಲ್ಲಯನೆಂಬುವರು ಅಲ್ಲಿಯ ಜೋತಿಷ್ಯದ ದೇವಂಣನೆಂಬುವವನಿಗೆ ಹೊಲ ಗದ್ದೆಯನ್ನು ಧಾರಾಪೂರ್ವಕವಾಗಿ ದತ್ತಿ ನೀಡುತ್ತಾರೆ. ಇಟ್ಟಿಗೆಯ ಬಸವನಗೌಡನೆಂಬ ವೀರನೊಬ್ಬನ ಹೆಸರು ಕರ್ನಾಟಕ ವೀರಗಲ್ಲುಗಳ ಸಾಲಿನಲ್ಲಿ ನೂತನವಾಗಿ ಸೇರ್ಪಡೆಯಾದಂತಾಗಿದೆ. ಶಾಸನದಲ್ಲಿ ಉಕ್ತವಾಗಿರುವ 'ಊರಳಿವು', 'ನೀರೂಳಗೋಡು', 'ಪೆಣ್ಣುಡೆಯುರ್ಚುವುರು' 'ಪುತ್ತನೇರುವುದು', 'ಶಿವಲಿಂಗವ ಅಪ್ಪುವುದು' – ಇವು ಶತ್ರುಗಳು ಶರಣಾಗತರಾಗುವ ಸಂಕೇತಗಳು. ಇಂಥ ಪದಗಳನ್ನು ಪ್ರಾಚೀನ ಗ್ರಂಥಗಳಲ್ಲೂ ಕಾಣಬಹುದು. (ಹೀಗೆಂದು ಡಾ॥ ಎಂ. ಚಿದಾನಂದ ಮೂರ್ತಿಯವರು ಅಭಿಪ್ರಾಯ ಪಡು

ಸ್ತಾರೆ. ನೋಡಿ ರನ್ನನ 'ಗದಾಯುದ್ಧ' 2ನೇಯ ಆಶ್ವಾಸ 24ನೆಯ ಪದ್ಯ)

ಕನ್ನಡ ನಾಡಿನ ವೀರರ ಶೌರ್ಯ ಪರಾಕ್ರಮಗಳು ಇಂಥ ವೀರಗಲ್ಲುಗಳಲ್ಲೆ ಅಭಿವ್ಯಕ್ತ ಗೊಂಡಿರುವುದು ಶ್ಲಾಘನೀಯ; ವೀರನೊಬ್ಬ ಯುದ್ಧದಲ್ಲಿ ಸತ್ತರೆ ಅವನ ಹೆಸರು ಚಿರಸ್ಥಾಯಿ; ಭೂಲೋಕದಲ್ಲಿ ಮಾತ್ರವಲ್ಲ, ಪರಲೋಕದಲ್ಲಿ ಕೂಡ ಒಂದು ವೇಳೆ ಯುದ್ಧದಿಂದ ಬದುಕಿ ಬಂದರೆ ಅವನಿಗ ರಾಜ ಮಾನ್ಯ. ಇದು ಅಂದಿನ ವೀರರ ಜೀವನ ಮೌಲ್ಯವಾಗಿತ್ತು.

ಈ ಶಾಸನದಲ್ಲಿ ಇಟ್ಟಿಗೆ ಎಂಬ ಸ್ಥಳನಾಮ ಗೋಚರವಾಗುತ್ತದೆ. 'ಇಟ್ಟಿಗೆ', 'ಇಟ್ಟಗಿ', 'ಇಟ್ಟಗೆ' – ಈ ಮೊದಲಾದ ಗ್ರಾಮನಾಮಗಳು ಬಳ್ಳಾರಿ, ರಾಯಚೂರು, ಧಾರವಾಡ ಜಿಲ್ಲೆಗಳಲ್ಲಿ ದೊರೆತ ಶಾಸನಗಳಿಂದ ತಿಳಿದುಬಂದಿದೆ. ಈ ಮೂರು ಹೆಸರುಗಳು ಬೇರೆ ಬೇರೆ ಜಿಲ್ಲೆಗಳಲ್ಲಿ ದೊರೆತ ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಹಾಗಾದರೆ ಅವುಗಳಲ್ಲಿ ಯಾವುದು ಸರಿ? ವಿದ್ವಾಂಸರು ಯೋಚಿಸಬೇಕು. ಅಂತೆ ಬಸವ। ಬಸವೇಗೌಡ। ಬಸವದಂಡೇಶ। ಬಸವ ತ್ರಿನೇತ್ರ – ಈ ಮೊದಲಾದ ವ್ಯಕ್ತಿ ಸೂಚಿನಾಮಗಳು ಅತಿ ಪ್ರಾಚೀನವಾದವುಗಳೆಂದು ಈ ಶಾಸನದ ಮೂಲಕ ತಿಳಿದುಬರುತ್ತದೆ. ಅಲ್ಲದೆ ಅದೇತಾನೆ ಕಲ್ಯಾಣದಲ್ಲಿ ಕ್ರಾಂತಿಯಾಗುತ್ತಿದ್ದುದು, ಅದರ ಪ್ರಭಾವದಿಂದ ಸಮಕಾಲೀನ ಶಿವಶರಣರ ಹೆಸರುಗಳನ್ನು ಇಂಥ ವೀರಗಲ್ಲಿಗಳಲ್ಲಿ ಕಾಣಬರುತ್ತಿರುವುದು ಒಂದು ವೈಶಿಷ್ಟ್ಯ. ಕಲ್ಯಾಣದ ಕ್ರಾಂತಿಯ ಕಿಡಿ ಇಲ್ಲಿಗೂ ವ್ಯಾಪಿಸಿ, ಸುತ್ತಮುತ್ತಲಿನ ಪ್ರದೇಶಗಳ ಮೇಲೂ ಕಾರಿರುವುದು ಇಂಥ ವೀರಗಲ್ಲುಗಳೇ ಸಾಕ್ಷಿ ಎಂಬಂತೆ ಅನುಮಾನಕ್ಕೆ ಅಸ್ಪದವಿತ್ತಿದೆ.

ತರೀಕೆರೆಗೆ ಪೂರ್ವ ದಿಕ್ಕಿನಲ್ಲಿ ಸುಮಾರು 20 ಕಿ.ಮಿ. ದೂರದಲ್ಲಿ ಕುಡ್ಲೂರು ಎಂಬುದೊಂದು ಗ್ರಾಮ ಅದರ ಪೂರ್ವ ದಿಕ್ಕಿನಲ್ಲಿ ಅನತಿ ದೂರದಲ್ಲಿಯೇ ಸಿದ್ದೇಶ್ವರ ದೇವಾಲಯ. ಆ ದೇವಾಲಯದ ಆವರಣದಲ್ಲಿ 40" ಉದ್ದ 9" ಅಗಲದ ಕಂಭ ಶಾಸನವೊಂದು ದೊರೆತಿದೆ. ಲಿಪಿ ಪೂರ್ಣ ಹೋಗಿದ್ದು ಅಲ್ಲೊಂದು ಇಲ್ಲೊಂದು ಪ್ರಾಚೀನ ಭಾಷೆಯ ಲಿಪಿ ಕಾಣಬರುತ್ತದೆ. ಶಾಸನವು ಕಪ್ಪುಗಲ್ಲಿನದು. ಮೇಲ್ಭಾಗವು ಅಷ್ಟ–ಕೃತಿಯಲ್ಲಿದ್ದು ಕಮಲದ ದಳಗಳಿಂದ ಚಿತ್ರವನ್ನು ಬಿಡಿಸಲಾಗಿದೆ. ಶಾಸನ ಪೂರ್ಣ ಹಾಳಾಗಿದೆ. ಅಲ್ಲಲ್ಲಿ ಉಳಿದ ಅಕ್ಷರಗಳನ್ನು ಗಮನಿಸಿದರೆ ಪ್ರಾಯಶಃ ಅದು ಕಲ್ಯಾಣಿ ಚಾಲುಕ್ಯರ ಕಾಲದ್ದಾಗಿರಬೇಕು ಎನಿಸುತ್ತದೆ. ಅದೇ ಸ್ಥಳದಲ್ಲಿ ಬರಹವಿಲ್ಲದ ಒಂದು ಸಣ್ಣ ವೀರಗಲ್ಲು ದೊರೆತಿದೆ. ಅದು ಕೇವಲ 20" ಉದ್ದ 81/2" ಅಗಲವಿದ್ದು ಅಪೂರ್ವವಾದದ್ದು. ಚಿಕ್ಕಸೈಜಿನ ಈ ವೀರಗಲ್ಲಿನಲ್ಲಿ ಎರಡು ಪಟ್ಟಿಕೆಗಳ ರಚನೆ ಇದೆ. ಒಂದನೆಯ ಪಟ್ಟಿಕೆಯಲ್ಲಿ ಈರ್ವರು ಯೋಧರು ಹೋರಾಡುವ ಚಿತ್ರವಿದ್ದರೆ ಎರಡನೆಯ ಪಟ್ಟಿಕೆಯಲ್ಲಿ ವೀರಸ್ವರ್ಗದ ಚಿತ್ರಣವಿದೆ.

ಅಜ್ಜಂಪುರದಲ್ಲಿ ದೊರೆತ 5 ತಾಮ್ರ ಶಾಸನಗಳಲ್ಲಿ ಒಂದು ಶಾಸನ ಎರಡನೆಯ ಬಲ್ಲಾಳನ ಕಾಲದ್ದು(?) ಮುಮ್ಮಡಿ ದಳವಾಯಿ ರಂಗರಾವುತನೆಂಬ ವೀರನೊಬ್ಬ ಬಾರಕೂರ ಯುದ್ಧವೊಂದರಲ್ಲಿ ಗೆದ್ದುಬಂದುದರ ನಿಮಿತ್ತ ಅವನ ಪರಾಕ್ರಮಕ್ಕೆ ಮೆಚ್ಚಿ ಬಲ್ಲಾಳನು ಅವನ ಇಚ್ಛೆಯಂತೆ ಒಂದು ರಂಗನಾಥ ದೇವಾಲಯವನ್ನು ಗುಡ್ಡದಳ್ಳಿ ಸಮಿಪ ಬೆಟ್ಟದ ಮೇಲೆ ಕಟ್ಟಿಸಿ ಕೊಟ್ಟು ಅದಕ್ಕೆ ಉಂಬಳಿಯಾಗಿ ನಾಲ್ಕು ಹಳ್ಳಿಗಳನ್ನು ಕೊಟ್ಟಿರುತ್ತಾನೆ. ಆ ಹಳ್ಳಿಗಳಾದ (1) ಗುಡ್ಡದಹಳ್ಳಿ (2) ಹುಲಿಹಳ್ಳಿ (3) ಹೆಗಡಿ ಹಳ್ಳಿ (4) ಭೂತನ ಹಳ್ಳಿ, ಅವು ಈಗಲೂ ಅಸ್ತಿತ್ವದಲ್ಲಿದ್ದು ಹಿಂದೆ "ಅಸಂದಿ - 500" ನಾಡಗೆ ಒಳಪಟ್ಟಿದ್ದವು! ಆಸಂದಿ ಗುಡ್ಡದಹಳ್ಳಿಯ ಸಮಿಪದಲ್ಲಿಯೇ ಇದೆ. ಬೆಟ್ಟದ ಮೇಲಿನ ರಂಗನಾಥಸ್ವಾಮಿಯ ದೇವಾಲಯವು ಈಗಲೂ ಇದೆ. ಆ ದೇವಾಲಯಕ್ಕೆ ಹಗಲು ದೀವಟಿಕೆ, ಮಕರತೋರಣ, ಶ್ವೇತಛತ್ರಿಗಳನ್ನು ದಾನವಾಗಿ ಕೊಟ್ಟಿರುವ ಸಂಗತಿಯನ್ನು ಶಾಸನ ಉಲ್ಲೇಖಿಸಿದೆ. ಶಾಸನ ಪಂಚಲೋಹದಿಂದ ಕೂಡಿದ್ದು ಮೂರು ಚಿಕ್ಕ ಫಲಕಗಳ ಮೇಲೆ ಅಕ್ಷರಗಳನ್ನು ಕೊರೆಯಲಾಗಿದೆ. ಶಾಸನ ಮಡಚಿ ಸಂಗ್ರಹಿಸಿಕೊಳ್ಳುವ ಒಂದು ಚಿಕ್ಕ ಪುಸ್ತಕದಂತಿದೆ. ಫಲಕಗಳು ಮುಂಭಾಗದ ಅಕ್ಷರಗಳು ದುಂಡಾಗಿದ್ದು ಹಿಂಭಾಗದಕ್ಷರಗಳು ಅಷ್ಟು ದುಂಡಾಗಿಲ್ಲ.

ಮೊದಲು ಎರಡು ಫಲಕಗಳ ಮೇಲೆ ಹೊಯ್ಸಳ ದೊರೆ ವಿಷ್ಣುವರ್ಧನನ ಪರಾಕ್ರಮದ ವರ್ಣನೆಯಿದ್ದು ಅವನನ್ನು ಪ್ರಸಂಶಿಸುವ ವಿಶೇಷ ಪದಗಳಿವೆ. ಶಾಸನ ಎರಡನೆಯ ಬಲ್ಲಾಳನ ಕಾಲದ ಶಾಸನವಾದರೂ ಅವನ ಪರಾಕ್ರಮದ ವರ್ಣನೆಗಳಾಗಲೀ ಇಲ್ಲವೇ ಅವನ ಬಗ್ಗೆ ತಿಳಿಯಪಡಿಸುವ ಯಾವುದೇ ಬಿರುದುಗಳಾಗಲೀ ಕಾಣದೇ ಇರುವುದು ಸೋಜಿಗ. ಶಾಸನದ

ಕೊನೆಯಲ್ಲಿ ಮಾತ್ರ "ದಾನಮಾನ್ಯ ಬಲ್ಲಾಳ ದೇವರು ಶ್ರೀ" ಎಂದು ಉಕ್ತವಾಗಿದೆ.

ಶಾಸನದಲ್ಲಿ ಹೇಳಿರುವ ಗಂಟೆಸರ್ಪಣಿ, ವಂಟಿ ಜಂಘೆ, ನೆಲ್ಲುಹುಲ್ಲುಬಾರಿ, ಎಂಬ ಪದಗಳು ಕುರುಬರ ದೇವರಿಗೆ ಸಂಬಂಧಿಸಿದ ಪದಗಳು. ಕುರುಬ ಜನಾಂಗದ ದೇವರ ಪೂಜಾರಿಗೆ ಸ್ವಾಮಿ ಎನ್ನುತ್ತಾರೆ. ಉತ್ಸವದಲ್ಲಿ ಈ ಸ್ವಾಮಿ ಧರಿಸುವ ವಸ್ತುಗಳು ಇವು. ಇಂಥ ಶಬ್ದಗಳ ಮಾಹಿತಿ ನಮಗೆ ಹೆಚ್ಚಾಗಿ ಎಲ್ಲೂ ಪ್ರತ್ಯೇಕವಾಗಿ ದೊರೆಯುವುದಿಲ್ಲ. ಅಂತೆ ಶಾಸನದಲ್ಲಿ ಬರುವ ವಜಿರು ನಿಕಷ ಲಡಾಯಿ ನಿಶಾನು ಹುಕುಂ – ಎಂಬ ಪದಗಳು ಬಲ್ಲಾಳನ ಕಾಲದಲ್ಲಿ ಬಳಕೆಯಲ್ಲಿದ್ದವೇ ಎಂಬ ಪ್ರಶ್ನೆ ತಲೆ ಎತ್ತುತ್ತದೆ. ಆದರೆ ಆಗಲೇ ಮಲ್ಲಿಕಾಫರನ ಪ್ರವೇಶವಾದುದರಿಂದ ಈ ಪದಗಳು ಜಾರಿಯಲ್ಲಿರಬೇಕು. ಏನೇ ಆದರೂ ಶಾಸನದ ವಸ್ತು ವಾಸ್ತವವಾಗಿ ಕಂಡು ಬಂದರೂ ಲಿಪಿಯ ಸಾದೃಶ್ಯದಿಂದ ಇದೊಂದು ಕೂಟ ಶಾಸನವೇನೋ ಎನಿಸುತ್ತದೆ (?) ಈ ಶಾಸನವು ದಳವಾಯಿಗಳ ಮೇಲೆ ಬೆಳಕು ಚೆಲ್ಲುತ್ತದೆ. ಹಂಡೆ ಕುರುಬರು ಹಾಗೂ ವಜೀರ ಎಂಬ ಶಬ್ದಗಳು ವಿಜಯ ನಗರದ ಕಾಲದವು ಎಂಬ ಮಾತು ಕೇಳಿಬರುತ್ತದೆ. (ನೋಡಿ ಡಾ॥ ಚೆನ್ನಕ್ಕ ಎಲಿಗಾರ. "ಶೋಧನ ವ್ಯಾಸಂಗ" ಸೆಪ್ಟೆಂಬರ್-ಡಿಸೆಂಬರ್ 1990) ಆದರೆ ಉಪಲಬ್ಧವಾದ ಈ ಶಾಸನದಿಂದ ದಳವಾಯಿಗಳೂ ಹಂಡೆಯವರು, ವಜೀರ ಎಂಬ ಬಿರುದುಗಳು ಪ್ರಾಚೀನವಾದವುಗಳೆಂದೇ ತಿಳಿಯಬಹುದು; ಈ ಶಾಸನ ನೈಜವಾದರೆ ದೊರೆತ ಶಾಸನಗಳಲ್ಲಿ ಪವಾಡ ಪುರುಷನಿಗೆ ಸಂಬಂಧಿಸಿದ ಒಂದು ಶಾಸನವಿದೆ. ಆ ಸಂಧಿಯ ಪರದೇಶಿ ಸಿದ್ಧ ಶಿವಯ್ಯನೆಂಬುವನು ಬಿಕ್ಷಾಟನೆಯ ಸಂದರ್ಭದಲ್ಲಿ ವಿಜಯ ನಗರದ ರಾಜನನ್ನು (ಶ್ರೀ ಕೃಷ್ಣರಾಯಯ್ಯನವರು) ನಿಂಧಿಸಿದಾಗ ರಾಜನು ಅವನ್ನು ಕಾದ ಎಣ್ಣೆಯಲ್ಲಿ ಹಾಕಿದರೂ; ಸುಡುವ ಸುಣ್ಣದಲ್ಲಿ ಬೇಯಿಸಿದರೂ ಅವನು ಸಾಯದೆ ಹೋಗುತ್ತಾನೆ. ಅದಕ್ಕೆ ರಾಜನು ಅವನನ್ನು ಪವಾಡ ಪುರುಷನೆಂದು ಬಗೆದು ಮೆಚ್ಚಿ ಆಸಂಧಿ ಗ್ರಾಮದಲ್ಲಿ ಸ್ಥಿರಪಟ್ಟ ಚಿರಪಟ್ಟ ಕಟ್ಟಿ ದಾನ ಮಾನ್ಯವಾಗಿ ಛತ್ರಚಾಮರ, ಹಗಲು ದೀವಿಟಿಗೆ ಮಕರ ತೋರಣ ಹನುಮಧ್ವಜದ ಲಾಂಛನಗಳನ್ನು ನೀಡುತ್ತಾನೆ. ಅಲ್ಲದೆ ಸಂತೆಯ ಅಂಗಡಿಯಲ್ಲಿ ಒಂದೊಂದು ದುಡ್ಡು ವಸೂಲಿ ಮಾಡಿ ಕೊಡಿಸುವಂತೆ ಆಜ್ಞೆ ಇತ್ತುತಾನೆ. ಒಂದು ಗ್ರಾಮವನ್ನು ಉಂಬಳಿಯಾಗಿ ನೀಡುತ್ತಾನೆ ಶೂರ ಹೀಗೆ ಪವಾಡ ಪುರುಷನ ಬಗ್ಗೆ ಕನ್ನಡದಲ್ಲಿ ತಾಮ್ರ ಶಾಸನಗಳಿರುವುದು ಕಡಿಮೆ ಎಂದೇ ನನ್ನ ಗ್ರಹಿಕೆ. ಇಂಥ ಪವಾಡ ಪುರುಷನ ಪ್ರಸ್ತುತ ತಾಮ್ರ ಶಾಸನದಲ್ಲಿ ಬರುವುದು ವಿಶಿಷ್ಟವಾಗಿದೆ. ವಸ್ತುವಿನ ದೃಷ್ಟಿಯಿಂದ ಇದೊಂದು ಮುಖ್ಯ ಶಾಸನವಾಗಿದೆ.

ಿ. ಗಣಪಯ್ಯ ಭಟ್.

# ತುಳುನಾಡಿನ ಶಾಸನಗಳಲ್ಲಿ ಗದ್ದೆಗಳ ಹೆಸರು – ಒಂದು ವಿಶ್ಲೇಷಣೆ

ಪ್ರಾಚೀನ ತುಳುನಾಡಿನ ಆರ್ಥಿಕ ವ್ಯವಸ್ಥೆಯಲ್ಲಿ ೇಸಾಯವು ಒಂದು ಪ್ರಧಾನ ಪಾತ್ರವಹಿಸಿತ್ತೆಂಬ ಚಾರ ಇಲ್ಲಿನ ಹಲವಾರು ಶಾಸನಗಳ ಅಧ್ಯಯನ ಂದ ಸ್ಪಷ್ಟವಾಗುತ್ತದೆ. ಈ ಪ್ರದೇಶದ ಶಾಸನಗಳು ೃಷಿ, ಬೇಸಾಯ, ಬೆಳೆಗಳ ಕುರಿತೂ ವಿವರವಾದ ಾಹಿತಿಯನ್ನೀಯುತ್ತವೆ. ಈ ಶಾಸನಗಳಲ್ಲಿ ಕಂಡು ರುವ ಗದ್ದೆಗಳ ಹೆಸರುಗಳು ಅಧ್ಯಯನ ಯೋಗ್ಯ ುಳುನಾಡಿನಲ್ಲಿ ಭತ್ತ ಪ್ರಮುಖ ಬೆಳೆ, ಭೌಗೋಳಿಕ ಾಗಿ ಕರ್ನಾಟಕದ ಮೈದಾನು ಪ್ರದೇಶಕ್ಕೂ ತುಳುನಾ ಗೂ ಬಹಳವಾದ ವ್ಯತ್ಯಾಸವಿದೆ. ಇಲ್ಲಿನ ಭೂಸ್ವ ೂಪ ಗುಡ್ಡ ಬೆಟ್ಟಗಳಿಂದ ಕೂಡಿದ್ದು ಏರುತಗ್ಗಾಗಿದೆ. ದ್ದರಿಂದ ಈ ಪ್ರದೇಶದಲ್ಲಿ ವಿಶಾಲವಾದ ಹೊಲಗ ನ್ನು ಮಾಡುವಂತಿಲ್ಲ. ಇದರಿಂದಾಗಿ ಇಲ್ಲಿ ಒಂದ ೀಮಿತವಾದ ಪ್ರದೇಶದಲ್ಲಿ ಹಲವಾರು ಗದ್ದೆಗಳಿರುವು ನ್ನು ಕಾಣುತ್ತೇವೆ. ಈ ರೀತಿಯ ನೂರಾರು ಚಿಕ್ಕ ುಟ್ಟ ಗದ್ದೆಗಳಿದ್ದಾಗ ಅವುಗಳನ್ನು ಪ್ರತ್ಯೇಕವಾಗಿ ುರುತಿಸಲು ಅವುಗಳಿಗೆ ಬೇರೆ ಬೇರೆ ಹೆಸರುಗಳನ್ನು ೂಡ ಬೇಕಾಗುವುದು ಅನಿವಾರ್ಯ. ತುಳುನಾಡಿನ ಾಸನಗಳಲ್ಲಿ ಇಂತಹ ನೂರಾರು ಗದ್ದೆಗಳ ಹೆಸರುಗಳ ುಲ್ಲೇಖಗಳಿವೆ.

ತುಳುನಾಡಿನ ಶಾಸನಗಳಲ್ಲಿ ಬೇಸಾಯದ ೂಮಿಯನ್ನು ಮುಖ್ಯವಾಗಿ ಬಾಳು, ಬಾಳಿಕೆ, ೊಲ, ಗದ್ದೆ, ತಿಮರು ಹಾಗೂ ಕಂಡ ಎಂಬ ಹೆಸ ುಗಳಿಂದ ಗುರುತಿಸುವುದನ್ನು ಕಾಣುತ್ತೇವೆ. ಬಾಳು, ಾಳಿಕೆ ಎಂಬುದು ಜೀವನ, ಜೀವನಾಧಾರ ಎಂಬ ಶಾಲಾರ್ಥದಲ್ಲಿ ಬಳಸಲ್ಪಟ್ಟಿರಬೇಕು. ಬಾಳು, ಹೊಲ ವು ಬೇಸಾಯ ಭೂಮಿಯನ್ನು ಗುರುತಿಸುವ ಾಮಾನ್ಯ ಪದಗಳಾಗಿ ಬಳಸಲ್ಪಟ್ಟದ್ದರೆ ಗದ್ದೆ, ಕಂಡ ುತ್ತು ತಿಮರು ಪದಗಳು ಗದ್ದೆಗಳ ಹೆಸರುಗಳೊಂದಿಗೆ ೂಡಿಕೊಂಡರುವುದನ್ನು ಶಾಸನಗಳಲ್ಲಿ ಕಾಣಬಹುದು. ುಳುನಾಡಿನ ಶಾಸನಗಳಲ್ಲಿ ಈ ಪದಗಳ ಹರಹನ್ನು ಮನಿಸಿದಾಗ ಕುಂದಾಪುರ ಮತ್ತು ಉಡುಪಿತಾಲೂಕಿನ ುತ್ತರ ಭಾಗದ ಶಾಸನಗಳಲ್ಲಿ ಬಾಳು ಮತ್ತು ಗದ್ದೆ ಂಬ ಪದಗಳಷ್ಟೆ ಬಳಸಲ್ಪಟ್ಟಿದ್ದರೆ ಉಡುಪಿ ತಾಲೂಕಿನ ದಕ್ಷಿಣ ಭಾಗ, ಮಂಗಳೂರು ಮತ್ತು ಕಾರ್ಕಳ ತಾಲೂಕಿನ ಶಾಸನಗಳಲ್ಲಿ 'ಗದ್ದೆ'ಯ ಜೊತೆಯಲ್ಲಿ ಕಂಡ, ತಿಮರು ಎಂಬ ಪದಗಳೂ ಬಳಸಲ್ಪಟ್ಟಿರುವುದನ್ನು ನೋಡಬಹುದು. ತಿಮರು ಮತ್ತು ಕಂಡ ಇವು ತುಳು ಭಾಷೆಯ ಪದಗಳು ಎಂಬುದು ಗಮನಾರ್ಹ.

ಗದ್ದೆ, ತಿಮರು, ಕಂಡ ಎಂಬ ಪದಗಳು ಏಕಾ ರ್ಥವನ್ನು ಹೊಂದಿವೆಯೆ ಅಥವಾ ಅವುಗಳ ನಡುವೆ ಅರ್ಥ ವ್ಯತ್ಯಾಸವಿದೆಯೇ ಎಂಬುದನ್ನ ರಿಯುವುದು ಕಷ್ಟ. ಕೆಲವು ಶಾಸನಗಳಲ್ಲಿ ಬೇಸಾಯದ ಭೂಮಿ ಯನ್ನು ಗುರುತಿಸಲು ಗದ್ದೆ ಮತ್ತು ಕಂಡ, ಹಾಗೂ ಗದ್ದೆ ಮತ್ತು ತಿಮರು ಎಂಬ ಪದಗಳು ಜೊತೆಯಾ ಗಿಯೇ ಬಳಸಲ್ಪಟ್ಟಿರುವುದನ್ನು ಕಾಣುತ್ತೇವೆ. ಮೂಡು ಬಿದರೆಯ ಒಂದು ತಾಮ್ರ ಶಾಸನದಲ್ಲಿ ಬೇಸಾಯ ಭೂಮಿಗಳ ವಿವರಗಳನ್ನೀಯುತ್ತ ಗದ್ದೆ 5, ಕಂಢ 14 ಪಡುಪು 2 ಎಂಬ ಉಲ್ಲೇಖ ಕಂಡುಬರುತ್ತದೆ. ಪ್ರಾಯಶಃ ಗದ್ದೆ ಎಂಬುದು ಕಂಡ ಎಂಬುದಕ್ಕಿಂತ ವಿಸ್ತಾರದಲ್ಲಿ ಸ್ವಲ್ಪ ದೊಡ್ಡದಾದ ಹೊಲ ಎಂದು ತಿರ್ಮಾನಿಸಬಹುದೇನೋ.

ತುಳುನಾಡಿನ ಶಾಸನಗಳಲ್ಲಿ ಬೆಳೆಯ ಆಧಾರದಂತೆ ಗದ್ದೆಗಳನ್ನು ನಾಲ್ಕು ವಿಧಗಳನ್ನಾಗಿ ವಿಂಗಡಿಸಿರುವುದನ್ನು ಕಾಣುತ್ತೇವೆ. (1) ಬೆಟ್ಟು – ಒಣ ಭೂಮಿ, ಇದು ಹೆಚ್ಚಾಗಿ ಮಳೆಯ ನೀರನ್ನೇ ಆಶ್ರಯಿಸಿದ್ದು, ಒಂದು ಬೆಳೆಗೆ ಯೋಗ್ಯವಾದ ಭೂಮಿ. (2) ಮಜಲು – ಒಂದು ಬೆಳೆಯನ್ನು ಸರಾಗವಾಗಿ ಮತ್ತು ಸ್ವಲ್ಪ ಹೆಚ್ಚಿನ ಶ್ರಮದಿಂದ ಎರಡು ಬೆಳೆತೆಗೆಯಲು ಸಾಧ್ಯವಿರುವ ಭೂಮಿ (3) ಬಯಲು – ಎರಡು ಬೆಳೆಗಳು ಸರಾ ಗವಾಗಿ ಬೆಳೆಯಬಲ್ಲ ಬೇಸಾಯ ಭೂಮಿ (4) ಕೊಳಕೆ – ವಿಪುಲ ನೀರಾಶ್ರಯವಿದ್ದು ಮೂರು ಬೆಳೆ ಗಳನ್ನು ಕೊಡಬಲ್ಲ ಫಲವತ್ತಾದ ಭೂಮಿ ಇದು ಬಯಲಿನದೇ ಒಂದು ಭಾಗ.

ತುಳುನಾಡಿನ ಶಾಸನಗಳಲ್ಲಿ ಕಂಡುಬರುವ ನೂರಾರು ಗದ್ದೆಗಳ ಹೆಸರುಗಳನ್ನು ಪರಿಶೀಲಿಸಿದಾಗ ಈ ರೀತಿ ಹೆಸರಿಸುವಲ್ಲಿ ಪ್ರಾಚೀನ ತುಳುನಾಡಿನ

ಬೇಸಾಯಗಾರರು ಒಂದು ವಿಶಿಷ್ಟವಾದ ವಿಧಾನವನ್ನು ಅನುಸರಿಸಿರುವುದನ್ನು ಕಾಣಬಹುದು. ಶಾಸನಗಳಲ್ಲಿ ಕಂಡುಬರುವ ಗದ್ದೆಗಳ ಹೆಸರುಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು.

( 1) ಒಡೆತನವನ್ನು ಸೂಚಿಸುವ ಹೆಸರುಗಳು: ವೊಡೇರ ಗದ್ದೆ, ಸೆಟಿಯಗದ್ದೆ, ಬೊಂಮನ ಗದ್ದೆ, ದೇವಸ್ವದ ಗದ್ದೆ, ದೇವರ ಗದ್ದೆ, ಕುಂಬಾರ ಗದ್ದೆ, ಹಲರ ಗದ್ದೆ, ಭಂಡಾರಿ ಗದ್ದೆ, ನಾಗನ ಗದ್ದೆ, ಜೋಗಿಯ ಗದ್ದೆ, ಕಂಬಳಿಯ ಗದ್ದೆ , ನಂದನ ಬಾಳು, ಪರಿಆರ ಗದ್ದೆ, ಬಿನೂರ್ ತಿಮರು, ಮಾದ ನಗದ್ದೆ, ಮೂಲದಗದ್ದೆ, ಆಂಮಣಬಾಸು ಎಂಬ ಗದ್ದೆ, ಅರಮನೆ ಗದ್ದೆ.

( 2) ಜಾತಿ, ಸ್ಥಾನ, ವೃತ್ತಿ ಸೂಚಕನಾಮಗಳು: ಬೊಂಮನ ಗದ್ದೆ (ಬ್ರಾಹ್ಮಣ) ಸೆಟ್ಟಿಯಗದ್ದೆ, ಹೆಬ್ಬಾರ ಕಟ್ಟಿನ ಬಯಲು, ಕಂಬಳಿಯ ಗದ್ದೆ, ಭಂಡಾರಿ ಗದ್ದೆ, ಕುಂಬಾರ ಗದ್ದೆ, ಜೋಗಿಯ ಗದ್ದೆ.

( 3) ಬೇಸಾಯದ ಸ್ವರೂಪವನ್ನು ಸೂಚಿಸುವ ಹೆಸರುಗಳು: ಬೆಟ್ಟಿದ ಗದ್ದೆ (ಬೆಟ್ಟು), ಕೊಳಕೆತಿ ಮರು, ಬಯಲ ಗದ್ದೆ, ಮಜಲಗದ್ದೆ, ಬಾನಗದ್ದೆ (ಮಳೆನೀರನ್ನೇ ಆಶ್ರಯಸಿರುವ ಭೂಮಿ), ಕೊಳಂ ಬೆಯೆಂಬ ಗದ್ದೆ (ಕೆಸರು ಭೂಮಿ), ಕೊಗ್ಗಿಗದ್ದೆ (ಕೆಸ ರು), ಪಟಿಲಯೆಂಬ ಗದ್ದೆ (ಮಳೆಗಾಲದಲ್ಲಿ ನೀರು ತುಂಬಿಕೊಂಡಿರುವ ಹೊಲ), ಸಿಂಗಾರ ಗದ್ದೆ (ಅಂದ ವಾಗಿರುವ), ಹಿರಿಯ ಪಟಿಲಯೆಂಬ ಗದ್ದೆ.

( 4) ಭೂಸ್ವರೂಪವನ್ನು ಸೂಚಿಸುವ ಹೆಸರು ಗಳು: ಗುಳಿಯಗದ್ದೆ, ಕುಡುತಿಮರು (ಸಮತಟ್ಟ ಲ್ಲದೆ), ಕುದುರ ಕಂಡ (ಅಲ್ಲಲ್ಲಿ ಮಣ್ಣಿನ ದಿಬ್ಬಗಳ ಮೇಲಿರುವ ಪೊಲಗಳು), ಮಕ್ಕಿಯ ಗದ್ದೆ (ಕಣಿವೆಯ ಮೇಲ್ಭಾಗ ದಲ್ಲಿರುವ ಹೊಲ), ಬೋಳ ತಿಮರು (ಬೋಳಾಗಿ, ಮೈದಾನಿನಂತೆ), ಗುಡ್ಡೆಯ ಗದ್ದೆ, ಬುಡಂಬನೆಂಬ ಗದ್ದೆ (ತಗ್ಗು ಪ್ರದೇಶದಲ್ಲಿ), ಕೊಂಕ ನೆಂಬ ಗದ್ದೆ (ಎತ್ತರ ತಗ್ಗಾಗಿರುವ), ತಿಮರು ಕಜಿಲ ಗದ್ದೆ (ಹೆಚ್ಚು ತೇವಾಂಶವಿರುವ ಭೂಮಿ), ಗುಳಿಯನ ಗದ್ದೆ (ತಗ್ಗು ಪ್ರದೇಶ), ಪೊರಿಂಕೆಯೆಂಬ ಗದ್ದೆ (ಪೊರಿ ಉಳು ಮೆಗೆ ಅನುಕೂಲವಾಗುವಂತೆ ಮಾಡಲಾದ ಗದ್ದೆಯ ಒಂದು ವಿಭಾಗ), ನಳಿಯೆ ತಿಮರು (ನೇರ ವಾಗಿಲ್ಲದ), ಕುಂಡಿಲ ಗದ್ದೆ (ತಗ್ಗಾದ ಪ್ರದೇಶ), ಬಯಲ ಗುಂಡಿಯ ಗದ್ದೆ , ಅಡುಕ ತಿಮರು (ಅಡ್ಕ ಎತ್ತ ರದ ಪ್ರದೇಶ), ಕುದುರೆತ ಕಂಡ, ಕುದುರ ತಿಮರು.

( 5) ಮಣ್ಣಿನ ಲಕ್ಷಣವನ್ನು ಸೂಚಿಸುವ ಹೆಸರುಗಳು: ಮುರಂತುಮರು (ಮುರಗಡಸುನೆಲ), ಕಲ್ಲಗದ್ದೆ, ಹೊಯಿಗೆಯ ಗದ್ದೆ, ಪರಲೆಯೆಂಬ ಗದ್ದೆ (ಕಲ್ಲು ಹರಳುಗಳಿಂದ ಕೂಡಿದ) ಮೊರಬಿನ ಗದ್ದೆ (ಕಲ್ಲುತುಂಬಿದ ಬೆಟ್ಟ), ಹಗರು. ಗದ್ದೆ (ಗಡುಸಲ್ಲದ ಸಡಿಲವಾದ ಮಣ್ಣು), ತಿಮರು ಕಜಿಲ ಗದ್ದೆ (ಅಧಿಕ ತೇವಾಂಶದ ಭೂಮಿ) ಕಲ್ಲತಿಮುರು, ಪೊ ಉಗಿಯ ಗದ್ದೆ (ಹೊಯಿಗೆ)

( 6) ದಿಕ್ಕು/ಸ್ಥಾನವನ್ನು ಸೂಚಿಸುವ ಹೆಸರುಗಳು : ಬಾಗಿಲಗದ್ದೆ (ಮನೆ ಎದುರಿನ), ಜಾಲಗದ್ದೆ (ಅಂಗಳದಬಳಿ), ಮೇಲಣ ಗದ್ದೆ, ತೆಂಕಗದ್ದೆ (ದ ಕ್ಷಿಣ), ಮೂಡೆಲ್ಲವೆಂಬ ಗದ್ದೆ, (ಮೂಡುಪೂರ್ವ), ಹಡುವಲ ಗದ್ದೆ (ಪಡುಪಶ್ಚಿಮ), ಮುಂನೆಯ ಗದ್ದೆ (ಎದುರಿನ), ಕೋಡಿಯ ಗದ್ದೆ (ಕೊನೆಯಲ್ಲಿರುವ), ಪಿಂಚಿದ ಗದ್ದೆ, (ಕೊನೆಯ ಸಾಲಿನ), ಕೊನೆ ಬಾಗಿಲ ಗದ್ದೆ, ಮೆಟ್ಟುಕಲ್ಲಗದ್ದೆ, ನಡುವಿನಗದ್ದೆ, ಯಡೆಪುಣಿಗದ್ದೆ, (ಗದ್ದೆಯ ಗಡಿಯಲ್ಲಿರುವ ಇನ್ನೊಂದು ಗದ್ದೆ), ಕೆದುತಿ ಮರು (ಕೆರೆಯಬಳಿಯ ಗದ್ದೆ), ಕೋಟೆಯ ಗದ್ದೆ, ಕೆರೆಯಬಾ ಗಿಲ ಗದ್ದೆ, ತೋಟದ ಗದ್ದೆ, ಹಿತ್ತಿಲಗದ್ದೆ, ಕಟ್ಟಿನ ಗದ್ದೆ (ಚಿಕ್ಕ ಅಣೆಕಟ್ಟಿನ ಬಳಿ), ಪಳಿತಿಮರು (ಮಸೀದಿಯ ಬಳಿ), ಪಾರಿತಿಮರು (ಕೊನೆಯಲ್ಲಿ ರುವ), ಹಟಿಯ ಗದ್ದೆ, ಹೆಗೆರೆಯ ಗದ್ದೆ (ದೊಡ್ಡ ಕೆರೆಯಬಳಿಯ), ಸಾಲಗದ್ದೆ.

( 7) ಗಾತ್ರ/ಕಾಲವನ್ನು ಸೂಚಿಸುವ ಹೆಸರು ಗಳು: ಹಿರಿಯಗದ್ದೆ, ಹಿರಿಯ ಪಟಿಲಯೆಂಬಗದ್ದೆ, ಹೆದೆಗದ್ದೆ (ಹೆದ್ = ದೊಡ್ಡ), ಪೊಸಗದ್ದೆ, ಹೊಸ್ತಾ ಗಿಮೂಡಿದ ಕಂಬಳ ಗದ್ದೆ, ಆದಿಯಗದ್ದೆ, ಮೂಲದ ಗದ್ದೆ, ಪಿರಿಯ ತಿಮರು,. ಹೊಸ ಮಾಟದ ಗದ್ದೆ.

( 8) ಪಂದ್ಯ, ಆಟ ಸೂಚಕ ಹೆಸರುಗಳು: ಕಂಬಳಗದ್ದೆ, ಅಂಕಗದ್ದೆ, ಮಲ್ಲಗದ್ದೆ.

( 9) ಸಸ್ಯ, ಗಿಡ ಮರಗಳ ಸಾಮಿಪ್ಯವನ್ನು ಸೂಚಿಸುವ ಹೆಸರುಗಳು: ಈ ವಿಭಾಗಕ್ಕೆ ಸೇರುವ ಗದ್ದೆಗಳ ಹೆಸರುಗಳನ್ನು ಈ ಕೆಳಗಿನಂತೆ ಉಪ ವಿಭಾ ಗಗಳಾಗಿ ವಿಂಗಡಿಸಬಹುದು.

( i) ಮರಗಳು: ಹಲಸಿನಡಿಯ ಕಂಡ, ಹುಳಿಸೆ ದ್ದೆ, ಹಲಸಿನಗದ್ದೆ, ಪುಳೆಮರನೆಂಬ ಗದ್ದೆ, ಪುಳಿ ಮಾರು, ಮಾವಿನಗದ್ದೆ, ಅಂಬಟೆಕಂಡ, ನೆಲಿಗದ್ದೆ, ೋಳಿಯ ಗದ್ದೆ, ತಾಳಿತಡಿ ತಿಮರು, ತಾಳೆ ತಿಮರು, ಜ ತುಮರು, ಆಲಗದ್ದೆ, ಪಿಜತಿಮರು, ಕೇಸರಿಕನ ಯ ಗದ್ದೆ, ಅಣೆಲಿತ್ತಿಯ ಗದ್ದೆ, ತೆಂಗಿನ ಗದ್ದೆ, ರೊಂಗಾರ್ತಿಮರು, ತಾಡಿ ತಿಮರು, ಕಂಗಿತಿಮರು, ಾಳೆತಮೂರ್ಕಿಯೆಂಬ ಗದ್ದೆ, ಬಯಲ ಮಾವಿನ ಗದ್ದೆ, ಾಡತಿಮರು, ಹಂದೊಮಾವಿನ ಗದ್ದೆ.

(ii) ತೋಟದ ಬೆಳೆಗಳು: ಕದಲಿ ತೋಟ ಮರು, ತೆಂಗಿನಗದ್ದೆ, ಕಂಗಿತಿಮರು

(iii) ಪೊದರು, ಬಳ್ಳಿಗಳು ಇತ್ಯಾದಿ :

ಕುದುರೆತ ಕಂಡ (ಮೇವಿನಬಳ್ಳಿ), ಕುಕಿಯಗದ್ದೆ ಒಂದು ಜಾತಿಯಬಳ್ಳಿ), ಸಗರೆಯೆಂಬ ಬಾಗಿಲಗದ್ದೆ ಮುಳ್ಳುಕಂಟಿ), ಮಾಚಿಲತಿಮರು (ಮಾಚಿಸಾಮಾನ್ಯ ಳೆಗಿಡ), ಕಳಿಯ ಗದ್ದೆ (ಕಳೆಗಿಡಗಳಿರುವ), ಮುಂಡಿ ತಿಮರು, ಗೋರಿಗದ್ದೆ (ಚೌಳಿಕಾಯಿ), ಆಬ ೆಯ ಗದ್ದೆ (ಕೆನ್ನೈದಿಲೆ), ಪಂಗಾರಗದ್ದೆ (ಒಂದು ೀತಿಯ ಪದರು)

(iv) ಬೆಳೆಗಳನ್ನು ಸೂಚಿಸುವ ಹೆಸರುಗಳು: ರಿ ಹಿಮಾರು (ಅಕ್ಕಿ), ಕೆಯ್ತಿಮರು (ಭತ್ತ), ಉದ್ದಿ ಗದ್ದೆ, ಕುಡುತಿಮರು, ಬುಲಂಥನೆಂಬಗದ್ದೆ (ಬೆಳ್ತಿಗೆ ಅಕ್ಕಿ), ಹಾಲಗದ್ದೆ (ಬಿಳಿ ಅಕ್ಕಿ), ಕಬ್ಬಿನ ಗದ್ದೆ, ಉದ್ದುಗಳೆಂಬ ಗದ್ದೆ.

(10) ಸಂಖ್ಯಾ ಸೂಚಿ ಹೆಸರುಗಳು: ಇರು ವೈಲು, ವಿಳುಬಯಲು, ಒಂಭತ್ತುಮಾರು

(11) ಅರ್ಥ ಸ್ಪಷ್ಟವಾಗದ ಮತ್ತು ಇತರ ಹೆಸರುಗಳು: ಪುದುವಾಳು ತಿಮರು (ಪುದ್ವಾರ್ = ಕೊಯ್ಲಿನ ಹಬ್ಬ), ಮಾಯಿತಿಮರು (ತುಳುವಿನ 11ನೇ ತಿಂಗಳು), ಹುತ್ತಿನಗದ್ದೆ, ನಾಯರಗದ್ದೆ (ನಾಯರ್ = ನೇಗಿಲು), ನಾಯಿಗದ್ದೆ, ಮಾದಂಡ ತಿಮರು, ಪಾಪ ತ್ತೆಮರು, ಕತ್ತಿತೆಮರು, ವುಳ್ಳಿರಡಿ ಯೆಂಬ ಗದ್ದೆ. ಚಿಪ್ಪಿತಿಮರು, ಅಧಿಪಲಿಯೆಂಬ ಗದ್ದೆ, ತನ್ನಡೆಯಗದ್ದೆ, ಆಲುಡಿಯ ಗದ್ದೆ.

ಒಂದು ಪ್ರದೇಶದಲ್ಲಿರುವ ಹತ್ತಾರು ಗದ್ದೆಗಳನ್ನು ಬೇರೆ ಬೇರೆಯಾಗಿ ಗುರುತಿಸುವ ದೃಷ್ಟಿಯಿಂದ ಪ್ರಾಚೀನ ತುಳು ನಾಡಿನ ಬೇಸಾಯಗಾರರು ಅವುಗಳಿಗೆ ವಿವಿಧ ರೀತಿಯ ಹೆಸರುಗಳನ್ನು ಕೊಡುವ ವಿಶಿಷ್ಟ ಪದ್ಧತಿಯನ್ನನುಸರಿಸುತ್ತಿದ್ದರೆಂಬ ವಿಚಾರ ಮೇಲಿನ ವಿಶ್ಲೇಷಣೆಯಿಂದ ಸ್ಪಷ್ಟವಾಗುತ್ತದೆ. ಕುಂದಾಪುರ, ಉಡುಪಿ, ಮಂಗಳೂರು ಮತ್ತು ಕಾರ್ಕಳ ತಾಲೂಕುಗಳ ಲಭ್ಯವಿರುವ ಶಾಸನಗಳಿಂದ ಸಂಗ್ರಹಿಸಲಾದ ಗದ್ದೆಗಳ ಒಟ್ಟು ಹೆಸರುಗಳು ನೂರ ಎಪ್ಪತ್ತಾರು. ಅವುಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು:

| ಹೆಸರುಗಳು | ಸಂಖ್ಯೆ | ಶೇಕಡಾ |
|---|---|---|
| ಒಡೆತನವನ್ನು ಸೂಚಿಸುವ ಹೆಸರುಗಳು | 19 | 10.8 |
| ಜಾತಿ/ಸ್ಥಾನ/ವೃತ್ತಿಸೂಚಕ ಹೆಸರುಗಳು | 06 | 3.4 |
| ಗದ್ದೆಗಳ ಸ್ವರೂಪವನ್ನು ಸೂಚಿಸುವ ಹೆಸರುಗಳು | 16 | 9.1 |
| ಭೂಸ್ವರೂಪವನ್ನು ಸೂಚಿಸುವ ಹೆಸರುಗಳು | 17 | 9.7 |
| ಮಣ್ಣಿನ ಲಕ್ಷಣವನ್ನು ಸೂಚಿಸುವ ಹೆಸರುಗಳು | 12 | 6.8 |
| ದಿಕ್ಕು/ಸ್ಥಾನವನ್ನು ಸೂಚಿಸುವ ಹೆಸರುಗಳು | 31 | 17.6 |
| ಗಾತ್ರ/ಕಾಲವನ್ನು ಸೂಚಿಸುವ ಹೆಸರುಗಳು | 09 | 5.1 |
| ಪಂದ್ಯ/ಆಟ ಸೂಚಕ ಹೆಸರುಗಳು | 04 | 2.3 |
| ಸಸ್ಯ, ಗಿಡ, ಮರಗಳ ಸಾಮಿಪ್ಯ ಸೂಚಿಸುವ ಹೆಸರುಗಳು | 46 | 26.1 |
| ಸಂಖ್ಯಾ ಸೂಚಿ ಹೆಸರುಗಳು | 03 | 1.7 |
| ಇತರ | 13 | 7.4 |
| ಒಟ್ಟು ಹೆಸರುಗಳು | 176 | |

ಈ ಮೇಲಿನ ವಿವರಣೆಯಿಂದ ಗದ್ದೆಗಳನ್ನು ಹೆಸರಿಸುವ ಸಂದರ್ಭ ಗಿಡ, ಮರ, ಸಸ್ಯಗಳನ್ನು ಸೂಚಿಸುವ ಹೆಸರುಗಳಿಗೆ ಹೆಚ್ಚಿನ ಪ್ರಾಶಸ್ತ್ಯವಿತ್ತಿರುವುದು

ಸ್ಪಷ್ಟವಾಗುತ್ತದೆ. ನಂತರದ ಸ್ಥಾನ ಭೂ ಸ್ವರೂಪವನ್ನು ಸೂಚಿಸುವ ಹೆಸರುಗಳದು. ಇಲ್ಲಿ ಉಲ್ಲೇಖಿಸಲಾದ ಒಟ್ಟು 176 ಹೆಸರುಗಳಲ್ಲಿ ಪ್ರಾಣಿ ಅಥವಾ ಪಕ್ಷಿಗಳನ್ನು ಸೂಚಿಸುವ ಯಾವುದೇ ಹೆಸರೂ ಕಂಡು ಬರುವುದಿಲ್ಲ ವೆಂಬುದು ಉಲ್ಲೇಖನೀಯ

ತುಳುನಾಡಿನ ಶಾಸನಗಳ್ಲಲಿ ಕಂಡು ಬರುವ ಗದ್ದೆ ಗಳ ಹೆಸರುಗಳ ಅಧ್ಯಯನ ಹಲವಾರು ದೃಷ್ಟಿಗಳಿಂದ ಮಹತ್ವ ಪೂರ್ಣ. ಈ ಹೆಸರುಗಳು ಈ ಪ್ರದೇಶದ ಬೇಸಾಯ ಪದ್ದತಿ, ಹೊಲಗಳ ವ್ಯವಸ್ಥೆ ಇತ್ಯಾದಿಗಳ ಕುರಿತು ಕುತೂಹಲಕರ ಮಾಹಿತಿಯನ್ನೊದಗಿಸುವುದಲ್ಲದೆ ಇಲ್ಲಿನ ಸಸ್ಯಸಂಪತ್ತು, ಭೂಸ್ವರೂಪ, ಆಟಕೂಟಗಳು ಮುಂತಾದ ಬೌಗೋಳಿಕ – ಸಾಂಸ್ಕೃತಿಕ ವಿಚಾರಗಳ ಅಧ್ಯಯನಕ್ಕೂ ಸಹಕಾರಿಯಾಗುತ್ತವೆ.

## ಆಕರ ಗ್ರಂಥಗಳು


1. South Indian Inscriptions, Vol VII
2. South Indian Inscriptions Vol IX Part II
3. Annual Reports of South Indian Epigrapthy
4. Tulu-English Dictionary - M. Mariappa Bhatta and S. Kedilaya (Editors), Madras, 1967
5. Kannada - English Dictionary - Rev. F. Kittel (Reprint), Asian Educational Services New Delhi 1982
6. Studies in Tuluva History and Culture - Dr. P. Gururaja Bhatt, 1975.

ಡಾ॥ ರಾಜಾರಾಮ ಹೆಗಡೆ

# ೆಳದಿಯ ಕಾಲದ ದೇವಾಲಯಗಳಲ್ಲಿ ಇಸ್ಲಾಮಿಕ್ ವಿನ್ಯಾಸಗಳ ಸಂಯೋಜನೆ:

ಭಾರತದಲ್ಲಿ ಇಂಡೋ-ಇಸ್ಲಾಮಿಕ್ ಶೈಲಿಯ ವಾಸ್ತುಗಳ ಆರಂಭವಾಗುವಷ್ಟರಲ್ಲಿಯೇ ಭಾರತೀಯ ೀವಾಲಯ ವಾಸ್ತು ನಿರ್ಮಾಣ ಪರಂಪರೆ ಸುವ್ಯವ ತವಾಗಿ ಬೆಳೆದು ದೇಶದ ಉದ್ದಗಲಕ್ಕೂ ಅದರ ಾಸ್ತ್ರ ಗ್ರಂಥಗಳು ಪ್ರಚಲಿತದಲ್ಲಿದ್ದವು. ಈ ನಿರ್ಮಾಣ ಲಿಯ ಜತೆ ಧಾರ್ಮಿಕ ವಿಧಿ ವಿಧಾನಗಳು, ಪೌರಾ ಕ, ತಾತ್ವಿಕ ಸಂಕೇತಗಳು ಹಾಸುಹೊಕ್ಕಾಗಿ ಹರಳುಗ ದ್ದವು. ಮುಸ್ಲಿಂ ಶೈಲಿ ಪ್ರಾರಂಭದಲ್ಲಿ ಭಾರತೀಯ ಲ್ಪಿಗಳ ಸಹಾಯದಿಂದ ಹೇರಳವಾಗಿ ಭಾರತೀಯ ಂಶಗಳನ್ನು ಅಳವಡಿಸಿಕೊಂಡು ಹದಿನಾಲ್ಕನೆಯ ಶತ ಮಾನದಲ್ಲಿ ದಕ್ಷಿಣದಲ್ಲಿ ಪ್ರಚಲಿತದಲ್ಲಿ ಬರುವ ವೇಳೆಗೆ ನ್ನದೇ ವಿಶಿಷ್ಟವಾದ ಭಾರತೀಯ ಮುಸ್ಲಿಂ ಶೈಲಿ ಯಾಗಿ ಮಾರ್ಪಟ್ಟಿತ್ತು. ಆದರೂ ಭಾರತೀಯ ವಾಸ್ತು ದ್ಧತಿಗೂ ಒಂದು ಮೂಲಭೂತ ಭಿನ್ನತೆಯಿತ್ತು. ದೆಂದರೆ ವಾಸ್ತು ನಿರ್ಮಾಣ ತಂತ್ರ. ಛಾವಣಿಗಳನ್ನು ರಿಸಲಿಕ್ಕೆ ಕಮಾನುಗಳು ಹಾಗೂ ಅಚ್ಛಾದಿಸಲಿಕ್ಕೆ ುಂಬಜಗಳು ಇಂಡೋ ಇಸ್ಲಾಮಿಕ್ ಶೈಲಿಯಲ್ಲಿ ಬಳ ಕೆಯಲ್ಲಿದ್ದರೆ, ಭಾರತೀಯ ಶೈಲಿಯಲ್ಲಿ ಕಂಬಗಳು ಹಾಗೂ ಅಡ್ಡ ತೊಲೆಗಳು, ಛಾವಣಿಯನ್ನು ಆಧರಿಸ ಕ್ಕೆ ಉಪಯೋಗದಲ್ಲಿದ್ದು, ಮೂಲೆಗಳಿಗೆ ಅಡ್ಡಲಾಗಿ ಲಗೆಗಳನ್ನಿಡತ್ತಾ ಮುಚ್ಚುವ ಲ್ಯಾಂಟ್ರ್ನ ಕ್ರಾಸ್ಟ ಪದ್ಧತಿ ಥವಾ ಅಂಕಣ ಮುಚ್ಚಿಕೆಯ ಪದ್ಧತಿ ರೂಢಿಯ ತ್ತು.[1] ಕೇವಲ ನಿರ್ಮಾಣ ತಂತ್ರವೊಂದೇ ಅಲ್ಲದೇ ಲಾತ್ಮಕ, ಧಾರ್ಮಿಕ ಅಂಶಗಳೂ ಸೇರಿ ಒಟ್ಟಾರೆ ರೂಪ ಈ ಎರಡು ಶೈಲಿಗಳಲ್ಲಿ ಭಿನ್ನ ರೀತಿಯದಾ ತ್ತು. ಭಾರತೀಯ ವಾಸ್ತುಶಿಲ್ಪದ ಮೇಲೆ ಇಸ್ಲಾಂ ವಾಸ್ತುವಿನ ಪ್ರಭಾವವನ್ನು ವಿವೇಚಿಸುವಾಗ ಇಂಡೋ ಇಸ್ಲಾಂ ವಾಸ್ತುಶೈಲಿಯ ಈ ಭಿನ್ನತೆಯನ್ನು ಗಮನದ ರಿಸಿದರೆ ಮಾತ್ರ ಪರಿಶೀಲನೆ ನಡೆಸಬಹುದು.

ಭಾರತೀಯ ವಾಸ್ತುಶೈಲಿಯಿರಲಿ, ಇಂಡೋ-ಸ್ಲಾಮಿಕ್ ವಾಸ್ತುಶೈಲಿಯಿರಲಿ ಕಾಲದಿಂದ ಕಾಲಕ್ಕೆ ರಂತರವಾಗಿ ಬದಲಾವಣೆ ಹೊಂದುತ್ತಾ ಬಂದ ಅಂಶವನ್ನು ನಾವು ಗಮನಿಸಬೇಕು. ಇಂಡೋ-ಇಸ್ಲಾಮಿಕ್ ಶೈಲಿ ಈ ದೃಷ್ಟಿಯಲ್ಲಿ ಹೊಸ ಅಂಶಗಳನ್ನು ಅಂತರ್ಗತಮಾಡಿಕೊಂಡು ಅನೇಕ ಪ್ರಾದೇಶಿಕ ಶೈಲಿಗಳಲ್ಲಿ ಪರಿಣಮಿಸಿತು. ಇಂಡೋ-ಇಸ್ಲಾಮಿಕ್ ಶೈಲಿಯ ಎಲ್ಲಾ ಪ್ರಕಾರದ ಕಟ್ಟಡಗಳು ಪ್ರಾದೇಶಿಕ ಅಂಶಗಳನ್ನುಸರಿಸಿ ಸಮನಾಗಿ ಮೈಗೂಡಿಸಿಕೊಂಡಿವೆ.[2] ಆದರೆ, ಈ ಎಲ್ಲ ಬದಲಾವಣೆಗಳೂ ಈ ಮೇಲೆ ಉಲ್ಲೇಖಿಸಿದ ನಿರ್ಮಾಣ ತಂತ್ರವನ್ನು ಅನುಸರಿಸಿಯೇ ಮಾಡಿಕೊಳ್ಳಲ್ಪಟ್ಟವು. ಭಾರತೀಯ ಲೌಕಿಕ ವಾಸ್ತು ನಿರ್ಮಾಣದಲ್ಲಿ ಬಹುಬೇಗನೆ ಕಮಾನುಗಳು, ಗುಂಬಜಗಳು ಹಾಗೂ ಇತರ ಇಸ್ಲಾಮಿಕ್ ಶೈಲಿಗಳು ಅಳವಡಿಸಲ್ಪಟ್ಟವು. ವಿಜಯನಗರ ಕಾಲದ ಅನೇಕ ಕಟ್ಟಡಗಳು ಇದಕ್ಕೆ ಸಾಕ್ಷಿಯಾಗಿ ನಿಂತಿವೆ. ಆದರೆ ಆಶ್ಚರ್ಯದ ವಿಷಯವೆಂದರೆ ವಿಜಯನಗರದ ದೇವಾಲಯ ವಾಸ್ತುಗಳಲ್ಲಿ ಮಾತ್ರ ಅಪ್ಪಟ ಪಾರಂಪರಿಕ ಶೈಲಿಯನ್ನು ಮುಂದುವರಿಸಿಕೊಂಡು ಬರಲಾಗಿದೆ. ಹಾಗಂತ ಪಾರಂಪರಿಕ ದೇವಾಲಯ ವಾಸ್ತುಶೈಲಿಯಲ್ಲಿ ಬದಲಾವಣೆಯೇ ಇರಲಿಲ್ಲ ವೆಂದಲ್ಲ ಅಂತಲ್ಲ. ದೇವಾಲಯದಿಂದ ದೇವಾಲಯಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ಕಾಲಾಂತರದಲ್ಲಿ ಆದ ಭಾರತೀಯ ವಾಸ್ತುಶೈಲಿಯ ವಿಕಾಸವನ್ನು ಈ ಕಾಲದಲ್ಲೂ ಕಾಣಬಹುದು.

ಈ ದೃಷ್ಟಿಯಿಂದ ಹದಿನಾರನೆಯ ಶತಮಾನದ ನಂತರ ಕೆಳದಿ ಅರಸರು ಆಳಿದ ಪ್ರದೇಶಗಳಲ್ಲಿ ನಿರ್ಮಾಣವಾದ ದೇವಾಲಯಗಳು, ಶಿಲ್ಪಿಗಳು ಅಪೂರ್ವ ಪ್ರಯೋಗಶೀಲತೆಯನ್ನು ತೋರಿಸುತ್ತವೆ. ಪ್ರಪ್ರಥಮ ಬಾರಿಗೆ ಇಲ್ಲಿ ಶಾಸ್ತ್ರಬದ್ಧವಾಗಿ ನಿರ್ಮಿಸಿದ ದೇವಾಲಯಗಳಲ್ಲಿ ಇಂಡೋ-ಇಸ್ಲಾಮಿಕ್ ಶೈಲಿಯ ಸಂಯೋಜನೆಯನ್ನು ನಾವು ಕಾಣಬಹುದು. ಪ್ರೊ. ಸುಂದರ ಅವರು ಈಗಾಗಲೇ ಕೆಳದಿ ದೇವಾಲಯಗಳನ್ನು ಸವಿವರವಾಗಿ ಅಧ್ಯಯನ ಮಾಡಿ ಆ ದೇವಾಲಯಗಳ ಈ ಮೇಲಿನ ವೈಶಿಷ್ಟ್ಯತೆಯನ್ನು ಪರಿಶೀಲಿಸಿದ್ದಾರೆ. ಅವರು ಇಂಡೋ-ಇಸ್ಲಾಮಿಕ್ ಶೈಲಿಯ

ಯಾವ ಅಂಶಗಳು ಎಲ್ಲೆಲ್ಲಿ ಕಾಣಬರುತ್ತವೆ ಎಂಬುದನ್ನು ಉಲ್ಲೇಖಿಸಿ, ಅದಕ್ಕೆ ಕಾರಣವನ್ನೂ ಕೂಡ ವಿಮರ್ಶಿಸಿದ್ದಾರೆ.[3] ಅದನ್ನು ಮತ್ತೂ ವಿವರವಾಗಿ ಚರ್ಚಿಸುವುದು ಪ್ರಸ್ತುತ ಪ್ರಬಂಧದ ಉದ್ದೇಶ.

ವಿವರಗಳನ್ನು ಪರಿಶೀಲಿಸುವ ಪೂರ್ವದಲ್ಲಿ ಕೆಲ ಮುಖ್ಯ ಅಂಶಗಳನ್ನು ಇಲ್ಲಿ ಪ್ರಸ್ತಾಪಿಸುವುದು ಅಗತ್ಯ:

1) ಕೆಳದಿ ಅರಸರ ಕಾಲದ ದೇವಾಲಯಗಳಲ್ಲಿ ಕಂಡು ಬರುವ ಇಂಡೋ-ಇಸ್ಲಾಮಿಕ್ ಶೈಲಿಗೆ ಬಿಜಾಪುರ ಶೈಲಿಯ ಹಿನ್ನೆಲೆ ಇದೆ. ಕಾಲಾನುಪೂರ್ವ ಹಾಗೂ ಐತಿಹಾಸಿಕ ಅಂಶಗಳ ಆಧಾರವಷ್ಟೇ ಅಲ್ಲದೇ ಶೈಲಿಸಾಮ್ಯತೆಯಿಂದಲೂ ಈ ನಿರ್ಣಯಕ್ಕೆ ಬರಬಹುದು. 2) ಅಳವಡಿಸಲ್ಪಟ್ಟ ಇಂಡೋ-ಇಸ್ಲಾಮಿಕ್ ಅಂಶಗಳು ಅಲಂಕಾರ ವಿನ್ಯಾಸಗಳಾಗಿ ಬಾಹ್ಯ ಸ್ವರೂಪ ಕ್ಕಷ್ಟೇ ಸೀಮಿತವಾಗಿವೆಯೇ ಹೊರತು ನಿರ್ಮಾಣ ತಂತ್ರದ ಬದಲಾವಣೆಯಾಗಿ ಅವು ಬಂದಿಲ್ಲ. 3) ಇಂತಹ ವಿನ್ಯಾಸಗಳು ಆದಷ್ಟೂ ಕೆಳದಿ ಶೈಲಿಯಲ್ಲಿ ಅಂತರ್ಗತವಾಗಿ ಅಥವಾ ಮಾರ್ಪಾಟಾಗಿ ಅಳವಡಿಸಲ್ಪಟ್ಟಿವೆ. ಕೆಳದಿ ಕಾಲದ ದೇವಾಲಯಗಳಲ್ಲಿ ಇಂಡೋ-ಇಸ್ಲಾಮಿಕ್ ಶೈಲಿಯ ಈ ಕೆಳಗಿನ ಅಂಶಗಳನ್ನು ಪರಿಶೀಲಿಸಬಹುದು.

## 1. ಕಮಾನುಗಳು

ಈ ಮೊದಲೇ ಉಲ್ಲೇಖಿಸಿದಂತೆ ಯಾವ ದೇವಾಲಯದಲ್ಲೂ ನಿಜವಾದ ಕಮಾನು ತಂತ್ರದಲ್ಲಿ ನಿರ್ಮಿತ ಕಮಾನುಗಳಿಲ್ಲ. ಆದರೆ ಕುತೂಹಲಕಾರಿಯಾದ ಅಂಶವೆಂದರೆ ಹಲವು ವಾಸ್ತು ವಿನ್ಯಾಸಗಳಲ್ಲಿ ಈ ಕಮಾನುಗಳ ಬಳಕೆಯಾಗಿದೆ.

ಅ) **ವಾತಾಯನದ ರೂಪದಲ್ಲಿ:** ಇಕ್ಕೇರಿಯ ಅಘೋರೇಶ್ವರ ದೇವಾಲಯದ ನಂದಿಮಂಡಲದಲ್ಲಿ ಈ ತರಹದ ಕಮಾನುಗಳನ್ನು ನೋಡಬಹುದು. ಇಲ್ಲಿ ಚೌಕಾಕಾರ ಅಧಿಷ್ಠಾನದ ಮೇಲೆ ಅಘೋರೇಶ್ವರ ದೇವಾಲಯಕ್ಕೆ ಎದುರಾಗಿ ಇರುವ ಕಮಾನು ಆಕೃತಿಯ ಬಾಗಿಲೊಂದನ್ನು ಬಿಟ್ಟರೆ, ಉಳಿದ ಮೂರು ಕಡೆಗೂ ಒಂದೊಂದು ಪಕ್ಕಕ್ಕೂ ಎರಡೆರಡರಂತೇ ನೀಳವಾದ ಕಮಾನುಗಳನ್ನು ಯೋಜಿಸಲಾಗಿದೆ. ಅಘೋರೇಶ್ವರ ದೇವಾಲಯದ ಗೂಢಮಂಟಪದ ಮುಂದಿನ ಅರ್ಧಭಾಗದ ಗೋಡೆಗೆ ಮೂರು ಕಡೆಯಲ್ಲೂ ಸಾಲಾಗಿ ಕಮಾನಿನ ಜಾಲ ವಾತಾಯನಗಳನ್ನು ಅಳವಡಿಸಲಾಗಿದೆ. ಇವು ಆಕಾರದಲ್ಲಿ ಚಿಕ್ಕದಾಗಿದ್ದು, ಕಕ್ಷಾಸನದ ಹೊರಭಾಗದ ಸ್ತಂಭ ಶಿಖರಗಳ ಸಾಲುಗಳ ಮೇಲೆ ಯೋಜಿಸಲ್ಪಟ್ಟಿವೆ.

ಈ ಎಲ್ಲ ಕಮಾನುಗಳೂ ಕಚ್ಚುಗಳನ್ನು ಹೊಂದಿವೆ. ಇವುಗಳ ಹೊರ ಚೌಕಟ್ಟಿಗೆ ಕೆತ್ತಿರುವ ಕೋಷ್ಠ ಪಂಜರ ಅಪ್ಪಟ ದ್ರಾವಿಡ ಶೈಲಿಯದು. ಎರಡೂ ಪಕ್ಕದಲ್ಲಿ ಪಂಜರದ ಪಾದಗಳು ಹಾಗೂ ಕಮಾನಿನ ಮೇಲ್ಭಾಗದಲ್ಲಿ ಶಿಖರ ಇವನ್ನೆಲ್ಲ ಕೆತ್ತಿ ಉಬ್ಬಿಸಲಾಗಿದ್ದು ಕೆಳದಿ ಕಾಲದ ದೇವಾಲಯಗಳಲ್ಲಿ ಕಂಡುಬರುವ ಕೋಷ್ಠ ಪಂಜರದ ಶೈಲಿಯಲ್ಲೇ ಇದೆ.

ಆ) **ದ್ವಾರಗಳ ರೂಪದಲ್ಲಿ:** ಈ ಮೇಲೆ ಉಲ್ಲೇಖಿಸಲಾದ ಇಕ್ಕೇರಿಯ ನಂದಿಮಂಟಪದ ದ್ವಾರವಲ್ಲದೆ ಸ್ವಲ್ಪ ಬೇರೆಯದೇ ರೀತಿಯ ಕಮಾನುಗಳನ್ನು ದೇವಾಲಯಗಳ ಬಾಹ್ಯ ದ್ವಾರಕ್ಕೆ ಅಳವಡಿಸಿದ್ದುದನ್ನು ಕೆಲ ಉದಾಹರಣೆಗಳಲ್ಲಿ ಕಾಣಬಹುದು. ಅವು (1) ಇಕ್ಕೇರಿಯ ಅಖಿಲಾಂಡೇಶ್ವರಿ ದೇವಾಲಯದ ಮುಖ ಮಂಟಪದಿಂದ ಸುಖನಾಸಿಗೆ ಪ್ರವೇಶಿಸುವ ದ್ವಾರ. (2) ವರದಾ ಮೂಲದ ವರದಾಂಬಾ ದೇವಾಲಯದ ಸುಕನಾಸಿಯ ದ್ವಾರ. (3) ಕವಲೆದುರ್ಗದ ಎರಡು ದೇವಾಲಯಗಳಲ್ಲಿನ ಪ್ರವೇಶ ದ್ವಾರ. (4) ಮಲ್ಲಂದೂರು ಕೆರೆಯ ಮಧ್ಯದ ಬಸವನಗುಡಿಯ ದ್ವಾರ. ಈ ಎಲ್ಲ ಕಮಾನುಗಳು ಕಚ್ಚುಗಳನ್ನು ಹೊಂದದೇ ನೇರವಾಗಿದ್ದು, ಅವುಗಳನ್ನು ಕಲ್ಲಿನಲ್ಲಿ ಕೆತ್ತಿ ನಿರ್ಮಿಸಲಾಗಿದೆ. ಆಕಾರದಲ್ಲಿ ಅವು ಬಿಜಾಪುರದ ಆದಿಲ್ ಶಾಹಿ ಕಾಲದ ಶೈಲಿಯಲ್ಲಿವೆ. ಮತ್ತೊಂದು ಮುಖ್ಯ ಅಂಶವೆಂದರೆ ಈ ಕಮಾನುಗಳ ಅಲಂಕರಣ ಕೂಡ ಪ್ರಬಲವಾಗಿ ಇಂಡೋ-ಇಸ್ಲಾಮಿಕ್ ಶೈಲಿಯನ್ನು ಅನುಸರಿಸುತ್ತದೆ.[4] ಅಖಿಲಾಂಡೇಶ್ವರಿದೇವಾಲಯದ ಕಮಾನುಗಳ ಅಂಚನ್ನು ಶಾಖೆಗಳಾಗಿ ಸೀಳಿ ಬಿಜಾಪುರದ ಕೆಲ ಕಮಾನುಗಳಲ್ಲಿರುವಂತೆ ಗುಂಡುಗಳ ಸರವನ್ನು ಕೆತ್ತಲಾಗಿದೆ. ಕಮಾನಿನ ಅಂಚಿಗೆ ಕೆತ್ತಲಾದ ನಕ್ಷೆಯ ಪಟ್ಟಿಯ ತದ್ವತ್ತ ರೂಪಗಳನ್ನು ಬಿಜಾಪುರಿ ಕಮಾನುಗಳಲ್ಲೂ ನೋಡಬಹುದು. ಕಮಾನಿನ ಮೇಲಿನ ಎರಡೂ ಮಗ್ಗಲುಗಳಲ್ಲಿ ಪದ್ಮಗಳನ್ನು ಕೆತ್ತಲಾಗಿದ್ದು ಬಿಜಾಪುರದ ಕಮಾನುಗಳಲ್ಲಿ ಚಾಚು ಬೋದಿಗೆಗಳ ಮೇಲೆ ಕೆತ್ತಿದ ನಕ್ಷೆಯನ್ನು ನೆನಪಿಸುತ್ತಿದೆ. ಇದರ ಜೊತೆಗೆ ತೀರಾ ನಾಜೂಕಾಗಿ ಈ ಕಮಾನನ್ನು ಕೆಳದಿ ಪ್ರದೇಶದ ಶೈಲಿಗೆ ಅಳವಡಿಸಲಾಗಿದೆ. ಕಮಾನಿನ ಕೆಳಭಾಗದಲ್ಲಿ ದ್ವಾರ

ದೇವತೆಗಳನ್ನು ಕೆತ್ತಿದ ಪಟ್ಟಿಗಳಿವೆ. ಮೇಲೆ ಎರಡೂ ಮಗ್ಗುಲುಗಳಲ್ಲೂ ಹಂಸಗಳನ್ನು ಕೆತ್ತಲಾಗಿದೆ. ಜೊತೆಗೆ ಎರಡು ಗಿಳಿಗಳ ಕೆತ್ತನೆ ವಿಶೇಷವಾಗಿ ಕಾಣಿಸುತ್ತದೆ. ಅದನ್ನು ಮಲ್ಲಂದೂರು ಕೆರೆಯ ಬಸವ ಗುಡಿಯಲ್ಲೂ ನೋಡಬಹುದು.

(೩) ಕೋಷ್ಟನಾಸಿಯ ರೂಪದಲ್ಲಿ: ಕೆಳದಿ ಅರಸರ ಕಾಲದಲ್ಲಿ ಜೀರ್ಣೋದ್ಧಾರ ಮಾಡಲಾದ ಕೆಲ ದೇವಾಲಯ ಶಿಖರಗಳಲ್ಲಿ ಇಂಥ ಕಮಾನುಗಳನ್ನು ಕಾಣಬಹುದು. ಸೋಮಾಪುರದ ಸೋಮೇಶ್ವರ ದೇವಾಲಯದ ಶಿಖರದಲ್ಲಿ ಕೆಳಗಿನ ಎರಡು ಹಾರಗಳಲ್ಲಿ ಇಂಥ ಚಿಕ್ಕ ಕಮಾನು ಗೂಡುಗಳನ್ನು ಕಾಣಬಹುದು. ಹಾರಗಳ ಶಾಲಾ, ಕೂಟ ಪಂಜರಗಳ ಸ್ಥಾನದಲ್ಲಿ ಇಂಥ ಸರಳ, ಸುಲಭ ಅಲಂಕಾರವನ್ನು ಉಪಯೋಗಿಸಿದ್ದು ಸ್ಪಷ್ಟ. ಅಂತ ಕಮಾನುಗಳನ್ನು ತೀರಾ ಸ್ಪಷ್ಟವಾಗಿ ಕೆಳದಿ ಕಾಲದ ಹಾಗೂ ತದನಂತರದ ದೇವಾಲಯ ಶಿಖರಗಳಲ್ಲಿ ಈಗಿನ ಶಿವಮೊಗ್ಗ ಹಾಗೂ ಹೊನ್ನಾಳಿ ಪ್ರದೇಶದಲ್ಲಿ ನೋಡಬಹುದು ಹೊನ್ನಾಳಿ ತಾಲ್ಲೂಕಿನ ತೀರ್ಥ ರಾಮೇಶ್ವರ ದೇವಾಲಯ ಸಂಕೀರ್ಣದಲ್ಲಿರುವ ವೀರಭದ್ರ ದೇವಾಲಯದ ಶಿಖರ, ಶಿವಮೊಗ್ಗ ಹೊರ ವಲಯದಲ್ಲಿರುವ ಮಂಡಳಿಯ ಮಠದ (ಸೋಮಶೇಖರ ನಾಯಕನ ಸಮಾಧಿ) ಮುಖ ಮಂಟಪದ ಮೇಲಿನ ಹಾರ ಇವುಗಳಲ್ಲಿಯೂ ಇಂಥ ಕಮಾನುಗಳನ್ನು ನೋಡಬಹುದು.

ಮಂಡಳಿ ಮತ್ತು ತೀರ್ಥರಾಮೇಶ್ವರದ ಉದಾಹರಣೆಯನ್ನು ಬಿಟ್ಟು, ಈ ರೀತಿ ಮೇಲೆ ಉಲ್ಲೇಖಿಸಿದ ಕಮಾನುಗಳು ಯಾವವೂ ನಿಜವಾದ ಕಮಾನು ನಿರ್ಮಾಣ ತಂತ್ರದಲ್ಲಿ ಮಾಡಿದವುಗಳಲ್ಲ. ಕೆಳದಿ ದೇವಾಲಯಗಳಲ್ಲಿ ಇಂಥ ಕಮಾನುಗಳನ್ನು ಉಪಯೋಗಿಸಿದ ಭಾಗಗಳು ಹಲಗೆ ಗೋಡೆಗಳಾಗಿರುವುದರಿಂದ ಇಂಥ ಕಮಾನುಗಳಿಗೆ ವಾಸ್ತುವಿನಲ್ಲಿ ನಿಜವಾದ ಕಮಾನಿನ ಕಾರ್ಯಗಳಿಲ್ಲ. ಇವು ಕೇವಲ ನವೀನ ಅಲಂಕರಣಗಳಾಗಿ ಬರುತ್ತವೆ. ಈ ಕಮಾನುಗಳ ಆಕಾರ ಸ್ಥೂಲವಾಗಿ ಬಿಜಾಪುರ ಆದಿಲ್‌ಶಾಹಿ ಕಾಲದವುಗಳನ್ನು ಹೋಲುತ್ತದೆ. ಕಚ್ಚುಗಳನ್ನು ಹೊಂದಿದ ಕಮಾನುಗಳು ಬಿಜಾಪುರದ ಶೈಲಿಯಲ್ಲಿ ಅಪರೂಪಕ್ಕೆ ಕಾಣಸಿಗುತ್ತವೆಯಾದರೂ ಸಮಕಾಲೀನ ವಿಜಯನಗರ ಲೌಕಿಕ ವಾಸ್ತುಗಳಲ್ಲಿ ಜನಪ್ರಿಯವಾಗಿದ್ದವು ಎಂಬುದು ಕಮಲ ಮಹಲಿನಂಥ ಉದಾಹರಣೆಗಳಲ್ಲಿ ಗೊತ್ತಾಗುತ್ತದೆ. ನಾವು ಈ ಸಂದರ್ಭದಲ್ಲಿ ನಿರ್ಮಿತವಾದ ಕಮಾನುಗಳನ್ನು ಕುರಿತು ಚರ್ಚಿಸುತ್ತಿಲ್ಲವಾದ್ದರಿಂದ ಅಲಂಕರಣಗಳಲ್ಲಿ ಕಮಾನುಗಳನ್ನು ಹೋಲುವ ವಿನ್ಯಾಸಗಳನ್ನು ಭಾರತೀಯ ವಾಸ್ತುಶೈಲಿಯಲ್ಲಿ ಬಹಳ ಮೊದಲಿನಿಂದಲೂ ನೋಡಬಹುದಾಗಿದೆ ಎಂಬುದು ಇಲ್ಲಿ ಗಮನಾರ್ಹ. ಕೆಳದಿ ಪೂರ್ವ ಕಾಲಕ್ಕೆ ಸಂಬಂಧಿಸಿದಂತೆ ಮಕರ ತೋರಣಗಳನ್ನು, ಕಪೋತನಾಸಿಗಳನ್ನು ಮೂರ್ತಿಗಳ ಹಿನ್ನೆಲೆಯ ಲತಾತೋರಣ ಅಥವಾ ಪ್ರಭಾವಳಿಯನ್ನು ದೇವಾಲಯ ಅಲಂಕರಣದ ಭಾಗವಾಗಿ ಕಾಣುತ್ತೇವೆ. ವಿಜಯನಗರ ದೇವಾಲಯಗಳಲ್ಲಿನ ಮಂಟಪದ ಮೇಲಿನ ಹಾರದಲ್ಲಿ ಸಮಾನಾಂತರದಲ್ಲಿ ನಿರ್ಮಿಸಿದ ಗೂಡುಗಳು ಕೂಡ ಭಾರತೀಯ ಶೈಲಿಯ ಕಮಾನನ್ನುತೋರಿಸುತ್ತವೆ. ಕಚ್ಚುಗಳನ್ನು ಹೊಂದಿದ ಕಮಾನುಗಳನ್ನು ಈ ಮೇಲೆ ಉಲ್ಲೇಖಿಸಿದ ಭಾರತೀಯ ವಿನ್ಯಾಸಗಳಿಗೆ ಹೊಂದಿಕೊಳ್ಳುತ್ತವೆ. ಆದರೆ ಕೆಳದಿ ದೇವಾಲಯಗಳ ಕಮಾನುಗಳ ಈ ವಿನ್ಯಾಸಗಳಿಂದ ವಿಕಾಸ ಹೊಂದಿರದೇ ಇಂಡೋ–ಇಸ್ಲಾಮಿಕ್ ಅಂಶಗಳೇ ಆಗಿವೆ. ಏಕೆಂದರೆ ಕೆಳದಿ ಕಾಲದ ದೇವಾಲಯಗಳಲ್ಲಿ ಕಮಾನುಗಳನ್ನು ತೋರಿಸಿದ ಎಲ್ಲ ಸಂದರ್ಭಗಳಲ್ಲೂ ಚೌಕವಾದ ಬಾಗಿಲುಕಟ್ಟಿನ ಬದಲಾಗಿ ಅವುಗಳನ್ನು ಕಾಣುತ್ತೇವೆ. ಅವು ಕಿಟಕಿಗಳಿರಬಹುದು, ಬಾಗಿಲುಗಳಿರಬಹುದು ಇಲ್ಲ ಪಂಜರಗಳಿರಬಹುದು. ಹಾಗಾಗಿ ಅವು ಇಂಡೋ–ಇಸ್ಲಾಮಿಕ್ ಶೈಲಿಯ ಕಮಾನುಗಳನ್ನೇ ಸೂಚಿಸುತ್ತವೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಬಾಗಿಲುಗಳಲ್ಲಿ ಅಂಥ ಕಮಾನುಗಳನ್ನು ತೋರಿಸುವಾಗ ಕೆಳದಿ ಪರ್ಯಾಯವಾದ ಮಕರ ತೋರಣವನ್ನು ಅಂಚಿಗೆ ಅಳವಡಿಸದೇ ಇಂಡೋ–ಇಸ್ಲಾಮಿಕ್ ಅಲಂಕರಣವನ್ನೇ ಅನುಕರಿಸಲಾಗಿದೆ.

(ಈ) ಕಂಗುರಗಳು ಹಾಗೂ ಮಿನಾರೆಟ್‌ಗಳು: ಬಹುಶಃ ಕೆಳದಿ ದೇವಾಲಯಗಳಲ್ಲಿ ಉಳಿದ ಇಂಡೊ–ಇಸ್ಲಾಮಿಕ್ ಅಂಶಗಳಿಗಿಂತ ಹೆಚ್ಚು ವ್ಯಾಪಕವಾಗಿ ಬಳಕೆಯಾದವುಗಳೆಂದರೆ ಕಂಗುರಗಳು. ದ್ರಾವಿಡ ದೇವಾಲಯಗಳ ಪ್ರಸ್ತರದ ಮೇಲೆ ಹಾರಗಳ ಸ್ಥಾನದಲ್ಲಿ ಇಲ್ಲಿ ಕಂಗುರಗಳು ಹಾಗೂ ಕರ್ಣಗಳಲ್ಲಿ ಚಿಕ್ಕ ಮಿನಾರ್‌ಗಳಂಥ ಉಬ್ಬುಗಳು ಯೋಜಿಸಲ್ಪಡುತ್ತವೆ. ಇಕ್ಕೇರಿಯ ನಂದಿಮಂಟಪದ ಮೇಲೆ, ತೀರ್ಥಹಳ್ಳಿ ಸುತ್ತುಮುತ್ತಲಿನ ಆನೇಕ ದೇವಾಲಯಗಳಲ್ಲಿ ನಗರ ನೀಲಕಂಠ ದೇವಾಲಯ ಶಿಖರದಲ್ಲಿ, ಸೋಮಾಪುರದ ಸೋಮೇಶ್ವರ ದೇವಾಲಯದಲ್ಲಿ ಇಂಥ ವಿನ್ಯಾಸಗಳನ್ನು ಕಾಣಬಹುದು. ಕೇವಲ ಶೈವ ವೈಷ್ಣವ ದೇವಾಲಯಗ

ಅಷ್ಟೇ ಅಲ್ಲದೆ ಜೈನ ಬಸದಿಗಳಲ್ಲೂ ಇವುಗಳ ಸಂಯೋಜನೆಯಿದ್ದುದು ಇದರ ವ್ಯಾಪಕತೆಯನ್ನು ಸೂಚಿಸುತ್ತದೆ, ದಖನ್ನಿನ 16ನೇಯ ಶತಮಾನದಲ್ಲಿ ಇಂಡೋ-ಇಸ್ಲಾಮಿಕ್ ವಾಸ್ತುಗಳಲ್ಲಿ ಪ್ರಸ್ತಾರದ ಮೇಲೆ ಕಂಗುರಗಳ ಅಲಂಕರಣ ಸಾಮಾನ್ಯವಾಗಿತ್ತು. ಕೆಲ ಕಲಾತ್ಮಕ ವಾಸ್ತುಗಳಲ್ಲಿ ಕಂಗುರಗಳ ವಿನ್ಯಾಸವೂ ವೈವಿಧ್ಯತೆಯನ್ನು ತಳೆಯುತ್ತದೆ. ಆದರೆ, ಮುಮ್ಮಾಲೆಯ ಎಲೆಗಳಂಥ ವಿನ್ಯಾಸಸರ್ವಸಾಧಾರಣವಾಗಿತ್ತು. ಕೆಳದಿಕಾಲದ ದೇವಾಲಯಗಳಲ್ಲಿ ಇಂಥ ವಿನ್ಯಾಸಗಳನ್ನು ಮಾತ್ರ ನೋಡಬಹುದು. ಇಕ್ಕೇರಿಯ ನಂದಿಮಂಟಪದ ಛಾವಣಿಯ ಕರ್ಣಗಳಲ್ಲಿಯ ಮಿನಾರೆಟ್‌ಗಳ ಖಂಡ ಕಂಗುರಗಳಿಗಿಂತಲೂ ಮೇಲಕ್ಕೆ ಎದ್ದಿದ್ದು ತುದಿಗೆ ಗುಮ್ಮಟದಂಥ ಭಾಗಗಳನ್ನು ಕೆತ್ತಲಾಗಿದೆ. ಇವು ಶೈಲಿಯಲ್ಲಿ ಬಿಜಾಪುರದ ಮಿನಾರ್‌ಗಳ ಮೇಲೆ ಇರುವ ಕಿರುಗುಮ್ಮಟಗಳಂತೇ ಸದರವಾದ ಬುಡವನ್ನು ಹೊಂದಿ, ಪೂರ್ಣ ವರ್ತುಲಾಕಾರದ ತಲೆಯನ್ನು ಹೊಂದಿವೆ. ನಗರದ ನೀಲಕಂಠ ದೇವಾಲಯದ ಶಿಖರದ ಕರ್ಣಗಳಲ್ಲಿ ಇಂಥ ಕಿರುಗುಮ್ಮಟಗಳ ಬದಲು ಅದೇ ಶೈಲಿಯ ಕಲಶ ಹಾಗೂ ಸ್ತೂಪಿಗಳನ್ನು ಜೋಡಿಸಲಾಗಿದೆ. ಹೇಗೆ ಕೆಲ ಇಂಡೋ-ಇಸ್ಲಾಮಿಕ್ ಹಾಗೂ ದ್ರಾವಿಡ ವಿನ್ಯಾಸಗಳಲ್ಲಿ ಪರಸ್ಪರ ಹೊಂದಾಣಿಕೆಯಾಗುವ ಅಂಶಗಳಿವೆ ಎಂಬುದು ಇಲ್ಲಿ ನಿದರ್ಶನವಾಗುತ್ತದೆ. ಉಳಿದ ಕಡೆಗಳಲ್ಲಿ ಸಾಧಾರಣವಾಗಿ ಇಂಥ ಮಿನಾರೆಟ್‌ಗಳು ಸರಳಖಂಡಗಳ ರೂಪದಲ್ಲಿಯಷ್ಟೇ ಇರುತ್ತವೆ.

**ಗುಮ್ಮಟ:** ಸ್ವಲ್ಪ ದೊಡ್ಡ ಪ್ರಮಾಣದಲ್ಲಿ ನಿರ್ಮಿಸಲ್ಪಟ್ಟ ಕೆಳದಿ ಕಾಲದ ದೇವಾಲಯಗಳಲ್ಲಿ ಶಿಖರ ಸಾಧಾರಣವಾಗಿ ದ್ರಾವಿಡ ಶೈಲಿಯಲ್ಲಿರುತ್ತದೆ. ಪುನನಿರ್ಮಾಣಕ್ಕೊಳಪಡಿಸಿದ ಶಿಖರಗಳು ಚಾಲುಕ್ಯ - ಹೊಯ್ಸಳ ಹಾಗೂ ವಿಜಯನಗರ ಶೈಲಿಯ ವಿಚಿತ್ರ ಮಾರ್ಪಾಟುಗಳಾಗಿರುತ್ತವೆ. ಇಲ್ಲಿ ಸ್ಥಾಸಿಕವಾದ ವಿಶೇಷ ರೂಪಗಳೂ ಉಕ್ಕಿರಬಹುದು. ಆದರೆ ಒಂದೇ ಒಂದು ಉದಾಹರಣೆಯಲ್ಲಿ ಮಾತ್ರ ಇಂಡೋ-ಇಸ್ಲಾಮಿಕ್ ಆದಿಲ್‌ಶಾಹಿ ಶೈಲಿಯ ಗುಮ್ಮಟವನ್ನು ಹೋಲುವ ವಿಚಿತ್ರ ಶಿಖರವನ್ನು ನಾವು ನೋಡಬಹುದು. ಆ ದೇವಾಲಯ ನಗರದ ನೀಲಕಂಠೇಶ್ವರ ದೇವಾಲಯ. ಇಲ್ಲಿ ಚತುರಸ ವಿಮಾನದ ಪ್ರಸ್ತಾರದ ಮೇಲೆ ನಾಲ್ಕು ಮೂಲೆಗಳಲ್ಲಿ ನಾಲ್ಕು ನಂದಿಗಳನ್ನು ಕೆತ್ತಿದ್ದಾರೆ. ಮಧ್ಯದಲ್ಲಿ ಚಚ್ಚೌಕದ ವೇದಿಕೆಯ ಮೇಲೆ ದ್ರಾವಿಡ ವಿಷ್ಣುಚ್ಛಂದ ಶಿಖರದ ಜೋಡಣೆಯಿದೆ. ಆದರೆ ಇಡೀ ಶಿಖರವೇ ಗೋಲಗುಮ್ಮಟ ಅಥವಾ ಆದಿಲ್‌ಶಾಹಿ ಕಾಲದಲ್ಲಿ ಪ್ರಚಲಿತದಲ್ಲಿ ಬಂದ ಅಂಥ ಗುಮ್ಮಟಗಳನ್ನು ನೆನಪಿಗೆ ತರುತ್ತದೆ. ನಾಲ್ಕು ಕರ್ಣಗಳಲ್ಲಿ ಮಿನಾರೆಟ್‌ನ್ನು ನೆನಪಿಸುವಂಥ ಕಲಶ, ಸ್ತೂಪಗಳನ್ನು ಯೋಜಿಸಿ, ಮಧ್ಯದಲ್ಲಿ ಕಂಗುರಗಳನ್ನು ಕೆತ್ತಲಾಗಿದೆ. ಶಿಖರದ ತಳ ಸ್ವಲ್ಪ ಎತ್ತರವಾಗಿದ್ದು, ಗುಮ್ಮಟದಂತೇ ಅದು ಬಾಗುತ್ತಾ ಮೇಲೆ ಸಾಗುತ್ತದೆ. ಶಿಖರ ವಿವರಗಳಲ್ಲಿ ದ್ರಾವಿಡ ಶೈಲಿಯನ್ನು ಹೋಲುತ್ತದೆ. ನಾಲ್ಕು ಮುಖಗಳಲ್ಲಿ ಗ್ರೀವ ಕೋಷ್ಠಗಳಂಥ ವಿನ್ಯಾಸಗಳನ್ನು ಕೆತ್ತಲಾಗಿದ್ದು, ಅವುಗಳ ಮೇಲೆ ದ್ರಾವಿಡ ಕೂಟಶಾಲೆಯನ್ನು ಹಾಗೂ ದೊಡ್ಡದಾದ ಕೀರ್ತಿ ಮುಖವನ್ನು ತೋರಿಸಲಾಗಿದೆ. ಈ ರೀತಿ ನೀಲಕಂಠೇಶ್ವರ ದೇವಾಲಯದ ಶಿಖರ ಕುತೂಹಲಕಾರಿಯಾದ ರೀತಿಯಲ್ಲಿ ದ್ರಾವಿಡ ಮತ್ತು ಇಂಡೋ-ಇಸ್ಲಾಮಿಕ್ ವಾಸ್ತು ಶೈಲಿಯ ಮಿಶ್ರಣವನ್ನು ತೋರಿಸುತ್ತವೆ. ವಿವರಗಳಲ್ಲಿ ಕಂಗುರಗಳನ್ನು ವೇದಿಕೆಯನ್ನು ಬಿಟ್ಟರೆ ಸ್ಪಷ್ಟವಾಗಿ ಇಂಡೋ-ಇಸ್ಲಾಮಿಕ್ ಎನ್ನಬಹುದಾದ ಯಾವ ಅಂಶಗಳೂ ಕಾಣದಿದ್ದರೂ ಮೇಲ್ನೋಟಕ್ಕೆ ಬಿಜಾಪುರ ಶೈಲಿಯ ಗುಮ್ಮಟವನ್ನು ದಟ್ಟವಾಗಿ ಹೋಲುತ್ತದೆ. ಈ ಶಿಖರದ ನಿರ್ಮಾಣದಲ್ಲಿ ಗುಮ್ಮಟಗಳು ಶಿಲ್ಪಿಯ ಮನಸ್ಸಿನಲ್ಲಿ ಇದ್ದದ್ದು ನಿಸ್ಸಂಶಯ.

**ಕೆಲ ಪರಿಶೀಲನೆಗಳು:** ಪ್ರೊ. ಸುಂದರ ಅವರು ಉಲ್ಲೇಖಿಸಿದಂತೆ ಕೆಳದಿ ಅರಸರ ಕಾಲದ ಆದಿಭಾಗದ ದೇವಾಲಯಗಳಲ್ಲಿ ಇಂಡೋ-ಇಸ್ಲಾಮಿಕ್ ಅಂಶಗಳು ಕಂಡುಬರುವುದಿಲ್ಲ. ಬಹುಶಃ ಇಂಥ ಅಂಶಗಳನ್ನು ಪ್ರಕಟಿಸುವ ದೇವಾಲಯಗಳಲ್ಲೆಲ್ಲ ಇಕ್ಕೇರಿಯ ಅಘೋರೇಶ್ವರ ದೇವಾಲಯವೇ ಮೊದಲಿನದಿರಬಹುದು. ಹದಿನೇಳನೆಯ ಶತಮಾನದ ನಂತರ ಇಂಥ ವಿನ್ಯಾಸಗಳು ಪ್ರಚಲಿತಲದಲ್ಲಿ ಬಂದಿರಬಹುದು. ಇಕ್ಕೇರಿಯ ದೇವಾಲಯದಲ್ಲೂ ಇಂಡೋ-ಇಸ್ಲಾಮಿಕ್ ಅಂಶಗಳು ನಂತರ ಸೇರಿಸಲ್ಪಟ್ಟಿರಬಹುದಾದ ಸಾಧ್ಯತೆಯನ್ನು ಪ್ರೊ. ಸುಂದರ ಅವರು ವಿಶ್ಲೇಷಿಸುತ್ತಾರೆ.5 ಈ ಸಾಧ್ಯತೆಯನ್ನು ಇನ್ನೂ ಪರಿಶೀಲಿಸಲು ಅವರೇ ಹೇಳಿದಂತೆ ಸರಿಯಾದ ಐತಿಹಾಸಿಕ ವಿವರಗಳು ಸಿಗುವುದಿಲ್ಲ. ಅಂಥ ರಿಪೇರಿಗಳು ಈ ದೇವಾಲಯಕ್ಕೆ ಕೆಲವು ಬಾರಿ ಆಗಿರಬಹುದು ಎಂಬುದು ಹತ್ತೊಂಭತ್ತನೆಯ ಶತಮಾನದ ಆದಿಭಾಗದಲ್ಲಿ ಇಲ್ಲಿಗೆ ಭೇಟಿ ನೀಡಿದ್ದ ಬುಕಾನನನ ವರದಿಯಿಂದ ವಿದಿತವಾಗುತ್ತದೆ.[6] ಆತನ ಪ್ರಕಾರ ಅವನು ಇಲ್ಲಿದ್ದಾಗ ಈ ದೇವಾಲಯದ ರಿಪೇರಿಗಾಗಿ ಗೋವಾದಿಂದ ಶಿಲ್ಪಿಗಳನ್ನು ಕರೆಸಲಾಗಿತ್ತಂತೆ. ಅಖಿ

ಂಡೇಶ್ವರಿ ದೇವಾಲಯದ ಕಮಾನು ಬಾಗಿಲುಳ್ಳ ುಖ ಮಂಟಪ ದೇವಾಲಯದ ಮೂಲ ವಾಸ್ತುವಿಗೆ ಂತರ ಸೇರಿಸಿದ್ದು ಸ್ಪಷ್ಟ. ಆದರೆ ಅವೆರಡರ ಮಧ್ಯದ ಲ ವ್ಯತ್ಯಾಸ ತೀರಾ ಅಲ್ಪವಾಗಿರಬಹುದು. ಕಮಾನನ್ನು ಟ್ಟರೆ ಮಂಟಪದ ಉಳಿದ ವಿನ್ಯಾಸಗಳು ಸಮಕಾಲೀನ ಳದಿ ಸಂಪ್ರದಾಯಕ್ಕೆ ಅನುಗುಣವಾಗಿದೆ. ನಂದಿಮಂಟಪ ೂಡ ಪ್ರತ್ಯೇಕವಾದ ಕಟ್ಟಡವಾಗಿದ್ದು, ಯಾವಾಗಲಾದ ೂ ನಿರ್ಮಿಸಿಬಹುದಾಗಿದ್ದರೂ, ಅದರಲ್ಲಿಯ ಅಧಿಷ್ಠಾನ, ಂಭಗಳು, ಕೋಷ್ಟ ಪಂಜರಗಳೆಲ್ಲ ಸಮಕಾಲೀನ ದ್ರಾವಿಡ ಲಿಯನ್ನು ಹೋಲುತ್ತವೆ. ಹಾಗಾಗಿನಂದಿ ಮಂಟಪದ ಂಡೋ-ಇಸ್ಲಾಮಿಕ್ ಅಂಶಗಳು ಕೂಡ ಬಹಳ ಂತರದ್ದಲ್ಲ. ಇಂಥ ಶಿಲ್ಪ ವಿನ್ಯಾಸಗಳ ಶೈಲಿಯ ಧಾರದ ಮೇಲೆ ಸ್ಥೂಲವಾಗಿ ಕಾಲಗಣನೆ ಮಾಡ ಹುದೇ ಹೊರತು ಹದಿನೈದು - ಇಪ್ಪತ್ತು ವರ್ಷಗಳ ಂತರವನ್ನು ಗುರ್ತಿಸಲು ದು-ಃಸ್ಸಾಧ್ಯವಾಗಬಹುದು. ದಕ್ಕೂ ಮುಖ್ಯವಾಗಿ ಅಘೋರೇಶ್ವರ ದೇವಾಲಯದ ಂಟಪದ ಭಿತ್ತಿಗಳಲ್ಲಿ ಇರುವ ಕಮಾನು ಕಿಟಕಿಗಳನ್ನು ಂತರ ಸೇರಿಸಿರಬೇಕಾದರೆ ತಾಂತ್ರಿಕ ಸಾಧ್ಯತೆಗಳು ದ್ದವೇ ಎಂಬ ಪ್ರಶ್ನೆ ಘಳುತ್ತದೆ. ಅದರ ಜತೆಗೆ ಪುನ ರ್ಮಿಸುವಾಗ ಏಕೆ ಇಷ್ಟು ದೊಡ್ಡ ಪ್ರಮಾಣದಲ್ಲಿ ಸ್ಲಾಮಿಕ್ ಶೈಲಿಯನ್ನು ಅಳವಡಿಸಲಾಯಿತು ಂಬುದು ಕೂಡ ಸ್ಪಷ್ಟವಾಗುವುದಿಲ್ಲ.

ಕೆಳದಿ ಕಾಲದ ದೇವಾಲಯಗಳಲ್ಲಿ ಕಾಣಿಸುವ ಂಡೋ-ಇಸ್ಲಾಮಿಕ್ ವಿನ್ಯಾಸಗಳೂ ಹದಿನೇಳನೆಯ ತಮಾನದಲ್ಲಿ ಸಾಕಷ್ಟು ಕಾಣಸಿಗುತ್ತವೆಯಾದರೂ ಂಗುರಗಳನ್ನು ಬಿಟ್ಟು ಉಳಿದವು ವ್ಯಾಪಕವಾಗಿ ಬಳಕೆ ಲ್ಲಿ ಬರಲಿಲ್ಲ. (ಕಂಗರುಗಳ ಜೋಡಣೆ ಕೆಳದಿ ಳ್ಳಿಕೆಯ ಪ್ರದೇಶಕ್ಕಷ್ಟೇ ಸೀಮಿತವಾಗಿರಲಿಲ್ಲ.ಉತ್ತರ ರ್ನಾಟಕದ ಹದಿನೇಳನೆಯ ಶತಮಾನದಲ್ಲಿ ರಿಪೇರಿ ಾಳಗಾದ ಕೆಲ ದೇವಾಲಯಗಳಲ್ಲೂ ಕಂಗುರಾ ನ್ಯಾಸಗಳ ಜೋಡಣೆಯನ್ನು ನೋಡಬಹುದು).[7] ವರೆ ಉಳಿದ ಇಂಡೋ-ಇಸ್ಲಾಮಿಕ್ ವಿನ್ಯಾಸಗಳಿಗೆ ಂಬಂಧಿಸಿದಂತೆ ಹೇಳುವುದಾದರೆ ಅವು ಒಂದು ಶ್ರ ಸಂಪ್ರದಾಯವಾಗಿ ಕೆಳದಿ ದೇವಾಲಯಗಳಲ್ಲಿ ಳೆಯದೇ ಪ್ರಯೋಗಾತ್ಮಕವಾಗಿಯಷ್ಟೇ ಕಾಣುತ್ತವೆ. ಕ್ಕೇರಿಯ ಕಚ್ಚುಗಳ ಕಮಾನುಗಳು ವಿನ್ಯಾಸದಲ್ಲಿ, ಾತ್ಮಕತೆಯಲ್ಲಿ ಬೇರೆ ದೇವಾಲಯಗಳಲೆಲ್ಲಾ ಸಿಕ್ಕು ದಿಲ್ಲ. ಅದೇ ರೀತಿ ನಗರದ ನೀಲಕಂಠದೇವಾಲಯದ ಖರ ಕೂಡ ಅಂಥ ಒಂದೇ ಉದಾಹರಣೆ. ಕಮಾನು ದ್ವಾರಗಳು ಅಪರೂಪಕ್ಕೆ ಸಿಗುತ್ತದೆ. ಹಾಗಾಗಿ ಇಂಡೋ-ಇಸ್ಲಾಮಿಕ್ ವಿನ್ಯಾಸಗಳು ಕೆಳದಿ ಶಿಲ್ಪಿಗಳು ಅಲ್ಲಲ್ಲಿ ಹೊಸ ಅಂಶಗಳನ್ನು ಸೇರಿಸಲಿಕ್ಕೆ ಮಾಡಿದ ಪ್ರಯೋಗ ಗಳಂತಿವೆ. ಶಿಲ್ಪಿಗಳ ಬಗ್ಗೆ ಕೂಡ ನಮಗಿನ್ನೂ ಸಾಕಷ್ಟು ಗೊತ್ತಾಗಿಲ್ಲ. ಹೊಂಬುಜ, ಬಿಳಗಿ ಮುಂತಾದ ಕಡೆಗ ಳಿಂದ ಅವರು ಕೆಳದಿ ಇಕ್ಕೇರಿ ದೇವಾಲಯದಲ್ಲಿ ಕೆಲಸ ಮಾಡಿದ ಶಾಸನೋಲ್ಲೇಖವಿದೆ.[8] ಆದರೆ ಇಸ್ಲಾಮಿಕ್ ವಿನ್ಯಾಸಗಳನ್ನು ಅಳವಡಿಸುವ ಹೊಸ ಪ್ರಯತ್ನ ಮಾಡಿದವರ ಬಗ್ಗೆ ಏನೂ ತಿಳಿದಿಲ್ಲ. ವಿನ್ಯಾಸಗಳನ್ನೇ ಪರೀಕ್ಷಿಸಿ ನಿರ್ಣಯಕ್ಕೆ ಬರುವುದಾದರೆ ಈ ಕೆಳಗಿನ ಸಾಧ್ಯತೆ ಕಾಣುತ್ತದೆ. ಈ ಎಲ್ಲ ಇಂಡೋ-ಇಸ್ಲಾಮಿಕ್ ವಿನ್ಯಾಸಗಳನ್ನು ಅಳವಡಿಸಿದ ಶಿಲ್ಪಿ ಕೆಳದಿ ವಾಸ್ತು ವಿನ್ಯಾಸದಲ್ಲೇ ಹೆಚ್ಚಿನ ಪರಿಣತಿ ಹೊಂದಿದ್ದ. ಈ ಮೊದಲೇ ಚರ್ಚಿಸಿದಂತೆ ಇಲ್ಲಿಯ ಇಸ್ಲಾಮಿಕ್ ಅಂಶ ಗಳೆಲ್ಲ ಅಲಂಕಾರ ವಿನ್ಯಾಸಗಳೇ ಹೊರತು ನಿರ್ಮಾಣ ತಂತ್ರಗಳಲ್ಲ. ಇವುಗಳಲ್ಲಿ ತೋರಿಕೆಗೆ ಇಸ್ಲಾಮಿಕ್ ಸ್ವರೂಪ ಇದ್ದರೂ ವಿವರಗಳಲ್ಲಿ ಕೆಳದಿ ಶಿಲ್ಪ ಶೈಲಿಗೆ ಪ್ರಾಮುಖ್ಯತೆ ಇದೆ. ಹಾಗಾಗಿ ಇಸ್ಲಾಮಿಕ್ ಅಂಶಗಳು ಪ್ರಯೋಗಶೀಲತೆಯ ಅಂಶಗಳಾಗಿ ದ್ರಾವಿಡ ವಿನ್ಯಾಸ ಗಳು ಸಂಪ್ರದಾಯದ ಅಂಶಗಳಾಗಿ ಇವೆ. ಈ ನಿರ್ಣ ಯಕ್ಕೆ ಕಮಾನು ಬಾಗಿಲುಗಳು ಸ್ವಲ್ಪ ಪೂರಕವಾಗುತ್ತವೆ. ಕಮಾನುಗಳೊಂದೇ ಅಲ್ಲ, ಅದರ ಅಂಚಿನ ಅಲಂಕರ ಣವನ್ನು ಕೂಡ ಇಂಡೋ-ಇಸ್ಲಾಮಿಕ್ ಸಂಪ್ರದಾಯ ದಿಂದ ಅಳವಡಿಸುವಷ್ಟು ಪರಿಣತಿ ಆ ಶಿಲ್ಪಿಗೆ ಇದ್ದದ್ದು ಸ್ಪಷ್ಟ. ಹಾಗಾಗಿ ಕೆಳದಿ ಶಿಲ್ಪಿಗೆ ಈ ಒಟ್ಟೂ ಸ್ವರೂಪ ಹೇಗೆ ಕರಗತವಾಗಿರಬಹುದು ಎಂಬುದು ಕುತೂಹಲಕಾರಿ. ಒಂದು ಸಾಧ್ಯತೆ ಎಂದರೆ ಕೆಳದಿ ಕಾಲದ ಲೌಕಿಕ ವಾಸ್ತು ವಿನ್ಯಾಸಗಳು ಈ ಅಲಂಕರಣ ವನ್ನು ನೀಡಿರಬಹುದು. ಇಲ್ಲಿಯವರೆಗೆ ನಾವು ಕೇವಲ ದೇವಾಲಯ ವಾಸ್ತು ವಿನ್ಯಾಸಗಳನ್ನು ಮಾತ್ರ ಅವಲಂ ಬಿಸಿ ಪರಿಶೀಲಿಸಿದ್ದೇವೆ. ಹದಿನಾರನೆಯ ಶತಮಾನದ ಕೆಳದಿ ಲೌಕಿದ ವಾಸ್ತುಗಳಲ್ಲಿ ಇಂಡೋ-ಇಸ್ಲಾಮಿಕ್ ವಿನ್ಯಾಸಗಳ ಸಂಯೋಜನೆ ನೋಡಲಿಕ್ಕೆ ಸಿಗದಿದ್ದರೂ ಅವುಗಳ ಅಸ್ತಿತ್ವ ಪ್ರಶ್ನಾರ್ಹವಲ್ಲ. ಆ ಕಾಲಕ್ಕಾಗಲೀ ಲೌಕಿಕ ವಾಸ್ತುವಿನಲ್ಲಿ ಧಾರಾಳವಾಗಿ ಇಂಡೋ-ಇಸ್ಲಾ ಮಿಕ್ ಅಂಶಗಳು ಸೇರ್ಪಡೆಯಾಗಿದ್ದವೆಂಬುದು ನಮಗೆ ವಿಜಯನಗರದ ಉದಾಹರಣೆಯಲ್ಲಿ ಸಿಗುತ್ತದೆ. ಇಕ್ಕೇರಿ ಕೋಟೆಯಲ್ಲಿನ ಅವಶೇಷಗಳಲ್ಲೂ ಇದಕ್ಕೆ ಸೂಚನೆಗ ಳನ್ನು ಕಾಣಬಹುದು.[9] ಕಚ್ಚು ಕಮಾನುಗಳು ಹದಿನೇ ಳನೆಯ ಶತಮಾನದ ನಂತರ ಎಷ್ಟೊಂದು ಜನಪ್ರಿಯ

ವಾಗಿದ್ದವೆಂದರೆ ಹದಿನಾರನೆಯ ಶತಮಾನದಲ್ಲಿ ಅವುಗಳ ಸಾಧ್ಯತೆಯನ್ನು ಅಲ್ಲಗಳೆಯಲು ಶಕ್ಯವಿಲ್ಲ. ಇಂಡೋ-ಇಸ್ಲಾಮಿಕ್ ವಿನ್ಯಾಸಗಳನ್ನು ದ್ರಾವಿಡ ವಿನ್ಯಾಸಗಳ ಜತೆ ಸಂಯೋಜಿಸಿದ ಮಿಶ್ರ ಶೈಲಿ ನಮಗೆ ವಿಜಯ ನಗರದ ಉದಾಹರಣೆಯಲ್ಲಿ ಸಿಗುತ್ತದೆ. ಹದಿನೇಳನೆಯ ಶತಮಾನದಲ್ಲಿ ಕೆಳದಿ ಪ್ರದೇಶದಲ್ಲೇ ಇರುವ ಸಂತೆ ಬೆನ್ನೂರಿನ ಪುಷ್ಕರಿಣಿಯ ಮಂಟಪಗಳು ಕೂಡ ಇಂಥ ಒಂದು ಸುಂದರ ಸಮ್ಮೇಳನವನ್ನು ದೃಷ್ಟಾಂತ ಪಡಿಸುತ್ತದೆ.[10] ಹದಿನಾರನೆಯ ಶತಮಾನದ ಉತ್ತರಾರ್ಧದಲ್ಲಿ ಕೆಳದಿ ದೇವಾಲಯಗಳಲ್ಲಿ ಕೆಲಸ ಮಾಡಿದ ಶಿಲ್ಪಿಗೆ ಸಾಕಷ್ಟು ಮೂಲ ರೂಪಗಳಲ್ಲದೇ ಅವುಗಳ ಶಿಕ್ಷಣವೂ ಇದ್ದಿರಬೇಕು.

ಕೆಳದಿ ದೇವಾಲಯಗಳಲ್ಲಿ ಕಂಡುಬರುವ ಸಂಪ್ರದಾಯಗಳ ವೈವಿಧ್ಯತೆ ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶ. ಕೆಳದಿ ಅರಸರ ಆಳ್ವಿಕೆಗೊಳಪಟ್ಟ ಪ್ರದೇಶದಲ್ಲಿ ಅವರ ಕಾಲದಲ್ಲಿ ಅಪರೂಪವಾದ ವಿಭಿನ್ನತೆಯನ್ನು ಗುರ್ತಿಸಬಹುದು. ಚಾಲುಕ್ಯ, ಹೊಯ್ಸಳ ಶೈಲಿಯ ಅಂಶಗಳ ಜತೆ ವಿಜಯನಗರ ಶೈಲಿಯ ದ್ರಾವಿಡ ವಾಸ್ತು ವಿನ್ಯಾಸ, ಇವು ಯಾವುದಕ್ಕೂ ಸೇರದ ಅನೇಕ ಅಪ್ಪಟ ಸ್ಥಾನಿಕ ಪ್ರಯೋಗಗಳು ಎಲ್ಲವನ್ನೂ ಈ ದೇವಾಲಯಗಳಲ್ಲಿ ಗುರ್ತಿಸಬಹುದು. ಕೆಳದಿ ಕಾಲದ ದೇವಾಲಯಗಳಲ್ಲಿ ಏಕರೂಪತೆ ಇರಲೇ ಇಲ್ಲವೆಂದಲ್ಲ. ಸ್ತಂಭಗಳು, ಬಾಗಿಲು ಕಟ್ಟು (ಕೆಲವೊಮ್ಮೆ ಶಿಖರದ ಮೇಲೆ ನಾಲ್ಕು ಮೂಲೆಗಳಲ್ಲಿನಿರ್ಮಿಸಿದ ನಂದಿಗಳು) ಇವುಗಳನ್ನು ಕಾಲ ನಿರ್ಣಯಕ್ಕೆ ಉಪಯೋಗಿಸಕೊಳ್ಳಬಹುದು.[11] ಆದರೆ ಒಂದು ಸಂಪ್ರಾದಾಯಿಕ ವಾಸ್ತು ನಿರ್ಮಾಣ ಶೈಲಿಗೆ ವಾಸ್ತುಶಿಲ್ಪಿಗಳು ಕಟ್ಟು ಬಿದ್ದದ್ದು ಕಂಡುಬರುವುದಿಲ್ಲ. ಕೆಳದಿ ರಾಮೇಶ್ವರ ಹಾಗೂ ವೀರಭದ್ರ ದೇವಾಲಯಗಳ ಮಂಟಪಗಳಲ್ಲಿ ಇರುವ ಶೈಲಿ ವ್ಯತ್ಯಾಸ ಅರಗದ ಕಲ್ಲಿನ ಮಾಡುಗಳ ವೈಶಿಷ್ಟ್ಯತೆ, ಪುನರ್ನಿರ್ಮಿತ ದೇವಾಲಯಗಳ ವಿಚಿತ್ರ ಶಿಖರಗಳು ಹೀಗೆ ಒಂದು ಪ್ರಬಲ ದೇವಾಲಯ ವಾಸ್ತು ಸಂಪ್ರದಾಯದ ಉಪಯೋಗ ವ್ಯಾಪಕವಾಗಿ ಎಲ್ಲ ವಾಸ್ತುಗಳಲ್ಲಿ ಇದ್ದದು ಕಂಡುಬರುವುದಿಲ್ಲ. ಹಾಗಾಗಿ ಸ್ಥಾನಿಕ ಶೈಲಿಗಳು, ಶಿಲ್ಪಿಗಳು ಪ್ರಾಧಾನ್ಯತೆ ವಹಿಸಿದ್ದು ವಿದಿತವಾಗುತ್ತದೆ. ಆದರೆ ಈ ವೈವಿಧ್ಯಪೂರ್ಣ ಪ್ರಯತ್ನಗಳು ಯಾವವುದೇ ಹೊಸ ನಿರ್ದಿಷ್ಟ ಸ್ಥಾನಿಕ ಶೈಲಿಯನ್ನು ಹುಟ್ಟುಹಾಕಿದ್ದು ಕಂಡುಬರುವುದಿಲ್ಲ. ಈ ವೈಧ್ಯತೆಯ ಒಂದು ಭಾಗವಾಗಿ ಇಂಡೋ-ಇಸ್ಲಾಮಿಕ್ ವಿನ್ಯಾಸಗಳು ಸಹಜವಾಗಿ ಕಾಣುತ್ತವೆಯಾದರೂ ಭಾರತೀಯ ದೇವಾಲಯ ವಾಸ್ತುಶಿಲ್ಪದಲ್ಲಿ ಇದೊಂದು ಅಪೂರ್ವ ಉದಾಹರಣೆ.

---

## ಅಡಿಟಿಪ್ಪಣಿ

1. ಎರಡು ಶೈಲಿಗಳ ವ್ಯತ್ಯಾಸವನ್ನು ಸ್ಥೂಲವಾಗಿ ಸರಳೀಕರಿಸಿ ಹೇಳಬಹುದಾದರೆ ಹೀಗೆ ವರ್ಣಿಸಬಹುದು. ಆದರೆ ಇಂಡೋ-ಇಸ್ಲಾಮಿಕ್ ಶೈಲಿಯಲ್ಲಿ ಕಮಾನು ಹಾಗೂ ಗುಮ್ಮಟಗಳ ನಿರ್ಮಾಣ ತಂತ್ರ ಕಡ್ಡಾಯವಾಗಿರಲಿಲ್ಲ. ದೆಹಲಿಯ ಗುಲಾಮಿ ಸಂತತಿಯ ಕಾಲದಲ್ಲಿನ್ನೂ ಇವುಗಳನ್ನು ಶಿಲ್ಪಿಗಳು ಕರಗತ ಮಾಡಿಕೊಂಡಿರಲಿಲ್ಲ. ನಂತರ ಸುಲ್ತಾನರ ಪತನಾನಂತರ ಪ್ರಾದೇಶಿಕ ಶೈಲಿಗಳು ಅವುಗಳನ್ನು ವೈವಿಧ್ಯಪೂರ್ಣವಾಗಿ ಬದಲಾಯಿಸಿದವು. ನೋಡಿ: ಝುಡ್.ಡಿ. ದೇಸಾಯಿ. 'ಇಂಡೋ-ಇಸ್ಲಾಮಿಕ್ ಆರ್ಕಿಟೆಕ್ಚರ್'1.1986 (ಎರಡನೇ ಮುದ್ರಣ) ನ್ಯೂಡೆಲ್ಲಿ.ಪು.30-42.
2. ದಖನ್‌ನಿನ ಬಿಜಾಪುರ ಆದಿಲ್‌ಶಾಹಿ ಕಾಲದಲ್ಲಿಯ ಇಂಡೋ-ಇಸ್ಲಾಮಿಕ್ ವಾಸ್ತುಗಳಲ್ಲಿ ದಖನ್‌ನಿನ ಪ್ರಾದೇಶಿಕ ಶೈಲಿಯ ವಿನ್ಯಾಸಗಳು ಹಾಗೂ ವಾಸ್ತು ತಂತ್ರಗಳು ಹಲವಪ್ಪು ಸೇರ್ಪಡೆಯಾಗಿದೆ. ನೋಡಿರಿ: ಪರ್ಸಿ ಬ್ರೌನ್,1981 (ಏಳನೆ ಮುದ್ರಣ) 'ಇಂಡಿಯನ್ ಆರ್ಕಿಟೆಕ್ಚರ್ - ಇಸ್ಲಾಮಿಕ್ ಪಿರಿಯಡ್'ಡಿ.ಬಿ. ತಾಪೋರವಾಲಾ ಸನ್ಸ್, ಬಾಂಬೆ. ಹದಿನಾಲ್ಕನೇ ಅಧ್ಯಾಯ ಪು.73-78 ಹಾಗೂ ಝುಡ್.ಡಿ. ದೇಸಾಯಿ ಮೇಲೆ ಉಲ್ಲೇಖಿಸಿದ್ದು ಪು.37 ರಿಂದ 40.
3. ಅ.ಸುಂದರ 'ಕೆಳದಿ ಅರಸರ ಕಾಲದ ವಾಸ್ತು ಮತ್ತು ಮೂರ್ತಿ ಶಿಲ್ಪ' - ಸಂಪುಟ 1 ರಾಜಕೀಯ ಮತ್ತು ಸಾಂಸ್ಕೃತಿಕ ಹಿನ್ನೆಲೆ. ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು. 1986 ಮುನ್ನುಡಿ.
4. ಹೆನ್ರಿ ಕಸೆನ್ಸ್ 'ಬಿಜಾಪುರ ಎಂಡ್ ಇಟ್ಸ್ ಆರ್ಕಿಟೆಕ್ಚರಲ್ ರಿಮೇನ್ಸ್' ಎ.ಎಸ್.ಐ. ಸಂ.37, 1976 ಇಂಪೀರಿಯಲ್ ಸೀರೀಸ್, ಭಾರತೀಯ ಪಬ್ಲಿಷಿಂಗ್ ಹೌಸ್, ಚಿತ್ರ 12ರಲ್ಲಿ ಅಂಥ ಕೆಲ ನಕ್ಷೆಗಳನ್ನು ಕೊಟ್ಟಿದ್ದಾರೆ. ಅಂಥ ನಕ್ಷೆಗಳ ಪಟ್ಟಿಯನ್ನು ಅಘೋರೇಶ್ವರ ದೇವಾಲಯದ ನಂದಿ ಮಂಟಪದಲ್ಲಿಯೂ ಕೆತ್ತಲಾಗಿದೆ. ಆದರೆ ನಂದಿ ಮಂಟಪದ ದೀರ್ಘ ವಾತಾಯನಗಳ ಕಮಾನುಗಳ ಅಂಚಿಗೆಅವುಗಳನ್ನು ಕೆತ್ತಿಲ್ಲ.

5. ಆ.ಸುಂದರ ಮೇಲೆ ಉಲ್ಲೇಖಿಸಿದ್ದು – ಮುನ್ನುಡಿ.

6. ಫ್ರಾನ್ಸಿಸ್ ಬುಕಾನನ್ – 1807 " ಎ ಜರ್ನಿ ಫ್ರಮ್ ಮದ್ರಾಸ್ ಥ್ರೋದ ಕಂಟ್ರೀಸ್ ಆಫ್ ಮೈಸೂರ್,ಕೆನರಾ, ಎಂಡ್ ಮಲಬಾರ್" ಸಂಪುಟ 3 – 1988 ಮೊದಲನೆ ಎ.ಇ.ಎಸ್.ರಿಫ್ರೋರ್ಟ್. ಏಶಿಯನ್ ಎಜುಕೇಶನ್ ಸರ್ವೀಸ್ ಪು.257.

7. ಅಂಥ ನಂತರದ ಸೇರ್ಪಡೆಯನ್ನು ಹಂಪಿಯಲ್ಲೂ, ಐಹೊಳೆಯಲ್ಲೂ ನೋಡಬಹುದು.

8. ಕೆಳದಿ ಗುಂಡಾಜೋಯಿಸ್ 1980, " ಕೆಳದಿ ಇಕ್ಕೇರಿ ದೇಗುಲಗಳ ಪ್ರಾಚೀನ ಶಿಲ್ಪಕಲೆ" ' ಮಾನವಿಕ ಕರ್ನಾಟಕ ಸಂಪುಟ' 10, ಸಂಚಿಕೆ 3, ಮೈಸೂರು ವಿಶ್ವವಿದ್ಯಾನಿಲಯ, ಪು 44.

9. ಇಕ್ಕೇರಿ ಕೋಟೆಯ ಅವಶೇಷಗಳಲ್ಲಿ ಕೆರೆಯ ಅವಶೇಷವೊಂದಿದೆ. ಅದರ ಸುತ್ತಲೂ ಸುಂದರವಾದ ಕಮಾನುಗಳುಳ್ಳ ಪಡಸಾಲೆಯೊಂದರ ಅರ್ಧಂಬರ್ಧ ಕುರುಹುಗಳಿವೆ.

10. ' ಮೈಸೂರು ಆರ್ಕಿಯಾಲಜಿಕಲ್ ರಿಪೋರ್ಟ್' 1937, ಪುಟ 60.

11. ಕೆಳದಿ ಕಾಲದ ಮುಖ್ಯ ದೇವಾಲಯಗಳಲ್ಲೆಲ್ಲ ಸ್ತಂಭಗಳು, ತಲವಿನ್ಯಾಸ, ಭಿತ್ತಿ ಅಲಂಕರಣ, ಬಹುಮಟ್ಟಿಗೆ ಶಿಖರ ಹೀಗೆ ಸಾಮಾನ್ಯ ಶೈಲಿಯೊಂದು ಬಳಕೆಯಲ್ಲಿತ್ತು. ಆದರೆ, ಶಿಖರಗಳಿಗೆ ಸಂಬಂಧಿಸಿದಂತೆ ಇಂಥ ವೈವಿಧ್ಯತೆಯನ್ನು ಕಾಣುತ್ತೇವೆ. ಅದಕ್ಕೂ ಮುಖ್ಯವಾಗಿ ಸಣ್ಣ ಪ್ರಮಾಣದ ದೇವಾಲಯಗಳಲ್ಲಿ ಇಂಥ ಸ್ಥಾನಿಕ ಅಂಶಗಳನ್ನು ದೊಡ್ಡ ಪ್ರಮಾಣದಲ್ಲಿ ಕಾಣಬಹುದು.

ಆರ್.ವೆಂಕಟೇಶ ಮೂರ್ತಿ

# ಕೆಲವು ದೇವಾಲಯ ಸಂಬಂಧೀ ದಾನಶಾಸನಗಳಲ್ಲಿ ನಿಬಂಧನೆಗಳು

ಒಂದು ದೇಶದಲ್ಲಿ ರಾಜ್ಯ ಸ್ಥಾಪನೆಯಿಂದ ಸುಸ್ಥಿರತೆ ಉಂಟಾದಂತೆ ಜನರು ಸೌಖ್ಯದಿಂದ ಜೀವನ ವನ್ನು ಸಾಗಿಸುತ್ತಿರುವಾಗ ದೇವಾಲಯಗಳನ್ನು ಕಟ್ಟಿಸಿ ಅವುಗಳ ನಿತ್ಯಪೂಜೆ ಉತ್ಸವ ಜೀರ್ಣೋದ್ಧಾರ ಮುಂತಾದ ಕಾರ್ಯಗಳಿಗಾಗಿ ದತ್ತಿಯನ್ನು ಬಿಡುವ ಸಾಂಪ್ರದಾಯವು ಆರಂಭವಾಗಿರುವುದು ಕಂಡು ಬರುತ್ತದೆ.[1]

ಪ್ರಾಚೀನ ಕರ್ನಾಟಕದ ದೇವಸ್ಥಾನಗಳು ಆ ಜನರ ಭಕ್ತಿ ಮತ್ತು ನಿಷ್ಠೆಗಳ ಪ್ರತೀಕಗಳು. ದೇವಸ್ಥಾನದ ನಿರ್ಮಾಣದ ವಿಷಯದಲ್ಲಿ ಹೆಚ್ಚು ಹುರುಪು ಉತ್ಸಾಹಗಳು ಗೋಚರವಾಗುವುದು ಎಂಟು ಅಥವಾ ಒಂಭತ್ತನೆಯ ಶತಮಾನಗಳ ಬಳಿಕ. ದೇವಸ್ಥಾನವನ್ನು ಕಟ್ಟಿಸಿದರೆ ಸಾಲದು ಅದು ಸಾರೋದ್ಧಾರವಾಗಿ ನಡೆಯುತ್ತಾ ಊರ್ಜಿತವಾಗಬೇಕಾಗುತ್ತದೆ. ಅದು ಭಕ್ತ ಜನರಿಂದ ಆಗಾಗ್ಗೆ ಬರಬಹುದಾದ ಕಾಣಿಕೆಗಳನ್ನಷ್ಟೇ ಅವಲಂಬಿಸಿ, ಕುಳಿತುಕೊಳ್ಳಲಾರದು. ಆದಕಾರಣ ದೇವಸ್ಥಾನವನ್ನು ಕಟ್ಟಿಸಿದ ವ್ಯಕ್ತಿಯೇ ಅದಕ್ಕೆ ಸಮೃದ್ಧವಾಗಿ ದತ್ತಿಗಳನ್ನು ಬಿಡುತ್ತಿದ್ದರು. ಅಷ್ಟೇ ಅಲ್ಲ ಒಬ್ಬ ವ್ಯಕ್ತಿಯಿಂದ ದೇವಸ್ಥಾನವು ನಿರ್ಮಾಣ ವಾಯಿತೆಂದರೆ, ಹತ್ತಾರು ಜನರು, ಹತ್ತಾರು ಶ್ರೇಣಿಗಳು, ಒಮ್ಮೊಮ್ಮೆ ಹತ್ತಾರು ಗ್ರಾಮಗಳು ಸೇರಿ ಅದಕ್ಕೆ ದತ್ತಿಯನ್ನು ಬಿಟ್ಟು ಕೊಡುತ್ತಿದ್ದರು.[2] ಹೀಗೆ ನೀಡಿದ ದಾನ ದತ್ತಿಗಳ ವಿಷಯಗಳು ಸಾರ್ವಜನಿಕರಿಗೆ ತಿಳಿಯುವ ಸಲುವಾಗಿ ನಿರ್ದಿಷ್ಟವಾದ ಸ್ಥಳಗಳಲ್ಲಿ ಶಿಲಾಶಾಸನಗಳನ್ನು ಹಾಕಿಸುತ್ತಿದ್ದರು.

ಶಾಸನ ಪ್ರಪಂಚದಲ್ಲಿ ದಾನ ಶಾಸನಗಳದ್ದೇ ಸಿಂಹಪಾಲು. ರಾಜರು, ಅಧಿಕಾರಿಗಳು, ಮಹಾಜನರು, ಸಾರ್ವಜನಿಕರು, ಮುಂತಾದವರು ದೇವಾಲಯಗಳಿಗೆ, ಪೂಜಾರಿಗಳಿಗೆ, ಅರ್ಚಕರಿಗೆ, ಅಲ್ಲಿ ಕೆಲಸ ಮಾಡುವವರಿಗೆ ಮತ್ತು ದೇವಾಲಯಗಳಿಗೆ ಹೊಂದಿ ಕೊಂಡಂತೆ ಇರುತ್ತಿದ್ದ ಮಠಗಳಿಗೆ ಅಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ, ಪಾಠ ಹೇಳಿಕೊಡುವ ಉಪಾಧ್ಯಾಯರುಗಳಿಗೆ ಅವರ ಜೀವನೋಪಾ ಯಗಳಿಗಾಗಿ, ಹೀಗೆ ಹತ್ತು ಹಲವಾರು ರೂಪದಲ್ಲಿ ದಾನ ನೀಡುತ್ತಿದ್ದ ಉಲ್ಲೇಖಗಳು ಈ ದಾನ ಶಾಸನಗಳಲ್ಲಿ ಹೇರಳವಾಗಿ ಕಂಡು ಬರುತ್ತವೆ.

ದೇವಾಲಯವು ನಿರ್ಮಾಣವಾಗಿ ಹೀಗೆ ಬಂದ ದಾನ, ದತ್ತಿಗಳು, ಅಲ್ಲಿನ ಕೆಲಸ ಕಾರ್ಯಗಳು, ಅವುಗಳ ನಿರ್ವಹಣಾ ವಿಧಾನ, ಪೂಜಾ ಕೈಂಕರ್ಯಗಳು, ಪೂಜೆ ಮಾಡುವ ಮತ್ತು ಅವರಿಗೆ ಸಹಾಯ ಮಾಡುವ ಜನರ ಜೀವನ ನಿರ್ವಹಣೆ, ಪೂಜಾ ವಿಧಿಯಲ್ಲೇ ಸೇರಿಕೊಂಡ ಸಂಗೀತ ಸೇವೆ, ನೃತ್ಯ ಸೇವೆ, ದೇವಾಲಯಗಳು ಶಿಥಿಲವಾಗುವುದನ್ನು ತಡೆಯಲು ಆಗಬೇಕಾಗಿದ್ದ ಖಂಡ ಸ್ಫುಟಿತ ಜೀರ್ಣೋದ್ಧಾರ,..... ಇತ್ಯಾದಿ ಕಾರ್ಯಗಳ ವ್ಯವಸ್ಥೆ ಮತ್ತು ನಿರ್ವಹಣೆ ಮುಂತಾದ ಜವಾಬ್ದಾರಿಗಳನ್ನು ಗಂಭೀರವಾಗಿ ಪರಿಗಣಿಸಬೇಕಾದ್ದು ಅವಶ್ಯಕವಾಯ್ತು. ಇದರಿಂದ ದೇವಾಲಯಗಳ ಆಡಳಿತಾತ್ಮಕ ಜವಾಬ್ದಾರಿಯನ್ನು ಒಬ್ಬ ವ್ಯಕ್ತಿಯು ಒಪ್ಪಿಕೊಂಡು ನಿರ್ವಹಿಸುವುದು ಅನಿವಾರ್ಯವಾಯಿತು. ಹೀಗೆ ದೇವಾಲಯಗಳ ವ್ಯವಸ್ಥೆಯ ಜವಾಬ್ದಾರಿ ಹೊತ್ತ ಮುಖ್ಯಸ್ಥನೇ ಸ್ಥಾನಪತಿ' ಅಥವಾ ಸ್ಥಾನಿಕ.[3]

"ದೇವಸ್ಥಾನದ ಆಡಳಿತಾತ್ಮಕ ಮತ್ತು ಆರ್ಥಿಕ ಜವಾಬ್ದಾರಿಯನ್ನು ಒಪ್ಪಿಕೊಂಡಿದ್ದ ಸ್ಥಾನಿಕ' ಅಥವಾ ಸ್ಥಾನಪತಿಯನ್ನು ರಾಜನಾಗಲೀ ಅಥವಾ ಮತ್ತಾವುದೇ ಅಧಿಕಾರಿಯಾಗಲೀ ನೇಮಿಸುತ್ತಿದ್ದಂತೆ ಉಲ್ಲೇಖಗಳಿಲ್ಲ. ಅದು ವಂಶಪಾರಂಪರ್ಯವಾಗಿ ಅಥವಾ ಶಿಷ್ಯ ಪರಂಪರೆಯಲ್ಲಿ ಮುಂದುವರೆಯುತ್ತಾ ಬಂದ ಅಧಿಕಾರವಾಗಿತ್ತು. ಸ್ಥಳದ ತಪೋಧನನಾದ ಅಥವಾ ಬುದ್ಧಿವಂತ ಹಿರಿಯನಾದವನನ್ನು ಭಕ್ತಜನರು ಮುಖ್ಯಸ್ಥನನ್ನಾಗಿ ಅವಿರೋಧವಾಗಿ ಅಥವಾ ಸ್ವಪ್ರೇರಣೆಯಿಂದ ಗುರುತಿಸಿ ಗೌರವಿಸುತ್ತಿದ್ದರು – ಎಂಬುದೊಂದು ಊಹೆ; ಇದನ್ನು ಪುಷ್ಟೀಕರಿಸಲು ಯಾವ ಶಾಸನಗಳನೆರವೂ ದೊರೆತಿಲ್ಲ", ಎಂಬುದಾಗಿ ಡಾ॥ ಎಚ್.ಎಸ್.ಗೋಪಾಲರಾವ್ ಅವರು ತಮ್ಮ ಅಪ್ರಕಟಿತ ಮಹಾಪ್ರಬಂಧದಲ್ಲಿ ಹೇಳಿದ್ದಾರೆ. ಆದರೆ ಅವರ ಪ್ರಬಂಧದ ಕಾಲವ್ಯಾಪ್ತಿಗೆ

ಹೊರತುಪಡಿಸಿದ ಮಳವಳ್ಳಿ ತಾಲ್ಲೂಕಿನ ಒಂದು ಶಾಸನವು[4] ವೀರಬಲ್ಲಾಳದೇವನ ಆಳ್ವಿಕೆಯಲ್ಲಿ ಮಹಾಪ್ರಧಾನಿಯಾದ ಚಂದ್ರಮುಳಿಯಣ್ಣನು ಪಿರಿಯಪಟ್ಟಿದೇವ ಅಗ್ರಹಾರಕ್ಕಾಗಿ ಬಟ್ಟಯಾಂಗ ಎಂಬುವನಿಗೆ ಅಂತರಪಳ್ಳಿಯನ್ನು ದಾನವಾಗಿ ನೀಡಿದುದೇ ಅಲ್ಲದೆ, ಆ ಹಳ್ಳಿಯ ಕೈಲಾಸ ದೇವಾಲಯದಲ್ಲಿ ಚಂದ್ರಮೌಳೀಶ್ವರ ದೇವರನ್ನು ಸ್ಥಾಪಿಸಿ, ದೇವಾಲಯದ ಉಸ್ತುವಾರಿಯನ್ನು ನೋಡಿಕೊಳ್ಳಲು ವಿನ್ನಯಾಣ್ಡಾರ್ ಎಂಬುವನ ಮಗನಾದ ಮಾದೇವ ಎಂಬುವನನ್ನು ಸ್ಥಾನಪತಿಯಾಗಿ ನೇಮಿಸಿದ ಎಂದು ತಿಳಿಸುತ್ತದೆ. ಇದರಿಂದ ಅಧಿಕಾರಿಗಳೂ ಸ್ಥಾನಪತಿಯನ್ನು ನೇಮಿಸುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ.

ಡಾ॥ ಎನ್.ವೆಂಕಟರಮಣಯ್ಯನವರ ಪ್ರಕಾರ ವಿಜಯನಗರದ ಕಾಲದ ಸ್ಥಾನಿಕರ ಕರ್ತವ್ಯಗಳು ಇಷ್ಟು –"ದೇವಸ್ಥಾನಕ್ಕೆ ಸೇರಿದ್ದ ಭೂಮಿಗಳನ್ನು ನೋಡಿ ಕೊಳ್ಳುವುದು; ದೇವಸ್ಥಾನದ ಪರವಾಗಿ ಧನರೂಪದ, ಭೂಮಿರೂಪದ ದತ್ತಿಗಳನ್ನು ಸ್ವೀಕರಿಸುವುದು; ಭೂಮಿಯನ್ನು ಕೊಂಡುಕೊಂಡು ದೇವಸ್ಥಾನದ ಆಸ್ತಿಯನ್ನು ಹೆಚ್ಚಿಸುವುದು; ಉತ್ಸವಗಳಿಗೆ ಹಣಬೇಕಾದಾಗ ಭೂಮಿಯನ್ನು ಮಾರುವುದು; ಹೊಲದ ಆಧಾರದ ಮೇಲೆ ದೇವಸ್ಥಾದನ ಹಣವನ್ನು ಬಡ್ಡಿಗೆ ಸಾಲವಾಗಿ ಕೊಡುವುದು; ಸಾಲ ತೀರಿದಾಗ ಅಡವಿಟ್ಟಿದ್ದ ಹೊಲವನ್ನು ವಶಪಡಿಸಿಕೊಳ್ಳುವುದು; ದೇವಸ್ಥಾನದ ಭೂಮಿಯನ್ನು ರೈತರಿಗೆ ಗೇಣಿಯಾಗಿ ಕೊಡುವುದು; ದೇವಸ್ಥಾನದ ಐಶ್ವರ್ಯದ ಮೇಲ್ವಿಚಾರಣೆ". ಇದು ನಮ್ಮ ಕಾಲದ ಸೈನಿಕರಿಗೂ ಬಹುಮಟ್ಟಿಗೆ ಅನ್ವಯಿಸುತ್ತದೆ.[5]

ಈ ಸ್ಥಾನಿಕರು ಗ್ರಾಮಜೀವನದಲ್ಲಿ ಅತ್ಯಂತ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದರು. ಊರಿನಲ್ಲಿ ಯಾವ ಪ್ರಮುಖ ಕಾರ್ಯವಾದರೂ ಅವರ ಸಾಕ್ಷಿಯಲ್ಲಿ ನಡೆಯುತ್ತಿತ್ತು. ಉದಾಹರಣೆಗೆ, ಹಳೇ ಆಲೂರಿನ ಶಾಸನವೊಂದು, ವೇಳರು, ಕೋವರು, ಕುಣೆಂದರು ಮತ್ತು ನಲ್ಲೊಡೆಯರು, ಮುಂತಾದ ಬೇರೆ ಬೇರೆ ವರ್ಗಗಳಿಗೆ ಸೇರಿದ ಜನರು ಚಂದ್ರನಾಥ ಬಸದಿಯನ್ನು ಜೀರ್ಣೋರ್ಜಿತಗೊಳಿಸಿದನ್ನು ದಾಖಲಿ ಸಿರುವುದೇ ಅಲ್ಲದೆ, ಪಾರ್ಶ್ವದೇವನ ಮಕ್ಕಳೂ, ಕವಿ ಮತ್ತು ಗಮಕಿ ಎಂದು ವರ್ಣಿತವಾಗಿರುವ ಮಲ್ಲಿಸೇನ ಮಲಧಾರಿಗಳ ಶಿಷ್ಯರೂ ಆದ ಆದಿಯಣ್ಣ ಮತ್ತು ಚಲುವಣ್ಣರಿಗೆ ಭೂಮಿ, ತೋಟ, ಮುಂತಾದುವನ್ನು ದತ್ತಿಯಾಗಿ ನೀಡಿಶಿವ ಮತ್ತು ವಿಷ್ಣು ದೇವಾಲಯದ ಸ್ಥಾನಪತಿಗಳು ಈ ದತ್ತಿಗೆ ಸಾಕ್ಷಿಗಳಾಗಿದ್ದು, ಮುಂದೆ ಅವರು ಈ ದತ್ತಿಯ ರಕ್ಷಣೆಗೆ ಹೊಣೆಗಾರರು[6] ಎಂಬುದನ್ನು ತಿಳಿಸುತ್ತದೆ.

ದಾನ ದತ್ತಿಗಳನ್ನು ನೀಡುತ್ತಿದ್ದ ದಾನಿಗಳು, ದಾನ ತೆಗೆದುಕೊಂಡ ವ್ಯಕ್ತಿಗಳಿಂದ ಒಳ್ಳೆಯ ಗುಣ ಮತ್ತು ನಡತೆಗಳನ್ನು ಅಪೇಕ್ಷಿಸುತ್ತಿದ್ದರು. ಇದನ್ನು ಬೆಂಗಳೂರು ತಾಲ್ಲೂಕಿನ ತಲಗಟ್ಟಪುರದ ಒಂದು ಶಾಸನದ ಮೂಲಕ ಸ್ಪಷ್ಟಪಡಿಸಬಹುದಾಗಿದೆ. "ಕಾಮದೇವರ್ ಆದ ನಾನು ಎಚ್ಚರಿಕೆ ನೀಡುವುದೇನೆಂದರೆ, ಯಾರೇ ಆದರೂ ಶಿವಪುರದ ಒಳ್ಳೆಯದನ್ನು ಅಲಕ್ಷಿಸಿದರೆ ಅಥವಾ ಮತ್ತೊಬ್ಬರ ಮೇಲೆ ತಪ್ಪು ದೂರು ನೀಡಿದರೆ, ಅಥವಾ ಅಡವವಿಡುವಂತಹ ಕೆಲಸವನ್ನೇನಾದರೂ ಮಾಡಿದರೆ ದಂಡವನ್ನು ವಸೂಲಿ ಮಾಡುವುದೇ ಅಲ್ಲದೆ, ಅವರನ್ನು ವೃತ್ತಿಯಿಂದ ಉಚ್ಛಾಟಿಸಲಾಗುವುದು"[7] ಎಂದು ನಿಂಬಂಧನೆಯನ್ನು ಹಾಕಿರುವುದನ್ನು ಕಾಣಬಹುದು.

ಈ ದಾನ ಶಾಸನಗಳಲ್ಲಿ ಕೆಲವು ಶಾಸನಗಳು ವಿಶಿಷ್ಟವಾದ ವಿಚಾರಗಳನ್ನು ತಿಳಿಸುತ್ತವೆ. ಇಂತಹವು ಬಹಳ ವಿರಳವಾಗಿ ದೊರೆಯುತ್ತವೆ. ಇಂತಹವುಗಳಲ್ಲಿ ಸ್ಥಾನಪತಿಗಳು, ಮಹಾಜನರು, ದಾನದ ಭೂಮಿಯನ್ನು ತಮ್ಮ ತೊಂದರೆಗಳಿಗಾಗಿ ಅಡವುಗಳನ್ನು ಇಡುತ್ತಿದ್ದುದು, ದೇವಾಲಯದಿಂದ ಸಾಲವನ್ನು ಕೊಟ್ಟು ಅದರ ವಸೂಲಾತಿಗಾಗಿ ಹೋಗುತ್ತಿದ್ದವರಿಗೆ ಹಾಕುತ್ತಿದ್ದ ನಿಬಂಧನೆಗಳು ಮತ್ತು ದೇವಾಲಯಕ್ಕೆ ಸಂಬಂಧಿಸಿದ ಭೂಮಿಗಳನ್ನು ಮಾರಾಟ ಮಾಡಿದಾಗ, ಕೊಂಡವರಿಗೆ ವಿಧಿಸುತ್ತಿದ್ದ ನಿಬಂಧನೆಗಳು ಇತ್ಯಾದಿ.ವಿಶೇಷ ಗಮನವನ್ನು ಸೆಳೆಯುತ್ತವೆ.

ಸ್ಥಾನಪತಿಗಳು ತಮಗಿರುವ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಕರ್ತವ್ಯ ಲೋಪವನ್ನು ಎಸಗುತ್ತಿದ್ದರು ಎಂಬುದನ್ನು ಶ್ರವಣಬೆಳಗೊಳದ ದೊಡ್ಡಬೆಟ್ಟದ ಗೊಮ್ಮಟೇಶ್ವರ ದೇವಾಲಯದ ಕಂಬದ ಮೇಲಿರುವ ಒಂದು ಶಾಸನ ಮತ್ತು ಜೈನ ಮಠದಲ್ಲಿರುವ ತಾಮ್ರಶಾಸನ (ಎರಡೂ ಒಂದೇ ವಿಷಯವನ್ನು ಒಳಗೊಂಡಿದೆ) ಇದನ್ನು ಸ್ಪಷ್ಟ ಪಡಿಸುತ್ತವೆ.

ಬೆಳುಗೊಳದ ಗೊಮ್ಮಟೇಶ್ವರಾಲಯಕ್ಕೆ ಸೇರಿದ್ದ ಅರ್ಚನ ವೃತ್ತಿಯ ಸ್ವಾಸ್ತೆಯನ್ನು ಅಲ್ಲಿನ ಸ್ಥಾನಿಕರು

ತಮ್ಮ ತಮ್ಮ ಅನುಪತ್ಯದಿಂದ (ತೊಂದರೆಯಿಂದ) ವರ್ತಕರು ಹಾಗೂ ಗೌಡರುಗಳಾದ ಚೆನ್ನಣ್ಣ, ಚಿಕ್ಕಣ್ಣ, ಚಿಗಪಾಯಸೆಟ್ಟಿ, ಅಜ್ಜಣ್ಣನ ಪದುಮಪ್ಪನ ಮಗ ಪಂಡಣ್ಣ, ಪದುಮರಸೈಯ್ಯ, ದೊಡ್ಡಣ್ಣ,ಪಂಚಬಾಣ, ಕವಿಗಳ ಮಗ ಬೊಮ್ಮಪ್ಪ, ಬೊಮ್ಮಣ್ಣ ಕವಿ, ವಿಜೆಯೆಂಣ, ಗುಂಮಂಣ, ಚಾರುಕೀರ್ತಿ, ನಾಗಪ್ಪ, ಬೆಡದೈಯ್ಯ, ಬೊಂಮಿಸೆಟ್ಟಿ, ಹೊಸಪಳ್ಳಿಯ ರಾಯಣ್ಣ, ಪರೆಯಂಣ ಗೌಡ, ಬೈರಸೆಟ್ಟಿ, ಬೈರಂಣ, ವೀರಯ್ಯ, ಮುಂತಾದವರಿಗೆ ಅಡವು ಭೋಗ್ಯವನ್ನು ಮಾಡಿದ್ದರು. ಇದನ್ನು ತಿಳಿದ ಚಾಮರಾಜವೊಡೆರೈಯನವರು, ಬಹುಕಾಲದಿಂದ ಅಡವು ಮಾಡಿಕೊಂಡಿದ್ದವರನ್ನು ಕರೆಸಿ, ಸ್ಥಾನದವರಿಗೆ ನೀವು ಕೊಟ್ಟಂಥ ಸಾಲವನ್ನು ನಾವು ತೀರಿಸುತ್ತೇವೆ. ಎಂದು ಹೇಳಿದಾಗ, ವರ್ತಕರು ಮತ್ತು ಗೌಡರು, ತಮ್ಮ ತಂದೆ ತಾಯಿಗಳ ಹೆಸರಿನಲ್ಲಿ ನಾವು ಪಡೆದಿರುವ ಭೂಮಿಯನ್ನು ಧಾರೆಯೆರೆದು ಕೊಡುತ್ತೇವೆ ಎಂದು ಸ್ಥಾನದವರಿಗೆ ಧಾರೆಯೆರೆದುಕೊಟ್ಟು ಮುಂದೆ ಬೆಳುಗುಳದ ಸ್ಥಾನದವರು ಸ್ವಾಸ್ತಿಯನು ಅವನಾನೊಬ್ಬನು ಅಡಹು ಹಿಡಿದಂತವರು, ಅಡವ ಕೊಟಂತವರು ಧರುಶನ ಧರ್ಮಕ್ಕೆ ಹೊರಗು ಸ್ಥಾನ ಮಾನ್ಯಕೆ ಕಾರಣವಿಲ್ಲ. ಇಷ್ಟಕ್ಕೂ ಮೀರಿ ಅಡವ ಕೊಟಂತವರು, ಅಡವ ಹಿಡಿದಂತವರನು ಯಿ ರಾಜ್ಯಕ್ಕೆ ಅಧಿಪತಿಯಾಗಿದಂಥ ದೊರೆಗಳು ಈ ದೇವರ ಧರ್ಮವನು ನಡೆಸಲುಳ್ಳವರು" ಎಂದು ನಿಬಂಧನೆಯನ್ನು ಹಾಕಿರುವುದು ಈ ಎರಡೂ ಶಾಸನಗಳಿಂದ ತಿಳಿದುಬರುತ್ತದೆ.[8]

ಒಂದೇ ವಿಷಯವನ್ನು ಹೊಂದಿರುವ ಗೊರೂರು ಪರವಾಸುದೇವರ ದೇವಾಲಯದ ಬಾಗಿಲುವಾಡದ ಉತ್ತರಮತ್ತು ದಕ್ಷಿಣದಲ್ಲಿರುವ ಮತ್ತೆರಡು ಶಾಸನಗಳು[9] ಒತ್ತೆಯಿಡಲಾಗಿದ್ದ ದೇವಾಲಯದ ಭೂಮಿಯನ್ನು ಸ್ತ್ರೀಯೊಬ್ಬಳು ಬಿಡಿಸಿಕೊಟ್ಟರುವುದನ್ನು ತಿಳಿಸುತ್ತವೆ. ಗೊರೂರಿನ ಅನಾದಿ ಅಗ್ರಹಾರದ ಅಕ್ಕಲಯಕ್ಕನಮಗಳು ತಂಗೆ ಪೆಣ್ಣಕ್ಕ (ಬಹುಶಃ ಅಗ್ರಹಾರದಲ್ಲಿ ಸೇವೆ ಸಲ್ಲಿಸುತ್ತಿದ್ದವರು?) ಶ್ರೀ ವಾಸುದೇವರಿಗೆ ಸಂಬಂಧಪಟ್ಟ ಭೂಮಿಯನ್ನು ಅಲ್ಲಿನ ನಂಬಿಯರು ಹಿಂದೆ ಒತ್ತೆಯಿಟ್ಟಿದ್ದುದನ್ನು ಹೊನ್ನು ಕೊಟ್ಟು ಬಿಡಿಸಿಕೊಟ್ಟಿರುವುದೇ ಅಲ್ಲದೆ, ಪ್ರತೀದಿನ ಊಟದ ವ್ಯವಸ್ಥೆಗಾಗಿ ಒಂದು ಬಳ್ಳ ಅಕ್ಕಿಯನ್ನು ದಾನವಾಗಿ ನೀಡಿರುವುದನ್ನು ದಾಖಲಿಸಿದೆ. ಮುಂದೆ, ಈ ದಿನದಿಂದ ಆದಿಯಾಗಿ ನಂಬಿಗಳು ಭೂಮಿಯನ್ನು ಒತ್ತೆಯಿಟ್ಟಿದ್ದಾದರೆ ಅವರು ಹದಿನೆಂಟು ಸಾಮ್ಯಗಳಿಗೆ ಹೊರಗು ಮತ್ತು ಒತ್ತೆ ಇಟ್ಟುಕೊಂಡವರೂ ಸಹ ಹದಿನೆಂಟು ಸಾಮ್ಯಗಳಿಗೆ ಹೊರಗು ಎಂದು ತಿಳಿಸಿ ನಂಬಿಯರು ಇನ್ನು ಮುಂದೆ ಪ್ರತೀದಿನ ಒಂದು ಬಳ್ಳ ಅಕ್ಕಿಯನ್ನು ದೇವರ ಪ್ರಸಾದಕ್ಕಾಗಿ ಕೊಡುವುದು ಎಂಬ ನಿಬಂಧನೆಯನ್ನು ವಿಧಿಸಿರುವುದನ್ನು ತಿಳಿಸುತ್ತದೆ.

ಈ ವಿವರಗಳಿಂದ, ಯಾವ ಸಂದರ್ಭದಲ್ಲಿ ಅಥವಾ ಯಾವ ಪರಿಸ್ಥಿತಿಯಲ್ಲಿ ಭೂಮಿಯನ್ನು ಅಡವು ಹಾಕಿಕೊಂಡರು ಎಂಬುದು ತಿಳಿಯದಿದ್ದರೂ, ದೇವಾಲಯದ ಅಧಿಕಾರ ವರ್ಗದವರು ದೈವ ನಿಧಿಯನ್ನು ದುರುಪಯೋಗ ಪಡಿಸಿಕೊಂಡ ರೆಂಬುದಂತೂ ಇದರಿಂದ ಖಚಿತಗೊಳ್ಳುತ್ತದೆ. ಈ ರೀತಿ ದುರುಪಯೋಗ ಪಡಿಸಿಕೊಳ್ಳುತಿದ್ದುದು ರಾಜರ, ಅಧಿಕಾರಿಗಳ ಗಮನಕ್ಕೆ ಬಂದರೂ, ಅಂತಹವರ ವಿರುದ್ಧ ಯಾವುದೇ ರೀತಿಯ ಕ್ರಮ ಕೈಗೊಳ್ಳದಿರುವುದು ಆಶ್ಚರ್ಯವೆನಿಸುತ್ತದೆ.

ಸಿಂಧಘಟ್ಟದ ಒಂದು ಶಾಸನವು 'ಕ್ರಯಲಕ್ಷತ' ದಾನವನ್ನು ಉಲ್ಲೇಖಿಸಿದೆ[10]. ಸಿಂಧಘಟ್ಟದ ಆಶೇಷ ಮಹಾಜನಂಗಳು ಗಂಡಸೆಯ ದೇವಣ್ಣನ ಮಕ್ಕಳು ಮಾದಣ್ಣ ಮತ್ತು ಸೇನ ಬೊಮ್ಮಣ್ಣನೊಡನೆ ಮಾಡಿಕೊಂಡ ಶಾನಕ್ರಮದ ಪ್ರಕಾರ, ಮಹಾಜನಗಳು ಸಿಂಧಘಟ್ಟದ ಲಕ್ಷ್ಮೀನಾರಾಯಣ ದೇವರ ಸ್ಥಾನ ಮತ್ತು ಆ ದೇವರ ಅಖಂಡಿತ ಎರಡು ವೃತ್ತಿಗಳನ್ನೂ, ಹಳಿಹಿರಿಯೂರಿನ ಗದ್ದೆ, ಬೆದ್ದಲು, ಮನೆ ಇತ್ಯಾದಿಗಳನ್ನು ಸಮಸ್ತ ಆಗಾಮಿ, ಬಳಿ (ತೆರಿಗೆ) ಸಹಿತ ತತ್ಕಾಲೋಚಿತ ಕ್ರಯದ್ರವ್ಯ 49 ವರಹ ಗದ್ಯಾಣಗಳಿಗೆ ಮಾರುತ್ತಾರೆ. ತಾವೇ ಒಪ್ಪಿ ಎಲ್ಲವನ್ನೂ ಕಳೆದುಕೊಂಡು ಕ್ರಯಲಕ್ಷಣ ಲಕ್ಷಿತ ದಾನವಾಗಿ ಕೊಟ್ಟ ವೃತ್ತಿಗೆ ಮತ್ತು ದೇವರಿಗೆ ಮತ್ತು ಊರಿಂದ ಬರುವ ಸಿದ್ಧಾಯವನ್ನು ಪ್ರತಿವರುಷವೂ ಮಹಾಜನಗಳು ತಾವೇ ತೆಗೆದುಕೊಳ್ಳುತ್ತಾರೆ. ಸೇಸೆ, ಸಿದ್ಧಾಯಗಳು ಯಾವುದೆಂದರೆ:- ಅಳಿವು, ಅನ್ಯಾಯ, ಅಭ್ಯಾತಿ, ಕಿರುಕುಳ, ಕಟ್ಟುಗೂಳು, ಕಟಕಸೇವೆ, ಆನೆಸೇಸೆ, ಪಟ್ಟಬದ್ಧ, ಪುತ್ರೋತ್ಸವ, ಬಾಸಿಗದೆರೆ, ಹೊದಕೆ ಇತ್ಯಾದಿಗಳು. ವೃತ್ತಿಗೆ ಬಂದ ಸೇಸೆ, ಸಿದ್ಧಾಯಗಳನ್ನು ಮಹಾಜನಗಳು ತಾವೇ ತೆತ್ತು ಸರ್ವಬಾಧಾ ಪರಿಹಾರವಾಗಿ ಮಾದಣ್ಣ, ಬೊಮ್ಮಣ್ಣ ಅವರುಗಳಿಗೆ ಸರ್ವಮಾನ್ಯರಾಗಿ ಪರಿಹರಿಸಕೊಡತಕ್ಕದ್ದು. ಆ ಎರಡು ವೃತ್ತಿಗಳಿಗೆ ಹಳಿಹಿರಿ ಊರಕೊಡಗಿದೆರೆ, ಬನಂಗುದರೆ, ಖಾಣ, ಅಭ್ಯಾಗರೆ, ಸೇಸೆ, ಸಿದ್ಧಾಯ, ಅಳಿವು, ಅನ್ಯಾಯ ಏನು ಬಂದರೂ

ೂಮ್ಮಣ್ಣ, ಮಾದಣ್ಣಗಳೇ ತೆಗೆದುಕೊಳ್ಳುವುದು. ದೇವ
ಗೆ ಮಾದಣ್ಣ, ಬೊಮ್ಮಣ್ಣಗಳು ಮಾಡುವ ಶ್ರೀ ಕಾರ್ಯ
ಳೆಂದರೆ ಎರಡು ಹೊತ್ತಿನ ಉಪಹಾರ, ದೀವಿಗೆ, ದವನ,
ಾಲು, ಪಂಚಪರ್ವ – ಇತ್ಯಾದಿಗಳು. ಲಕ್ಷ್ಮೀನಾರಾ
ಯಣ ದೇವಾಲಯ ಸೋರಿಬಿದ್ದರೆ (ಮೇಲುಗೆಲಸ,
ಣ್ಣಹೊಡಿಸುವುದು ಬಿಟ್ಟು) ಮತ್ತು ಬೇರೆ ಏನು
ಾಧೆ ಆದರೂ ಅದಕ್ಕೆ ಮಾದಣ್ಣ ಬೊಮ್ಮಣ್ಣಗಳು
ರಣಕರ್ತರಲ್ಲ. ಆ ದೇವರಸ್ಥಾನ ವೃತ್ತಿಯ ಹಳ್ಳಿ
ರ ಊರ ಗದ್ದೆ ಬೆದ್ದಲ ಮೇರೆ, ಊರು ಸಾಲ,
ತ್ಯೇಕಸಾಲ, ಆದಿವ್ಯಾದಿ ಏನಾದರೂ ಇದ್ದು
ುಂದೆ ಅವು ತಿಳಿದರೆ ಮಹಾಜನಗಳೇ ಅವುಗಳನ್ನು
ರಿಹರಿಸಿಕೊಡತಕ್ಕದ್ದು – ಇಷ್ಟೆಲ್ಲ ವಿವರಗಳ ನಂತರ
ಸನವು ತನ್ನ ಭಾಗದಲ್ಲಿ ಅರ್ಧವನ್ನು
ಸೋಹಕ್ಕೂ, ಮಾದಣ್ಣನು ತನ್ನ ಭಾಗ್ಯದಲ್ಲಿದ್ದ
ರ್ಧವನ್ನು ವಿಷ್ಣುದೇವರಿಗೂ ಕೊಟ್ಟಿದ್ದನ್ನು
ಾಖಲಿಸಿದೆ.

ಆ ದೇವಸ್ಥಾನದ ಪೂಜೆಯ ಹಕ್ಕನ್ನೂ ಕೊಂಡ
ರು ಪಡೆದರು. ಆದರೆ ಆ ಊರಿನಿಂದ ದೇವರಿಗೆ
ರುವ ಸಿದ್ಧಾಯವನ್ನು ಪಡೆಯುವ ಹಕ್ಕನ್ನು ಮಾತ್ರ
ಹಾಜನಗಳು ತಾವೇ ಉಳಿಸಿಕೊಂಡರು. ಆದರ
ಲವಾಗಿ ಹಲವು ಜವಾಬ್ದಾರಿಗಳನ್ನು ಮಹಾಜನರೇ
ೂರಬೇಕಾಯಿತು. ಆ ದೇವರ ವೃತ್ತಿಗೆ ತೆರಬೇಕಾದ
ಸೆ... ಮುಂತಾಗಿ ಬಂದ ಬಾಧೆಗಳನ್ನು ತಾವೇ ಪರಿ
ರಿಸಿಕೊಳ್ಳಲೂ....ಹಾಗೂ ದೇವಾಲಯದ ಜೀರ್ಣೋ
ದ್ಧರ ಮಾಡಿಸಲು ಸಹ ಅವರೇ ಜವಾಬ್ದಾರರು.
ೇವರಿಗೆ ಕಾಲಕ್ಕೆ ತಕ್ಕಂತೆ ಪೂಜಾದಿಗಳನ್ನು ನಡೆಸಿ
ಂಡು ಹೋಗುವ ಹೊಣೆ ಮಾತ್ರ ಈ ಇಬ್ಬರದು.
ಎರಡು ವೃತ್ತಿಗೆ ಹಳಿಹಿರಿ ಊರೊಳಗಣ ಕೊಡಗಿ
ರೆ...ಮುಂತಾದ ತೆರಿಗೆಗಳಿಂದ ಬಂದ ಆದಾಯವನ್ನು
ಹ ಇವರೇ ಅನುಭವಿಸುವರು. ಇದು ಶಾಸನದ
ಾರಾಂಸ. ಇದರಿಂದ ಒಂದು ಅಂಶ ವ್ಯಕ್ತವಾಗುತ್ತದೆ.
ಹಾಜನರು ತೆರಬೇಕಾದ ತೆರಿಗೆಗಳಿಗಿಂತ ಹೆಚ್ಚಿನ
ಲು ಅವರಿಗೆ, ಆ ದೇವರಿಗೆ ಊರಿಂದ ಬರುವ
ಾಯದಿಂದ ದೊರೆಯುತ್ತಿರಬೇಕು. ಎಂತಲೇ ಇತರ
ಗೆಗಳನ್ನು ತಾವೇ ತೆತ್ತು ಜೀರ್ಣೋದ್ಧಾರದ
ಾರ್ಯವನ್ನು ತಾವೇ ಮಾಡುವ ಹೊಣೆ
ೊತ್ತಿದ್ದರು.[11]

ಇದೇ ಸಿಂಧಘಟ್ಟದ ಮತ್ತೊಂದು ಶಾಸನವೂ ಸಹ ಕ್ರಯ ಲಕ್ಷಿತದಾನ'ವನ್ನು ಉಲ್ಲೇಖಿಸುತ್ತದೆ.[12] ಸಿಂಧಘಟ್ಟದ ಮಹಾಜನಗಳು ಹಿರಿಯ ಬಂಢಾರದ ಚಿಕ್ಕಮಲೆಯ ನಾಯಕನ ಮಗ ಮತ್ತು ಮಾಚಿನಕಟ್ಟೆಯ ಸ್ಥಾನಪತಿಯೂ ಆದ ಮಲೆಯ ನಾಯಕನಿಗೆ ಸಂಗಮೇಶ್ವರ ಮತ್ತು ಜನ್ನೇಶ್ವರ ದೇವರ ಎರಡು ವೃತ್ತಿಗಳನ್ನು ತತ್ಕಾಲೀನ ಕ್ರಯ ದ್ರವ್ಯ ವರಹಗಳಿಗೆ ಮಾರುವುದನ್ನು ಶಾಸನವು ದಾಖಲಿಸಿರುವುದೇ ಅಲ್ಲದೆ ಮೇಲೆ ತಿಳಿಸಿರುವಂತೆಯೇ (ಕೃಷ್ಣರಾಜ ಪೇಟೆ – 86) ನಿಂಬಂಧನೆಗಳನ್ನು ಮಾಡಿರುವುದು ತಿಳಿಸುತ್ತದೆ.

ಬೈರಾಪುರದ ಮತ್ತೊಂದು ಶಾಸನವು[13] ಬೈರಾಪುರದ ಮಹಾಜನಗಳು ಸ್ಥಾನಿಕ ಬೊಮ್ಮಣ್ಣ ಮತ್ತು ಪ್ರಜೆಗಳು ಎಲ್ಲರೂ ಸೇರಿ ಐದು ಖಂಡುಗ ಬೀಜಾಪರಿ ಭೂಮಿಯನ್ನು ಅನಂತಪ್ಪ ಒಡೆಯನಿಗೆ ವರಹ ಗದ್ಯಾಣಗಳಿಗೆ ಮಾರುತ್ತಾರೆ. ಇದಕ್ಕೆ ಸಿಂಧಘಟ್ಟ ಮತ್ತು ಬಾಚಿಹಳ್ಳಿಯ ಮಹಾಜನಗಳು ಮತ್ತು ಇತರರು ಸಾಕ್ಷಿಗಳು ಎಂದು ಉಲ್ಲೇಖಿಸಿದೆ.

ಈ ಎಲ್ಲ ಶಾಸನಗಳು ಉಲ್ಲೇಖಿಸಿರುವ, ದಾಖಲಿಸಿರುವ ವಿವರಗಳನ್ನು ಹಿನ್ನೆಲೆಯಲ್ಲಿ ಅವಲೋಕಿಸಿದಾಗ ತಿಳಿದು ಬರುವ ಅಂಶವೆಂದರೆ, ದೇವರಿಗೆ ಅಥವಾ ದೇವಾಲಯಕ್ಕೆ ಸೇರಿದ ಆಸ್ತಿಗಳನ್ನು ಮಾರಾಟ ಮಾಡುವುದರೊಂದಿಗೆ, ಆ ದೇವರಿಗೆ ಸಲ್ಲಬೇಕಾದ ಪೂಜಾವಿಧಿಗಳನ್ನೂ ಕೊಂಡವರೇ ನಡೆಸಬೇಕು ಎನ್ನುವ ಮೂಲಕ ದೇವಾಲಯವನ್ನೇ ಮಾರಿಕೊಳ್ಳುತ್ತಿದ್ದುದಲ್ಲದೆ ತಮ್ಮ ಸ್ವಂತ ತೊಂದರೆಗಳನ್ನು ಪರಿಹಾರ ಮಾಡಿಕೊಳ್ಳಲು ಒತ್ತೆಯನ್ನು ಇಡುತ್ತಿದ್ದರು ಎಂದು ಭಾವಿಸ ಬಹುದಾಗಿದೆ.

“ದೇವಾಲಯಗಳನ್ನು ಮಾರಲು ಅಥವಾ ಒತ್ತೆಯಿಡಲು ದೇವಾಲಯದ ಆಡಳಿತ ವರ್ಗವೇ ಕಾರಣ ಎಂದು ಭಾವಿಸಬಹುದಾಗಿದೆ. ದುರಾಡಳಿತ, ದುಂದುವೆಚ್ಚ, ಅಸಾಮರ್ಥ್ಯ, ಅವ್ಯವಸ್ಥೆಗಳಿಂದಾಗಿ ದೇವಾಲಯಗಳ ಆರ್ಥಿಕ ಪರಿಸ್ಥಿತಿ ಹದಗೆಟ್ಟ ಸಂದರ್ಭದಲ್ಲಿ ಅವುಗಳನ್ನು ಮಾರುವ ಅಥವಾ ಒತ್ತೆಯಿಡುವ ಅಪರೂಪದ ಪ್ರಸಂಗಗಳು ಎದುರಾಗುತ್ತಿದ್ದವು”[14] ಎಂಬ ಡಾ॥ ಎಚ್.ಎಸ್.ಗೋಪಾಲರಾವ್ ಅವರ ಅಭಿಪ್ರಾಯವನ್ನು ಒಪ್ಪಬಹುದಾಗಿದೆ.

ಇಷ್ಟೆಲ್ಲಾ ಅವ್ಯವಸ್ಥೆಗಳ ನಡುವೆ ದೇವಾಲಯದ ಖಜಾನೆಯಿಂದ ಧಾನ್ಯವನ್ನು ಸಾಲವಾಗಿ ಕೊಟ್ಟು ಅದಕ್ಕೆ ಬಡ್ಡಿಯ ರೂಪದಲ್ಲಿ ಧಾನ್ಯವನ್ನು ಪಡೆದು ಖಜಾನೆ ತುಂಬಿಸುತ್ತಿದ್ದಂತಹ ವ್ಯವಸ್ಥೆಯೂ ಇದ್ದು, ವಸೂಲಾತಿಗಾಗಿ ಹೋಗುವ ವ್ಯಕ್ತಿಗಳು ಪಾಲಿಸ ಬೇಕಾದ ರೀತಿ ನೀತಿಗಳನ್ನು ಎಂದರೆ ಕಟ್ಟು ಪಾಡನ್ನು ಚನ್ನಪಟ್ಟಣ ತಾಲ್ಲೂಕಿನ ಮಳೂರು ಪಟ್ಟಣದ ನಾರಾಯಣ ಸ್ವಾಮಿ ದೇವಾಲಯದ ಹೊರಗೋಡೆ ಮೇಲಿರುವ ಶಾಸನವು ದಾಖಲಿಸಿದೆ.[15]

ಗಂಗಪಾಡಿಯ ಕಿಳಲೆನಾಡಿನ ವಣ್ಣೂರ್ ಅಲಿಯಾಸ್ ಚೋಳಮಾದೇವಿ ಚತುರ್ವೇದಿ ಮಂಗಲಂನ ಗೋಷ್ಠಿಯ ಸದಸ್ಯರಾದ ಕೌಶಿಕ ಗೋತ್ರದ ಸುಬ್ರಮಣಿಕ್ಕಿರಮಾವಿಟಾನ್, ಅತ್ರೇಯ ಗೋತ್ರದ ಜನ್ನಯಕಿರಮಾವಿಟಾನ್, ವಚ್ಚಗೋತ್ರದ ದಿವಾಕರೈಯನ್ ಮುಂತಾದವರು ಮಣಲೂರಿನ ಜಯಂಗೊಣ್ಡ ಚೋಳವಿಣ್ಣಗರ ದೇವರ ಪೂಜಾರಿಗಳಿಗೆ ಬರೆದುಕೊಟ್ಟ ಒಪ್ಪಿಗೆ ಪತ್ರದ ಕ್ರಮವೇನೆಂದರೆ, ನಾವು ಈ ಪೂಜಾರಿಗಳ ಮೂಲಕ ದೇವರ ಖಜಾನೆಯಿಂದ ಮರಕ್ಕಾಲ್ ಎಂಬ ಅಳತೆಯಲ್ಲಿ 320 ಕಲಂ ಭತ್ತವನ್ನು ತೆಗೆದುಕೊಂಡಿದ್ದೇವೆ. ಇದಕ್ಕೆ ಬಡ್ಡಿಯಾಗಿ ಒಂದು ವರ್ಷಕ್ಕೆ 3 ಕಱುಣೆ ಮತ್ತು 6 ನಾವೆ ದರದಂತೆ ಸೂರ್ಯಚಂದ್ರರಿರುವವರೆಗೆ ದೇವಾಲಯಕ್ಕೆ ತಂದು ಎಲ್ಲವನ್ನೂ 'ಮರಕ್ಕಾಲ್'ನಲ್ಲಿ ಅಳತೆಮಾಡಿಕೊಡುತ್ತೇವೆ. ಕಲ್ಲು, ಮಣ್ಣಿನ ಹೆಂಟೆ, ಮೊಳಕೆ ಮತ್ತು ಜಳ್ಳುಗಳಿಂದ ಹೊರತುಪಡಿಸಿದ 100ಕಲಂಶುಚಿಯಾದ ಭತ್ತದ ಕ್ರಮ ಎಂತೆಂದರೆ – 50ಕಲಂ ಬಿಳಿ ಭತ್ತ ವಸಂತ ಋತುವಿನ ಬೆಳೆಯಲ್ಲಿ, ಮತ್ತು 50 ಕಲಂ ಕಪ್ಪು ಭತ್ತ ಬೇಸಿಗೆ ಬೆಳೆಯಲ್ಲಿ ಕೊಡುತ್ತೇವೆ– ಇವೆಲ್ಲವೂ ತೆಗೆದುಕೊಂಡ ಸಾಲಕ್ಕೆ ನೀಡುವ ಬಡ್ಡಿಯ ರೂಪದ ಧಾನ್ಯದ ವಿವರಣೆಯಾದರೆ, ಮುಂದೆ, ನಾವು ಕೊಡುವ ಧಾನ್ಯವನ್ನು ಪಡೆಯಲು ಬರುವವರಿಗೆ ಎರಡು ಊಟವನ್ನು ಪ್ರತಿದಿನ ಕೊಡುತ್ತೇವೆ ಎಂದು ತಿಳಿಸಿ, ಇದನ್ನು ಪಡೆಯಲು ಬರುವವರು ಬೆಂಕಿ ಮತ್ತು ನೀರನ್ನು ಹಳ್ಳಿಯೊಳಕ್ಕೆ ತರಕೂಡದು; ಬೇರೆ ಹಳ್ಳಿಗಳ ಜೊತೆಗೆ ಸಂಪರ್ಕವಿಟ್ಟುಕೊಳ್ಳಬಾರದು ಮತ್ತು ವಸೂಲಾತಿಯ ದೃಷ್ಟಿಯಿಂದ ದನಗಳನ್ನು ತರಬಾರದು. ಯಾರೇ ಆದರೂ ಅವರಿಗೆ ತೊಂದರೆ ಮಾಡಿದರೆ, ಅದರಿಂದ ಉಂಟಾಗುವ ಆಘಾತಗಳಿಗೆ ತೊಂದರೆ ಮಾಡಿದವರೇ ಜವಾಬ್ದಾರರಾಗುತ್ತಾರೆ ಎಂದು ಕಟ್ಟುಪಾಡುಗಳನ್ನು ಸೂಚಿಸಿ, ಒಂದು ವೇಳೆ ನಾವು ಈ ಭತ್ತವನ್ನು ತಲು ಪಿಸಲು ತಪ್ಪಿದಲ್ಲಿ ಧರ್ಮವನ್ನು ಕಾಪಾಡುತ್ತಿರುವವರು 1000 ಕವಿಂಜುವಿನ ಚಿನ್ನವನ್ನುದಂಡವಾಗಿ ಹಾದುವುದೇ ಅಲ್ಲದೆ ಭತ್ತವನ್ನು ತಲುಪಿಸಲು ಒತ್ತಾಯಿಸುವುದು, ಎಂದು ಶಾಸನವು ದಾಖಲ್ಲಿಸುತ್ತದೆ.

ಈ ಶಾಸನದಲ್ಲಿ ಉಲ್ಲೇಖಿಸಿರುವ ಬೆಂಕಿ ಮತ್ತು ನೀರನ್ನು ಹಳ್ಳಿಯೊಳಕ್ಕೆ ತರಕೂಡದು ಎಂಬ ಕಟ್ಟುಪಾಡನ್ನು ಗಮನಿಸಿದಾಗ, ಮತ್ತು ಅಕ್ಕಪಕ್ಕದ ಹಳ್ಳಿಗಳೊಡನೆ ಸಂಪರ್ಕ ಕಡಿದುಕೊಂಡಿರಬೇಕು ಎನ್ನುವುದನ್ನು ಗಮನಿಸಿದಾಗ, ಬಹುಶಃ ವಸೂಲಾತಿಗಾಗಿ ಬರುವವರು ಚಾಡಿ ಮಾತುಗಳಿಂದ, ಲಂಚ–ರುಷುವತ್ತುಗಳಿಂದ ಆಕರ್ಷಿತರಾಗಿ ಧಾನ್ಯವನ್ನು ಕೊಡುವವರಿಗೆ ತೊಂದರೆಯುಂಟಾಗಬಹುದು ಎಂಬ ಉದ್ದೇಶದಿಂದ ಈ ಕಟ್ಟುಪಾಡುಗಳನ್ನು ವಿಧಿಸುತ್ತಿದ್ದರು ಎಂದು ಭಾವಿಸಬಹುದಾಗಿದೆ.

ಈ ಎಲ್ಲ ಅವಲೋಕನದಿಂದ ಒಂದು ಅಂಶ ಸ್ಪಷ್ಟವಾಗುತ್ತದೆ. ದೇವಾಲಯಗಳಿಗೆ ಮತ್ತು ಅಲ್ಲಿನ ಸೇವಾ ವರ್ಗದವರಿಗೆ ದಾನ ದತ್ತಿಗಳನ್ನು ನೀಡುತ್ತಿದ್ದುದರ ಜೊತೆಗೆ ಸಾರೋದ್ಧಾರವಾಗಿ ನಡೆಯಲು ಸಹಾಯವಾಗುವಂತೆ ಕಟ್ಟುಕಟ್ಟಳೆಗಳನ್ನು ವಿಧಿಸುತ್ತಿದ್ದರು

ಅಪರೂಪವಾಗಿ ಗೋಚಾರವಾಗುವ ಒತ್ತೆಯಿಟ್ಟ ಅಥವಾ ಮಾರಿದ ಸಂದರ್ಭಗಳಲ್ಲಿ ರಾಜರೋ, ಅಧಿಕಾರಿಗಳೋ, ಸಾರ್ವಜನಿಕರೋ, ಬಿಡಿಸಿಕೊಟ್ಟು ಮುಂದೆ ಹಾಗಾಗದಂತೆ ಎಚ್ಚರದಿಂದಿರಲು ನಿಬಂಧನೆಗಳನ್ನು ವಿಧಿಸುತ್ತಿದ್ದರು; ಇದೇ ರೀತಿದೇವಾಲಯದ ವ್ಯವಹಾರಗಳು ಸುಗಮವಾಗಿ, ಸುವ್ಯವಸ್ಥಿತವಾಗಿ ನಡೆದುಕೊಂಡು ಹೋಗಲೂ ಸಹ ಕಟ್ಟುಪಾಡುಗಳನ್ನು ರೂಪಿಸಿಕೊಳ್ಳುತ್ತಿದ್ದರು. ಯಾವ ರೀತಿಯ ನಿಯಮ ನಿಬಂಧನೆಗಳಿದ್ದರೂ ಸಹ ವಿರಳವಾಗಿ ದೊರೆಯುವ ಕೆಲವು ದಾನಶಾಸನಗಳಲ್ಲಿ ಈ ರೀತಿಯ ಕೆಲವು ವಿಶಿಷ್ಟ ವಿಚಾರಗಳು, ವ್ಯವಹಾರಗಳು ಕಂಡುಬರುತ್ತವೆ.

1. ಕಪಟರಾಳ್ ಕೃಷ್ಣರಾವ್, 'ಕರ್ನಾಟಕ ಸಂಸ್ಕೃತಿಯ ಸಂಶೋಧನೆ' (ಸಂಶೋಧನಾತ್ಮಕ ಲೇಖನಗಳ ಸಂಗ್ರಹ) - 1970; ಪಿ.221
2. ಡಾ॥ ಎಂ.ಚಿದಾನಂದಮೂರ್ತಿ, 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' - 1979.
3. ಡಾ॥ ಎಚ್.ಎಸ್.ಗೋಪಾಲರಾವ್ – 'ಶಾನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು – ಒಂದು ಸಾಂಸ್ಕೃತಿಕ ಅಧ್ಯಯನ' – (ಅಪ್ರಕಟಿತ ಮಹಾಪ್ರಬಂಧ) –ಅಧ್ಯಾಯ–4
4. ಎ.ಕ: 3, ಮಳವಳ್ಳಿ ತಾ॥ ಸಂಖ್ಯೆ 54 - ಕ್ರಿ.ಶ.ಸು.1185.
5. ಡಾ॥ ಎಂ.ಚಿದಾನಂದ ಮೂರ್ತಿ – ಅದೇ – ಪು.191.
6. ಎ.ಕ: 4; ಚಾಮರಾಜನಗರ ತಾ॥ ಹಳೇ ಆಲೂರು –ಕ್ರಿ.ಶ.1278; ಸಂಖ್ಯೆ.195
7. ಅದೇ – ಸಂ.9 - ಬೆಂಗಳೂರುತಾ॥ – ತಲಘಟ್ಟಪುರ – ಕ್ರಿ.ಶ.1262; ಸಂಖ್ಯೆ:115
8. ಎಕ: ಸಂ–2; (ಪರಿಷ್ಕೃತ) – ದೊಡ್ಡಬೆಟ್ಟ – ಕ್ರಿ.ಶ.1634; ಸಂಖ್ಯೆ – 352 ಇದರಲ್ಲಿ ಅಡವು ಇಟ್ಟುಕೊಂಡವರ ಹೆಸರನ್ನು ಉಲ್ಲೇಖಿಸಲಾಗಿದೆ.
ಸಂಖ್ಯೆ:485; ಜೈನಮಠದಲ್ಲಿರುವ ತಾಮ್ರಶಾಸನ: ಕ್ರಿ.ಶ.1634 ಇದರಲ್ಲಿ ನಿಬಂಧನೆಯನ್ನು ಸೂಚಿಸಿದೆ.
9. ಎ.ಕಸಂ–8: ಹಾಸನ ತಾಲ್ಲೂಕು – ಗೊರೂರು. ಸಂಖ್ಯೆ:194 - ಈ ಶಾಸನದಲ್ಲಿ ತಂಗೆಪೆಣ್ಣಿಕ್ಕ ನಂಬಿಗೆ ನಿಬಂಧನೆಯನ್ನು ಹಾಕಿರುವುದು ತಿಳಿಯುತ್ತದೆ; ಸಂಖ್ಯೆ: 195 - ಈ ಶಾಸನವು ಆಕೆ ದಾನ ಕೊಟ್ಟಿರುವುದನ್ನು ತಿಳಿಸುತ್ತದೆ.
10. ಎ.ಕ: ಸಂ–6 - ಕೃಷ್ಣರಾಜಪೇಟೆ – 86 - ಕ್ರಿ.ಶ:1179
11. ಡಾ॥ ಎಚ್.ಎಸ್.ಗೋಪಾಲರಾವ್ – ಪೂರ್ವೋಕ್ತ ಗ್ರಂಥ
12. ಎ.ಕ: ಸಂ.6 – ಸಂಖ್ಯೆ - 90 - ಕ್ರಿ.ಶ.1299
13. ಅದೇ – ಸಂಖ್ಯೆ: 95 - ಕ್ರಿ.ಶ. ಸಂ.1312
14. ಡಾ॥ ಎಚ್.ಎಸ್.ಗೋಪಾಲರಾವ್ – ಅದೇ –
15. ಎ.ಕ: ಸಂ.9 - ಸಂಖ್ಯೆ 129; ಕ್ರಿ.ಶ.1014.

ಮೃತ್ಯುಂಜಯ ರುಮಾಲೆ

# ಹಂಪೆಯಲ್ಲೊಂದು ಗುಹಾಂತರ್ದೇವಾಲಯ: ಒಂದು ಪರಿಶೋಧನೆ.

ಹಂಪೆಯಲ್ಲಿ 'ಒಂಟಿ ಗುಂಡಿನ ಪಡಶಾಲೆ' ಎಂದು ವ್ಯಾವಹಾರಿಕವಾಗಿ ಗುರುತಿಸಲ್ಪಟ್ಟ ಏಕೈಕ ಗುಹಾಂತರ್ದೇವಾಲಯ ನಿಜಕ್ಕೂ ಕುತೂಹಲವನ್ನು, ಆಶ್ಚರ್ಯವನ್ನೂ ಉಂಟು ಮಾಡುತ್ತದೆ.

ರಾಣಿಸ್ನಾನಗೃಹ ಮತ್ತು ಅಷ್ಟಕೋನಾಕೃತಿ ಬಾವಿಗೆ ಮಧ್ಯೆಯಿರುವ ಹೊಲವೊಂದರಲ್ಲಿ (ಅಂದರೆ ಸುಮಾರು ನೂರು-ನೂರೈವತ್ತು ಅಡಿ ದೂರದಲ್ಲಿ) ಈ ಗುಹಾಂತರ್ದೇವಾಲಯ ನೆಲಮಟ್ಟಕ್ಕಿಂತಲೂ ಸ್ವಲ್ಪ ಕೆಳಭಾಗದಲ್ಲಿದೆ. ಸ್ವಲ್ಪ ದೊಡ್ಡದೆನ್ನಬಹುದಾದ ಬಂಡೆಯನ್ನು ಕೊರೆದು ಗರ್ಭಗುಡಿಯನ್ನು ಹೊರತು ಪಡಿಸಿ ಎರಡು ಚಿಕ್ಕ ಕೊಠಡಿಗಳಿರುವ ಬಾದಾಮಿಶೈಲಿ ದೇವಾಲಯವೊಂದು ನಿರ್ಮಾಣಗೊಂಡಿದ್ದು, ವಾಸ್ತುಶಿಲ್ಪ ಚರಿತ್ರೆಯ ಪ್ರಾರಂಭದ ಹಂತವನ್ನು ನೆನಪು ಮಾಡಿಕೊಡುತ್ತದೆ.

ಈ ಗುಹಾಂತರ್ದೇವಾಲಯ ಮೂರು ಭಾಗಗಳನ್ನೊಳಗೊಂಡಿದೆ. ವಾಸ್ತುಶಿಲ್ಪದ ಪರಿ ಭಾಷೆಯಲ್ಲಿ ನವರಂಗ ಅಥವಾ ರಂಗಮಂಟಪ, ಶುಕನಾಸಿ (ಅರ್ಧ ಮಂಟಪ ಮತ್ತು ಗರ್ಭಗುಡಿ) ಎಂಬುದಾಗಿ ಗುರುತಿಸಬಹುದು. ನವರಂಗ ಪ್ರವೇಶದ್ವಾರಕ್ಕೆ ಅಂಟಿಕೊಂಡೇ ಇದೆ. ಪ್ರವೇಶಿಸುತ್ತಲೇ ಈ ಭಾಗಕ್ಕೆ ಹೋಗುತ್ತೇವೆ. ನಂತರ ಶುಕನಾಸಿ. ಚಚ್ಚೌಕವಾದ ದ್ವಾರವನ್ನುಂಟುಮಾಡಿರುವ ಎರಡು ಕಂಬಗಳು ಈ ಶುಕನಾಸವನ್ನು, ನವರಂಗವನ್ನು ಬೇರ್ಪಡಿಸುತ್ತವೆ. ಗರ್ಭಗುಡಿಯ ಚೌಕಟ್ಟಿನ ಮೇಲೆ ಗಜಲಕ್ಷ್ಮಿಯ ಕೆತ್ತನೆ ಇದೆ. ಐಹೊಳೆಯ ಪ್ರಾಚೀನ ದೇವಾಲಯಗಳಲ್ಲೊಂದಾದ ಲಾಡ್‌ಖಾನ್ ದೇವಾಲಯ ಮತ್ತು ಪಟ್ಟದಕಲ್ಲಿನ ಪಾಪನಾಥ ದೇವಾಲಯಗಳ ಗರ್ಭಗುಡಿಯ ಚೌಕಟ್ಟಿಗೂ ಇದೇ ರೀತಿಯ ವಾಸ್ತುಶಿಲ್ಪ ವಿನ್ಯಾಸವಿದೆ. (ಹಂಪೆಯಲ್ಲಿನ ಕೆಲವು ದೇವಾಲಯಗಳ ಚೌಕಟ್ಟಿಗೂ ಇದೇ ರೀತಿ ಚಿತ್ರವಿದೆ. ಆದರೆ, ನಿರ್ಧಿಷ್ಟವಾಗಿ ಗರ್ಭಗುಡಿಗೇ ಅಲ್ಲ.)

ಪ್ರವೇಶದ್ವಾರ ಉತ್ತರಾಭಿಮುಖವಾಗಿದ್ದು, (ಚಿತ್ರ-ನೋಡಿ) ಗರ್ಭಗುಡಿ ಪಶ್ಚಿಮಮುಖವಾಗಿದೆ. ಗರ್ಭಗುಡಿಯಲ್ಲಿ ಯಾವುದೇ ದೇವತಾವಿಗ್ರಹಗಳಿಲ್ಲ. ಆದರೆ, ದಕ್ಷಿಣಕ್ಕಿರುವ ಗೋಡೆಗೆ ಅರ್ಥಾತ್ ಉತ್ತರಾಭಿಮುಖದ ಗೋಡೆಗೆ ಸುಮಾರು ಮೂರುನಾಲ್ಕು ಅಡಿ ಎತ್ತರದ ಪ್ರಭಾವಳಿ ಶೈಲಿಯಲ್ಲಿ ಕೊರೆದ ನಕ್ಷೆಯೊಂದಿದ್ದು ಅಲ್ಲಿ ವಿಗ್ರಹವನ್ನು ಇಡುತ್ತಿರಬಹುದು ಅಥವಾ ಇದು ಧ್ಯಾನ ಮಂದಿರವಾಗಿದ್ದಲ್ಲಿ ಯೋಗಿಯೋರ್ವನುಕೂಡುವ ಸ್ಥಳವಾಗಿರಲೂಬಹುದು. ಗರ್ಭಗುಡಿಯ ಮೇಲ್ಗಂಡನ್ನು (Ceiling) ಒಂಭತ್ತು ಅಂಕಣಗಳನ್ನಾಗಿ ಮಾಡಿಕೊಂಡು, ಅದರಲ್ಲಿನ ಆರು ಅಂಕಣಗಳಲ್ಲಿ 'ಭುವನೇಶ್ವರಿ' ಮಾದರಿಯ ಉಬ್ಬು ನಕ್ಷೆಯನ್ನು ಕೆತ್ತಿದ್ದಾರೆ.

ಈ ಗುಹಾಂತರ್ದೇವಾಲಯದ ನಿರ್ಮಾಣಕಾಲವನ್ನು ನಿರ್ಧಿಷ್ಟವಾಗಿ ತಿಳಿಯಲು ಅದರ ಬಾದಾಮಿಶೈಲಿ ಮತ್ತು ಅದರ ಮೇಲಿರುವ ನೀರಿನ ಟ್ಯಾಂಕ್‌ಗಳು ಅಡ್ಡಬರುತ್ತವೆ. ಆದರೆ ಕರ್ನಾಟಕ ವಾಸ್ತುಶಿಲ್ಪ ಸಂದರ್ಭವನ್ನು ವೀಕ್ಷಿಸಿ ಇದರ ಕಾಲವನ್ನು ಸ್ಥೂಲವಾಗಿ ನೋಡಬಹುದಾಗಿದೆ.

ವಿಜಯನಗರ ಶೈಲಿಯ ಹಂಪೆಯ ದೇವಾಲಯಗಳಲ್ಲಿ ಸಾಕಷ್ಟು ವೈವಿಧ್ಯತೆಯನ್ನೂ ವಾಸ್ತುಶಿಲ್ಪದ ಸೃಜನಶೀಲತೆಯನ್ನು, ಶಿಲ್ಪಿಯ ಸ್ವಂತಿಕೆ- ಸ್ವಾತಂತ್ರಿಕೆಗಳನ್ನು ಕಾಣುತ್ತೇವೆ. ಅಂಥವಾತಾವರಣದ ಮಧ್ಯೆ ಹುಟ್ಟಿರುವ ಈ ಗುಹಾಂತರ್ದೇವಾಲಯ ತನ್ನ ನಿರ್ಮಾಣಕಾಲವನ್ನು ಗೊಂದಲದಲ್ಲಿಟ್ಟು ಗುಪ್ತವಾಗುತ್ತದೆ.

ಕರ್ನಾಟಕ ವಾಸ್ತುಶಿಲ್ಪವನ್ನು ಪ್ರಧಾನವಾಗಿ ಚಾಲುಕ್ಯಪೂರ್ವಯುಗ, ಚಾಲುಕ್ಯಯುಗ, ಹೊಯ್ಸಳಯುಗ, ವಿಜಯನಗರ ಕಾಲ, ಮುಸ್ಲಿಂ ವಾಸ್ತುಶಿಲ್ಪ - ಎಂಬುದಾಗಿ ವಿಂಗಡಿಸುತ್ತೇವೆ. ವಿಶೇಷವೆಂದರೆ, ಪ್ರತಿಯುಗದಲ್ಲೂ ಒಂದರ ಪ್ರಭಾವ ಇಲ್ಲವೇ ಶಿಪಾರಸು ಮತ್ತೊಂದರ ಮೇಲೆ ಆಗಿದೆ. ಈ ಕಾಲಘಟ್ಟಗಳಲ್ಲಿ ಬರುವ ಶಿಲ್ಪಿ ಒಂದು ಯುಗದಿಂದ ಮತ್ತೊಂದು ಯುಗಕ್ಕೆ ಸೃಜನಶೀಲತೆಯ ಮೊರೆಹೊಕ್ಕಿರುವುದು ಸಹಜವೇ ಆಗಿದೆ. ವಾಸ್ತು ಶಿಲ್ಪದಲ್ಲೂ ಮೂರ್ತಿಶಿಲ್ಪದಲ್ಲೂ ಶಿಪಾರಸಿನ ಪರಂಪರೆಯಿಂದಾಗಿ ವಿಶೇಷವಾದ ಬೆಳವಣಿಗೆಯ ಬದಲಾವಣೆ ಕಾಣುತ್ತೇವೆ.

ಕರ್ನಾಟಕ ವಾಸ್ತುಶಿಲ್ಪ ಚರಿತ್ರೆಯ ಸ್ಥೂಲಚಿತ್ರ ನ್ನು ಪ್ರಾಸಂಗಿಕವಾಗಿ ಇಲ್ಲಿ ನೋಡಬಹುದು. ಕದಂ ಪಲ್ಲವರಿಂದ ವಾಸ್ತುಶಿಲ್ಪದ ಶಿಪಾರಸನ್ನು ಪಡೆದ ಲುಕ್ಯಯುಗದ ಶಿಲ್ಪಿ ಬೃಹತ್‌ಕಲ್ಲಿಗೆ ರೂಪಕೊಡುವ ಹಸದಾಯಕ ಪ್ರಯತ್ನಮಾಡಿದ, ರಾಷ್ಟ್ರಕೂಟರೊಂ ಹೊಂದಿ ಕೊಂಡು ವಿನ್ಯಾಸವನ್ನು ವಿಸ್ತರಿಸಿದ. ಯ್ಸಳ ಯುಗಕ್ಕೆ ಬಂದಾಗ ಸೂಕ್ಷ್ಮವಾದ, ಪರಿಶ್ರ ದ ಕೆಲಸವನ್ನು ಹೊತ್ತು ಕಲ್ಲಿಗೆ ಜೀವತುಂಬಿದ. ಯನಗರದ ಕಾಲಕ್ಕಂತೂ ದಕ್ಷಿಣಭಾರತ ವಾಸ್ತುಶಿ ಮಹತ್ತರವಾದ ಕಾಣಿಕೆಯನ್ನೇ ನೀಡಿದ. ಕಲ್ಲಿಗೆ ವ ತುಂಬುವುದರೊಂದಿಗೆ ಸಂವೇದನಾಶೀಲ ಪ್ರತಿಭೆ ನ್ನು ನೀಡಿದ. ಮುಸ್ಲಿಂಶೈಲಿಗೆ ಬಂದಾಗ ಆ ಪ್ರತಿಭೆ ನ್ನು ವೈವಿಧ್ಯಮಯಗೊಳಿಸಿದ. (ವಿಶ್ವಖ್ಯಾತಿ ೋಲ್‌ಗುಂಬಜ್ ಉತ್ತಮ ನಿದರ್ಶನ).

– ಹೀಗೆ ಪ್ರತಿಯುಗದಲ್ಲೂ ಉತ್ತಮ ಬೆಳವಣಿಗೆ ನ್ನು ಪಡೆದ ಶಿಲ್ಪಿ ವಿಜಯನಗರ ಕಾಲದಲ್ಲಿ ಲುಕ್ಯಶೈಲಿಯ (ವಿಶೇಷವಾಗಿ ಬಾದಾಮಿಶೈಲಿ)ನ್ನು ರೆ ಹೊಕ್ಕಿದ್ದು ಆಶ್ಚರ್ಯವೆನ್ನಿಸುತ್ತದೆ. ಆ ಶೈಲಿಯ ಾವ ಈ ಶಿಲ್ಪಿಗಳಿಗೆ ಆಗಿತ್ತೆಂಬ ಖಚಿತಮಾಹಿತಿ ಾರದ ಮೇಲೆ ಅದರ ನಿರ್ಮಾಣ ಕಾಲವನ್ನು ಆಕಾ ೊಂದಿಗೆ ಖಚಿತವಾಗಿ ಹೇಳುವಂತಿಲ್ಲ. ಈ ಾಂತ ರ್ದೇವಾಲಯದ ತಲವಿನ್ಯಾಸವನ್ನು ೀಡಿದಾಗಲೂ (ತಲವಿನ್ಯಾಸ–ಚಿತ್ರನೋಡಿ) ಬಾದಾ ಗುಹೆಗಳ ಸ್ಥೂಲರೂಪದ ನೆನಪಾಗುತ್ತದೆ.

ಗುಹಾಂತರ್ದೇವಾಲಯಕ್ಕೆ ತನ್ನದೇ ಆದ ಉಜ್ವಲ ಹ್ಯವಿದೆ. ನಾಸಿಕ, ಕಾರ್ಲ್ಲೆ, ಬೇಡ್ಸಾ, ಅಜಂತಾ ದಲಾದ ಕಡೆಗಳಲ್ಲಿ ಗುಹಾಂತರ್ದೇವಾಲಯಗಳು ್ರತವಾಗಿವೆ. ಬಾದಾಮಿಶಿಲ್ಪಿಗಳಿಂದ ಕಂಡುಬರುವ ನಶೀಲಾತ್ಮಕ ವಿನ್ಯಾಸವೆಂದರೆ ಗುಹೆಯ ಒಳಗಡೆ ದ್ಧ–ಜೈನ ಧರ್ಮಗಳ ಸಂಬಂಧದ ಸೀಮಿತತೆಯಿಂದ –ವೈಷ್ಣವ ಗುಹಾಂತರ್ದೇವಾಲಯಗಳನ್ನು ಪ್ರಾರಂ ದ್ದು. ಪ್ರಸ್ತುತ ಗುಹಾಂತರ್ದೇವಾಲಯದ ಗರ್ಭಗೃ ನ ಚೌಕಟ್ಟಿಗೆ ಗಜಲಕ್ಷ್ಮಿ ಚಿತ್ರವು ಮತ್ತು ಬಲ–ಎಡ ಗೆ ಸೂರ್ಯ–ಚಂದ್ರರ ಕೆತ್ತನೆಯೂ ಇದೆ. ಬಾದಾಮಿ ಲುಕ್ಯರಿಂದ ಈ ಪರಂಪರೆಯು ಮುಂದುವರೆದು ಧ್ಯಮಯವಾಗಿ ಕರ್ನಾಟಕ ವಾಸ್ತುಶಿಲ್ಪಕ್ಕೆ ಉಜ್ವಲ ನ್ನು ನೀಡಿತು.

ಗುಹಾಂತರ್ದೇವಾಲಯಗಳ ಇತಿಹಾಸದಲ್ಲಿ ಪ್ರಸ್ತುತದೇವಾಲಯ ಕೊನೆಯದೆಂದು ಭಾವಿಸಬಹುದು. ಪ್ರಾರಂಭದ ಹಂತದ ಚಾಲುಕ್ಯ ಶೈಲಿಯ ದೇವಸ್ಥಾನಕ್ಕೆ ಗರ್ಭಗುಡಿಯನ್ನು ಪ್ರತ್ಯೇಕಗೊಳಿಸಲಾಗಿತ್ತಾದರೂ ನವ ರಂಗ ಅಥವಾ ರಂಗ ಮಂಟಪ ಗರ್ಭಗುಡಿಯ ಮುಂದಯೇ ಇತ್ತು. ಕ್ರಮೇಣ ನವರಂಗ ಮತ್ತು ಗರ್ಭಗುಡಿಯ ಮಧ್ಯೆ ಮತ್ತೊಂದು ಕೊಠಡಿಯನ್ನು ನಿರ್ಮಿಸಿ ವಾಸ್ತುಶಿಲ್ಪ ಪರಿಭಾಷೆಯಲ್ಲಿ ಅರ್ಧಮಂಟಪ ಎಂಬುದಾಗಿ ಕರೆಯಲಾಯಿತು. ಅನುಕೂಲವಾಗಲೆಂದು ಈ ವಿಭಾಗ ನಿರ್ಮಾಣವಾಗಿರಬೇಕು. ಮುಂದೆ ಮುಖ ಮಂಟಪ ಇತ್ಯಾದಿ ಭಾಗ–ಪ್ರಭಾಗಗಳು ವೈವಿಧ್ಯಮಯ ವಿನ್ಯಾಸವನ್ನು ಪಡೆದಿರಬೇಕು. ಪ್ರಸ್ತುತ ದೇವಾಲಯವು ವಾಸ್ತುಶಿಲ್ಪದ ಪ್ರಾರಂಭ ಹಂತದ ನಿರ್ಮಾಣಶೈಲಿಯದಾಗಿದ್ದು, ವಿಜಯನಗರದ ಕಾಲದ ಈ ಪರಿಸರದಲ್ಲಿ ನಿರ್ಮಾಣಗೊಂಡಿರುವುದೊಂದು ವಿಶೇಷ. ಪ್ರದಕ್ಷಿಣಾ ಪಥ, ಕಂಬ ಪೀಠ, ಬೋದಿಗೆ, ಅಧಿಷ್ಠಾನಗಳಿಗೆ ಇಲ್ಲಿ ಅವಕಾಶವಿರದೇ ಇಕ್ಕಟ್ಟಾದ ತಗ್ಗುಪ್ರದೇಶದಲ್ಲಿ ಇದನ್ನು ನಿರ್ಮಿಸಲಾಗಿದೆ. ಇದರಕಾಲವನ್ನು ಚಾಲುಕ್ಯರಷ್ಟು ಹಿಂದಕ್ಕೊಯ್ಯಲು ಮನಸೊಪ್ಪದು. ಏಕೆಂದರೆ, ಸುಮಾರು 6-7ನೇ ಶತಮಾನದಲ್ಲಿ ಹಂಪೆಯ ಈ ಭಾಗ ಹೇಗಿತ್ತೆಂದು ಕಲ್ಪನೆ ಮಾಡಲೂ ಅಸಾಧ್ಯವಾಗುತ್ತದೆ. ಜೊತೆಗೆ ಗುಹಾಲಯಗಳನ್ನು ನಿರ್ಮಿಸಲು ಪ್ರಸ್ತುತಸ್ಥಳ ಪ್ರಶಸ್ತವೆನಿಸದು. ದೊಡ್ಡದಾದ ಬಂಡೆಗಲ್ಲುಗಳೂ ಅನುಕೂಲವಾತಾವರಣವೂ ಇರುವ ಸ್ಥಳಗಳು ಇದೇ ಹಂಪೆಯಲ್ಲಿ ಸಾಕಷ್ಟಿವೆ. ಚಾಲುಕ್ಯರಿಂದಾಗಲೀ, ಅವರ ಸಾಮಂತರಿಂದಾಗಲೀ ಇದು ನಿರ್ಮಾಣವಾಯಿತನ್ನಲು ಆಧಾರಸಾಲದು.

ಇನ್ನು ವಿಜಯನಗರದ ಕಾಲದಲ್ಲೇ ನಿರ್ಮಾಣವಾಯಿತೆಂದು ಹೇಳಲು ಕಷ್ಟವೆನಿಸುತ್ತದೆ. ಏಕೆಂದರೆ, ಆ ಕಾಲದ ಸೃಜನಶೀಲ ವಾಸ್ತುಶಿಲ್ಪ ಮನೋಧರ್ಮದ ಶಿಲ್ಪಿಗಳಿಗೆ ಈ ವಿಧದ ದೇವಾಲಯ ನಿರ್ಮಾಣ ಹಳೆಯ ಮಾದರಿ ಎನ್ನಿಸಿರುವ ಸಾಧ್ಯತೆಯೂ ಇದೆ. ಖಚಿತವಾಗಿ ಅದರ ಕಾಲವನ್ನು ತಿಳಿಸುವ ಯಾವುದೇ ಲಿಖಿತ ಅಥವಾ ಸಂಬಂಧಿಸಿದ ಪರೋಕ್ಷ ಆಧಾರಗ ಳಿಲ್ಲ. ಅರಮನೆಯೆನ್ನಲಾದ ಸ್ಥಳ, ಮಹಾನವಮಿ ದಿಬ್ಬ, ರಾಣಿಸ್ನಾನ ಗೃಹ, ಅಷ್ಟಕೋನಾಕೃತಿ ಬಾವಿಗಳ ಮಧ್ಯೆ ಈ ಗುಹಾಂತರ್ದೇವಾಲಯದ ನಿರ್ಮಾಣ ಆಕಾಲದ್ದು ಎಂದು ಹೇಳಲೂ ಮನಸೊಪ್ಪದು.

ಪರಿಸರ ಪರಿಸ್ಥಿತಿಗಳನ್ನು ಅವಲೋಕಿಸಿ ಹೀಗೆ ಭಾವಿಸಬಹುದು.

ಕರ್ನಾಟಕ ವಾಸ್ತುಶಿಲ್ಪ, ವಿಜಯನಗರದ ಕಾಲದಲ್ಲಿ ತನ್ನ ಪರಾಕಾಷ್ಠೆಯನ್ನು ಮೆರೆದುದು ಕಂಡುಬರುತ್ತದೆ. ವಿಜಯನಗರದ ಸಾಮ್ರಾಜ್ಯ ಸ್ಥಾಪನೆ ಹಿಂದೂಧರ್ಮಪರ ಹೋರಾಟಕ್ಕೆ ಮೀಸಲಾದುದು ಭಾರತೀಯ ಸಂಸ್ಕೃತಿಯನ್ನು ಮತ್ತಷ್ಟು ಶ್ರೀಮಂತ ಗೊಳಿಸಲು ಸಾಹಿತ್ಯ-ಧರ್ಮ-ಸಂಗೀತಗಳನ್ನು ಮಹತ್ವದಆಯುಧಗಳನ್ನಾಗಿಸಿಕೊಂಡಿತು. ಅದರಲ್ಲಿ ವಾಸ್ತುಶಿಲ್ಪವೂ ಗಣನೀಯವಾದ ಸೇವೆ ಸಲ್ಲಿಸಿದೆ. ಮಹತ್ವಾಕಾಂಕ್ಷೆಯನ್ನು ಹೊತ್ತು ಹುಟ್ಟಿದ ಈ ಸಾಮ್ರಾಜ್ಯ ಅವನತಿ ಹೊಂದಿದಾಗ ಎಲ್ಲವೂ ಅನಾಥವಾದವು. (ಸಾಹಿತ್ಯಕವಾಗಿ ಈ ಮಾತು ಅಕ್ಷರಶಃ ಒಪ್ಪುವಂಥದ್ದು. ವಿಜಯನಗರದರಸರನ್ನೇ ಆಶ್ರಯಿಸಿದ್ದ ಬಹುಮಂದಿ ತೆಲುಗು ಕವಿಗಳು ದಕ್ಷಿಣ ಭಾರತದಾದ್ಯಂತ ವಲಸೆ ಹೋದರು. ಸಿಕ್ಕಸಿಕ್ಕಲ್ಲಿಯೇ ನೆಲೆನಿಂತು ಸಾಹಿತ್ಯರಚಿಸಿದುದಿಂದರಿಂದ ತೆಲುಗು ಸಾಹಿತ್ಯ ಚರಿತ್ರೆಕಾರರು ವಿಜಯನಗರದ ನಂತರದ ಕಾಲವನ್ನು 'ದಕ್ಷಿಣಾಂಧ್ರ ಸಾಹಿತ್ಯಮು' ಎಂದು ಗುರುತಿಸುತ್ತಾರೆ) ವಾಸ್ತುಶಿಲ್ಪಗಳಲ್ಲಂತೂ ಅತೀವ ಪರಿಣಾಮವನ್ನುಂಟು ಮಾಡಿದ್ದು, ನಿರಾಸಕ್ತಿ, ಜಿಗುಪ್ಸೆ, ನೋವುಗಳು ತುಂಬಿಕೊಂಡು ನಿಸ್ತೇಜರಾದರು. ಆ ನೋವಿನಲ್ಲೇ ತಮ್ಮ ಬದುಕನ್ನು ಕಂಡು ಸಾಂಸ್ಕೃತಿಕವಾಗಿ ನಿರ್ಜೀವರಾದರು. (ವಿಶೇಷವಾಗಿ ಹಿಂದೂ ವಾಸ್ತುಶಿಲ್ಪಿಗಳು). ಒಂದು ನಾಡಿನ ಸಂಸ್ಕೃತಿಗೆ ಪೂರಕವಾಗುವ ರೀತಿಯಲ್ಲಿ ಶಿಲ್ಪಿಗಳು ವಿಜಯನಗರದ ನಂತರದ ಕಾಲದಲ್ಲಿ ಹಂಪೆಯಲ್ಲಿ ಕೆಲಸಮಾಡಲಿಲ್ಲ. ಮಾನಸಿಕವಾಗಿ ಆಸಕ್ತಿಯುತ ಭಾವನೆಗಳಿಂದ ಅವರು ಅಸ್ವಸ್ಥರಾದರು/ ಈ ಅವಧಿಯಲ್ಲಿ (ಅಂದರೆ ವಿಜಯನಗರ ಪತನವಾದ ಕೆಲವೇ ವರ್ಷಗಳಲ್ಲಿ) ಅಳಿದುಳಿದ ಅವಶೇಷಗಳ ಬೀಡಾಗಿದ್ದ ಈ ಸ್ಥಳದಲ್ಲಿ ದಾಳಿಕಾರರಿಂದ ನಾಶವಾಗದಂಥ, ವಿಕೋಪ ಪ್ರಕೃತಿಯಿಂದಲೂ ರಕ್ಷಣೆ ಪಡೆಯುವಂಥ ದೇವಾಲಯವೊಂದರ ನಿರ್ಮಾಣಕ್ಕೆ ಕೈಹಾಕಿ ಈ ನಿರ್ಧಾರಕ್ಕೆ ಬಂದಿರಬಹುದು. ಇದರ ನಿರ್ಮಾಣದ ಮೂಲಕ ಜನಜಾಗೃತಿ, ಧರ್ಮದ ಪುನಶ್ಚೇತನ ಕಾರ್ಯ ನಡೆದಿರಬೇಕು.

ಒಂದು ಊಹೆ: ಇದು ಒಬ್ಬ ಯೋಗಿಯ ಧ್ಯಾನಮಂದಿರವಾಗಿರುವ ಸಾಧ್ಯತೆಯೂ ಇದೆ. ಮೇಲಿರುವ ನೀರಿನ ಸೌಕರ್ಯ, ಪ್ರವೇಶದ್ವಾರದ ಮೇಲೆ ಚಪ್ಪರವಿರಬಹುದಾದ ಅವಶೇಷಗಳು, ಗರ್ಭಗುಡಿಯಲ್ಲಿರುವ ವಿಶೇಷವಾದ ಪ್ರಭಾವಳಿ ಮುದ್ರೆ - ಇವುಗಳು ಈ ಮಾತಿಗೆ ತಕ್ಕಮಟ್ಟಿಗೆ ಪುಷ್ಟಿನೀಡುತ್ತವೆ.

ಒಟ್ಟಿನಲ್ಲಿ ನೇರವಾದ, ಲಿಖಿತವಾದ ಯಾವುದೇ ಆಧಾರಗಳಿಲ್ಲದ ಈ ಗುಹಾಂತರ್ದೇವಾಲಯದ ಕಾಲ, ಪರಿಸರದಬಗ್ಗೆ ಇನ್ನಷ್ಟು ಸಂಶೋಧನೆ ಅಗತ್ಯ.

---

## ಸಾಂದರ್ಭಿಕ ಗ್ರಂಥಗಳು:


(i) ಡಾ.ಎಚ್. ತಿಪ್ಪೇರುದ್ರಸ್ವಾಮಿ, 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ'
(ii) ಡಾ. ಸಿಂದಗಿರಾಜಶೇಖರ, 'ಕರ್ನಾಟಕ ವಾಸ್ತು ಶಿಲ್ಪ ಮತ್ತು ಚಿತ್ರಕಲೆ'
(iii) D. Devakunjari, Hampi





1 - ನವರಂಗ

2 - ಸುಕನಾಸಿ

3 - ಗರ್ಭಗೃಹ

4 - ಪೀಠವಿದ್ದಿರಬಹುದಾದ ಜಾಗ

ಡಾ॥ ಎಚ್.ಆರ್.ರಘುನಾಥ ಭಟ್

# ತಂಬಳದಲ್ಲಿ ಬೌದ್ಧಾವಶೇಷಗಳ ಶೋಧನೆ

"ಕರ್ನಾಟಕ ಭೂಮಿ ಭಾಮಿನೀ ಮಧ್ಯದೇಶಕ್ಕೆ ಶದ ಮೌಕ್ತಿಕ ಮನೋಹಾರಿ ಹಾರದಂತಿರ್ದ"[1] ರ್ಮಪೊಳಲು (ಧರ್ಮಪುರ-ಡಂಬಳ) ಧಾರವಾಡ ಲ್ಲೆಯ ಮುಂಡರಗಿ ತಾಲ್ಲೂಕಿನಲ್ಲಿದ್ದ ಬೌದ್ಧಮತ ಾಗೂ ಬೌದ್ಧವಾಸ್ತು-ಶಿಲ್ಪಕಲೆಗೆ ನೆಲೆಯಾಗಿತ್ತೆಂಬುದು ಸ್ವಾರಸ್ಯಕರ ಸಂಗತಿ. ಕಲ್ಯಾಣ ಚಾಳುಕ್ಯ ಚಕ್ರವರ್ತಿ ರನೆಯ ವಿಕ್ರಮಾದಿತ್ಯನ ಕಾಲದಲ್ಲಿ (೧೦೯೮ ಂಗಮ ಸೆಟ್ಟಿ ನಿರ್ಮಿಸಿದ ಬೌದ್ಧವಿಹಾರಕ್ಕೆ ನಂದಾ ೀಪಕ್ಕಾಗಿ ಸೊಳಸಿಯ ಪ್ರಮಾಣದ ಸೊಂಟಿಗೆಯ ಣದಲ್ಲೊಂದು ಸೊಂಟಿಗೆ ಎಣ್ಣೆಯನ್ನು 'ತೆಲ್ಲಿಗರಯ್ವ ೂಕ್ಕಲು' ಕೊಟ್ಟರೆಂಬ ವಿಚಾರವು ಸ್ಥಳೀಯ ಶಾಸನೀ ುವಾಗಿ ತಿಳಿದು ಬರುತ್ತದೆ.[2]

ಲೊಕ್ಕಿಗುಂಡಿಯ ವಡ್ಡವ್ಯವಹಾರಿ ಸಂಗಮಯ್ಯ ಟ್ಟಿ ಕಟ್ಟಿಸಿದ ಈ ತಾರಾದೇವಿವಿಹಾರ ಎಲ್ಲಿದೆ? ಅದರ ಳ ನಿರ್ದೇಶನ ಈಗ ಸಾಧ್ಯವೆ? ಅದಕ್ಕೆ ಸಂಬಂಧಿಸಿದ ೌದ್ಧಾವಶೇಷಗಳೇನೇನೂ ಉಳಿದಿಲ್ಲವೆ? ಇದ್ದರೆ ಎಲ್ಲಿವೆ? ಇವೇ ಮುಂತಾದ ಪ್ರಶ್ನೆಗಳನ್ನು ತಲೆಯಲ್ಲಿ ತುಂಬಿ ಂಡು ಕ್ಷೇತ್ರಕಾರ್ಯಕ್ಕಾಗಿ ಡಂಬಳಕ್ಕೆ ಇತ್ತೀಚೆಗೆ ನಾವು ೋದೆವು. ಡಂಬಳ ಹಾಗೂ ಅದರ ಪರಿಸರದಲ್ಲಿ ್ಯಾಪಕವಾಗಿ ಸರ್ವೇಕ್ಷಣೆ ನಡೆಸಿದೆವು. ಆರ್ಯತಾರಾಭಗ ತೀ(?) ಶಿಲ್ಪವನ್ನೊಳಗೊಂಡ ಬೌದ್ಧ ಬಿಕ್ಷುವಿನ ುಬ್ಬು ಶಿಲ್ಪ ಫಲಕ ಹಾಗೂ ಬೌದ್ಧವಿಹಾರದ ಬಾಗಿ ುವಾಡಕ್ಕೆ ಸಂಬಂಧಿಸಿದ ಬೌದ್ಧಯಕ್ಷ ಶಿಲ್ಪವನ್ನೊಳ ೊಂಡ ಇನ್ನೊಂದು ಫಲಕ ಪತ್ತೆಯಾದವು. ಹೀಗೆ ೋಧಿತ ಶಿಲ್ಪಕಲಾಕೃತಿ ಹಾಗೂ ಅದರ ಮಹತ್ವ - ಷ್ಯಕ್ಕೇ ಸೀಮಿತವಾಗಿದೆ - ಈ ಪುಟ್ಟಪ್ರಬಂಧ; ಇವು ಳ ವಿಶ್ಲೇಷಣೆಯೊಂದನ್ನು ಮೊದಲ ಬಾರಿಗೆ ಇಲ್ಲಿ ೀಡಲು ಪ್ರಯತ್ನಿಸಲಾಗಿದೆ.

ಸುಮಾರು ನೂರುವರ್ಷಗಳ ಹಿಂದೆ (ಜುಲೈ 881) ಜಾನ್ ಫೇತ್‌ಫುಲ್ ಫ್ಲೀಟರು ಸಂಪಾದಿಸಿ, ್ರಮಾಣಿಕವಾಗಿ ಪ್ರಕಟಿಸಿದ ನಲವತ್ತೇಳು ಸಾಲಿನ ಸನವಿದ್ದ ಸ್ಥಳ "ಜೈನ ಬಸದಿ" ಯೆಂದು ಬರೆದಿದ್ದ ದೆ ಆ ಶಾಸನವು 'ಜಿನಶಾಸನ' ಎಂದೂ ಬರೆದಿದ್ದರು.[3] ಜೇಮ್ಸ್ ಬರ್ಜೆಸ್ ಆ ಶಾಸನವನ್ನು ಮರು ಪರಿಶೀಲಿಸಿ ಅದು ಬೌದ್ಧಶಾಸನವೆಂದಿದ್ದರು.[4] ಅಲ್ಲಿಂದ ಇಲ್ಲಿಯವರೆಗೂ ಕರ್ನಾಟಕದಲ್ಲಿ ಬೌದ್ಧಧರ್ಮವನ್ನು ಕುರಿತಂತೆ ಬರೆಯುವಾಗೆಲ್ಲ ಈ ಶಾಸನವನ್ನು ನಾವು ಉಲ್ಲೇಖಿಸುತ್ತ ಬಂದಿದ್ದೇವೆ. ಈಚೆಗೆ ತಾಳ್ತಜೆ ವಸಂತ ಕುಮಾರರು ತಮ್ಮ ಪಿ.ಎಚ್.ಡಿ. ಪ್ರಬಂಧದಲ್ಲಿ 'ಕರ್ನಾಟಕದಲ್ಲಿ ಬೌದ್ಧಸಂಸ್ಕೃತಿಯ' ವಿವರಗಳನ್ನು ಸಮಗ್ರವಾಗಿ ನೀಡಿದ್ದಾರೆ. ಆದರೆ ಇಲ್ಲೂ ಶಾಸವಿದ್ದ ಸ್ಥಳ ಜೈನಬಸದಿಯೆಂದೂ, ಇನ್ನೊಂದು ಬೌದ್ಧ ಶಾಸನವೂ ಜೈನಬಸದಿಯ ಬಾಗಿಲುವಾಡದ ಎಡಬದಿಗಿದೆ ಯೆಂದೂ ನಮೂದಿಸಲಾಗಿದೆ[5]. ಎಂ.ಎಂ. ಕಲಬುರ್ಗಿಯವರು ಸಂಪಾದಿಸಿದ ಧಾರವಾಡ ಜಿಲ್ಲಾ ಶಾಸನ ಸೂಚಿಯಲ್ಲೂ ಇದೇ ರೀತಿಯಲ್ಲಿ ಬರೆಯಲಾಗಿದೆ.[6] ಈ ಹಿನ್ನೆಲೆಯಲ್ಲಿ ನಮ್ಮ ಜಿಜ್ಞಾಸೆ ಆರಂಭವಾಯಿತು. ನಮ್ಮ ವಿದ್ಯಾರ್ಥಿ-ಮಿತ್ರರಾದ ದ್ಯಾಮನಗೌಡ ಹಾಗೂ ಬೆಳೇರಿಯವರನ್ನೊಳಗೊಂಡು ವ್ಯಾಪಕವಾದ ಕ್ಷೇತ್ರ ಕಾರ್ಯವನ್ನು ಮಾಡಿದೆವು. ಮೊದಲು ಪ್ರಕಟಿತ ಶಾಸನ ಶಿಲೆ ಸಿಗಲಿಲ್ಲ, ಜೈನಬಸದಿಯೂ ಗೋಚರಿಸಲಿಲ್ಲ. ಕೊನೆಗೆ ಊರ ಹೊರ ಭಾಗದ ದಿಬ್ಬದ ಮೇಲಿದ್ದ ಭಗ್ನಮಂದಿರದ ಬಾಗಿಲುವಾಡದ ಅಗಲ ಶಿಲೆಯ ಮೇಲಿದ್ದ ಶಾಸನ ಪಾಠವನ್ನು ಅಚ್ಚುಮಾಡಿಕೊಂಡೆವು. ಆದರೆ ಈ ಶಾಸನೋಲ್ಲಿಖಿತ ತಾರಾಭಗವತೀ, ಬೌದ್ಧವಿಹಾರಗಳೆಲ್ಲಿ? - ಅವುಗಳ ಭಗ್ನಾವಶೇಷಗಳಾದರೂ ಸಿಗಬೇಕಲ್ಲವೆ? ಅವೆಲ್ಲ ಏನಾದವು? ಆ ಪ್ರದೇಶದಲ್ಲೆಲ್ಲ ಪರಿಶೋಧಿಸಿದೆವು. ಪ್ರಸ್ತುತ ಶಾಸನವಿರುವ ಭಗ್ನಮಂದಿರವ ಹಿಂಭಾಗದಲ್ಲಿ ಭೂಗತವಾಗಿದ್ದ ಶಿಲ್ಪಫಲಕಗಳನ್ನು ಹುಡುಕಿ ತೆಗೆದೆವು.

ಈ ಶಿಲ್ಪಫಲಕಗಳಲ್ಲಿ ಒಂದು - ಬೌದ್ಧ ಮತ್ತು ತಾರಾಭಗವತಿ ಮೂರ್ತಿಶಿಲ್ಪಗಳನ್ನೊಳಗೊಂಡಿವೆ. ಇನ್ನೊಂದು ಬಾಗಿಲುವಾಡ ಫಲಕದ ಚೂರಿನಲ್ಲಿ ವಿಶಿಷ್ಟ ರೀತಿಯ ಬಾಗಿಲು ಶಾಖೆ ಹಾಗೂ ಯೋಗ ಪಟ್ಟವುಳ್ಳ ಬೋಧಿಸತ್ವ ಯಕ್ಷನ (ಜಂಬಾಲ!) ಶಿಲ್ಪವಿರುವುದು ಪತ್ತೆಯಾಯಿತು. ಇವೆರಡನ್ನೂ ಈಗಾಗಲೇ ಪತ್ತೆಯಾದ ಶಾಸನ ಪಾಠದ ವಿವರಣೆಯ ಹಿನ್ನೆಲೆ

ಯಲ್ಲಿ ವ್ಯಾಸಂಗಮಾಡಲು ಆರಂಭಿಸಿದೆವು. ಈ ಶಿಲ್ಪ ಫಲಕಗಳು ಹಾಗೂ ಶಾಸನವಿರುವ ದಿಬ್ಬದ ಭಗ್ನಮಂದಿರ ಮೂಲತಃ ಬೌದ್ಧ ತಾರಾಭಗವತೀ ವಿಹಾರವಾಗಿದ್ದಿರಬಹುದು ಎಂಬುದನ್ನು ಹೆಚ್ಚು ಖಚಿತವಾಗಿ ಹೇಳಲು ಸಾಧ್ಯವಾಗುತ್ತದೆ.

ಕಲ್ಯಾಣ ಚಾಳುಕ್ಯ ಆರ್ಮಡಿ ವಿಕ್ರಮಾದಿತ್ಯನ ಕಾಲದಲ್ಲಿ ಆತನ ಹಿರಿಯರಸಿ ಲಕ್ಷ್ಮೀದೇವಿಯು ಧಮ್ಮಪುರ ಪ್ರಧೇಶವನ್ನಾಳುತ್ತಿದ್ದಾಗ ಧರ್ಮವೊಳಲಿನ ಹದಿನಾರು ಜನ ಸೆಟ್ಟಿಗಳು ಸೇರಿ ಬೌದ್ಧವಿಹಾರ ಕಟ್ಟಿಸಿ ದಾನದತ್ತಿ ನೀಡಿದರು (೧೦೯೫). ಅದಕ್ಕಿಂತ ಹೆಚ್ಚಿನ ರೀತಿಯಲ್ಲಿ ಲಕ್ಕುಂಡಿಯ ವಡ್ಡವ್ಯವಹಾರಿ ಸಂಘವಯ್ಯ ಸೆಟ್ಟಿ ತಾರಾಭಗವತೀ ವಿಹಾರವನ್ನು ದೊಡ್ಡಪ್ರಮಾಣದಲ್ಲಿ ನಿರ್ಮಿಸಿದ (೧೦೯೮). ಶ್ರೀ ತಾರಾಭಗವತಿಯನ್ನು ಈ ಸೆಟ್ಟರು ವಿಶೇಷವಾಗಿ ಸ್ತುತಿಸಿದ್ದಾರೆ. ಇವನ್ನೆಲ್ಲ ದಾಖಲಿಸುವ ಶಾಸದನ ಶಿರೋಫಲಕದ ಮೇಲೆ (Head-piece) ತಾರಾಭಗವತೀ ಶಿಲ್ಪವನ್ನು ಕೆತ್ತಿಸಿದ್ದಾರೆ. "ನಮೋ ಬುದ್ಧಾಯ, ಭಗವತೀ ತಾರಾ ನಮಸ್ತುಭ್ಯಂ" ಎಂದು ಆರಂಭವಾಗುವ ಬೌದ್ಧಧರ್ಮೀಯ ದೀರ್ಘ ಶಾಸನದ ಪಾಠದಲ್ಲಿ ಸೇರಿರುವ ಅಷ್ಟೇ ಬೃಹತ್ತಾಗಿದ್ದಿರಬಹುದಾದ ತಾರಾಭಗವತೀ ವಿಹಾರ ಹಾಗೂ ಅದನ್ನು ಖಚಿತಪಡಿಸುವ, ಈಗ ಪತ್ತೆಯಾಗಿರುವ ಸುಂದರ ಶಿಲಾಶಿಲ್ಪಗಳನ್ನು ವಿಶ್ಲೇಷಣೆ ಮಾಡಿದಾಗ ನಮಗೆ ಗೊತ್ತಾಗುವ ಸಾಂಸ್ಕೃತಿಕ ಕಲಾ ಮಹತ್ವವನ್ನು ಹೀಗೆ ಸಂಗ್ರಹಿಸಬಹುದು:

(೧) ಇದೀಗ ಪತ್ತೆಯಾದ ಶಿಲ್ಪಾವಶೇಷಗಳು ಮಧ್ಯಕಾಲೀನ ಕರ್ನಾಟಕದ ಕಲ್ಯಾಣ ಚಾಳುಕ್ಯ ಶೈಲಿಯ ಬೌದ್ಧ ಶಿಲ್ಪಕಲೆಗೆ ಮತ್ತೆರಡು ಸೇರ್ಪಡೆಗಳಾಗಿ ಮಹತ್ವ ಪಡೆಯುತ್ತವೆ.

(೨) ಮಧ್ಯಕಾಲೀನ ಕರ್ನಾಟಕದಲ್ಲಿ ಇತರ ಧರ್ಮಗಳು ತೀರಕಡೆಗಣಿಸ ಬಹುದಾಗಿದ್ದ ಧರ್ಮವಾಗಿರದೆ 'ನಾನೂ ಇದ್ದೇನೆ' ಎಂದು ಕೈಯೆತ್ತಿ ತೋರಿಸಿಕೊಳ್ಳುವಷ್ಟರ ಮಟ್ಟಿಗಾದರೂ ಪ್ರಬಲವಾಗಿತ್ತು – ಈ ಬೌದ್ಧಧರ್ಮ.

(೩) ಈ ಕಾಲಘಟ್ಟದಲ್ಲಿ ಬುದ್ಧನಿಗಿಂತ ತಾರಾಭಗವತೀ ಹೆಚ್ಚಿನ ಪ್ರಾಧಾನ್ಯ ಪಡೆದಳು. ಬಳ್ಳಿಗಾವೆ – ಬನವಾಸಿ – ಡಂಬಳ – ಕೋಳಿವಾಡಗಳಲ್ಲಿದ್ದ ತಾರಾಭಗವತೀ ವಿಹಾರ, ಭಗವತೀ ಆರಾಧನೆ, ಆ ಸಂಬಂಧದ ದಾನ ದತ್ತಿ ವಿವರಗಳು ಸ್ವಾರಸ್ಯಕರವಾಗಿವೆ.

ಮೂಲದಲ್ಲಿ ಯಜ್ಞಯಾಗಾದಿ ವಿವರಗಳಿಂದ ತುಂಬಿದ ವೈದಿಕ ಆರಾಧನೆಗೆ ಪ್ರತಿಕ್ರಿಯೆಯಾಗಿ ಮೂಡಿಬಂದ ಸರಳ ಬೌದ್ಧಮತವು ಬರಬರುತ್ತ ಶಾಖೋಪಶಾಖೆಯಾಗಿ, ತಾಂತ್ರಿಕ ಆರಾಧನಾ ಸ್ವರೂಪ ಪಡೆದದ್ದು ಒಂದೆಡೆಯಾದರೆ, ವಜ್ರಯಾನದಂತಹ ತಾಂತ್ರಿಕ ವಿಧಾನ, ತಾರಾಭಗವತಿಯ ಆರಾಧನೆ – ಉತ್ಸವ ಹೆಚ್ಚು ಜನಪ್ರಿಯವಾದದ್ದು ಇನ್ನೊಂದೆಡೆ.

ತಾರೆ ಜಗತ್ತಿನ ರಕ್ಷಕಳು. ದುರ್ಬಲರಿಗೆ ಶಕ್ತಿದಾಯಕಳು. ತಾರಾಮಂತ್ರ ಪಠಣದಿಂದ ಪಾಪ ಕಷ್ಟ ಪರಿಹಾರವಾಗುವುದು. ಜನಸಾಮಾನ್ಯರ ಕಷ್ಟ ನಿವಾರಣೆಗಾಗಿ ಇವಳ ಆರಾಧನೆ ಅಗತ್ಯ ಎಂಬ ಭಾವನೆ ಹೆಚ್ಚಿತ್ತು. ಸಾಲದ್ದಕ್ಕೆ ಹಾವು, ಬೆಂಕಿ, ಭೂತ ಪಿಶಾಚಿಗಳನ್ನು ಮಂತ್ರ ತಂತ್ರಾದಿಗಳಿಂದ ನಿವಾರಿಸಬೇಕು. ಇದಕ್ಕೆ ತಾಂತ್ರಿಕ ವಿಧಾನ ಒಂದು ಮಾಧ್ಯಮ – ಈ ಧರ್ಮ ಪ್ರಸಾರವು ಜನರ ವಿಶ್ವಾಸಗಳಿಕೆಗೆ ಜನಾಚರಣೆಯಲ್ಲಿ ಆಗಲೇ ಇದ್ದ ನಂಬಿಕೆಗಳನ್ನು ಜಾನಪದ ಸತ್ವಪೂರ್ಣವಾಗಿ, ಜನಪ್ರಿಯವಾಗಿ ಆರಾಧಿಸುವುದು ಅಂದಿನ ಅಗತ್ಯವಷ್ಟೇ ಅಲ್ಲ ಅನಿವಾರ್ಯವಾಯಿತೇನೋ.

ಒಟ್ಟಿನಲ್ಲಿ ಆಧ್ಯಾತ್ಮಿಕ ಸಾಧನೆಮಾಡಿ ಕೇವಲ ಜ್ಞಾನಪಡೆದ ವ್ಯಕ್ತಿಗಿಂತ ಲೌಕಿಕ ಕಷ್ಟನಿವಾರಕ ತಾರಾಭಗವತಿಯಂಥ ಸ್ತ್ರೀ ಶಕ್ತಿದೇವಿಯಾರಾಧನೆ ಹೆಚ್ಚು ಪ್ರಾಮುಖ್ಯತೆಯನ್ನು ಪಡೆಯಿತು. ಈ ಪ್ರಕ್ರಿಯೆ ಜೈನ ಯಕ್ಷಿಯಾರಾಧನೆಯಲ್ಲೂ, ಹಿಂದೂಮತದ ದುರ್ಗೆ –ಕಾಳಿಯಂಥ ದೇವಿಯಾರಾಧಾನೆಯಲ್ಲೂ ಗಮನಿಸುವಂತೆ, ಬೌದ್ಧ ತಾರಾಭಗವತೀ ಆರಾಧನೆಯಲ್ಲಿ ತಪ್ಪದೇ ಗಮನಿಸಬೇಕು. ಬೌದ್ಧ ಶಾಸನಗಳ ದಾನಭಾಗದಲ್ಲಿರುವ ವಿವರಗಳಿಂದ ಇವು ರುಜುವಾತಾಗುತ್ತದೆ. ಸಂಘಮಯ್ಯ ವ್ಯಕ್ತಿನಾಮದಲ್ಲಿರುವ ಸಂಘವೂ ಬೌದ್ಧ ಮತದ ಹಿನ್ನೆಲೆಯಲ್ಲಿ ಅರ್ಥಪೂರ್ಣವಾಗಿದೆ. ಇನ್ನೂ ಹೆಚ್ಚಿನ, ವ್ಯಾಪಕವಾದ ಕ್ಷೇತ್ರಕಾರ್ಯಮಾಡಿದಲ್ಲಿ ಡಂಬಳದ ಬೌದ್ಧ ಸಾಂಸ್ಕೃತಿಕ ಕಲಾಮಹತ್ವವನ್ನು ಇನ್ನೂ ಸ್ಪಷ್ಟವಾಗಿ ರೇಖಿಸಬಹುದಾಗಿದೆ.

## ಅಡಿಟಿಪ್ಪಣಿಗಳು :

1 ಇಂಆ X ಪು 185
2. ಅದೇ
3. ಅದೇ
4. ಇಂಆ X ಪು 273
5. ತಾಳ್ತಜೆ ವಸಂತಕುಮಾರ "ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ" ಬೆಂಗಳೂರು 1988. ಪು.3,4,89,92,111,116,118,131,164.
6. ಕಲುಬುರ್ಗಿ ಎಂ.ಎಂ. (ಸಂ) "ಧಾರವಾಡ ಜಿಲ್ಲಾ ಶಾಸನಸೂಚಿ" ಧಾರವಾಡ, 1975.
7. ನಮ್ಮ ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಡಂಬಳದ ನಾಗರಿಕರಿಗೆ ಹಾಗೂ ವಸತಿ-ಊಟದ ವ್ಯವಸ್ಥೆ ಮಾಡಿ ಪ್ರೋತ್ಸಾಹಿಸಿದ ಡಂಬಳದ ವೀರಶೈವ ಮಠಾಧಿಪತಿಗಳಿಗೆ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

ಡಾ॥ ಚೂಡಾಮಣಿನಂದಗೋಪಾಲ್

# ಗಜಲಕ್ಷ್ಮಿಯ ಸಾಂಕೇತಿಕ ವಿನ್ಯಾಸ – ಒಂದು ಅಧ್ಯಯನ

ಭಾರತೀಯ ಪರಂಪರೆಯಲ್ಲಿ ಅನೇಕ ವಿನ್ಯಾಸಗಳು ಹಲವು ಹಂತಗಳಲ್ಲಿ ರೂಪಿತಗೊಂಡು ನಂತರ ಸ್ಥಿರ ವಾಗಿನಿಂತು ಸಾಂಕೇತಿಕ ಮೌಲ್ಯವನ್ನು ಪಡೆದಿವೆ. ಇಂದು ಸಂಕೇತಗಳ ಅಧ್ಯಯನ ಎಲ್ಲ ರಂಗಗಳಲ್ಲೂ ಹೆಚ್ಚಿನ ಪ್ರಾಶಸ್ತ್ಯ ಮತ್ತು ಅವಕಾಶವನ್ನು ಹೊಂದಿರುವ ವಿಷಯವಾಗಿದೆ. ಮೂಲಭೂತವಾಗಿ ಭಾಷಾ ಸಾಂಕೇತಿಕ ಅಧ್ಯಯನವು (semeotics) ಹೆಚ್ಚು ಬೆಳವಣಿಗೆ ಹೊಂದುತ್ತಿರುವ ಒಂದು ವಿಶಿಷ್ಟ ರಂಗವಾಗಿದೆ. ಭಾರತೀಯ ಜೀವನದಲ್ಲಿ ಹಾಸು ಹೊಕ್ಕಾಗಿ ನಿಂತಿರುವ ಮತ್ತು ಇಂದಿಗೂ ಹೊಂದಿ ಕೊಳ್ಳುವಂತಹ ಅನೇಕ ವಿನ್ಯಾಸಗಳು ಆಸಕ್ತಿಯನ್ನು ಹುಟ್ಟಿಸುತ್ತವೆ. ಪ್ರತಿಯೊಂದು ವಿನ್ಯಾಸವು ಸಾಂಕೇತಿಕವಾಗಿ ರೂಪಿಸಲ್ಪಟ್ಟ ಬಹುಮಾರ್ಮಿಕತೆಯಿಂದ ಒಂದು ವಿಶಿಷ್ಟ ವಿಷಯ ವಸ್ತುವನ್ನು ಪ್ರತಿನಿಧಿಸುತ್ತದೆ. ಸಂಕೇತಗಳ ಅಧ್ಯಯನವನ್ನು ಭಾರತೀಯ ಪರಂಪರೆಯ ವಿನ್ಯಾಸಗಳಿಗೆ ನಾವು ಸೂಕ್ತವಾಗಿ ವಿನಿಯೋಗಿಸಿದ್ದೇ ಆದರೆ, ಅದು ಒಂದು ಬೃಹತ್ ಅಧ್ಯಯನ ರಂಗವಾಗಿ ಅನೇಕ ಸಂಶೋಧನೆಗಳಿಗೆ ದಾರಿ ಮಾಡಿ ಕೊಡುವಲ್ಲಿ ಸಂಶಯವಿಲ್ಲ.

ಸಾಮಾನ್ಯವಾಗಿ ಬಳಕೆಯಲ್ಲಿರುವ ಸಾಂಕೇತಿಕ ವಿನ್ಯಾಸಗಳನ್ನು ಇಲ್ಲಿ ಗಮನಿಸಬಹುದು:– ಓಂಕಾರ, ಕೀರ್ತಿಮುಖ, ವ್ಯಾಳಿ, ಕಲಶ, ಸ್ತೂಪ, ಚಕ್ರ, ಸ್ವಸ್ತಿಕ, ಬಿಂದು, ಕಮಲ, ಪಾದುಕೆ, ಪೀಠ, ಮಕರ, ಮುಂತಾದವು. ಈ ಸಂಕೇತಗಳನ್ನು ಬಹಳ ಸರಳವಾಗಿಯೂ, ಹಲವೊಮ್ಮೆ ಅಲಂಕಾರಿಕವಾಗಿಯೂ, ಸಂಕೀರ್ಣ ರೂಪದಿಂದಲೂ ರಚಿಸಿರುವುದನ್ನು ನಾವು ಕಾಣುತ್ತೇವೆ. ಪ್ರತಿಯೊಂದು ವಿನ್ಯಾಸವೂ ಸರಳ ರೂಪದಿಂದ ವೈವಿಧ್ಯಮಯವಾಗಿ ವಿಕಸನ ಹೊಂದಿರುವುದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅರಿವಾಗುವುದು. ಈ ವಿನ್ಯಾಸಗಳನ್ನು ಮಂಗಳ ಸೂಚಕವಾಗಿಯೂ, ಕೀರ್ತಿ, ಜಯಗಳ ಸಂಕೇತವಾಗಿಯೂ ಪರಿಶುದ್ಧತೆ, ಪ್ರಗತಿರೂಪಗಳ ಸಂಕೇತ ವಾಗಿಯೂ ವಿವಿಧ ಕಲಾಪ್ರಕಾರಗಳಲ್ಲಿ ಬಳಸಿಕೊಂಡು ಬರಲಾಗಿದೆ. ವಾಸ್ತುಶಿಲ್ಪ, ಚಿತ್ರಕಲೆಗಳಲ್ಲಿ ಈ ಸಂಕೇತಗಳು ಬಹುಮುಖ್ಯ ಸ್ಥಾನವನ್ನು ಆವರಿಸಿವೆ. ಈ ಪ್ರತಿಯೊಂದು ವಿನ್ಯಾಸವೂ ತನ್ನ ಬೆಳವಣಿಗೆ, ಸಾಮಾಜಿಕ, ಪಾರಂಪರಿಕ, ಸಾಂಸ್ಕೃತಿಕ ವೈಶಿಷ್ಟ್ಯತೆಯನ್ನು ಪ್ರತಿನಿಧಿಸುತ್ತವೆ. ಈ ಸಂಕೇತಗಳು ಇಂದಿಗೂ ಭಾರತೀಯರ ಜೀವನದಲ್ಲಿ ಮೇಳೈಸಿಕೊಂಡು ಬಂದಿರುವುದನ್ನು ಗಮನಿಸಿದಾಗ ನಮ್ಮ ಕಲಾವಿದರ ತಾತ್ವಿಕ ದೂರದೃಷ್ಟಿಯ ಬಗ್ಗೆ ಹೆಮ್ಮೆಯೆನಿಸುತ್ತದೆ. ಇಂತಹ ಅನೇಕ ಸಂಕೇತಗಳಲ್ಲಿ ಗಜಲಕ್ಷ್ಮಿಯ ವಿನ್ಯಾಸವು ಆಸಕ್ತಿಯನ್ನು ಹುಟ್ಟಿಸುವಂತಹದಾಗಿದೆ. ದೇವಾಲಯಗಳ ಅಧ್ಯಯನದಲ್ಲಿ ವಿವಿಧ ರೂಪದ ಪುರಾತನ, ಮಧ್ಯಯುಗ ಹಾಗೂ ನೂತನ ರಚನೆಗಳು ಮಹತ್ವದ ಸ್ಥಾನವನ್ನು ಪಡೆಯುತ್ತವೆ. ಹಾಗೆ ಗಮನಿಸುತ್ತಾ ಬರುತ್ತಿದ್ದಂತೆ ಗಜಲಕ್ಷ್ಮಿ ಫಲಕವು ವಿಶೇಷ ಆಸಕ್ತಿಯನ್ನು ಹುಟ್ಟಿಸಿತು. ಗಜಲಕ್ಷ್ಮಿ ಸಂಯೋಜನೆಯು ಯಾವರೀತಿ ವಿನ್ಯಾಸರೂಪವಾಗಿ ಬೆಳೆದು ಬಂದಿತು ಮತ್ತು ಅದರ ಸಾಂಕೇತಿಕ ಅರ್ಥವೇನು ಎಂಬ ವಿಚಾರವನ್ನು ಈ ಪ್ರಬಂಧದಲ್ಲಿ ಸ್ಥೂಲವಾಗಿ ಮಾಡಲಾಗಿದೆ.

ಗಜಲಕ್ಷ್ಮಿಯ ಕಲ್ಪನೆಯು ಪುರಾತನವಾಗಿದ್ದರೂ ಅದರ ವಿನ್ಯಾಸವು ನಮಗೆ ದೊರೆತಿರುವ ದಾಖಲೆಗಳಲ್ಲಿ ಪ್ರಥಮವಾಗಿ ಶುಂಗರ ಕಾಲದ ಉಬ್ಬು ಶಿಲ್ಪ ಫಲಕಗಳಲ್ಲಿ ಕಂಡುಬರುತ್ತವೆ. ನಂತರ ಚಾಲುಕ್ಯರ ಕಾಲದಲ್ಲಿ ವಿರಳವಾಗಿದ್ದರೆ, ಪಲ್ಲವರ ಕಲಾಭಿವ್ಯಕ್ತತೆಯಲ್ಲಿ ಹೆಚ್ಚು ಮಹತ್ವ ಸ್ಥಾನವನ್ನು ಪಡೆಯುತ್ತದೆ. ರಾಷ್ಟ್ರಕೂಟರ ಕಾಲದಲ್ಲಿ ಕೀರ್ತಿ ಸಂಕೇತದಂತೆ ಬಳಸಲಾದ ಗಜಲಕ್ಷ್ಮಿಯ ಫಲಕ ಕಲ್ಯಾಣ ಚಾಲುಕ್ಯರ, ಹೊಯ್ಸಳರ, ವಿಜಯನಗರ ಹಾಗೂ ಒಡೆಯರ ಕಾಲದಲ್ಲಿ ಅತ್ಯವಶ್ಯವಾದ ಲಾಂಛನವಾಗಿ ಕಂಡುಬರುತ್ತದೆ. ಇಂದಿಗೂ ನೂತನ ವಾಸ್ತು (ದೇವಾಲಯ) ರಚನೆಯಲ್ಲಿ ಗಜಲಕ್ಷ್ಮಿಯು ದ್ವಾರಫಲಕ ಅಂದರೆ ದ್ವಾರದ ಲಲಾಟಬಿಂಬವನ್ನು ಅಲಂಕರಿಸಿರುವುದನ್ನು ಕಾಣುತ್ತೇವೆ, ಭಾರತದ ಬೇರೆ ಬೇರೆ ಭಾಗಗಳಲ್ಲಿ ಗಜಲಕ್ಷ್ಮಿಯವಿನ್ಯಾಸವು ಅಲ್ಲಲ್ಲಿ ಕಂಡುಬಂದಿದ್ದರೂ ಕರ್ನಾಟಕದಲ್ಲಿಮಾತ್ರ ಮಧ್ಯಯುಗದಲ್ಲಿ ಸ್ಥಿರವಾಗಿ

ಸಾಂಕೇತಿಕ ರೂಪದಲ್ಲಿ ದೇವಾಲಯ ರಚನೆಗಳಲ್ಲಿ ಸ್ಥಿರವಾದ ಸ್ಥಾನವನ್ನು ಪಡೆದಿದೆ. ನಂತರ ಆಂಧ್ರಪ್ರದೇಶ, ತಮಿಳುನಾಡು ಮತ್ತು ಮಹಾರಾಷ್ಟ್ರಗಳ ದೇವಾಲಯಗಳಲ್ಲೂ ಗಜಲಕ್ಷ್ಮಿಯ ವಿನ್ಯಾಸವನ್ನು ದೇವಾಲಯಗಳಲ್ಲಿ ಬಳಸಿರುವುದನ್ನು ಕಾಣುತ್ತೇವೆ.

ಲಕ್ಷ್ಮಿಯ ಆದಿಯ ವಿಷಯವಾಗಿ ಆನೇಕ ಭಿನ್ನಾಭಿಪ್ರಾಯಗಳಿದ್ದರೂ, ಕ್ಷೀರಾಭಿವೃದ್ಧಿ ಕನ್ಯೆಯಾಗಿ ಉದಿಸಿದಳು, ಅನ್ನುವ ವಿಷಯ ಸಾಮಾನ್ಯವಾಗಿ ಪ್ರಚಾರದಲ್ಲಿರುವ ಜನಾಭಿಪ್ರಾಯ. ಲಕ್ಷ್ಮಿಯನ್ನು ಕಲಶಾಬ್ಧಿಪುತ್ರಿ ಎಂತಲೂ ಸಂಭೋದಿಸುತ್ತಾರೆ. ಲಕ್ಷ್ಮಿಯನ್ನು ಪೂರ್ಣಕುಂಭರೂಪದಲ್ಲಿ ಉದಯಿಸುವುದನ್ನು ಸಾಂಕೇತಿಕವಾಗಿ ಚಿತ್ರಿಸುತ್ತಾರೆ. ಲಕ್ಷ್ಮಿಯ ರೂಪಕ್ಕೆ ಸಾವಿರಾರು ಅರ್ಥ, ವ್ಯಾಖ್ಯಾನಗಳನ್ನು ಆನೇಕ ಜ್ಞಾನಿಗಳು ಸೂಚಿಸುತ್ತಾರೆ. ಧೈರ್ಯಲಕ್ಷ್ಮಿ ಕೀರ್ತಿಲಕ್ಷ್ಮಿ ವಿಜಯಲಕ್ಷ್ಮಿ ಸಂತಾನಲಕ್ಷ್ಮಿ ಐಶ್ವರ್ಯಲಕ್ಷ್ಮಿ ಧನಲಕ್ಷ್ಮಿ ಧಾನ್ಯಲಕ್ಷ್ಮಿ ಭಾಗ್ಯಲಕ್ಷ್ಮಿ ಎಂಬ ಅಷ್ಟ ಲಕ್ಷ್ಮಿಯರ ಕಲ್ಪನೆಯು ಬಳಕೆಯಲ್ಲಿದೆ. ಮೂರ್ತಿಶಾಸ್ತ್ರದ ವಿವರಗಳು ಈ ವಿಷಯದಲ್ಲಿ ಹೆಚ್ಚಿನ ವ್ಯತ್ಯಾಸಗಳನ್ನು ತಿಳಿಸುವುದಿಲ್ಲ. ಅವುಗಳ ಲಕ್ಷಣಗಳು ಒಂದು ರೀತಿಯಲ್ಲಿ ಬಳಕೆಯಲ್ಲಿ ಬಂದು ರೂಪಗೊಂಡಂತೆ ಕಾಣುತ್ತದೆ. ಈ ಅಷ್ಟಲಕ್ಷ್ಮಿಯರಲ್ಲಿ ಗಜಲಕ್ಷ್ಮಿಯ ರೂಪವಿ ಒಂದು ಎಂದು ಪರಿಗಣಿಸದಿದ್ದರೂ, ಕೀರ್ತಿಲಕ್ಷ್ಮಿಯನ್ನು ಚಿತ್ರಿಸುವಾಗ ಗಜಲಕ್ಷ್ಮಿಯ ವಿನ್ಯಾಸವನ್ನು ಬಳಸಲಾಗುತ್ತದೆ. ಅಂದರೆ ಗಜಲಕ್ಷ್ಮಿಯ ವಿನ್ಯಾಸವು ಕೀರ್ತಿಯ ಸಂಕೇತದಂತೆ ಅನ್ವಯಿಸಿ ಬಳಸಲಾಗುತ್ತಿತ್ತು. ಎಂಬುದನ್ನು ಇಲ್ಲಿ ಒಪ್ಪಬೇಕಾಗುವುದು. ಇಂದು ಸಾಮಾನ್ಯವಾಗಿ ಗರ್ಭಗುಡಿಯ ದ್ವಾರದಲ್ಲಿ ಲಲಾಟಬಿಂಬವು ಗಜಲಕ್ಷ್ಮಿಯ ವಿನ್ಯಾಸದಿಂದ ಬಹುಮಟ್ಟಿಗೆ ಶೋಭಿತ ಗೊಂಡಿರುತ್ತದೆ. ರಾಜರಿಂದ ಮಾನ್ಯತೆಗೊಂಡ, ಧಾರ್ಮಿಕವಾಗಿ ದೇವಾಲಯ ದ್ವಾರವನ್ನು ಅಲಂಕರಿಸುವ ಗಜಲಕ್ಷ್ಮಿಯ ವಿನ್ಯಾಸವು ರಾಜ್ಯದ ಉತ್ಕೃಷ್ಟತೆ ಹಾಗೂ ಸಾರ್ವಭೌಮತ್ವದ ಕುರುಹೂ ಆಗಿರಬಹುದು. ಅದರಲ್ಲಿಯೂ ಕಲ್ಯಾಣ ಚಾಲುಕ್ಯರ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಯಾವ ಭಾಗದಲ್ಲಿ ದೇವಾಲಯ ನಿರ್ಮಿಸಿದ್ದರೂ ಗಜಲಕ್ಷ್ಮಿಯು ಲಲಾಟಬಿಂಬದಲ್ಲಿ ರಾರಾಜಿಸುತ್ತಾಳೆ. ಕಲ್ಯಾಣ ಚಾಲುಕ್ಯರ ಮಾಂಡಲೀಕರಾದ ಎಲ್ಲ ಪ್ರಾಂತ್ಯಗಳಲ್ಲೂ, ವಿಶೇಷತಃ ಹೊಯ್ಸಳ, ಕಾಕತೀಯ, ನೊಳಂಬರ ದೇವಾಲಯಗಳಲ್ಲಿ ಗಜಲಕ್ಷ್ಮಿಯ ವಿನ್ಯಾಸ ಅತ್ಯಂತ ಸುಂದರ ರೂಪದಲ್ಲಿ ಸಂಯೋಜಿಸಲ್ಪಟ್ಟಿದೆ. ಮುಂದೆ ವಿಜಯನಗರ ಕಾಲದಲ್ಲಿ ಮತ್ತು ಅವರ ಚಕ್ರಾಧಿಪತ್ಯದ ಎಲ್ಲ ಭಾಗಗಳಲ್ಲೂ ಗಜಲಕ್ಷ್ಮಿ ದೇವಾಲಯದ ಲಲಾಟಬಿಂಬದ ಮುಖ್ಯ ವಿನ್ಯಾಸವಾಗಿದೆ. ನಂತರದ ನಾಯಕರು, ಒಡೆಯರು ಮತ್ತು ಪಾಳೆಯಗಾರರು ಈಸಂಪ್ರದಾಯವನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಈ ರೀತಿಯ ಬೆಳವಣಿಗೆಯನ್ನು ನೋಡಿದಾಗ ಗಜಲಕ್ಷ್ಮಿಯ ವಿನ್ಯಾಸವು ಸಾರ್ವಭೌಮತ್ವವನ್ನು ಪ್ರತಿನಿಧಿಸುವ ಸಂಕೇತವಾಗಿತ್ತು. ಎನ್ನವುದರಲ್ಲಿ ಯಾವ ಸಂಶಯವೂ ಇಲ್ಲ.

ಗಜಲಕ್ಷ್ಮಿ ವಿನ್ಯಾಸದ ಸಂಯೋಜನೆಯು ಕಾಲಕ್ರಮದಲ್ಲಿ ಹೇಗೆ ವಿನ್ಯಾಸಗೊಂಡಿದೆ ಎಂಬುದರ ವಿಷಯದಲ್ಲಿ ಇಲ್ಲಿ ಒಂದು ಕಿರು ಸಮೀಕ್ಷೆ ಮಾಡಲಾಗಿದೆ. ಸಿ. ಶಿವರಾಮಮೂರ್ತಿಯವರ ಅಭಿಪ್ರಾಯದಂತೆ ಎರಡನೇ ಶತಮಾನದ ಸುಜ್ಯೇಷ್ಟನ ಕಾಲದಲ್ಲಿ ನಾಣ್ಯದಲ್ಲಿ ಲಕ್ಷ್ಮಿಯು ಕಮಲದಲ್ಲಿ ನಿಂತು ಎರಡು ಗಜಗಳಿಂದ ಅಭಿಷೇಕ ಮಾಡಿಸಿಕೊಳ್ಳುತ್ತಿದ್ದಾಳೆ. ಇದು ಪ್ರಾಯಶಃ ಮೊದಲ ದೃಷ್ಟಿಗೋಚರ ಆಧಾರವಾಗಿರುವಂತೆ ತೋರುವುದು. ನಂತರ ಗಜಲಕ್ಷ್ಮಿಯ ವಿನ್ಯಾಸವು ಶುಂಗರ ಕಾಲದಲ್ಲಿ ರಚಿತವಾದ ಸಾಂಚಿಯ ಸ್ತೂಪದ ದ್ವಾರತೋರಣದಲ್ಲಿ ಕಂಡುಬರುತ್ತದೆ. ಈ ತೋರಣಗಳನ್ನು ಶಾತವಾಹನರು ಸಮರ್ಪಿಸಿದರೆಂದು ತಿಳಿಯಲಾಗಿದೆ. ಜಾನ್ ಮಾರ್ಷಲ್ ಅವರ 'ಮಾನ್ಯುಮೆಂಟ್ಸ್ ಆಫ್ ಸಾಂಚಿ' ಎಂಬ ಹೊತ್ತಿಗೆಯಲ್ಲಿ ಗಜಲಕ್ಷ್ಮಿ ವಿನ್ಯಾಸದ ಫಲಕಗಳನ್ನು ಆನೇಕ ಬಾರಿ ಕೊಡಲಾಗಿದೆ. ಅಲ್ಲಿ ಗಜಲಕ್ಷ್ಮಿ ಎಂಬ ನಿರ್ಧಾರಿತ ಅಭಿಪ್ರಾಯ ನಮಗೆ ದೊರೆಯುವುದಿಲ್ಲ. ಮಾರ್ಷಲ್ ಅವರು ಈ ದೇವತೆಯನ್ನು ಸ್ಥಳದೇವತೆ , (ಗ್ಗಾಡೆಸ್ ಆಫ್ ನೇಟಿವಿಟಿ) ಎಂದು ಪರಿಗಣಿಸಿದ್ದಾರೆ. ದಕ್ಷಿಣದ್ವಾರ ತೋರಣದ ಮೇಲ್ಭಾಗದಲ್ಲಿ ಮಧ್ಯಭಾಗದ ಒಬ್ಬ ಸ್ತ್ರೀ ದೇವತೆ ಕಮಲದ ಮೇಲೆ ನಿಂತಿದ್ದಾಳೆ, ಎಡ ಕೈಯನ್ನು ಸೊಂಟದ ಮೇಲೂ ಬಲಗೈಯಲ್ಲಿ ಒಂದು ಕಮಲವನ್ನು ಹಿಡಿದಿರುವ ಈ ಸ್ತ್ರೀಯ ಸುತ್ತ ನೀರಿನಲ್ಲಿರುವ ಹಂಸ, ಕಮಲದಳ, ಮೊಗ್ಗು ಆವೃತವಾಗಿವೆ. ಎರಡು ಆನೆಗಳು ಎರಡು ಕಮಲಗಳ ಮೇಲೆ ಆ ಸ್ತ್ರೀಯ ಕುತ್ತಿಗೆಗೆ ಸಮನಾಂತರವಾಗಿ ನಿಂತು ತಮ್ಮ ಸೊಂಡಿಲನ್ನು ಮೇಲಕ್ಕೆ ಎತ್ತಿ ಹಿಡಿದಿವೆ. ಅದೇ ತೋರಣದ ಇನ್ನೊಂದು ಅಂಚಿನ ಫಲಕದಲ್ಲಿ ಕಮಲದ ಮೇಲೆ ಪದ್ಮಾಸನ ಹಾಕಿ ಬಲಗೈಯಲ್ಲಿ ಕಮಲವನ್ನೂ ಎಡಗೈಯನ್ನು ಒಂದು ಪಕ್ಕಕ್ಕೆ ಇಳಿಬಿಡಲಾಗಿದೆ. ಈ ಫಲಕವನ್ನು ಸುಂದರವಾಗಿ ಸಂಯೋಜಿಸಲಾಗಿದೆ. ಎರಡು ಆನೆಗಳುಕಮಲದಿಂದಲೇ ಉದ್ಭವಗೊಂಡಂತೆ ನಿಂತಿವೆ. ಮಾರ್ಷಲ್ ಅವರು ಈ ಸ್ತ್ರೀಯ ರೂಪವನ್ನ

ಮಾಯಾದೇವಿ ಎಂದು ಪರಿಗಣಿಸಿದ್ದಾರೆ. ಉತ್ತರದ ತೋರಣದಲ್ಲಿಯ ಫಲಕದಲ್ಲಿಯೂ ಸ್ವಲ್ಪ ವ್ಯತ್ಯಾಸಗೊಂಡ ಇದೇ ರೀತಿಯ ವಿನ್ಯಾಸ ಕಂಡುಬರುತ್ತದೆ. ಇದರಂತೆ ಅದೇ ತೋರಣದ ಪೂರ್ವದ ಅಂಚಿನಲ್ಲಿಯೂ, ಪೂರ್ವ ಭಾಗಕ್ಕಿರುವ ತೋರಣದ ಎರಡು ಫಲಕಗಳಲ್ಲಿಯೂ ಈ ಸಂಯೋಜನೆ ಎದ್ದು ಕಾಣುವಂತೆ ಚಿತ್ರಿಸಲಾಗಿದೆ. ಪೂರ್ವ ಭಾಗದ ದ್ವಾರ ತೋರಣದ ವಿನ್ಯಾಸವು ಮಧ್ಯಯುಗದಿಂದ ಸ್ಥಿರರೂಪಗೊಂಡ ಗಜಲಕ್ಷ್ಮಿಯ ಸಂಯೋಜನೆಗೆ ಬಹಳ ಸಮೀಪವಾಗಿದೆ. ಈ ಫಲಕದಲ್ಲಿ ಅತ್ಯಂತ ಸುಂದರವಾಗಿ ಸೃಜಿಸಿರುವ ಪದ್ಮಾಸನ ಮೂರ್ತಿ, ಆನೆಗಳು ಅಲಂಕೃತ ಕಮಲದಲ್ಲಿ ನಿಂತು ಕಲಶದಿಂದ ಸುರಿಯುತ್ತಿರುವ ನೀರು ಧಾರೆಯಂತೆ ಹಿನ್ನೆಲೆಯಲ್ಲಿ ಕಂಡುಬರುತ್ತದೆ. ಎರಡು ಸಣ್ಣ ಕಂಭಗಳ ಮಧ್ಯದಲ್ಲಿ ಈ ವಿನ್ಯಾಸವನ್ನು ಚಿತ್ರಿಸಲಾಗಿದೆ. ಸಾಂಚೀ ಸ್ತೂಪವು ಬೌದ್ಧಮತ ಕೇಂದ್ರವಾದರೂ ಶುಂಗ, ಶಾತವಾಹನ, ಗುಪ್ತ ಹಾಗೂ ನಂತರದ ಕಾಲದಲ್ಲಿ ಅನೇಕ ರಚನೆಗಳು ಸೇರಲ್ಪಟ್ಟು ಇಂದು ಭಾರತೀಯ ಕಲಾಭಿವ್ಯಕ್ತತೆಯ ಮೂಲಾಧಾರವೆಂದು ಪರಿಗಣಿಸಲ್ಪಡುತ್ತದೆ. ಮುಂದೆ ಈ ಸ್ತ್ರೀ ಮತ್ತು ಆನೆಯ ವಿನ್ಯಾಸವನ್ನು ಬಳಸಿಕೊಂಡು ಬಂದಿರುವುದನ್ನು ಗಮನಿಸಿದಾಗ ನಂತರದ ಗಜಲಕ್ಷ್ಮಿಯ ಕಲ್ಪನೆಗೆ ಸಾಂಚಿಯ ತೋರಣದ ಫಲಕಗಳು ಮೂಲ ಸ್ಥಾನವಾಗುತ್ತದೆ. ಸಿ. ಶಿವರಾಮ ಮೂರ್ತಿಯವರು ತಮ್ಮ ಗ್ರಂಥವಾದ "ಲಕ್ಷ್ಮಿ ಇನ್ ಇಂಡಿಯನ್ ಆರ್ಟ್ ಅಂಡ್ ಥಾಟ್‌ನಲ್ಲಿ" ಬೇರೆ ಯಾವ ನಿರ್ದಿಷ್ಟ ಸಮರ್ಥನೆಯನ್ನು ನೀಡದಿದ್ದರೂ ಗಜಲಕ್ಷ್ಮಿಯ ಆಧಾರಕ್ಕೆ ಸಾಂಚಿಯನ್ನು ಬಳಸಿಕೊಂಡಿದ್ದಾರೆ. ಇಂತಹವಿನ್ಯಾಸಗಳನ್ನು ಭಾರ್ಹೂತ್‌ನ ಸ್ತಂಭಗಳ ಉಬ್ಬುಶಿಲ್ಪಗಳಲ್ಲಿಯೂ ಕಾಣಬಹುದು.

ದೆಹಲಿಯ ರಾಷ್ಟ್ರೀಯ ಸಂಗ್ರಹಾಲಯದಲ್ಲಿರುವ ಕುಶಾನರ ಕಾಲಕ್ಕೆ ಸೇರಿದ ಒಂದು ಫಲಕದಲ್ಲಿ ಲಕ್ಷ್ಮಿಯು ಒಂದು ಪೂರ್ಣಕುಂಭದ ಮೇಲೆ ನಿಂತಿದ್ದು ಸುತ್ತಲೂ ಸೂರ್ಯಮಂಡಲಕ್ಕೆ ಸೇರಿದ ದೇವತೆಗಳ ಸಂಕೇತವಿದೆ. ಆದರೆ ಇಲ್ಲಿ ಆನೆಗಳ ಚಿತ್ರಣ ಕಂಡುಬರುವುದಿಲ್ಲ. ಈ ವಿನ್ಯಾಸಕ್ಕೆ ಪೂರಕವಾಗಿ ಇಂದಿಗೂ ಯಾವ ರೀತಿಯ ಮಹಾಕಾರ್ಯದಲ್ಲೂ ಮಂಗಳ ಸಂಕೇತವಾಗಿ ಕಲಶಪೂಜೆ ಮತ್ತು ಆವಾಹನೆ ರೂಢಿಯಲ್ಲಿದೆ. ವೈದಿಕ ಧರ್ಮವನ್ನು ಪ್ರತಿಪಾದಿಸಿ ದಶಾವತಾರದ ಕಲ್ಪನೆಯನ್ನು ಶಿಲ್ಪಗಳಲ್ಲಿ ಮೊಟ್ಟಮೊದಲಿಗೆ ರೂಪಿಸಿದ ವೈಷ್ಣವ ಅನುವರ್ತಿಗಳಾದ ಗುಪ್ತರಕಾಲದ ಸ್ಮಾರಕಗಳಲ್ಲಾಗಲೀ, ನಾಣ್ಯಗಳಲ್ಲಾಗಲೀ ಈ ರೀತಿಯ ಗಜಲಕ್ಷ್ಮಿಯ ವಿನ್ಯಾಸದ ಸೂಚನೆಯೂ ಕಂಡುಬಂದಿಲ್ಲ. ಸಾಂಚೀ ಮತ್ತು ಭಾರ್ಹೂತ್‌ಗಳು ಬೌದ್ಧ ಕೇಂದ್ರಗಳಾಗಿದ್ದರೂ ಗಜಲಕ್ಷ್ಮಿಯ ರೂಪದ ಫಲಕಗಳನ್ನು ತಮ್ಮ ವಾಸ್ತುಶಿಲ್ಪರಚನೆಯಲ್ಲಿ ಬಳಸಿ ಕೊಂಡಿವೆ. ಆದರೆ ಗುಪ್ತ ವಾಕಾಟಕರ ಕಾಲದ ಅಜಂತೆಯಲ್ಲಿ ಎಲ್ಲೂ ಈ ವಿನ್ಯಾಸವನ್ನು ಬಳಸಿಕೊಂಡಿಲ್ಲ. ಚಾಲುಕ್ಯರ ಕಾಲದ ಸ್ಮಾರಕಗಳಾದ ಬಾದಾಮಿ, ಐಹೊಳೆ ಮತ್ತು ಪಟ್ಟದಕಲ್ಲಿನ ದೇವಾಲಯಗಳಲ್ಲಾಗಲೀ ಗಜಲಕ್ಷ್ಮಿಯ ವಿನ್ಯಾಸವಿಲ್ಲ. ಆದರೆ ಮಹಾಕೂಟದ ಒಂದು ದೇವಾಲಯದ ಮೇಲ್ಛಾವಣಿಯಲ್ಲಿ ವರ್ತುಲಾಕಾರದ ಒಂದು ಅಲಂಕಾರಿಕ ಕಮಲ ವಿನ್ಯಾಸದ ಮಧ್ಯದಲ್ಲಿ ಗಜಲಕ್ಷ್ಮಿಯ ಉಬ್ಬು ಶಿಲ್ಪವಿದೆ. ಮಧ್ಯೆ ಪದ್ಮಾಸನದಲ್ಲಿ ಲಕ್ಷ್ಮಿಯು ಕುಳಿತಿರುವುದು ಕಂಡುಬರುತ್ತದೆ. ಇಲ್ಲಿ ಮುಂದಿನಶತಮಾನಗಳಲ್ಲಿ ಸಾಮಾನ್ಯವಾಗಿ ರೂಢಿಯಲ್ಲಿ ಬಂದ ಗಜಲಕ್ಷ್ಮಿಯ ಕಲ್ಪನೆಯು ನಿಚ್ಚಳವಾಗಿ ಮೂಡಿ ಬಂದಿವೆ.

ಪಲ್ಲವರ ಕಾಲಕ್ಕೆ ಸೇರಿದ ಮಹಾಬಲಿಪುರಂನ ವರಾಹಗುಹೆಯಲ್ಲಿ ಲಕ್ಷ್ಮಿಯು ಕಮಲದಲ್ಲಿ ಪ್ರಲಂಬಪಾದ ಆಸನದಲ್ಲಿ ಕುಳಿತು ಎರಡು ಆನೆಗಳಿಂದ ಅಭಿಷಿಕ್ತಳಾಗುತ್ತಿರುವ ಚಿತ್ರಣ ಕಲಾತ್ಮಕವಾಗಿ ಮೂಡಿಬಂದಿವೆ. ಇದು ಬೃಹತ್ ಗಾತ್ರದ ಶಿಲ್ಪ ಸಂಯೋಜನೆ. ನಾಲ್ಕು ಜನ ಸ್ತ್ರೀಯರು ತಟ್ಟೆಗಳನ್ನೂ ಕುಂಭಗಳನ್ನೂ ಹಿಡಿದು ನಿಂತಿದ್ದಾರೆ. ಇದು ವಿಷ್ಣುವಿನ ದಶಾವತಾರಗಳಲ್ಲಿ ಒಂದಾದ ವರಾಹಗುಹೆಯಲ್ಲಿ ಚಿತ್ರಿಸಿರುವುದರಿಂದ ಲಕ್ಷ್ಮಿಯೆಂಬ ಕಲ್ಪನೆಯಿಂದಲೇ ಸೃಷ್ಟಿಸಿದಂತೆ ಕಂಡುಬರುತ್ತದೆ. ಪಲ್ಲವರ ಇತರ ಸ್ಮಾರಕಗಳಾದ ಮಹಾಬಲೀಪುರಂನ ದೇವಾಲಯಗಳು ಮತ್ತು ಕಂಚಿಯ ಕೈಲಾಸನಾಥ ದೇವಾಲಯದಲ್ಲಾಗಲೀ ಈ ರೀತಿಯ ವಿನ್ಯಾಸದ ಚಿತ್ರಣವಿಲ್ಲ.

ಮತ್ತೆ ಗಜಲಕ್ಷ್ಮಿಯ ಸ್ವತಂತ್ರ ಶಿಲ್ಪ ಸಂಯೋಜನೆಯಲ್ಲಿ ರೂಪದಲ್ಲಿ ಹಾಗೂ ದೊಡ್ಡ ಪ್ರಮಾಣದಲ್ಲಿ ಎಲ್ಲೋರಾದ ಕೈಲಾಸ ದೇವಾಲಯದಲ್ಲಿ ಕಾಲಿಡುತ್ತಿದ್ದಂತೆ ನಮ್ಮನ್ನು ಸ್ವಾಗತಿಸುತ್ತದೆ. ಇಲ್ಲಿ ಪದ್ಮಾಸನದಲ್ಲಿ ಕುಳಿತ ಲಕ್ಷ್ಮಿಯ ಪಕ್ಕದಲ್ಲಿ ಆನೆಗಳು ಲಕ್ಷ್ಮಿಯ ಆಸನಕ್ಕೆ ಸಮನಾಂತರವಾಗಿ ನಿಂತು ಮುಂದಿನ ಎರಡು ಕಾಲುಗಳನ್ನು ಎತ್ತಿ ಧಾರೆಯೆರೆಯುತ್ತಿರುವ ಈ ಶಿಲ್ಪ ಸಂಯೋಜನೆ ಬಹಳ ಮಹತ್ವವನ್ನು ಹೊಂದಿದ್ದಂತೆ ಕಂಡುಬರುತ್ತದೆ. ಪ್ರಾಯಶಃ ರಾಷ್ಟ್ರಕೂಟರು ಲಕ್ಷ್ಮಿಯನ್ನು ಕೀರ್ತಿ, ಜಯಗಳ ಲಾಂಛನ ಹಾಗೂ ಶುಭ ಸಂಕೇತದಂತೆ ಬಳಸಲು ಪ್ರಾರಂಭಿಸಿರಬೇಕು. ಐಹೊಳೆಯಲ್ಲಿ

ಷ್ಟ್ರಕೂಟರ ದೇವಾಲಯವೆಂದು ಪರಿಗಣಿಸಲಾಗಿರುವ ನೆಯಲ್ಲಿ ಗಜಲಕ್ಷ್ಮಿಯ ಒಂದು ಚಿಕ್ಕ ಫಲಕ ದ್ವಾರ ಲಲಾಟಬಿಂಬದಲ್ಲಿ ಪ್ರಪ್ರಥಮವಾಗಿ ಕಂಡುಬರು ದೆ. ಕುಕನೂರಿನ ನವಲಿಂಗೇಶ್ವರ ದೇವಾಲಯವು ನಮತದ್ದಾಗಿದ್ದರೂ ಎಲ್ಲಾ ದ್ವಾರಗಳ ಲಲಾಟಬಿಂಬ ಲ್ಲಿ ಗಜಲಕ್ಷ್ಮಿಯ ವಿನ್ಯಾಸವು ಸೂಚಿತವಾಗಿದೆ. ಔರಂ ಬಾದಿನ ಏಳನೇ ಗುಹೆಯು ವಜ್ರಯಾನ ಬೌದ್ಧಮ ತ ರಚನೆ, ಎಂಟನೇ ಶತಮಾನಕ್ಕೆ ಸೇರಿದೆ. ಮುಖ್ಯ ದ್ವಾರದ, ಪಕ್ಕದಲ್ಲಿರುವ ಇನ್ನೊಂದು ದ್ವಾರದ ಕಮಾ ನ ಮೇಲೆ ಗಜಲಕ್ಷ್ಮಿಯ ವಿನ್ಯಾಸವನ್ನು ಸೃಜಿಸಲಾಗಿದೆ. ಂದಾದಲ್ಲಿ ದೊರೆತ ಹಲವು ಮುದ್ರೆಗಳ ಮೇಲೂ ಜಲಕ್ಷ್ಮಿಯನ್ನು ಕಂಡಸಲಾಗಿದೆ.

ರಾಷ್ಟ್ರಕೂಟರ ಆಳ್ವಿಕೆಯನ್ನು ಅಂತ್ಯಗೊಳಿಸಿದ ಲ್ಯಾಣಚಾಲುಕ್ಯರು ರಾಷ್ಟ್ರಕೂಟರು ಸೃಜಿಸಿದ ಗಜಲ ಯ ವಿನ್ಯಾಸವನ್ನು ತಮ್ಮ ದೇವಾಲಯ ರಚನೆಗ ಲ್ಲಿ, ಆದರಲ್ಲೂ ಮುಖ್ಯವಾಗಿ ಗರ್ಭಗುಡಿಯ ದ್ವಾರದ ಲಲಾಟಬಿಂಬದ ಮೇಲೆ ಉಳಿಸಿಕೊಂಡು ಂದಿದ್ದಾರೆ. ಕಲ್ಯಾಣ ಚಾಲುಕ್ಯರ ಚಕ್ರಾಧಿಪತಿ ಆರ ಯ ವಿಕ್ರಮಾದಿತ್ಯನು ಗಜಲಕ್ಷ್ಮಿಯ ವಿನ್ಯಾಸವನ್ನು ರ್ವಭೌಮತ್ವದ ಕುರುಹಾಗಿ ಬಳಸಿದಂತೆ ಕಾಣುತ್ತದೆ. ಕ್ಕುಂಡಿ, ಇಟಗಿ, ಲಕ್ಷ್ಮೇಶ್ವರ, ಡಂಬಳ, ಬೆಳಗಾವಿ ಲ್ಲೆಯ ದೇವಾಲಯಗಳು ಹಾಗೂ ಕೃಷ್ಣಾನದೀ ತೀರ ಲ್ಲಿ ರಚಿಸಿರುವ ಖಿದ್ರಾಪುರದ ಸುಂದರ ದೇವಾಲ ಯಗಳಲ್ಲಿ ಗಜಲಕ್ಷ್ಮಿಯು ಪ್ರಮುಖ ವಾಗಿದ್ವಾರಬಿಂಬದ ಲಾಟದಲ್ಲಿ ರಾರಾಜಿಸುತ್ತಾಳೆ.

ಉತ್ತರ ಹಾಗೂ ದಕ್ಷಿಣ ಭಾರತದ ಮರಕೆತ್ತನೆಯ ಪ್ಪಗಳಲ್ಲಿ, ರಥಗಳ ರಚನೆಯಲ್ಲಿ, ಮಣ್ಣಿನ ರಚನೆಗಳ ಲೋಹದಲ್ಲಿ ಆಯಾ ಪ್ರದೇಶದ ಹಲವು ಲಕ್ಷಣಗ ನ್ನು ಮೈಗೂಡಿಸಿಕೊಂಡು ಗಜಲಕ್ಷ್ಮಿಯ ಕಲ್ಪನೆಯು ಭಿವ್ಯಕ್ತಗೊಂಡಿದೆ. ಕರ್ನಾಟಕದಲ್ಲಿ ಅತ್ಯಂತ ಮಹತ್ವ ನ ಪಡೆದು ಅಂಕಿತರೂಪದಂತಿರುವ ಗಜಲಕ್ಷ್ಮಿಯನ್ನು ರದ ರಥಗಳ ಮುಂಭಾಗದಲ್ಲಿ ರಚಿಸಲಾಗಿರುತ್ತದೆ. ಮೈಸೂರು ಸಂಪ್ರದಾಯದ ಚಿತ್ರಶೈಲಿಯಲ್ಲಿ ಗಜಲ ಯು ಸಂಪತ್ತು ಹಾಗೂ ಶುಭದ ಸಂಕೇತವಾಗಿದ್ದು ನೆಯಲ್ಲಿ, ಮಂದಿರಗಳಲ್ಲಿ ಆ ಚಿತ್ರವನ್ನಿಟ್ಟು ಪೂಜೆ ಮಾಡುವುದರಿಂದ ಪುರೋಭಿವೃದ್ಧಿ ಎಂಬ ನಂಬಿಕೆ ಲವಾಗಿದ್ದಂತೆ ತೋರುತ್ತದೆ. ಆದ್ದರಿಂದ ಪ್ರತಿಯೊಬ್ಬ ಾವಿದನೂ ತನ್ನ ಜೀವಮಾನದಲ್ಲಿ ಅನೇಕ ಗಜಲಕ್ಷ್ಮಿ ಚಿತ್ರ ಮತ್ತು ಶಿಲ್ಪಗಳನ್ನು ರಚಿಸಿ ಸಮಾಜದಲ್ಲಿ ಹಿರಿಯ ಸ್ಥಾನವನ್ನು ಪಡೆಯುತ್ತಿದ್ದ. ಈ ರಚನೆಗಳಿಗೆ ಹೆಚ್ಚಿನ ಬೆಲೆ ಯನ್ನೂ ಕಟ್ಟಲಾಗುತ್ತಿತ್ತು. ಮೈಸೂರಿನ ಅರ ಮನೆಯ ಹೆಬ್ಬಾಗಿಲಿನಿಂದ ಹಿಡಿದು ವಿವಿಧ ಭಾಗಗಳಲ್ಲಿ ಗಜಲಕ್ಷ್ಮಿ ವಿನ್ಯಾಸವು ಸ್ಥಾನವನ್ನು ಪಡೆದಿದೆ. ನಂಜನಗೂಡನ ದೇವಾಲಯದ ದ್ವಾರ ಮಂಟಪದ ಮೇಲ್ಭಾಗದಲ್ಲಿ ಇತ್ತೀಚೆಗೆ ರಚಿಸಲಾದ ಮಧ್ಯದ ಒಂದು ಗೂಡಿನಲ್ಲಿ ಐದು ಹೆಡೆ ಸರ್ಪದ ಮೇಲೆ ಕುಳಿತ ಲಕ್ಷ್ಮಿ, ಎರಡು ಆನೆಗಳು ಕುಂಭ ಹಿಡಿದಿರುವ ರಚನೆಯನ್ನು ಕರಿಯ ಶಿಲೆಯಲ್ಲಿ ಕೆತ್ತಲಾಗಿದೆ. ಹಳೆಯ ಮೈಸೂರಿನ ಭಾಗಗ ಳಲ್ಲಿ ಮದುವೆಯ ಸಮಯದಲ್ಲಿ ಮದುವೆಯ ಹುಡುಗಿಯನ್ನು ನಾಂದಿಗೆ ಕೂಡಿಸುವ ಮೊದಲು ಹಿಂಬದಿಯ ಗೋಡೆಯ ಮೇಲೆ ಹಿರಿಯ ಮತ್ತೈದೆ ಯರು ಕೆಮ್ಮಣ್ಣಿನಲ್ಲಿ ಬೆರಳುಗಳನ್ನು ಅದ್ದಿ ದೊಡ್ಡ ಪ್ರಮಾಣದ ಗಜಲಕ್ಷ್ಮಿಯನ್ನು ಪ್ರಯಾಸವಿಲ್ಲದೇ ರಚಿಸು ತ್ತಿದ್ದ ಸಂಪ್ರದಾಯವಿತ್ತು ಎಂದು ಆ ಭಾಗದ ಹಲವು ಹಿರಿಯರು ವಿವರಗಳನ್ನು ನೀಡುತ್ತಾರೆ. ಈ ಚಿತ್ರವನ್ನು ರಚಿಸುತ್ತಿರುವಾಗಿ ಹಾಡುಗಳನ್ನು ಹಾಡುತ್ತಿದ್ದರು. ಈ ಪದ್ಧತಿಯು ಮದುಮಗಳ ಜೀವನದಲ್ಲಿ ಶುಭ, ಸಂಪತ್ತು ಶಾಂತಿ ವೃದ್ಧಿಯಾಗಲು ಹಾರೈಸುವ ಶಾಸ್ತ್ರ ದಂತೆ ಬಳಕೆಯಲ್ಲಿದ್ದಿತು.

ಗಜಲಕ್ಷ್ಮಿಯ ವಿನ್ಯಾಸವು ಯಾವುದೇ ಧರ್ಮ ಅಥವಾ ಪಂತದ ಕಟ್ಟುಪಾಡಿಗೆ ಒಳಪಟ್ಟಂತೆ ಕಾಣುವು ದಿಲ್ಲ. ಹಲವು ವ್ಯತ್ಯಾಸಗಳೊಂದಿಗೆ ಸಂಯೋಜನಾ ವೈವಿಧ್ಯತೆಯನ್ನೇ ಪಡೆದು ಬೌದ್ಧ, ಜೈನ, ಹಿಂದೂ ಶಿಲ್ಪ ಸಂಯೋಜನೆಯಲ್ಲಿಯೂ, ಜಾನಪದ, ಶಾಸ್ತ್ರೀಯ ಕಲಾರೂಪಗಳಲ್ಲಿಯೂ, ವಿವಿಧ ಮಾಧ್ಯಮಗಳಲ್ಲಿಯೂ ಪ್ರತಿಬಿಂಬಿತವಾಗಿದೆ. ಇಲ್ಲಿ ಲಕ್ಷ್ಮಿಯನ್ನು ವಿಷ್ಣುವಿನ ಪತ್ನಿಯಂತೆ ಕಾಣಲಾಗಿಲ್ಲ. ವಿಪುಲತೆ, ಪ್ರಗತಿ, ಕೀರ್ತಿ, ಜಯ, ರಾಜ್ಯಲಾಂಛನ, ಸಾರ್ವಭೌಮತ್ವದ ಸಂಕೇತ ದಂತೆ ಪರಿಗಣಿಸಲಾಗಿದೆ. ಈ ಒಂದು ಸಾಂಕೇತಿಕ ವಿನ್ಯಾಸದಡಿಯಲ್ಲಿ ಎಲ್ಲ ಮತ ವೈಷಮ್ಯಗಳು ಕ್ಷುಲ್ಲಕ ಭಾವನೆಗಳು ತಲೆತಗ್ಗಿಸಿವೆ. ಸಾಮಾಜಿಕ ಬಾಂಧವ್ಯವನ್ನು ಉಂಟುಮಾಡುವಲ್ಲಿ ಗಜಲಕ್ಷ್ಮಿಯ ವಿನ್ಯಾಸವು ಸಾಂಕೇ ತಿಕ ಮಹತ್ವವನ್ನು ಹೊಂದಿ ಅನೇಕ ಶತಮಾನಗಳಿಂದ ಭಾರತೀಯರ ಜನಜೀವನದ ಒಂದು ಮುಖ್ಯ ಅಭಿ ವ್ಯಕ್ತತೆಯಂತೆ ಮೂಡಿಬಂದಿದೆ.

ವಸಂತಲಕ್ಷ್ಮಿ.ಕೋ.

# ಕರ್ನಾಟಕದಲ್ಲಿ ಜ್ವಾಲಾಮಾಲಿನೀ ಆರಾಧನೆ: ಒಂದು ಪರಿಚಯ

ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ ಜೈನ ಧರ್ಮವು ದಿಗಂಬರ ಪಂಥದ ಮೂಲಸಂಘ, ಯಾಪನೀಯ ಸಂಘಗಳ ಮೂಲಕ ನೆಲೆಸಿದ್ದಿತು. ಯಾಪನೀಯ ಸಂಘವು ದಿಗಂಬರ ಪಂಥದ ಒಂದು ಭಾಗವೆಂಬಂತಿದ್ದರೂ ಈ ಸಂಘದ ಆಚರಣೆಗಳು ತತ್ವಗಳು ಶ್ವೇತಾಂಬರ ಪಂಥದ್ದಾಗಿದ್ದವು" ಯಾಪನೀಯ ಮುನಿಗಳು ದಿಗಂಬರರೇ ಆಗಿದ್ದರೂ 'ಪರಶಾಸನೇ ಮೋಕ್ಷ', 'ಸುಗ್ರಂಥಾನಾಂ ಮೋಕ್ಷಃ' ಮತ್ತು 'ಸ್ತ್ರೀನಾಂತದ್ಭಾವೆ ಮೋಕ್ಷಃ' – ಎಂಬ ತತ್ವಗಳನ್ನು ನಂಬಿದ್ದವರು. ಈ ತತ್ವಗಳ ಅನುಸರಣೆಯಿಂದಾಗಿ ಮತ್ತು ಇವರ ದಯಾಪೂರ್ಣವಾದ ಧಾರ್ಮಿಕ ಮನೋಭಾವದಿಂದಾಗಿ ಇವರು ಅಂದಿನ ಸಮಾಜದಲ್ಲಿ ಸಾಮಾನ್ಯಜನರ ಮೇಲೂ ಆಳವಾದ ಪ್ರಭಾವವನ್ನು ಬೀರಿದ್ದರು. ಕರ್ನಾಟಕದಲ್ಲಿ ಕದಂಬರ ಕಾಲದಿಂದಲೂ ಪ್ರಚಲಿತವಾಗಿದ್ದ ಈ ಸಂಘವು ಕ್ರಿ.ಶ. 14ನ ಶತಮಾನದವರೆಗೆ ಪ್ರಚಲಿತವಾಗಿತ್ತು. ಉತ್ತರ ಕರ್ನಾಟಕದಲ್ಲಿ ಹೆಚ್ಚು ಪ್ರಸಿದ್ಧವಾಗಿದ್ದ ಈ ಸಂಘವು 7ನೇ ಶತಮಾನದ ನಂತರದಲ್ಲಿ ಕರ್ನಾಟಕದ ದಕ್ಷಿಣಭಾಗಕ್ಕೂ ಪಸರಿಸಿದಂತೆ ಶಾಸಗಳಿಂದ ತಿಳಿದು ಬರುತ್ತದೆ. ಈ ಸಂಘದ ಗುರುಗಳು ರಾಜಾಶ್ರಯವನ್ನುಗಳಿಸಿದ್ದರಲ್ಲದೇ ಅನೇಕ ಭೂದಾನ ದತ್ತಿಗಳನ್ನು, ಸ್ವೀಕರಿಸುತ್ತಿದ್ದರು. ಇವರು ಹಲವೆಡೆ ಜೈನಮಠಗಳನ್ನು ಸ್ಥಾಪಿಸಿ ತನ್ಮೂಲಕ ಧರ್ಮ ಪ್ರಚಾರ ಮಾಡಿ ಜೈನಧರ್ಮವು ಬಲವಾಗಿ ನೆಲೆಯೂರಲು ಕಾರಣರಾದರು. ತಮ್ಮ ಧರ್ಮದಲ್ಲೂ ಹೊಸ ಅನ್ವೇಷಣೆಗಳನ್ನು ನಡೆಸುತ್ತಿದ್ದ ಇವರೇ ಸಾಮಾನ್ಯ ಜನರನ್ನು ಆಕರ್ಷಿಸಲೆಂದು 'ಯಕ್ಷಿಆರಾಧನೆ'ಯನ್ನು ಆರಂಭ ಮಾಡಿದರೆಂದು ಪಿ.ಬಿ. ದೇಸಾಯಿಯವರು ತಿಳಿಸರುತ್ತಾರೆ[1]. ಕ್ರಿ.ಶ.1 ನೇ ಶತಮಾನದಲ್ಲೇ ಜೈನ ಪರಂಪರೆಯಲ್ಲಿ ಯಕ್ಷಯಕ್ಷಿಯರು ಪ್ರವೇಶಿಸಿದ್ದರಾದರೂ, ಇವರನ್ನು ಪ್ರಧಾನವಾಗಿ ಪೂಜಿಸುತ್ತಿರಲಿಲ್ಲ. ದಿಗಂಬರ ಪಂಥವು ವ್ಯಂತರ ದೇವತೆಗಳನ್ನು ಪೂಜಿಸಬಾರದೆಂದು ತಿಳಿಸುತ್ತದೆ.[2]

ಸುಮಾರು 7-8ನೇ ಶತಮಾನಗಳಲ್ಲಿ ತಮಿಳುನಾಡಿನಲ್ಲಿ ಶೈವಧರ್ಮವು ಪ್ರಬಲವಾಗಿದ್ದಿತು. ಆಗ ಜಿನಮುನಿಗಳು ಜೈನರನ್ನು ತಮ್ಮ ಮತದಲ್ಲೇ ಉಳಿಸಿಕೊಳ್ಳಲಾಶಿಸಿ ಇಹದ ಸುಖ ಸೌಲಭ್ಯಗಳನ್ನೊದಗಿಸಲು ಯಕ್ಷೀ ಆರಾಧನೆಯನ್ನು ಪ್ರಬಲಗೊಳಿಸುತ್ತಾರೆ. ಇದೇ ಸಮಯದಲ್ಲಿ ಅಲ್ಲಿ ರೂಪುಗೊಂಡ ದ್ರಮಿಳಗಣದವರು ಯಕ್ಷೀ ಆರಾಧನೆಯನ್ನು ಪ್ರೋತ್ಸಾಹಿಸಿರುತ್ತಾರೆ. ಹೀಗೆ ಸುಮಾರು 7-8ನೇ ಶತಮಾನದ ನಂತರದಲ್ಲಿ ಯಕ್ಷಿ ಆರಾಧನೆ ಎಲ್ಲೆಡೆ ಪಸರಿಸಿದೆ.

ಸುಮಾರು 7-8ನೇ ಶತಮಾನದಲ್ಲಿಯೇ ಉತ್ತರ ಭಾರತದ ಪಂಚಸ್ತೂಪಾನ್ವಯಕ್ಕೆ ಸೇರಿದ್ದ ಕೆಲವು ಜಿನ ಮುನಿಗಳು ಮೈಸೂರಿನ ಕೆಲವು ಭಾಗಗಳಿಗೆ ಬಂದು ನೆಲೆಸಿದರೆಂದು ಡಾ॥ ನಂದಿಯವರು ತಿಳಿಸುತ್ತಾರೆ[3] ಇವರಲ್ಲಿ ವೀರಸೇನ, ಜಿನ ಸೇನಾಚಾರ್ಯ, ಅಹರ್ದ್ಬಲಿ ಮೊದಲಾದವರು ಪ್ರಸಿದ್ದಾರಾಗಿದ್ದಾರೆ. ಆಗ ಮೈಸೂರು ಸೀಮೆಯಲ್ಲಿದ್ದ ಇತರ ಧರ್ಮದ ಗುರುಗಳು ಮಂತ್ರ ತಂತ್ರಗಳಲ್ಲಿ ಸಿದ್ಧಿ ಪಡೆದವರಾಗಿದ್ದು, ಅವರೊಂದಿಗೆ ಸಮಾನಗೌರವವನ್ನು ಪಡೆಯಲು ಜಿನ ಮುನಿಗಳು ತಂತ್ರ ಮಂತ್ರಗಳಲ್ಲಿ ನಿಷ್ಣಾತರಾದರು. ಹೀಗೆ ತಂತ್ರಮಂತ್ರಗಳನ್ನಾರಧಿಸುವುದನ್ನು ದಿಗಂಬರ ಪಂಥವು ನಿಷೇಧಿಸುವುದರಿಂದ ಇವರನ್ನು ದಿಗಂಬರ ಜೈನ ಪಂಥವು ಪುರಸ್ಕರಿಸಲಿಲ್ಲ. ಇದರಿಂದಾಗಿ ಈ ಜಿನಮುನಿಗಳಿಗೆ ಸಂಬಂಧಿಸಿದ ಶಾಸನಗಳು ಅವರ ವಿದ್ಯಾಪಾರಂಗತ್ವವನ್ನು ಹಿರಿಮೆಯನ್ನು ಹೆಚ್ಚಾಗಿ ಪ್ರಶಂಸಿಸಿ ಅವರು ಜನರ ಮೇಲೆ ಪ್ರಭಾವ ಬೀರಿದ್ದರು ಎಂದು ಆ.ನೇ. 'ಉಪಾಧ್ಯೆಯವರು ತಿಳಿಸುತ್ತಾರೆಹೀಗೆ ಮಂತ್ರ ತಂತ್ರಗಳಲ್ಲಿ ಸಿದ್ಧಪಡೆದ ಆಚಾರ್ಯರನ್ನು 'ಏಲಾಚಾರ್ಯ'ರೆಂದು ಗುರುತಿಸಿರುವಂತಿದೆ. ಜೈನಮತದ ದೇವರಾದ ಜಿನನು ಕೇವಲಜ್ಞಾನವನ್ನು ಪಡೆಯಲು ಬೇಕಾದ ತಪೋವಿಧಾನವನ್ನು ತಿಳಿಸಬಲ್ಲ ಗುರು ಮಾತ್ರನಾಗಿದ್ದು ಇಹಲೋಕದ ಸುಖ ಸಾಧನೆಗಳನ್ನು ತಿರಸ್ಕರಿಸುವವನಾಗಿದ್ದಾನೆ. ಇಂಥ 'ಜಿನ'ನ ಆರಾಧನೆ ಎಲ್ಲಾ ಸಾಮಾನ್ಯ ಜನರನ್ನು ಪ್ರಬಲವಾಗಿ ಆಕರ್ಷಿಸು

ನಂತಿರಲಿಲ್ಲ ಇದರಿಂದಾಗಿ ಸಾಮಾನ್ಯ ಜನರ ಪ್ರಾಪಂಚಿಕ ಸುಖ ಸೌಲಭ್ಯವನ್ನು ಒದಗಿಸಲು ಯಕ್ಷಯಕ್ಷಿಯರನ್ನು ಜೈನ ಪರಂಪರೆಯಲ್ಲಿ ಸೇರಿಸಲಾಯಿತು. ಶೈವ ಮತ್ತು ವೈಷ್ಣವ ಧರ್ಮಗಳಲ್ಲಿ 'ದೇವಿ'ಯ ಸ್ಥಾನದಲ್ಲಿದ್ದು ಜನ ಸಾಮಾನ್ಯರ ಅಭಿಲಾಷೆಗಳನ್ನು ಈಡೇರಿಸುತ್ತಿದ್ದ ಪಾರ್ವತಿ, ಲಕ್ಷ್ಮಿಯರಂತೇ ಜಿನನಿಗೆ 'ಪತ್ನಿ'ಯ ಸ್ಥಾನ ವನ್ನು ಕಲ್ಪಿಸಲು ಅಸಾಧ್ಯವಾದ್ದರಿಂದ ಯಕ್ಷಿ ಯರೊಂದಿಗೆ ಯಕ್ಷರನ್ನು ರೂಪಿಸಿತು. ಆದರೆ ಯಕ್ಷ ರಿಗಿಂತ ಯಕ್ಷಿಯರೇ ಹೆಚ್ಚು ಪ್ರಸಿದ್ಧರಾಗಿರುವುದು ಸರ್ವವಿದಿತ. ಯಕ್ಷಿಯ ಸ್ಥಾನದ ಔಚಿತ್ಯವನ್ನು ಸ್ಪಷ್ಟ ಪಡಿಸಲು ಮೊದಲು ಅವಳನ್ನು ತೀರ್ಥಂಕರನ ಬಲ ಭಾಗದಲ್ಲಿ ರೂಪಿಸಿದರು. (ನಂತರದ ಕಾಲದಲ್ಲಿ ಯಕ್ಷಿಯ ಬಿಡಿಶಿಲ್ಪಗಳು ಹೆಚ್ಚು ಅಲಂಕಾರದೊಂದಿಗೆ ಕಾಣಸಿಗುತ್ತವೆ.) ಅವಳ ಹಿರಿಮೆಯನ್ನು ಸಾರುವಂತೆ ಅವಳ ಕೈಗಳಲ್ಲಿ ದಯಾಭಾವವುಳ್ಳ ಆಯುಧಗಳಾಗಿ ಫಲ, ಮಗು, ಹೂವು, ಅಭಯಹಸ್ತ ಮೊದಲಾದ ವನ್ನು ಸೂಚಿಸಿದೆ. ಯಕ್ಷಿದೇವತೆಯ ಶಕ್ತಿ ಸಾಮರ್ಥ್ಯ ವನ್ನು ತಿಳಿಸುವಲ್ಲಿ ಕತ್ತಿ, ಈಟಿ, ಚಾಕು, ಶೂಲ, ಗುರಾಣಿ, ಬಾಣ, ಧನಸ್ಸು ಮೊದಲಾದವು ಯಕ್ಷಿಯರ ಆಯುಧಗಳಾಗಿ ಪರಿಣಮಿಸಿವೆ. ಇಂಥ ಯಕ್ಷಿ ಆರಾ ಧನೆಯಲ್ಲಿ ತೊಡಗಿದ್ದ ದ್ರಮಿಳಗಣದವರು 8 ನೇಯ ಶತಕದಲ್ಲಿ ಕರ್ನಾಟಕದಲ್ಲಿ ಬಂದು ನೆಲೆಸಿರುತ್ತಾರೆ. ಉತ್ತರ ಭಾರತಕ್ಕಿಂತ ದಕ್ಷಿಣಭಾರದಲ್ಲಿ ಹೆಚ್ಚು ಪ್ರಚಲಿ ತದಲ್ಲಿರುವ ಯಕ್ಷಿ ಆರಾಧನೆಯಲ್ಲಿ, ಪಾರ್ಶ್ವನಾಥ ತೀರ್ಥಂಕರರ ಯಕ್ಷಿಯರಾದ ಪದ್ಮಾವತೀ ಅಮ್ಮನ ವರು ನೇಮಿನಾಥ ತೀರ್ಥಂಕರರ ಯಕ್ಷಿಯರಾದ ಕೂಷ್ಮಾಂಡಿನೀ ಅಮ್ಮನವರು ಮತ್ತು ಚಂದ್ರಪ್ರಭ ನಾಥರ ಯಕ್ಷಿಯರಾದ ಜ್ವಾಲಾಮಾಲಿನೀ ಅಮ್ಮನ ವರು ಹೆಚ್ಚು ಜನಪ್ರಿಯರಾದ ಯಕ್ಷಿಯರು. ದಕ್ಷಿಣ ಭಾರತದಲ್ಲಿ ಯಕ್ಷಿಯರ ಆರಾಧನೆಯೇ ಪ್ರಬಲವಾಗಿ ರುವುದನ್ನು ಕಾಣುತ್ತೇವೆ. ಇಲ್ಲಿ ಕೇವಲ 'ಜ್ವಾಲಮಾಲಿನೀ ಆರಾಧನೆ'ಯು ವಿಕಾಸಗೊಂಡ ಬಗೆಯನ್ನು ಶಿಲ್ಪ, ಸಾಹಿತ್ಯ, ಶಾಸನಗಳನ್ನಾಧರಿಸಿ ತಿಳಿಯುವ ಪ್ರಯತ್ನ ಮಾಡಲಾಗಿದೆ.ಜ್ವಾಲಾಮಾಲಿನೀ ಯಕ್ಷಿಣೆಯು ರೂಪು ಗೊಂಡ ಬಗೆಗೆ ತಿಳಿಸುವ ಒಂದು ಕತೆ ಹೀಗಿದೆ: ರಾಜಪುರ ವೆಂಬ ಊರಿನ ವರ್ತಕ ಶ್ರೇಷ್ಠಿ ಸೋಮ ದತ್ತ. ಸೋಮದತ್ತ ಅನಂತಮತಿಯರ ಮಗಳಾದ ಕನ ಕಮಂಜರಿಯು 'ಜಿನದರ್ಶನ'ದ ಫಲವಾಗಿ ರಾಜ ಕುಮಾರ ಪುಂಡರೀಕನನ್ನು ವರಿಸಿ ಮಹಾರಾಣಿ ಯಾಗುತ್ತಾಳೆ. ಮುಂದೆ ಇವಳು ಶುಕ್ರವಾರದ ನೋಂಪಿಯನ್ನು ಮಾಡಿ 1008 ಕಮಲಗಳಿಂದ ಜಿನೇಶ್ವ ರನನ್ನು ಅರ್ಚಿಸಿದ ಫಲವಾಗಿ, ಚಂದ್ರಪ್ರಭಾ ತೀರ್ಥಂಕರರ ಸಮವಸರಣದಲ್ಲಿ ಸಾವಿರ ಪರಿವಾರ ದೇವತೆಗಳಿಂದ ಪ್ರಕಾಶಿಸುವ ಜ್ವಾಲಾಮಾಲಿನೀ ಯಕ್ಷಿ ಣಿಯಾದಳೆಂದು ತಿಳಿದುಬರುತ್ತದೆ.[6] 'ಶಿಖಿಮದ್ ದೇವಿ', 'ಬಹ್ನಿದೇವಿ' ಎಂಬ ಹೆಸರುಗಳೂ ಇರುವ ಈ ದೇವಿಯನ್ನು ವೈದಿಕ ಪರಂಪರೆಯ ದೇವಿಯ ರೊಂದಿಗೆ ಹೋಲಿಸಿ ಚಿಂತಿಸಿದಾಗ, ವಾಯು ಪುರಾ ಣದಲ್ಲಿ ಜ್ವಾಲೆಯನ್ನು ಶಿವನ ಸಂಕೇತಗಳೊಂದಿಗೆ ಸೇರಿಸಿದ್ದು ಆದಿಶಕ್ತಿಯ ಸಂಕೇತವೆಂದಿದೆ. ಬ್ರಹ್ಮಾಂಡ ಪುರಾಣದಲ್ಲಿ ಅಗ್ನಿಯನ್ನು 'ಶಕ್ತಿ' ಎಂದೇ ಕರೆಯುತ್ತದೆ. ಮತ್ಸ್ಯ ಪುರಾಣದಲ್ಲಿ ತಪೋಬಲದಿಂದ ಜನಿಸುವ ಈ ಜ್ವಾಲೆಯನ್ನು ಜ್ವಾಲಾಮುಖಿ ಎಂದು ಕರೆದಿರುತ್ತಾರೆ. ಮಹಾಭಾರತದಲ್ಲಿ ಅಗ್ನಿಯಿಂದ ಉದ್ಭವಿಸಿದ ದ್ರೌಪದಿ ಯನ್ನು ಕೃಷ್ಣೆ ಎಂದು ಕರೆದಿದ್ದು ಇವಳೂ ಆದಿಶಕ್ತಿಯ ಸಂಕೇತವೇ ಆಗಿದ್ದಾಳೆ ಎಂದಿರುತ್ತಾರೆ. "ಹೀಗೆ ಜ್ವಾಲಿನಿಯ ಉತ್ಪತ್ತಿಯು ವೈದಿಕ ಪರಂಪರೆಯು ಹಿನ್ನೆ ಲೆಯಲ್ಲಿ ಮೂಡಿದೆ ಎಂದು ಜ್ವಾಲಿನೀಕಲ್ಪವು ತಿಳಿಸು ತ್ತದೆ." – ಎಂದು ಡಾ॥ ನಂದಿಯವರು ಅಭಿಪ್ರಾಯ ಪಡುತ್ತಾರೆ[7]. ಯಕ್ಷಯಕ್ಷಿಯರ ಹೆಸರುಗಳು ಸಂಸ್ಕೃತ ಮಯವಾಗಿದ್ದು ಅವರಲ್ಲಿ ದ್ರಾವಿಡ ಗ್ರಾಮದೇವತೆಗ ಳನ್ನು ಅದರಲ್ಲಿಯೂ ಶಕ್ತಿದೇವತೆಗಳನ್ನು ಆರ್ಯೀಕರಿಸಿ ಸಂಸ್ಕೃತೀಕರಿಸಿ ಯಕ್ಷಿಯರನ್ನಾಗಿಸಿರುವ ಸಾಧ್ಯತೆ ಪರಿ ಶೀಲನೆಗೆ ಮುಕ್ತವಾಗಿದೆ ಎಂದು ಹಂ.ಪ. ನಾಗರಾಜ ಯ್ಯನವರು ತಿಳಿಸಿರುತ್ತಾರೆ[8] ಜ್ವಾಲಿನಿಯ ಶಿಲ್ಪಗಳು ವೈದಿಕ ಪರಂಪರೆಯ ಮಹಿಷಮರ್ದಿನಿಯ ಶಿಲ್ಪದೊಂ ದಿಗೆ ಹೋಲುತ್ತದೆ. ಈ ದೇವಿಯ ಸ್ವರೂಪ ಮತ್ತು ಆರಾಧನೆಯನ್ನು ಕಂಡಾಗ ಈ ದೇವಿಯ ಪೂಜೆಯಲ್ಲಿ ಮಾಡುವ ತಂತ್ರ-ಸಂಪ್ರದಾಯಗಳಿಂದ ಮೂಡಿ ಬಂದಿ ರುವ ಈ ಶಕ್ತಿಯು ಜೈನಧರ್ಮದ ಶಾಸನದೇವತೆ ಎನ್ನಿಸದೇ ಜನಪದದಿಂದ ರೂಪುತಳೆದ ದೇವಿ ಯಂತಿದ್ದಾಳೆ.

ತಾಂತ್ರಿಕ ಪದ್ಧತಿಯಿಂದ ಪೂಜೆಗೊಳ್ಳುವ ಈ ದೇವಿಯ ಬಗೆಗೆ ಜ್ವಾಲಿನೀ ಕಲ್ಪವು – 'ಈ ದೇವಿಯು ಜಾಗೃತಳಾದರೆ ಆ ಭಕ್ತನು ಸರ್ವರನ್ನು ವಶದಲ್ಲಿಟ್ಟು ಕೊಳ್ಳಬಲ್ಲನು. ದುಷ್ಟಶಕ್ತಿಯನ್ನು ದಮನ ಮಾಡಬಲ್ಲವನಾಗುತ್ತಾನೆ. ಅವನ ಅಭೀಷ್ಟೆಯಂತೆ ವೈರವನ್ನು ಸಾಧಿಸಬಲ್ಲನು, ವೈರಿಗಳನ್ನು ನಾಶಪಡಿಸ ಬಲ್ಲನು ಇದರಂತೆ ಜ್ವಾಲಿನೀ ಶಕ್ತಯ ಮಹಿಮೆಯಿಂದ

ಸರ್ವರೋಗಗಳನ್ನು ಪರಿಹರಿಸಬಲ್ಲನು. ಅಪಮೃತ್ಯು ವಿನಿಂದ ರಕ್ಷಿಸಬಲ್ಲನು ಎಂದು ತಿಳಿದುಬರುತ್ತದೆ"[9]

ಈ ದೇವಿಯನ್ನು ದ್ರವಿಳಗಣದ ಸುಪ್ರಸಿದ್ಧರಾದ ಏಲಾಚಾರ್ಯರು ದಕ್ಷಿಣ ದೇಶದ ಹೇಮಗ್ರಾಮದಲ್ಲಿ ತಪಸಿದ್ಧಿಯಿಂದ ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ಆ ದೇವಿಯ ಶಕ್ತಿಯಿಂದ ತಮ್ಮ ಗುಡ್ಡಿಯೊಬ್ಬಳನ್ನು ಬ್ರಹ್ಮರಾಕ್ಷಸನ ಬಾಧೆಯಿಂದ ಪಾರುಮಾಡಿದರೆಂದು ಪ್ರತೀತಿ ಇದೆ. ಇವರಿಗೆ ನೀಲಗಿರಿ ಬೆಟ್ಟದ ಮೇಲೆ ತಪೋಮಗ್ನರಾಗಿದ್ದಾಗ ವಹ್ನಿದೇವಿಯ ದರ್ಶನ ವಾಯಿತೆಂದು ತಿಳಿಸುವ ಈ ಕಥೆ ಉತ್ತರ ಆರ್ಕಾಟಿನ ಪೊನ್ನೂರು ಗ್ರಾಮವನ್ನು ಹೇಮಗ್ರಾಮವೆಂದು ತಿಳಿಸುತ್ತದೆ. ಈಗ ಇಂದಿಗೂ ನೀಲಗಿರಿ ಬೆಟ್ಟದಲ್ಲಿರುವ ಏಲಾಚಾರ್ಯರ ಉಬ್ಬು ಶಿಲ್ಪಕ್ಕೆ ವಿಶೇಷ ಪೂಜೆ ಮಾಡುವಾಗ ಪೊನ್ನೂರಿನಿಂದ ಜ್ವಾಲಾಮಾಲಿನೀ ಮತ್ತು ಪಾರ್ಶ್ವನಾಥರ ಬಿಂಬಗಳನ್ನು ಬೆಟ್ಟಕ್ಕೆ ತೆಗೆದುಕೊಂಡು ಹೋಗಿ ಪೂಜಿಸುತ್ತಾರೆಂದು ತಿಳಿದು ಬರುತ್ತದೆ.[10]

ಮೈಸೂರು ಜಿಲ್ಲೆಯ ಚಾಮರಾಜನಗರ ತಾಲೂಕಿನಲ್ಲಿರುವ ಮಲೆಯೂರಿನಲ್ಲಿ ಪ್ರಸಿದ್ಧರಾದ ಪೂಜ್ಯಪಾದರು ವಾಸಿಸುತ್ತಿದ್ದು ಸಮಾಧಿಮರಣವನ್ನಪ್ಪಿರುತ್ತಾರೆ. ಅವರ ನಿಶಿಧಿಯನ್ನು ಹೊಂದಿರುವ ಮಲೆಯೂರನ್ನು ಶಾಸನವು 'ಕನಕಗಿರಿ' ಎಂದೇ ಕರೆದಿದೆ. ಇದರಿಂದ ಡಾ॥ ಪ್ರೇಮಿಯವರು ಮಲೆಯೂರನ್ನೇ ಏಲಾಚಾರ್ಯರು ಜ್ವಾಲಿನೀದೇವಿಯನ್ನು ಜಾಗೃತಗೊಳಿಸಿದ ಸ್ಥಳವೆಂದು ಭಾವಿಸಿರುತ್ತಾರೆ.[11] ಇಂದ್ರನಂದಿಯು "ಜ್ವಾಲನೀ ಕಲ್ಪ"ದಲ್ಲಿ ಇದೇ ಅಭಿಪ್ರಾಯವನ್ನು ಸೂಚಿಸಿದ್ದಾನೆಂದು "ಪ್ರವಚನಸಾರ" ಗ್ರಂಥವು ತಿಳಿಸುತ್ತದೆ[12] ಕೆಲಸೂರಿನಲ್ಲಿ ಏಲಾಚಾರ್ಯರೇ ಸ್ಥಾಪಿಸಿದ್ದೆಂದು ಹೇಳುವ ಜ್ವಾಲಿನೀ ಅಮ್ಮನವರ ಲೆಪ್ಪದ ಬಿಂಬವಿದೆ. 'ಏಲಾಚಾರ್ಯರ' ಸಮಾಧಿಮರಣವನ್ನು ಚಿಕ್ಕಹನಸೋಗೆಯ ಶಾಸನವು ಉಲ್ಲೇಖಿಸುತ್ತದೆ[13] ಇದರಿಂದಾಗಿ ಮಲೆಯೂರಿನಲ್ಲೂ ಒಬ್ಬ ಏಲಾಚಾರ್ಯರಿದ್ದು ಇದೂ ಪ್ರಾಚೀನಕಾಲದಿಂದ ಜ್ವಾಲಿನೀ ಕ್ಷೇತ್ರವಾಗಿತ್ತೆಂದು ತಿಳಿದುಬರುತ್ತದೆ.

ಏಲಾಚಾರ್ಯರು ತಾವು ಪಡೆದ ಸಿದ್ಧಿಯನ್ನು ತಮ್ಮ ಶಿಷ್ಯ ಗಾಂಗಮುನಿಗೆ ಧಾರೆ ಎರೆದರೆಂದೂ ಇವನಿಂದ ಈ ಪರಂಪರೆ ಕಳೆಕಂಡಂತೆ ಮುಂದುವರೆದಿದೆ.

ಏಲಾಚಾರ್ಯರು – ಗಾಂಗಮುನಿ – ನೀಲಗ್ರೀವ – ಶಿಷ್ಯಕಂದರ್ಪ – ಗುಣನಂದಿ – ಇಂದ್ರನಂದಿ ಹೀಗೆ ಪರಂಪರಾಗತವಾಗಿ ಸಿದ್ಧಿಪಡೆದು ಇಂದ್ರನಂದಿಯು ಮಾನ್ಯಖೇಟದಲ್ಲಿ ವಾಸಿಸುತ್ತಿದ್ದು ಅಲ್ಲಿಯೇ ಜ್ವಾಲಿನೀ ಕಲ್ಪವನ್ನು ರಚಿಸಿರುತಾನೆ. ಇದರಿಂದ ಮಾನ್ಯಖೇಟವು ಜ್ವಾಲಿನೀ ಕೇಂದ್ರವಾಗಿತ್ತೆಂದು ತಿಳಿಯಬಹುದು.

ಜ್ವಾಲಿನೀ ದೇವಾಲಯಗಳಿದ್ದುದಕ್ಕೆ ದಕ್ಷಿಣ ಕರ್ನಾಟಕದಲ್ಲಿ ಶಾಸನಾಧಾರಗಳು ಹೆಚ್ಚಾಗಿ ಲಭ್ಯವಾಗಿಲ್ಲ. ಪ್ರಾಚೀನ ಶಿಲ್ಪಗಳು ದೊರೆತಿದ್ದು ಆ ಮೂಲಕ ದೇವಿ ಆರಾಧನೆಯ ಬಗೆಗೆ ತಿಳಿಯ ಬಹುದಾಗಿದೆ. ಕ್ರಿ.ಶ. 1059ರ ಶಾಸನವೊಂದು ನವಲಗುಂದ ತಾಲೂಕಿನ ಜೇವೂರಿನಲ್ಲಿ ಈ ದೇವಿಗಾಗಿ ದೇವಾಲಯವೊಂದನ್ನು ಕಟ್ಟಿಸಿದ ಉಲ್ಲೇಖಿಸಿದೆ[14] ಕ್ರಿ.ಶ. 12ನೇ ಶತಕದ ಸೇಡಂನ ಶಾಸನವು ಅಲ್ಲಿದ್ದ ಮಹಾಜನರು ಜ್ವಾಲಿನೀ ಆರಾಧಕರಾಗಿದ್ದರೆಂದು ತಿಳಿಸುತ್ತಿದೆ. ಇದರಿಂದ ಸೇಡಂಗ್ರಾಮವು ಜ್ವಾಲಿನೀ ಆರಾಧನೆಯ ಕೇಂದ್ರವಾಗಿತ್ತೆಂದು ತಿಳಿಯುತ್ತದೆ[15] ಕೆಲಸೂರಿನ ಶಾಸನವು ಕ್ರಿ.ಶ. 19ನೇ ಶತಕದಾಗಿದ್ದು ಜ್ವಾಲಿನೀ ದೇವತೆಯನ್ನು ಪುನರ್ಪ್ರತಿಷ್ಠೆ ಮಾಡಿದ ಬಗ್ಗೆ ತಿಳಿಸುತ್ತದೆ[16] ಉಳಿದ ಜ್ವಾಲಿನೀ ದೇವಾಲಯಗಳ ಬಗೆಗೆ ನಿರ್ದಿಷ್ಟವಾದ ಶಾಸನಾಧರವು ದೊರೆತಿರುವುದಿಲ್ಲ.

ಇಂದ್ರನಂದಿಯು ಜ್ವಾಲಿನೀ ಕಲ್ಪದಲ್ಲಿ ದೇವಿಯನ್ನು – 'ಬಹ್ನಿದೇವಿ' 'ಶಿಖಿಮದ್‌ದೇವಿ' ಎಂದೂ ಕರೆದಿದ್ದಾರೆ. ದೇವಿಯು ಅಷ್ಟಭುಜೆಯಾಗಿದ್ದು ಕೈಗಳಲ್ಲಿ ತ್ರಿಶೂಲ, ಪಾಶ, ಮತ್ಸ್ಯ, ಧನುಷ್, ಬಾಣ, ಫಲ, ವರದ ಮತ್ತು ಚಕ್ರಗಳನ್ನು ಧರಿಸಿರುತ್ತಾಳೆಂದು ಬಣ್ಣಿಸಿದ್ದಾರೆ ಮತ್ತು ಇವಳು ಶ್ವೇತ ವರ್ಣೆ ಎಂದು" ತಿಳಿಸುತ್ತಾರೆ. ಕ್ರಿ.ಶ. 11ನೇ ಶತಮಾನದ ಮಲ್ಲಿಸೇನಸೂರಿಗಳು "ಜ್ವಾಲಿನೀಕಲ್ಪ"ವನ್ನು ರಚಿಸಿದ್ದು ಇವರಲ್ಲಿ ದೇವಿಯನ್ನು ಜ್ವಾಲಾಮಾಲಿಕಾ ಎಂದೇ ಕರೆದಿರುತ್ತಾರೆ.

ಕನ್ನಡ ಸಾಹಿತ್ಯ ಕೃತಿಗಳಲ್ಲಿ ಚಂದ್ರಪ್ರಭ ಪುರಾಣದಲ್ಲಿ ಕವಿ ಅಗ್ಗಳನು ಪ್ರಾಳೇಯಾಮಳಿನಾಂಗಿ ತುಂಗ ಮಹಿಷೇಂದ್ರಾ ರೂಢೆಯಾತ್ಮಾಷ್ಟಧೋರ್ಮಾಳಾಳಂಕೃತೆ ಚಕ್ರಶೂಲ ಶರ ಚಾಪೋತ್ಕೇತು ಚಂಚತ್ಕಶಾ। ಭೀಳಾಸಿಸ್ಪುಟ ಖೇಟಕಾನ್ವಿತೆ ಚಳದ್ವಾಳಾಕ್ಷಿ ಸಂಪ್ರೀತಿಯಂ ಜ್ವಾಳಾಮಾಳಿನಿ ಮಾಟ್ಕೆ ಮತ್ಕೃತಿಗೆ ನಿರ್ವಿಘ್ನೋಕ್ತಿ ನಿರ್ವಾಹಮಂ॥ ಎಂದು ಸ್ತುತಿಸಿದ್ದಾನೆ.

ಮಹಾಬಲಕವಿಯು ನೇಮಿನಾಥ ಪುರಾಣದಲ್ಲಿ ದೇವಿಯನ್ನು ಕುರಿತು

ರದಿಂ ವಿಜಯಾರ್ಧ ಮಹೀ
ರಮಂ ತಾನೆಯ್ದಿ ಪೊಕ್ಕು
ರಮಂ ಜಪಯಿಸೆ ನಿಷ್ಠಾ
ರನಾ ಜ್ವಾಲಿನಿಯ ಮಂ(ತ್ರ) ಸ್ವಾತಂತ್ರ್ಯಂಗಳ॥[18]

ಎಂದು ಬಣ್ಣಿಸಿ ಆ ದೇವಿಯು ನೀಡಿದ ಜ್ವಾಲಾ ಪರೀಕ್ಷವಾದ ಪೀತಾಂಬರವನ್ನು ಪಡೆದು ಕರ್ಣನು ತನ್ನ ತಾಯಿಯ ಸಮಾಗಮವನ್ನು ಹೊಂದುತ್ತಾನೆ

ಶಿಷುಮಾಯಣನು ಅಂಜನಾ ಚರಿತೆಯಲ್ಲಿ ದೇವಿಯನ್ನು

ಜ್ವಾಲಿನಿ ಜಲಜವದನೆ ಜಾಳುದೈವದ
ಶಾಳೆಯವನು ಸದೆಬಡಿದೂ
ಪಾಲನ ಪುರಕೀಡಾಡಿದ ಜ್ವಾಲಾ
ಮಾಲಿನಿಗೆರಗುವೆನು॥ ಎಂದು ಸ್ತುತಿಸಿದ್ದಾನೆ[19]

ಕ್ರಿ.ಶ. 1800 ಬ್ರಹ್ಮಣಾಂಕನು ಜಿನಭಾರತದಲ್ಲಿ (1-15)

ಎಂದೆಯೆಲ್ಲಾಚಾರ್ಯರಿಗೆ ಮನ
ಬಂದು ಪ್ರತ್ಯಕ್ಷದಲಿ ವರಗಳ
ತಂದ ಜ್ವಾಲಾಮಾಲಿನಿಯೆ ಮಮತೆಯಲ್ಲಿ ನೀ ಯೆನಗೇ।
ಇಂದು ವಲಿದೀ ಕೃತಿಗೆ ಬಾಧ್ಯದಿ
ಬಂದು ವೃದ್ಧರಿಸುವುದು ಸುಜನಾ
ವಂದೆ ತೊಡಗಿದೆ ನಂಬಿ ನಿಮ್ಮಯ ಪಂಕಂಜಾಂಘ್ರಿಗಳಾ॥ [20]

ಎಂದು ಸ್ತುತಿಸಿರುವೆನೆಂದು ಹಂ.ಪ.ನಾರವರು ತಿಳಿಸಿದ್ದಾರೆ, ಶ್ರೀ ಜ್ವಾಲಾಮಾಲಿನೀ ಅಷ್ಟಕವೊಂದು ದೇವಿಯನ್ನು ಸ್ತುತಿಸುತ್ತದೆ:

ಸಿಂಹ ದ್ವಪೇಂದ್ರ, ಕಟಿಯಾನ ಶಶಾಂಕ ವರ್ಣೇ
ಪಾಶಭಯಂ ಫಲದ ಹಸ್ತ ಮನೋಹರಾಂಗೋ॥
ಕೋದಂಡ ಚಕ್ರಯುಕ್ತಪಾಣಿ ತ್ರಿಶೂಲ ಹಸ್ತೇ
ಶ್ರೀ ಜ್ವಾಲಿನೀ ಪ್ರತಿದಿನಂ ಮಮರಕ್ಷದೇವಿ॥

ಸಾಹಿತ್ಯಕೃತಿಗಳಲ್ಲಿ ದೇವಿಯ ಹಿರಿಮೆಯ ಬಗೆಗೆ ತಿಳಿದು ಬರುತ್ತದೆ.

ಜೈನಧರ್ಮದ ವಾಸ್ತುಶಿಲ್ಪದ ಗ್ರಂಥಗಳು ಈ ದೇವಿಯ ಮೂರ್ತಿಸ್ವರೂಪದ ಲಕ್ಷಣಗಳನ್ನು ಕೆಳಕಂಡಂತೆ ತಿಳಿಸುತ್ತವೆ. ವಸುನಂದಿಯ 'ಪ್ರತಿಷ್ಠಾ ಸಾರ ಸಂಗ್ರಹವು' ಈಕೆಯು ಅಷ್ಟ ಭುಜಗಳಲ್ಲಿ ಬಾಣ, ತ್ರಿಶೂಲ, ಪಾಶ, ಧನಸ್ಸು, ಮತ್ಸ್ಯಗಳನ್ನು ಧರಿಸಿರುತ್ತಾಳೆಂದು ತಿಳಿಸುತ್ತದೆ. (ಪ್ರ.ಸಾ.ಸಂ. 5-೩೧) ಆಶಾಧರ ಮತ್ತು ನೇಮಿಚಂದ್ರರು. "ಅಷ್ಟಭುಜೆಯಾದ ದೇವಿಯು ಬಲಕೈಗಳಲ್ಲಿ ತ್ರಿಶೂಲ, ಬಾಣ, ಮತ್ಸ್ಯ, ಕತ್ತಿ ಮತ್ತು ಎಡಗೈಗಳಲ್ಲಿ ದನಸ್ಸು, ಪಾಶ, ಗುರಾಣಿ, ಫಲಗಳನ್ನು ಹಿಡಿದಿರುತ್ತಾಳೆಂದು ತಿಳಿಸಿದ್ದಾರೆ[21] ಅಗ್ಗಳನ್ನು ದೇವಿಯನ್ನು ಹೀಗೆಯೇ ಬಣ್ಣಿಸಿದ್ದಾನೆ.

ಅಪರಾಜಿತಪೃಚ್ಛಕಾರನು – ದೇವಿಯು ಕೈಗಳಲ್ಲಿ ಘಂಟೆ, ತ್ರಿಶೂಲ, ಫಲ ಮತ್ತು ವರದಹಸ್ತಗಳನ್ನು ಧರಿಸಿರುತ್ತಾಳೆಂದು ಹೇಳಿ ಕೃಷ್ಣವರ್ಣೆ ಎಂದು ತಿಳಿಸಿದ್ದಾನೆ

'ಮಂದಿರಾ ಪ್ರತಿಷ್ಠಾವಿಧಾನ' ಗ್ರಂಥವು 'ಚಂದ್ರೋಜ್ವಲಾಂ ಚಕ್ರವಾರ ಸ ಪಾಶಚರ್ಮತ್ರಿಶೂಲೇಷು ಯುಷಾಸಿ ಹಸ್ತಾ' ಎಂದಿದೆ

ದೇವಿಯ ವಾಹನದ ಬಗೆಗೆ ಮಾತ್ರ ಭಿನ್ನಾಭಿಪ್ರಾಯಗಳಿದ್ದು 'ಜ್ವಾಲಿನಿ ಕಲ್ಪದ ಕರ್ತೃ ಮತ್ತಿತರರು ಮಹಿಷವಾಹನೆ, ಎಂದಿದ್ದರೇ, ಭುವನದೇವನು 'ಅಪರಾಜಿತಪೃಚ್ಛ'ದಲ್ಲಿ ಪದ್ಮಾಸನೆ ಮತ್ತು 'ವೃಷಬಾರೂಢೆ' ಎಂದಿದ್ದಾರೆ.

ದಿಗಂಬರ ಪದ್ಧತಿಯಲ್ಲಿ ವಿದ್ಯಾಧಿದೇವಿ ಜ್ವಾಲಾಮಾಲಿನಿ ಮತ್ತು ಯಕ್ಷಿ ಜ್ವಾಲಾಮಾಲಿನಿಯ ಲಕ್ಷಣಗಳಲ್ಲಿ ಹೆಚ್ಚಿನ ವ್ಯತ್ಯಾಸಗಳಿಲ್ಲವಾದ್ದರಿಂದ ಎರಡೂ ರೀತಿಯ ಬಿಂಬಗಳನ್ನು ಬೇರ್ಪಡಿಸಿ ತೋರಿಸಲು ಸಾಧ್ಯವಿಲ್ಲ. ಇದುವರೆಗೆ ವಿದ್ಯಾಜ್ವಾಲೆಯ ಪ್ರತಿಮೆಗಳು ದೊರೆತಿಲ್ಲವೆಂದು ಡಾ॥ ಷೆಟ್ಟರ್‌ರವರು[22] ತಿಳಿಸುತ್ತಾರೆ ಆದರಿಂದ ನಾವಿಲ್ಲಿ ದೇವಿಯ ದಿಗಂಬರ ಪದ್ಧತಿಯ ಜ್ವಾಲಿನೀಯಕ್ಷಿಯ ಪ್ರತಿಮೆಗಳನ್ನು ಮಾತ್ರ ಗುರುತಿಸಲು ಯತ್ನಿಸಿದ್ದೇನೆ.

ಈಗ ದೊರೆತಿರುವ ಜ್ವಾಲಿನಿಯ ಶಿಲ್ಪಗಳಲೆಲ್ಲ ಐಹೊಳೆಯ ವಿರೂಪಾಕ್ಷ ದೇವಾಲಯದಲ್ಲಿರುವ (ಗೌರೀಗುಡಿ) ಶಿಲ್ಪವೇ ಪ್ರಾಚೀನ ಶಿಲ್ಪವಾಗಿದೆ. ಈ ಬಿಂಬದಲ್ಲಿ ದೇವಿಯು ಸುಖಾಸೀನ ಭಂಗಿಯಲ್ಲಿ ಕುಳಿತಿದ್ದು ದೇವಿಯ ಎಡಗಾಲು ಮಹಿಷವಾಹನದ ಮೇಲಿದೆ. ಜ್ವಾಲೆಯ ಮಕುಟವನ್ನು ಧರಿಸಿರುವ ದೇವಿಯು ತ್ರಿನೇತ್ರೆಯಾಗಿದ್ದು ಕೈಗಳಲ್ಲಿ ಖಡ್ಗ, ಬಾಣ, ತ್ರಿಶೂಲ, ಚಕ್ರಗಳನ್ನು, ಎಡಗೈಗಳಲ್ಲಿ ಶಂಕ, ಪಾಶ, ಧನಸ್ಸು ಮತ್ತು ಫಲ (ಈಗ ಮುರಿದಿದೆ) ಗಳನ್ನು ಧರಿಸಿದ್ದಾಳೆ. ಮುಕ್ಕೊಡೆಯ ಕೆಳಗೆ ಆಸೀನಳಾಗಿರುವ ದೇವಿಗೆ ಪ್ರಭಾಮಂಡಲ, ಜಿನಬಿಂಬವುಳ್ಳ ಕಿರೀಟಗಳಿದ್ದು

ಕಿರೀಟದಲ್ಲಿನ ಲಲಾಟಪಟ್ಟ, ಕರ್ಣಪುಷ್ಪಗಳನ್ನು ಸ್ಪಷ್ಟವಾಗಿ ಬಿಡಿಸಿದೆ. ಕಿವಿಗಳಲ್ಲಿ ರತ್ನದ ಹಾರಗಳೂ ಇದ್ದು ದೇವಿಯು ಯಜ್ಞೋಪವೀತ ಛನ್ನವೀರಗಳನ್ನು ಧರಿಸಿದ್ದಾಳೆ ಮಣಿ ಯುಕ್ತವಾದ ಬಾಹುಪೂರವನ್ನು ಸುಂದರವಾದ ಕೇಯೂ ರವನ್ನು ಧರಿಸಿರುವ ಈ ದೇವಿಯ ಎಲ್ಲ ಕೈಗಳಲ್ಲೂ ನಾಲ್ಕು-ನಾಲ್ಕು ಬಳೆಗಳಿವೆ. ದೇವಿಯ ಅಂಗಸೌಷ್ಠವದ ವಿನ್ಯಾಸನ್ನು ಅವಳ ಆಭರಣಗಳ ಸ್ವರೂಪವನ್ನು ಗಮ ನಿಸಿದಾಗ ಇದು ಸುಮಾರು 8-9ನೇ ಶತಮಾನದ ಶಿಲ್ಪವೆಂದು ತಿಳಿಯಬಹುದಾಗಿದೆ.

ಮಲೆಯೂರಿನಲ್ಲಿರುವ ಜ್ವಾಲಿನಿಯ ಶಿಲ್ಪವು ನಂತರದ ಕಾಲದ ಬಿಂಬವಾಗಿದ್ದು ಸಿಂಪಲಲಾಟ ಯುಕ್ತವಾಗಿದೆ. ದೇವಿಯು ಉದ್ದವಾದ ಜಿನಬಿಂಬವುಳ್ಳ ಕಿರೀಟಮಕುಟವನ್ನು ಧರಿಸಿದ್ದಾಳೆ. ಅಷ್ಟಭುಜಗಳಲ್ಲಿ ವರದಹಸ್ತ, ತ್ರಿಶೂಲ, ಚಕ್ರ, ಬಾಣ, ಧನಸ್ಸು, ಮೀನು, ಪಾಶ, ಫಲಗಳನ್ನು ಧರಿಸಿರುವ ದೇವಿಯು ತ್ರಿನೇತ್ರೆಯಾಗಿದ್ದಾಳೆ. ಅಗಲವಾದ ಹಣೆ, ಉದ್ದವಾದ ಕಣ್ಣು, ನೀಳವಾದ ಮೂಗು, ಉಬ್ಬಿದ ಗಲ್ಲವನ್ನು ಹೊಂದಿರುವ ಈ ಬಿಂಬದ ಅಂಗವಿನ್ಯಾಸವು ವಿಜಯ ನಗರ ಶೈಲಿಯನ್ನು ಸೂಚಿಸುತ್ತಿದೆ. ದೇವಿಯು ಕೊರ ಳಲ್ಲಿ ಮೂರು ಹಾರಗಳನ್ನು, ಭುಜಕೀರ್ತಿ, ಸ್ತನಬಂಧ, ಕಟೀಬಂಧಗಳನ್ನು ಧರಿಸಿದ್ದಾಳೆ. ದೇವಿಯ ಕಾಲ ಕೆಳ ಬಾಗದಿಂದ ಕಟಿ ವಸ್ತ್ರ ಅಗಲವಾಗಿ ಹರಡಿದಂತಿದೆ. ದೇವಿಯ ಎಡಗಾಲನ್ನು ಸಮಪಾದವಾಗಿಟ್ಟು ಬಲಗಾ ಲನ್ನಿಳಿ ಬಿಟ್ಟು ವೀರಾಸನದಲ್ಲಿ ಕುಳಿತಿದ್ದಾಳೆ. ಪೀಠದ ಕೆಳಗೆ ಮಹಿಷಲಾಂಛನವಿದೆ. ಈ ಬಸದಿಯಲ್ಲಿ ಪ್ರಾಚೀನವಾದ ಪದ್ಮಾವತಿ ಮತ್ತು ಕೂಷ್ಮಾಂಡಿನೀ ದೇವಿಯರ ಶಿಲ್ಪಗಳಿದ್ದು ಈ ಶಿಲ್ಪವು ನಂತರದ ಕಾಲ ದ್ದಾಗಿರುವುದನ್ನು ನೋಡಿದರೆ ಬಹುಶಃ ಇಲ್ಲಿದ್ದ ಹಿಂದಿನ ಶಿಲ್ಪವು ನಶಿಸಿದ್ದು ಮತ್ತೆ ಅದೇ ರೀತಿ ಶಿಲ್ಪ ವನ್ನು ಪ್ರತಿಷ್ಠಾಪಿಸಿರಬಹುದೆನ್ನಿಸುವಂತಿದೆ.

ಗುಂಡ್ಲುಪೇಟೆ ತಾಲೂಕಿನ ಕೆಲಸೂರಿನಲ್ಲಿ ಏಲಾ ಚಾರ್ಯರು ಸ್ಥಾಪಿಸಿದ್ದೆನ್ನುವ ಲೆಪ್ಪದ ಬಿಂಬವಿದೆ ಈ ಬಿಂಬವು ಕಾಲಕಾಲಕ್ಕೆ ಜೀರ್ಣೋದ್ಧಾರಗೊಂಡಿದ್ದು ನೋಡಲು 17ನೇ ಶತಮಾನದ್ದೆಂಬಂತೆ ಗೋಚರಿಸು ತ್ತದೆ. ಅಲ್ಲಿನ ಶಾಸನವು ಇದು 19ನೇ ಶತಮಾನ ದ್ದೆಂದು ತಿಳಿಸುವಂತಿದೆಯಾದರೂ, ಇದರ ಅಂಗಸೌಷ್ಠವ ವಸ್ತ್ರದ ವೈಖರಿ, ಆಭರಣಗಳ ವಿನ್ಯಾಸವನ್ನು ಗಮನಿ ಸಿದಲ್ಲಿ ಬಿಂಬವು 'ಪ್ರಾಚೀನಲಕ್ಷಣ'ವನ್ನುಳಿಸಿಕೊಂಡಿರು ವುದು ಗೋಚರಿಸಿ ಸುಮಾರು 9-10ನೇ ಶತಮಾನದ ಶಿಲ್ಪವೆಂಬುನ್ನು ಸೂಚಿಸುವಂತಿದೆ[23]. ಇಂತಹದೇ ಲೆಪ್ಪದ ಮತ್ತೊಂದು ಬಿಂಬವು ಮೂಡಬಿದರೆಯ ಲೆಪ್ಪದ ಬಸದಿಯಲ್ಲಿದೆ ಎಂದು ಡಾ॥ ಗುರುರಾಜ್ ಭಟ್‌ರ ವರು ತಿಳಿಸಿರುತ್ತಾರೆ. ಆದರೆ ಈ ಬಿಂಬವು ಎರಡೇ ಕೈಗಳನ್ನು ಹೊಂದಿದ್ದು ಬೀಜಪೂರ ಮತ್ತು ವರದಹಸ್ತ ಗಳನ್ನು ಪೊಂದಿದೆ. ಇದರಿಂದ ಮೂಡಬಿದರೆಯಲ್ಲೂ ಜ್ವಾಲಿನೀ ಆರಾಧನೆ ಇತ್ತೆಂದು ತಿಳಿಯುತ್ತದೆ.

ಸುಮಾರು 10ನೇ ಶತಮಾನದಲ್ಲಿ ಗೇರು ಸೊಪ್ಪೆಯು ಪ್ರಸಿದ್ಧ ಜೈನಕೇಂದ್ರವಾಗಿದ್ದು ಇಲ್ಲಿಯ ಬಸದಿಯಲ್ಲಿ ಜ್ವಾಲಿನೀ ಆರಾಧನೆ ಇತ್ತೆಂದು ತಿಳಿದು ಬರುತ್ತದೆ. ಸುಮಾರು 14ನೇ ಶತಮಾನದಲ್ಲಿ ಇಲ್ಲಿದ್ದ ದೇವಿಯನ್ನೇ ಚಿಕ್ಕಸಮಂತಭದ್ರರು ನರಸಿಂಪರಾಜಪುರದ 'ಸಿಂಹನಗದ್ದೆ'ಗೆ ತಂದು ಪ್ರತಿಷ್ಠಾಪಿಸಿದರೆಂದು ಪ್ರತೀತಿ ಇದೆ. ನರಸಿಂಪರಾಜಪುರದ ಶಿಲ್ಪವು ವಿಜಯನಗರದ ಶೈಲಿಯ ಬಿಂಬವಾಗಿದ್ದು. ಸುಖಾಸೀನ ಭಂಗಿಯಲ್ಲಿದೆ. ಕ್ರಮವಾಗಿ ದೇವಿಯು ದಾನಹಸ್ತ, ಬಾಣ, ಬಾಣ, ಚಕ್ರ ಮತ್ತು ಎಡಗೈಗಳಲ್ಲಿ ತ್ರಿಶೂಲ, ಪಾಶ, ಧ್ವಜ, ಧನಸ್ಸುಗಳನ್ನು ಧರಿಸಿದ್ದಾಳೆ. ಇದರ ವಸ್ತ್ರವಿನ್ಯಾಸವು ಆಭರಣಗಳ ಮಾದರಿಯು ವಿಜಯನಗರ ಶೈಲಿಯನ್ನು ಸೂಚಿಸಿವೆ. ದೇವಿಯು ಮಹಿಷ ಪೀಠದ ಮೇಲೆ ಆಸೀನಳಾಗಿದ್ದಾಳೆ.

ಇಲ್ಲಿಯ ಬಾಹುಬಲಿ ಬಸದಿಯಲ್ಲಿ ಅಮೃತ ಶಿಲೆಯ ಚಿಕ್ಕದಾದ ಜ್ವಾಲಿನಿಯ ಮತ್ತೊಂದು ಮೂರ್ತಿ ಇದೆ.

ತುಮಕೂರು ಜಿಲ್ಲೆಯ ಗುಬ್ಬಿಯ ಬಳಿಯಲ್ಲಿರುವ ನಿಟ್ಟೂರನ್ನು ಮತ್ತೊಂದು ಜ್ವಾಲಿನೀ ಕೇಂದ್ರವೆಂದು ಕರೆಯಲಾಗಿದೆ. ಇಲ್ಲಿರುವ ಶಾಂತಿನಾಥ ಬಸದಿಯ ನವ ರಂಗದ ವಿತಾನದ ತೊಲೆಗಳ ಮಧ್ಯದಲ್ಲಿ ಯಕ್ಷಿ ಯರನ್ನು ಬಿಡಿಸಲಾಗಿದೆ. ಇಂತಹ ಒಂದು ಪಟ್ಟಿಕೆಯ ಲ್ಲಿರುವ ದೇವಿಯನ್ನು .ಜ್ವಾಲಿನಿಯ ಬಿಂಬವೆಂದು ಆರಾಧಿಸುವರಾದರೂ ಈ ಬಿಂಬವು ಜ್ವಾಲಿನಿ ಬಿಂಬದ ಲಕ್ಷಣಗಳಿಗನುಸಾರವಾಗಿಲ್ಲ. ಈ ದೇವಿಯ ಕೈಯಲ್ಲಿ ರುವ ಆಯುಧಗಳನ್ನು ಪೀಠದ ಬಳಿ ಇರುವ ಗರುಡ ಲಾಂಛನವನ್ನು ಗಮನಿಸಿದಾಗ ಈ ದೇವಿಯ ಬಿಂಬವು 'ಚಕ್ರೇಶ್ವರಿ'ಯದೆಂದು ತಿಳಿದುಬರುತ್ತದೆ[24].

ಶ್ರವಣಬೆಳ್ಗೊಳದ ಚಂದ್ರನಾಥ ಬಸದಿಯಲ್ಲಿರುವ ದೇವಿಯ ಶಿಲ್ಪವು ಪ್ರಾಚೀನವಾದುದಾದರೂ ಅದು

ಾಲಾಮಾಲಿನಿ ಶಿಲ್ಪವಲ್ಲವೆಂಬುದು ಈಗಾಗಲೇ ಚಿವಾಗಿದೆ.

ಜ್ವಾಲಿನೀ ಶಿಲ್ಪಗಳಲ್ಲಿ ಶಿಲಾ ಮೂರ್ತಿಗಳಿಗಿಂತ ಚಿನ ಪ್ರತಿಮೆಗಳೇ ಹೆಚ್ಚಾಗಿ ದೊರೆತಿದ್ದು ಸುಮಾರು 2-13ನೇ ಶತಮಾನಕ್ಕೆ ಸೇರಿದವಾಗಿವೆ. ಹಳೇಬೀಡಿನ ಮಾಪದ ಅಡಗೂರಿನ ಬಸದಿಯಲ್ಲಿ ಜ್ವಾಲಿನಿಯ ಂಬವಿತ್ತು. ಈಗ ಅದು ಕಳುವಾಗಿದೆ. ಹಿಂದಿದ್ದ ತಿಮೆಯು ಸುಖಾಸೀನ ಭಂಗಿಯಲ್ಲಿತ್ತು, ಈಗಿನ ಂಬದ ಕೈಗಳಲ್ಲಿ ಅಭಯ ಬಾಣ ಖಡ್ಗ, ಬಾಕು, ಾಣ, ತ್ರಿಶೂಲ, ಚಕ್ರ, ಬಾಕು ಧನಸ್ಸು, ಖೇಟಕಗ ನ್ನು ಹೊಂದಿದಾಳೆ. ಪಂಚಲೋಹದ ಈ ಬಿಂಬಕ್ಕೆ ಗಲೂ ಪೂಜೆಸಲ್ಲುತ್ತಿದೆ. ಇಂಥಹದೇ ಸುಮಾರು 2 /2" ಎತ್ತರದ ಕಂಚಿನ ಬಿಂಬವೊಂದನ್ನು ಸಿಂಹನಗ ಯ ಶಾನ್ತಿನಾಥ ಬಸದಿಯಲ್ಲಿ ಕಾಣಬಹುದು.

ದಕ್ಷಿಣ ಕನ್ನಡ ಜಿಲ್ಲೆಯ ಹಲವೆಡೆ ಚಂದ್ರನಾಥ ಸದಿಗಳಿವೆಯಾದರೂ ಎಲ್ಲೆಡೆ ಜ್ವಾಲಾಮಾಲಿನಯ ಂಬಗಳು ಕಾಣಬರುವುದಿಲ್ಲ ಚಂದ್ರಪ್ರಭ ತೀರ್ಥಂ ರನ ಬಿಡಿ ಶಿಲ್ಪವನ್ನು ಕೆತ್ತುವಲ್ಲಿ ಅವನ ಪಕ್ಕದಲ್ಲಿ ರುವ ಯಕ್ಷಿಯು ಪೂರ್ಣವಾದ ಜ್ವಾಲಿನೀ ದೇವಿಯ ಕ್ಷಣಗಳನ್ನು ಹೊಂದಿರುವುದಿಲ್ಲ. ಸಾಮಾನ್ಯವಾಗಿ ಕ್ಷಿಯರನ್ನು ವರದ ಅಂಕುಶ, ಪಾಶ, ಬೀಜಪೂರಗ ಳನ್ನು ಧರಿಸಿರುವಂತೆ ಬಿಡಿಸಿರುತ್ತಾರೆ. ಉದಾ: ಭಂಢಾರಿ ಬಸರಿ, ಶ್ರವಣಬೆಳ್ಗೊಳದ ಸುತಾಲಯ., ಇತ್ಯಾದಿ.

ಹೀಗೆ ಸುಮಾರು 13-14ನೇ ಶತಮಾನದವರೆಗೆ ಜ್ವಾಲಿನಿ ಆರಾಧನೆಯು ಪ್ರಬಲವಾಗಿದ್ದು 14ನೇ ಶತ ಮಾನದ ನಂತರ ಇಳಿಮುಖಗೊಂಡಂತಿದೆ. 14ನೇ ಶತಮಾನದ ನಂತರದಲ್ಲಿ ಯಾಪನೀಯ ಸಂಘವು ತನ್ನ ಅಸ್ತಿತ್ವವನ್ನು ಕಳೆದು ಕೊಂಡದ್ದೇ ಇದಕ್ಕೆ ಕಾರಣ ವೆನ್ನಬಹುದು. ಕರ್ನಾಟಕದಲ್ಲಿ ಯೂಪನೀಯ ಸಂಘದ ಬಸದಿಗಳೇ ಹೆಚ್ಚಾಗಿ ನಶಿಸಿರುವುದನ್ನು ಕಂಡಾಗ ಈ ತಂತ್ರಾಧಿ ದೇವಿಯ ಪ್ರಭಾವವು ಉಂಟು ಮಾಡಿದ ಘೋರ ಪರಿಣಾಮವೆಂಬಂತಾಗಿದೆ. 15ನೇ ಶತಮಾ ನದ ನಂತರದಲ್ಲೂ ಜೈನಧರ್ಮವು ಪಸರಿಸಿತ್ತಾದರೂ ಯಕ್ಷಿ ಆರಾಧನೆ ಸ್ಥಗಿತ ಗೊಂಡಿರುವುದನ್ನು ಗುರುತಿಸ ಬಹುದು. ಇಷ್ಟಾದರೂ 17-18ನೇ ಶತಮಾನಗಳಲ್ಲಿ ಮತ್ತೆ ತಾಂತ್ರಿಕ ಪ್ರಭಾವ ಹೆಚ್ಚಾಗಿ ಮತ್ತೆ ಯಕ್ಷಿ ದೇವಾಲಯಗಳು ಜೀರ್ಣೋದ್ಧಾರಗೊಂಡಿವೆ. ಪ್ರಾಚೀನ ದೇವಾಲಯಗಳು ಮತ್ತೆ ಪ್ರಸಿದ್ಧವಾಗಿವೆ. ಈಗಲು ವಿಶೇಷವಾಗಿ ಪೂಜಾರ್ಹವಾಗಿರುವ ಸಿಂಹನಗದ್ದೆ ನಿಟ್ಟೂರು, ಕೆಲಸೂರು ಮೊದಲಾದ ಕೇಂದ್ರಗಳು ದೇವಿಯ ಮಹಿಮೆಯನ್ನು ಸಾರುತ್ತಿವೆ.

---

## ಅಡಿಟಿಪ್ಪಣಿಗಳು

1. P.B. Desai 'Jainism in South India and some Jaina Epigraphs' p.144
2. 'ರತ್ನಕರಂಡಕ ಶ್ರಾವಕಾಚಾರ'
3. R.N. Nandi, 'Religious institutions and Cults in the Deccan' P. 149 .
4. A.N. Upadhye 'Some More Light on Yapaniyas'
5. ಹುಂಚದ ಪದ್ಮಾವತಿ ಬಸದಿ, ನಿಟ್ಟೂರಿನ ಜ್ವಾಲಾಮಾಲಿನೀ ಆರಾಧನೆ.
6. ಲಕ್ಷಿಸೇನ ಸ್ವಾಮಿಗಳು, 'ಶ್ರೀ ಸಿಂಹನಗದ್ದೆ ಕ್ಷೇತ್ರದ ಸಂಕ್ಷಿಪ್ತ ಪರಿಚಯ', ಪು.4
7. R.N. Nandi, 'Religious institutions and Cults in the Deccan' P. 152-153
8. ಹಂ. ಪ. ನಾಗರಾಜಯ್ಯ 'ಯಕ್ಷ-ಯಕ್ಷಿ', ಪು.23
9. R.N. Nandi, 'Religious institutions and Cults in the Deccan' P. 158-159
10. P.B. Desai 'Jainism in South India and some Jaina Epigraphs'
11. 'ಜೈನ್ ಸಾಹಿತ್ಯ ಔರ್ ಇತಿಹಾಸ್', ಪು. 460
12. 'ಪ್ರವಚನಸಾರ', ಪೀಠಿಕೆ, ಪು. 12

13. 'ಎಪಿಗ್ರಾಫಿಯಾ ಕರ್ನಾಟಿಕಾ' V, ಕೃ.ರಾ.ನಗರ 36 - (ಮೈ.ವಿ.ವಿ.ಪ್ರಕಟಣೆ)
14. P.B. Desai
15. ಅದೇ ಗ್ರಂಥ, ಪು. 259
16. 'ಎಪಿಗ್ರಾಫಿಯಾ ಕರ್ನಾಟಿಕಾ', III ಗುಂಡ್ಲುಪೇಟೆ 100, (ಮೈ.ವಿ.ವಿ. ಪ್ರಕಟಣೆ)
17. ಅಗ್ಗಳ, 'ಚಂದ್ರಪ್ರಭ ಪುರಾಣ' ೧ನೇ ಆ, ೯ನೇ ಪದ್ಯ
18. ಮಹಾಬಲ ಕವಿ, 'ನೇಮಿನಾಥ ಪುರಾಣ'9ನೇ ಆ, ಪ. 38, ಪು. 254
19. ಶಿಶು ಮಾಯಣ, 'ಅಂಜನಾಚರಿತೆ', ನೇ ಆ, ಪು 39
20. ಹಂಪನಾ 'ಯಕ್ಷ-ಯಕ್ಷಿ', ಅನುಬಂಧ
21. ಆಶಾಧರ, 'ಪ್ರತಿಷ್ಠ ಸಾರೋದ್ದಾರ' - (3.163) 'ಪ್ರತಿಷ್ಠಾ ತಿಲಕ', ಪು 343
22. S. Setter, 'The Cult of Jwalamalini and the Earliest Images of Jwala and Syama' ARTiBus ASTAE Vol. XXXI
23. ಇಂತಹ ಲೆಪ್ಪದ ಬಿಂಬಗಳು 9-10ನೇ ಶತಮಾನದಲ್ಲಿ ಪ್ರಸಿದ್ದವಾಗಿದ್ದು ಕೋಲಾರಮ್ಮನದೇವಾಲಯ, ನಗರ್ಲೇಯ ಸಪ್ತ ಮಾತೃಕೆಯರಬಿಂಬಗಳು ನೆನಪಾಗುವಂತಿದೆ.
24. ಇಂಥ ನಾಲ್ಕು ಪಟ್ಟಿಕೆಗಳಲ್ಲಿ ಯಕ್ಷಿಯರ ಬಿಂಬಗಳಿರುವ ನವರಂಗವನ್ನು ಅರಸಿಕೆರೆಯ ಸಹಸ್ರ ಕೂಟ ಜಿನಾಲಯದಲ್ಲೂ ಕಾಣಬಹುದಾಗಿದೆ.

ಅ.ಸ. ಅಪರ್ಣ

# ಶಿಲ್ಪಗ್ರಂಥಗಳು ಮತ್ತು ಅಧಿಷ್ಠಾನಗಳು – ಒಂದು ವಿವರಣೆ

ದೇವಾಲಯ ರಚನೆಯಲ್ಲಿ ಅಧಿಷ್ಠಾನವು ಮೊದಲ ಭಾಗ ಮತ್ತು ಮುಖ್ಯವಾದ ಭಾಗ. ದೇವಾಲಯದ ಭಾರವು ಅಧಿಷ್ಠಾನದ ಮೇಲೆಯೂ ಬೀಳುವುದರಿಂದ ಇದನ್ನು ಅನೇಕ ಅಂಗಗಳೊಂದಿಗೆ ಭದ್ರವಾಗಿ ಮತ್ತು ಅಲಂಕಾರಿಕವಾಗಿ ರಚಿಸಿರುತ್ತಾರೆ. ಈ ಅಂಗಗಳು ಮತ್ತು ಅಲಂಕಾರಗಳ ಆಧಾರದಿಂದ ಅವುಗಳನ್ನು ಬೇರೆ ಬೇರೆ ಹೆಸರಿನಿಂದ ಗುರುತಿಸಲಾಗುತ್ತದೆ. ಶಿಲ್ಪ ವಾಸ್ತುಗ್ರಂಥಗಳಲ್ಲಿ ಈ ಬಗ್ಗೆ ವಿಪುಲವಾದ ಮಾಹಿತಿ ದೊರೆಯುತ್ತಿದ್ದು ಅವುಗಳಲ್ಲಿ ಕೆಲವು ರೀತಿಯ ಅಧಿಷ್ಠಾನಗಳನ್ನು ಮಾತ್ರ ಇಲ್ಲಿ ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ.

ಅನೇಕ ರೀತಿಯ ಅಧಿಷ್ಠಾನಗಳನ್ನು ಈಗಾಗಲೇ ವಿದ್ವಾಂಸರು ಗುರುತಿಸಿರುವರಾದರೂ, ಆ ಅಧಿಷ್ಠಾನದ ವಿವರಗಳಿಗೂ ಈಗ ಇರುವ ಅಧಿಷ್ಠಾನಗಳಿಗೂ ಇರುವ ವ್ಯತ್ಯಾಸವೇನು ಮತ್ತು ಒಂದು ಗ್ರಂಥಕ್ಕೂ ಇನ್ನೊಂದು ಗ್ರಂಥಕ್ಕೂ ಇರುವ ವ್ಯತ್ಯಾಸವೇನು ಎಂಬ ವಿಷಯಗಳನ್ನು ಇಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಅಂತೆಯೇ ಇದಕ್ಕೆ ಆಧಾರವಾಗಿ 'ಮಾನಸಾರ', 'ಕಾಶ್ಯಪಶಿಲ್ಪ', 'ಸುಪ್ರಭೇದಾಗಮ', 'ಶಿಲ್ಪರತ್ನ' ಮತ್ತು ಮಯಮತ' ಈ ಗ್ರಂಥಗಳಲ್ಲಿನ ಪಾದಬಂಧ, ಪ್ರತಿಬಂಧ, ಕಪೋತಬಂಧ, ಮಂಚಬಂಧ, ಪದ್ಮಬಂಧ ಮತ್ತು ಶ್ರೀ ಬಂಧ – ಈ ಅಧಿಷ್ಠಾನ ಪ್ರಕಾರಗಳನ್ನೂ ವಿವರಣೆಗಾಗಿ ತೆಗೆದುಕೊಳ್ಳಲಾಗಿದೆ.

ಪಾದಬಂಧ: ಶಾಸ್ತ್ರಗ್ರಂಥಗಳ ಪ್ರಕಾರ ಪಾದಬಂಧ ಅಧಿಷ್ಠನದ ಮುಖ್ಯ ಅಂಗಗಳೆಂದರೆ – ಉಪಾನ, ಜಗತೀ, ಕುಮುದ, ಗಲ, ಪಟ್ಟಿಕಾ ಮತ್ತು ಕಂಪ. ಈ ಪ್ರಕಾರದ ಅಧಿಷ್ಠಾನದ ಬಗ್ಗೆ ಎಲ್ಲ ಗ್ರಂಥಗಳು (ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ[1])ಒಂದೇ ರೀತಿ ಹೇಳಿವೆಯಾದರೂ ಮಾನಸಾರದಲ್ಲಿ 'ಉಪಾನ'ದ ಮೇಲೆ ಮತ್ತೆ ಕಂಪವನ್ನು ಹೇಳಿದೆ.

ಈ ರೀತಿಯ ಅಧಿಷ್ಠಾನವನ್ನು ಶ್ರವಣಬೆಳಗೊಳದ ಚಂದ್ರಗುಪ್ತ ಮತ್ತು ಚಾವುಂಡರಾಯ ಬಸದಿಗಳು, ಬೇಗೂರಿನ ನಗರೇಶ್ವರ ಮತ್ತು ಅರಳುಗುಪ್ಪೆಯ ಕಲ್ಲೇಶ್ವರ ದೇವಾಲಯಗಳು, ಬನ್ನೇರುಘಟ್ಟದ (ಬೆಂಗಳೂರು) ಚಂಪಕಧಾಮ ಸ್ವಾಮಿ ದೇವಾಲಯ – ಮುಂತಾದ ಕಡೆಗಳಲ್ಲಿ ಕಾಣಬಹುದಾಗಿದೆ. ತ್ರಿಪಟ್ಟ ಗಳ, ಪಟ್ಟಿಕಾಗಳಿಂದ ಕೂಡಿದ ಬಾದಾಮಿಯ ಭೂತನಾಥ ದೇವಾಲಯದ ಅಧಿಷ್ಠಾನವು 'ಪಾದಬಂಧ'ಕ್ಕೆ ಹತ್ತಿರವಾಗಿದೆ.[2] ಇದರಲ್ಲಿ ದ್ರಾವಿಡ ಪದ್ಧತಿಯ ದೇವಾಲಯಗಳಲ್ಲಿ ಕಂಡುಬರುವ 'ಜಗತೀ'ಗೆ ಬದಲಾಗಿ ಖುರಕುಂಭವನ್ನು ರಚಿಸಿದ್ದಾರೆ.[3] ಹುಂಚದ ಬೋಗಾರ ಬಸದಿ ಮತ್ತು ಪಾರ್ಶ್ವನಾಥ ಬಸದಿಗಳಲ್ಲಿ ಪಾದಬಂಧ ಅಧಿಷ್ಠಾನವಿದೆ. ಆದರೆ, ಇಲ್ಲಿ 'ಕಂಪ'ವನ್ನು ರಚಿಸಿಲ್ಲ. ಗ್ರಂಥಗಳಲ್ಲಿ ಸ್ಪಷ್ಟವಾಗಿ ಹೇಳಿಲ್ಲವಾದರೂ, ಮೇಲೆ ಹೇಳಿದ ಎಲ್ಲ ಅಧಿಷ್ಠಾನಗಳಲ್ಲಿ ತ್ರಿಪಟ್ಟ(ಕುಮುದ) ವೇ ಇದೆ.

ಎಲ್ಲ ಗ್ರಂಥಗಳೂ 'ಜಗತೀ'ಯ ನಂತರ ಕುಮುದವನ್ನು ರಚಿಸಬೇಕೆಂದು ಹೇಳಿದ್ದರೂ, ರಚನೆಯಲ್ಲಿ ಜಗತೀ ಮತ್ತು ಕುಮುದದ ನಡುವೆ 'ಗಳ' ಭಾಗವೂ ಇದೆ. ಮಾನಸಾರ ಮಾತ್ರ ಈ ಅಂಗವನ್ನು ಗುರುತಿಸಿದೆ.

ಪ್ರತಿಬಂಧ : 'ಕಾಶ್ಯಪಶಿಲ್ಪ' ಮತ್ತು 'ಶಿಲ್ಪರತ್ನ'ಗಳಲ್ಲಿ ಪ್ರತಿಬಂಧ ಅಧಿಷ್ಠಾನದ ಬಗ್ಗೆ ವಿವರವಾಗಿದೆ. ಕಾಶ್ಯಪಶಿಲ್ಪದಲ್ಲಿ ಈ ಅಧಿಷ್ಠಾನದ ಅಂಗಗಳಾಗಿ ಉಪಾನ, ಜಗತೀ, ಕುಮುದ, ಆಲಿಂಗ, ತ್ರಿಪಟ್ಟ, ಪ್ರತಿ, ವಾಜನಗಳನ್ನು ಹೇಳಿದ್ದರೆ, ಶಿಲ್ಪರತ್ನದಲ್ಲಿ ಪಾದುಕಾ, ಜಗತೀ, ಕೈರವ, ಕರ್ಣ, ಕಂಪ, ಕಂಧರ, ಪಟ್ಟಿಕಾ ಮತ್ತು ಕಂಠಗಳನ್ನು ಹೇಳಿದೆ. ಕಾಶ್ಯಪಶಿಲ್ಪದಲ್ಲಿ ಕುಮುದ, ಆಲಿಂಗದ ನಂತರ ತ್ರಿಪಟ್ಟವನ್ನು ಹೇಳಿರುವುದು ಅಷ್ಟು ಸಮಂಜಸವಾಗಿಲ್ಲ.

ಬಾದಾಮಿಯ ಜಂಬುಲಿಂಗೇಶ್ವರ ದೇವಾಲಯದಲ್ಲಿ 'ಪ್ರತಿಬಂಧ' ಪ್ರಕಾರಕ್ಕೆ ಹತ್ತಿರವಾಗಿರುವ ರೀತಿಯ ಅಧಿಷ್ಠಾನವನ್ನು ಕಾಣಬಹುದು. ಇದರಲ್ಲಿ ನಾಗರ ಕುಂಭ, ಧಾರಾವೃತ್ತಕುಮುದ ಮತ್ತು ಪ್ರತಿವಾಜನ ಮತ್ತು ಕಂಪ – ಈ ಅಂಗಗಳಿವೆ

ಉಳ್ಳಾಲದ ಗಣೇಶ ದೇವಾಲಯದ ಅಧಿಷ್ಠಾನದಲ್ಲಿ ಉಪಾನ, ಜಗತೀ, ಕುಮುದ, ಕಂಠ, ಕಂಪ, ಕಂಠ,[4] ಪಟ್ಟಿಕಾ ಮತ್ತು ಕಂಪ ಈ ಅಂಗಗಳಿವೆ. ಆದ್ದರಿಂದ ಇದು 'ಶಿಲ್ಪರತ್ನ'ವು ಹೇಳುವ 'ಪ್ರತಿಬಂಧ' ರೀತಿಯದೆಂದು ಹೇಳಬಹುದು.

**ಕಪೋತಬಂಧ :** ಶಿಲ್ಪರತ್ನ ಮತ್ತು ಮಯಮತಗಳಲ್ಲಿ ಮಾತ್ರ ಕಪೋತಬಂಧ ಅಧಿಷ್ಠಾನದ ಉಲ್ಲೇಖವಿದೆ. 'ಶಿಲ್ಪರತ್ನ'ದಲ್ಲಿ ಪಾದುಕ, ಜಗತೀ, ಕುಮುದ, ಪಟ್ಟ, ಕರ್ಣ, ವಲಭೀ, ವಾಜನ[5] ಮತ್ತು ಕಪೋತಗಳನ್ನು – ಈ ಅಧಿಷ್ಠಾನದ ಅಂಗಗಳೆಂದು ಹೇಳಿದ್ದರೆ. 'ಮಯಮತ'ದಲ್ಲಿ ಸಂಕ್ಷೇಪವಾಗಿ ವೃತ್ತಕುಮುದ ಮತ್ತು ಕಪೋತವನ್ನು ಹೇಳಿದೆ.

ಐಹೊಳೆಯ ಮೇಗುತಿ ದೇವಾಲಯ ಮತ್ತು ಪುಷ್ಪಭದ್ರ ದೇವಾಲಯಗಳು, ಪಟ್ಟದಕಲ್ಲಿನ ಪಾಪನಾಥ ಮತ್ತು ಚಂದ್ರಶೇಖರ ದೇವಾಲಯಗಳು, ಎಲ್ಲೋರದ ಸರ್ವತೋಭದ್ರ ಜಿನಾಲಯ, ಬೇಗೂರಿನ ನಾಗೇಶ್ವರ ದೇವಾಲಯ, ಹುಂಚದ ಸೂಳೆಬಸದಿ ಮತ್ತು ಅಂಗಡಿಯ ಸೂಸವೂರ್ ಬಸದಿ – ಇತ್ಯಾದಿಗಳಲ್ಲಿ 'ಕಪೋತಬಂಧ' ಅಧಿಷ್ಠಾನವಿದೆ. ಇವುಗಳಲ್ಲಿ ಕಂಡುಬರುವ ಪ್ರಮುಖ ವ್ಯತ್ಯಾಸವೆಂದರೆ – ಐಹೊಳೆ ಮತ್ತು ಪಟ್ಟದಕಲ್ಲಿನ ದೇವಾಲಯಗಳಲ್ಲಿ 'ಜಗತೀ'ಗೆ ಬದಲಾಗಿ ಖುರ–ಕುಂಭವಿರುವುದು; ಅಂತೆಯೇ ಐಹೊಳೆಯ ಪುಷ್ಪಭದ್ರ ಮತ್ತು ಪಟ್ಟದಕಲ್ಲಿನ ಪಾಪನಾಥ ದೇವಾಲಯಗಳಲ್ಲಿ ಧಾರಾವೃತ್ತ ಕುಮುದವಿದ್ದು, ಉಳಿದ ದೇವಾಲಯಗಳಲ್ಲಿ ತ್ರಿಪಟ್ಟ ಕುಮುದವಿರುವುದು; ಪಟ್ಟ ಮತ್ತು ಕರ್ಣಕ್ಕೆ ಬದಲು ಕಂಪ, ಕಂಠವನ್ನು ರಚಿಸಿರುವುದು.

**ಮಂಚಬಂಧ:** ಸುಪ್ರಭೇದಾಗಮವೊಂದನ್ನು ಬಿಟ್ಟು ಉಳಿದ ಎಲ್ಲ ಗ್ರಂಥಗಳಲ್ಲಿ ಮಂಚಬಂಧ ಅಧಿಷ್ಠಾನದ ಉಲ್ಲೇಖವಿದೆ. ಇವುಗಳ ಪ್ರಕಾರ ಮಂಚಬಂಧ ಅಧಿಷ್ಠಾನದಲ್ಲಿ ಜಗತೀ, ಕುಮುದ, ಗಳ, ಕಂಪ, ಪದ್ಮ, ಕಪೋತ,[5] ಆಲಿಂಗ, ಅಂತರಿತ, ಪ್ರತಿ ಮತ್ತು ವಾಜನ. ಎಲ್ಲ ಗ್ರಂಥಗಳಲ್ಲೂ ಈ ವಿವರಣೆಯು ಬಹುಪಾಲು ಒಂದೇ ರೀತಿಯಾಗಿದೆ

ಐಹೊಳೆಯ ದುರ್ಗ ದೇವಾಲಯ, ಪಟ್ಟದಕಲ್ಲಿನ ವಿರೂಪಾಕ್ಷ, ಮಲ್ಲಿಕಾರ್ಜುನ ಮತ್ತು ಸಂಗಮೇಶ್ವರ ದೇವಾಲಯಗಳು[6], ಆವನಿಯ ಅರುಣಾಚಲೇಶ್ವರ ದೇವಾಲಯಗಳು – ಮುಂತಾದೆಡೆಗಳಲ್ಲಿ ಮಂಚಬಂಧ ಅಧಿಷ್ಠಾನವನ್ನು ಕಾಣಬಹುದು. ಇವುಗಳಲ್ಲಿ ಐಹೊಳೆಯ ದುರ್ಗ ದೇವಾಲಯದಲ್ಲಿ ಧಾರಾವೃತ್ತ ಕುಮುದವೂ, ಪಟ್ಟದಕಲ್ಲಿನ ದೇವಾಲಯಗಳಲ್ಲಿ ವೃತ್ತಕುಮುದವೂ ಇದೆ. ಅಲ್ಲದೆ ಪಟ್ಟದ ಕಲ್ಲಿನ ದೇವಾಲಯಗಳಲ್ಲಿ 'ಗಳ' ಭಾಗವು ಪ್ರಧಾನವಾಗಿದೆ.

**ಶ್ರೀಬಂಧ:** 'ಸುಪ್ರಭೇದಾಗಮ'ವನ್ನು ಬಿಟ್ಟು ಉಳಿದ ಎಲ್ಲ ಗ್ರಂಥಗಳಲ್ಲೂ ಶ್ರೀಬಂಧ ಅಧಿಷ್ಠಾನದ ಉಲ್ಲೇಖವಿದೆ. ಈ ಗ್ರಂಥಗಳ ಪ್ರಕಾರ ಈ ಅಧಿಷ್ಠಾನದಲ್ಲಿ ಮುಖ್ಯ ಭಾಗಗಳೆಂದರೆ – ಪಾದುಕ, ಪದ್ಮ, ಕುಮುದ, ಪದ್ಮ, ಗಲ ಮತ್ತು ಕಪೋತ, ಆಲಿಂಗ, ಅಂತರಿಕ, ಪ್ರತಿವಾಜನ. ಈ ದೃಷ್ಟಿಯಿಂದ 'ಕಾಶ್ಯಪ ಶಿಲ್ಪ', 'ಮಾನಸಾರ' ಮತ್ತು 'ಮಯಮತ'ಗಳಲ್ಲಿ ಬಹುಪಾಲು ಹೋಲಿಕೆ ಇರುವುದಾದರೂ 'ಮಾನಸಾರ'[7] ಮತ್ತು 'ಕಾಶ್ಯಪಶಿಲ್ಪ'ದ ವಿವರಗಳು ಹೆಚ್ಚು ಸ್ಪಷ್ಟವಾಗಿವೆ. 'ಶಿಲ್ಪರತ್ನ'ವು ಶ್ರೀಬಂಧ ಅಧಿಷ್ಠಾನವನ್ನು ಉಲ್ಲೇಖಿಸಿದ್ದರೂ ಕಪೋತಬಂಧದ ಇನ್ನೊಂದು ವಿಧವಾಗಿ ಇದರಲ್ಲಿ ಶ್ರೀಬಂಧವನ್ನು ಹೇಳಿದೆ[8].

ಶ್ರೀಬಂಧ ಅಧಿಷ್ಠಾನಕ್ಕೆ ಉದಾಹರಣೆಗಳೆಂದರೆ, ಸುಂದರವಾದ ಕಟಕಾವೃತ ಕುಮುದದಿಂದ ಕೂಡಿರುವ ಹಂಪೆಯ ರಾಮಚಂದ್ರ ( = ಹಜಾರರಾಮಸ್ವಾಮಿ) ದೇವಾಲಯ, ಹಂಪೆಯ ವಿರೂಪಾಕ್ಷ ದೇವಾಲಯದ ರಂಗಮಂಟಪದ ಅಧಿಷ್ಠಾನ, ಅದೇ ಹಂಪೆಯ ವಿಠಲ (ಸಂಗೀತ ಮಂಟಪ) ಮತ್ತು ಕೃಷ್ಣ ಸ್ವಾಮಿ ದೇವಾಲಯಗಳು, ಕೋಲಾರದ ಸೋಮೇಶ್ವರ ದೇವಾಲಯ, ಶ್ರವಣಬೆಳಗೊಳದ ಚನ್ನಣ್ಣ ಬಸದಿಯ ಮುಖಮಂಟಪದ ಅಧಿಷ್ಠಾನ – ಮುಂತಾದುವು. ಇವುಗಳೆಲ್ಲಾ ಕಪೋತದ ಮೇಲಿನ ಅಂಗಗಳ ರಚನೆ ಸರಳವಾಗಿದೆ.

**ಪದ್ಮಬಂಧ:** ಎಲ್ಲ ಗ್ರಂಥಗಳಲ್ಲೂ ಪದ್ಮಬಂಧ ಜಾತಿಯ ಅಧಿಷ್ಠಾನದ ಉಲ್ಲೇಖವಿದೆ. ಪಾದುಕ, ಕಂಪ/ಪದ್ಮ, ಮಹಾಪದ್ಮ, ಪದ್ಮಯುಕ್ತ ವೃತ್ತಕುಮುದ, ಆಲಿಂಗ, ಅಂತರಿತ, ಪ್ರತಿ, ವಾಜನಗಳು. ಈ ಅಧಿಷ್ಠಾನದ ಮುಖ್ಯ ಲಕ್ಷಣಗಳು. ಮುಖ್ಯ ಅಂಗಗಳ ದೃಷ್ಟಿಯಿಂದ ಎಲ್ಲ ಗ್ರಂಥಗಳೂ ಒಂದೇ ರೀತಿ ಹೇಳಿದ್ದರೂ, ಉಳಿದ ಅಂಗಗಳ ದೃಷ್ಟಿಯಿಂದ ಇವುಗಳಲ್ಲಿ ಕೆಲವು ವ್ಯತ್ಯಾಸಗಳೂ ಇವೆ. ಎಲ್ಲ ಗ್ರಂಥಗಳಲ್ಲೂ ಪಾದುಕ, ಕಂಪದ ನಂತರ ಪದ್ಮವನ್ನು ಹೇಳಿದ್ದರೆ,

ುಪ್ರಭೇದಾಗಮ'ದಲ್ಲಿ ಪದ್ಮದೊಂದಿಗೆ ಜಗತಿಯನ್ನೂ ಳಿದೆ. 'ಸುಪ್ರಭೇದಾಗಮ' ಮತ್ತು 'ಮಾನಸಾರ'ದ ಕಾರ ಕುಮುದದ ಮೇಲಿನ ಅಂಗವೂ ಪದ್ಮದಿಂದ ಡಿರಬೇಕು. ಉಳಿದ ಗ್ರಂಥಗಳಲ್ಲಿ ಕುಮುದ, ಗಲದ ತರ ಆಲಿಂಗ, ಅಂತರಿತಗಳನ್ನು ಹೇಳಿದ್ದರೆ, ಮಾನ ರವು ಇನ್ನೊಂದು ಹಂತ ಕಂಪ ಗಳ ಕಂಪ ಪದ್ಮ ನ್ನು ಹೇಳಿದೆ.[9]

ಕರ್ನಾಟಕದಲ್ಲಿ, ಸದ್ಯಕ್ಕೆ ನನ್ನ ಗಮನಕ್ಕೆ ಬಂದಿ ವ ಪದ್ಮಬಂಧ ಅಧಿಷ್ಠಾನದ ಉದಾಹರಣೆಯೆಂದರೆ, ವಾಡದ ನಾಲ್ಕನೇ ಸಂಖ್ಯೆಯ ದೇವಾಲಯ. ಇದ ಲ್ಲಿ ಮುಖ್ಯಭಾಗವಾಗಿ ಜಗತೀ, ಮಹಾಪದ್ಮ, ತ್ರಿಪ ವಿದೆ. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ, ಥಗಳಲ್ಲಿ ವೃತ್ತಕುಮುದದ ಸೂಚನೆ ಇದ್ದರೂ, ದರಲ್ಲಿ ತ್ರಿಪಟ್ಟವನ್ನೇ ರಚಿಸಿದೆ; 'ಸುಪ್ರಭೇದಾಗಮ ದಲ್ಲಿ ಮಾತ್ರ ಹೇಳಿರುವಂತೆ ಮಹಾಪದ್ಮದೊಂದಿಗೆ ಗತಿಯನ್ನೂ ರಚಿಸಿದೆ. ಆದರೆ ಈ ಗ್ರಂಥದಲ್ಲಿ ಜಗ ಯ ನಂತರ ಪದ್ಮ ಬರಬೇಕೆಂದಿದ್ದರೆ, ಇಲ್ಲಿ ಪದ್ಮದ ತರ ಬಂದಿದೆ.

ಹೀಗೆ ಇಲ್ಲಿ ಗ್ರಂಥಗಳ ಹಿನ್ನಲೆಯಲ್ಲಿ ಕೆಲವು ಧಿಷ್ಠಾನಗಳನ್ನು ಮಾತ್ರ ವಿವರಿಸಿದ್ದು, ಅವುಗಳಿಂದ ೂರಬರುವ ವಿಷಯಗಳನ್ನು ಈ ರೀತಿಯಾಗಿ ಂಗ್ರಹಿಸಬಹುದಾಗಿದೆ:

1) ಒಂದೇ ಅಂಗಕ್ಕೆ ಬೇರೆ ಬೇರೆ ಗ್ರಂಥಗಳಲ್ಲಿ ಬವೊಮ್ಮೆ ಬೇರೆ ಬೇರೆ ಹೆಸರುಗಳಿವೆ. ಉದಾಹರಣೆ ಪಾನ-ಪಾದುಕಾ-ಜನ್ಮನ-ಖುರ-ಗ್ರೀವ-ಗಲ-ಕಂಠ- ಧರ ಇತ್ಯಾದಿ

2) ಗ್ರಂಥಗಳಲ್ಲಿ ಹೇಳಿರುವ ಅಂಗಗಳನ್ನು ರಚಿ ವಾಗ ಕೆಲವು ಮಾರ್ಪಾಟುಗಳಾಗಿವೆ. ಉದಾಹರಣೆ ಮುದದ ಬಳಿಕೆ, ಕರ್ಣ ಭಾಗವು ಕಂಠವಾಗಿರುವುದು, ಪಟ್ಟವು ಪದ್ಮವಾಗಿರುವುದು ಇತ್ಯಾದಿ. (ಮುಖ್ಯ ಅಂಗಗಳಲ್ಲಿ ಹೆಚ್ಚಿನ ಬದಲಾವಣೆ ಕಂಡು ಬರುವುದಿಲ್ಲ)

3) ಒಂದೇ ಅಂಗಕ್ಕೆ ಸಮಾನಾಂತರವಾದ ಬೇರೆ ಪದಗಳನ್ನು ಕೆಲವು ಗ್ರಂಥಗಳಲ್ಲಿ ಹೇಳಿದೆ.

ಉದಾ: ಜಗತಿ-ವಪ್ರ; ಕಪೋತ-ಗೋಪಾನ; ಕಂಪ-ಕ್ಷೇಪಣ; ಕುಮುದ-ಕುಂಭ

4) ಗ್ರಂಥವಷ್ಟೇ ಅಲ್ಲದೆ, ಪ್ರಾದೇಶಿಕತೆಯೂ ಕೂಡಾ ಅಧಿಷ್ಠಾನ ರಚನೆಯು ಮೇಲೆ ತನ್ನ ಪ್ರಭಾವ ವನ್ನು ಬೀರಿದೆ. ಉದಾ: ಐಹೊಳೆ ಮತ್ತು ಪಟ್ಟದಕಲ್ಲಿನ ದೇವಾಲಯಗಳಲ್ಲಿ ಜಗತಿಗೆ 'ಖುರ-ಕುಂಭವನ್ನು' ರಚಿಸಿದ್ದಾರೆ.

5) ಪಾದಬಂಧ, ಪ್ರತಿಬಂಧ, ಕಪೋತಬಂಧ ಮತ್ತು ಮಂಚಬಂಧ ಅಧಿಷ್ಠಾನಗಳು ಪ್ರಾಚೀನ ಕಾಲ ದಿಂದಲೂ ಬಳಕೆಯಲ್ಲಿವೆ. ಪದ್ಮಬಂಧ ಅಧಿಷ್ಠಾನವು ಸು. 10-11 ನೇಯ ಶತಮಾನದಲ್ಲಿ ಕಾಣಿಸಿಕೊಂಡರೆ, ವಿಜಯನಗರ ಕಾಲದ ದೇವಾಲಯಗಳಲ್ಲಿ ಶ್ರೀಬಂಧ ಅಧಿಷ್ಠಾನವನ್ನು ಹೆಚ್ಚಾಗಿ ಕಾಣುತ್ತೇವೆ.

6) ಮೇಲೆ ಉದಾಹರಿಸಿರುವ ಅಧಿಷ್ಠಾನಗಳ ದೃಷ್ಟಿಯಿಂದ ನೋಡಿದಾಗ ಕಪೋತಬಂಧ ಅಧಿಷ್ಠಾನ ಗಳ ರಚನೆಯು 'ಮಯಮತ'ಕ್ಕೂ, ಪದ್ಮಬಂಧ ಅಧಿಷ್ಠಾನವು 'ಸುಪ್ರಭೇದಾಗಮ'ಕ್ಕೂ, ಮಂಚಬಂಧವು, 'ಕಾಶ್ಯಪಶಿಲ್ಪ' ಕ್ಕೂ, ಶ್ರೀಬಂಧ ಅಧಿಷ್ಠಾನಗಳು 'ಕಾಶ್ಯ ಪಶಿಲ್ಪ' ಮತ್ತು 'ಮಾನಸಾರ' ಗ್ರಂಥಕ್ಕೂ ಹೆಚ್ಚು ಹತ್ತಿರವಾಗಿರುವಂತೆ ತೋರುತ್ತದೆ. ಪಾದಬಂಧ, ಪದ್ಮ ಬಂಧ (ಶಿಲ್ಪರತ್ನವನ್ನು ಬಿಟ್ಟು) ಅಧಿಷ್ಠಾನ ರಚನೆಯು ಯಾವುದೇ ಗ್ರಂಥಕ್ಕೂ ಅನ್ವಯಿಸಬಲ್ಲುದಾಗಿದ್ದರೆ, 'ಪ್ರತಿಬಂಧ' ಪ್ರಕಾರದ ಅಧಿಷ್ಠಾನ ರಚನೆಯು ಶಿಲ್ಪರತ್ನದ ವಿವರಗಳನ್ನು ಹೋಲುತ್ತದೆ.

## ಅಡಿ ಟಿಪ್ಪಣಿಗಳು

1) ಈ ಎಲ್ಲ ಗ್ರಂಥಗಳಲ್ಲೂ, ಮೊದಲ ಅಂಗಕ್ಕೆ ಪಾದುಕಾ/ಖುರ, ಜನ್ಮನ್, ಉಪಾನ – ಪದಗಳು ಬಳಕೆಯಲ್ಲಿವೆ ಶಿಲ್ಪರತ್ನ ಮತ್ತು ಮಯಮತದಲ್ಲಿ 'ಜಗತೀ' ಬದಲು 'ವಪ್ರ' ಪದವನ್ನು ಬಳಸಲಾಗಿದೆ.

2) ಈ ಪ್ರದೇಶದಲ್ಲಿ ಈ ರೀತಿಯ ಅಧಿಷ್ಠಾನವು ಅಪರೂಪ

3) ಕೆ.ವಿ. ಸೌಂದರರಾಜನ್ – 'Encylopedia of Indian Temple Architecture", Vol.1, Part-2, P.37

4) ಕಾಶ್ಯಪ ಗ್ರಂಥವು ಹೇಳಿರವ 'ಕರ್ಣ'ದ ಬದಲು ಇಲ್ಲಿ 'ಕಂಠ'ವನ್ನು ರಚಿಸಿದೆ

5) ಈ ಭಾಗಗಳನ್ನು ಪ್ರಸ್ತರದಲ್ಲಿರುವಂತೆ ರಚಿಸಬೇಕೆನ್ನುವ ಅರ್ಥದಲ್ಲಿ ಪ್ರಯೋಗಿಸಲಾಗಿದೆ

5ಎ) 'ಮಾನಸಾರ'ವು ಕಪೋತಕ್ಕೆ ಸಂವಾದಿಯಾಗಿ 'ಗೋಪಾನ' ಪದವನ್ನು ಬಳಸಿದೆ.

6) ಇದು ಕಪೋತಬಂಧ ರೀತಿಯ ಅಧಿಷ್ಠಾನವನ್ನು ಹೆಚ್ಚಾಗಿ ಹೋಲುವುದಾದರೂ ಕಪೋತದ ಮೇಲೆ ಆಲಿಂಗ, ಅಂತರಿತವನ್ನು ರಚಿಸಬೇಕೆಂದು ಹೇಳಿರುವುದರಿಂದ ಈ ಅಧಿಷ್ಠಾನಗಳು 'ಮಂಚಬಂಧ' ರೀತಿಯೆಂದು ಇಲ್ಲಿ ಪರಿಗಣಿಸಲಾಗಿದೆ

7) ಮಾನಸಾರದಲ್ಲಿ 'ಕುಮುದ'ದ ಬದಲು 'ಕುಂಭ'ವನ್ನೂ ಕಪೋತನ ಬದಲು ಗೋಪಾನವನ್ನು ಬಳಸಿದ್ದರೂ, ಅಧಿಷ್ಠಾನದ, ರಚನೆಯಲ್ಲಿ ಕುಮುದ ಮತ್ತು ಕಪೋತಗಳನ್ನು ಬಳಸಲಾಗಿದೆ

8) 'ಮಾನಸಾರ'ದಲ್ಲಿ ಕಂಪಕ್ಕೆ ಬದಲಾಗಿ ಕ್ಷೇಪಣ ಪದವನ್ನು ಬಳಸಲಾಗಿದೆ.

---

## ಗ್ರಂಥ ಋಣ:


1) 'Encylopedia of Indian Temple Architecture', Vol.1, Part-2. (Ed) - Michael W. Meister and M.A. Dhaky, Delhi-1986

2) 'Encylopedia of Hindu Architecture' - Manasara Series - Vol VII - P.K. Charya, NewDelhi - 1979

3) Bruno Dayens (Tr), 'Mayamata : An Indian Treatise on Housing Architecture and Indian Iconography', New Delhi - 1985

4) ಟಿ.ವಿ. ಮುತ್ತಾಚಾರ್ಯ – 'ಭಾರತೀಯ ಶಿಲ್ಪಸಾರ' ಬೆಂಗಳೂರು 1987

5) 'ಕಾಶ್ಯಪಶಿಲ್ಪ'

.ಎನ್. ಪ್ರಭಾಕರ

# ರ್ನಾಟಕದಲ್ಲಿ ವಿಮಾನ ನಾಗರ ಶೈಲಿ : ಹಾನುಗಲ್ಲಿನ ಗಣಪತಿ ೀವಾಲಯ

ಪ್ರಾಚೀನ ಕರ್ನಾಟಕದಲ್ಲಿ ಲಭ್ಯವಿರುವ ಔತ್ತ ಯ ಸಂಪ್ರದಾಯದ ದೇವಾಲಯಗಳನ್ನು ಎರಡು ತಗಳಲ್ಲಿಗುರುತಿಸಬಹುದಾಗಿದೆ. ಮೊದಲ ಪಂತವು ದಾಮಿ ಚಾಲುಕ್ಯರ ಕಾಲಕ್ಕೆ ಸೇರಿದ್ದು, ದಾಕ್ಷಿಣಾತ್ಯ ಪ್ರದಾಯದ ನಾಗರ, ದ್ರಾವಿಡ, ವೇಸರ ಶೈಲಿಗ ಂದಿಗೆ ಔತ್ತರೇಯ ಸಂಪ್ರದಾಯದ ಏಕೈಕಶೈಲಿಯಾ ಕಳಿಂಗ ಶೈಲಿಯನ್ನು ಗುರುತಿಸ ಬಹುದಾಗಿದೆ. ಡನೆಯ ಹಂತವು ಕಲ್ಯಾಣಿ ಚಾಲುಕ್ಯರ ಹಾಗೂ ೊಯ್ಸಳರ ಕಾಲದ್ದೆನಿಸಿದ್ದು ಔತ್ತರೇಯ ದ್ರಾವಿಡ ಿಯೊಡನೆ, ಭೂಮಿಜ, ಲತಿನ ಮತ್ತು ವಿಮಾನ ಗರ ಶೈಲಿಗಳನ್ನು ಕಾಣಬಹುದಾಗಿದೆ. ಮೊದಲ ತವು (ಕ್ರಿ.ಶ.7-8ನೆ ಶತಮಾನದಲ್ಲಿ ಗಮನಾರ್ಹವೆ ದ್ದು ಔತ್ತರೇಯ ಸಂಪ್ರದಾಯದ ಆರಂಭ ಹಂತ ದು ಗುರುತಿಸ ಬಹುದು. ಕಳಿಂಗ ಶೈಲಿಯ ಈ ಂದ ಔತ್ತರೇಯ ಸಂಪ್ರದಾಯದ ಪ್ರತಿನಿಧಿಯೆನಿ ದ್ದ ಒರಿಸ್ಸಾದಲ್ಲಿ ಲಭ್ಯವಿರುವ ಶಾಸ್ತ್ರಗ್ರಂಥಗಳನ್ನಾಧ ಈ ದೇವಾಲಯಗಳ ಅಧ್ಯಯನ ಮುಂದುವ ು ಬೇಕಾಗಿದೆ.

ಶಿವಮೊಗ್ಗ ಜಿಲ್ಲೆಯ ಕುಬಟೂರು ಶಾಸನವು ್ಯಾಣಿಚಾಲುಕ್ಯರ ಹಾಗೂ ಹೊಯ್ಸಳ ಕಾಲದಲ್ಲಿ ಟಗೊಂಡ ಔತ್ತರೇಯ ಶೈಲಿಗಳನ್ನು ಗುರುತಿಸಿದೆ. ಹಿಂದೆ ಚಾಲುಕ್ಯರ ಹಾಗೂ ಹೊಯ್ಸಳರ ಕಾಲದ ವಾಲಯಗಳನ್ನು ಹಿರಿಯ ವಿದ್ವಾಂಸರು ವೇಸರ ದು ಗುರುತಿಸಿದ್ದು, ವೇಸರವೆನ್ನುವ ಸಂಜ್ಞೆಯು ಸಡಿಲಗೊಂಡಿದ್ದು, ಔತ್ತರೇಯ ದ್ರಾವಿಡ ಶೈಲಿ ಂದು ಗುರುತಿಸುವುದು ಪ್ರಸ್ತುತವೆನಿಸಿದೆ. ಈ ಶೈಲಿ ಂದಿಗೆ ಭೂಮಿಜ, ಲತಿನ, ವಿಮಾನ ನಾಗರ ಿಯ ದೇವಾಲಯಗಳನ್ನು ಕಾಣಬಹುದು. ಲತಿನ ಗೂ ವಿಮಾನ ನಾಗರ ಶೈಲಿಗಳನ್ನು ಶಾಸನವು ್ವಾರೆ "ಪಿರಿದುಂ ನಾಗರ" ವೆಂದು ಗುರುತಿಸಿದ್ದು ಶೈಲಿಗಳ ಉದಾಹರಣೆಯಾಗಿ ಕೇವಲ ದೊಂದು ದೇವಾಲಯಗಳಿವೆ. ಔತ್ತರೇಯ ದ್ರಾವಿಡ ಿಯ ದೇವಾಲಯಗಳ ಜಂಘಾಭಾಗದಲ್ಲಿ ಈ ಶೈಲಿಗಳ ಶಿಖರ ಮಾದರಿಗಳನ್ನು ಅಲಂಕರಣಕ್ಕಾಗಿ ಕಡೆದಿರುವುದನ್ನು ಕಾಣಬಹುದು. ಈ ಶೈಲಿಗಳ ಗುರುತಿಸುವಿಕೆಯಲ್ಲಿ ಪ್ರೊ॥ ಢಾಕೆಯವರ ಪಾತ್ರ ಗಮನಾರ್ಹ. ಭೂಮಿಜ ಶೈಲಿಯ ಉದಾಹರಣೆಗಳು ಹೊಯ್ಸಳರ ಕಾಲದಲ್ಲಿ ಪೂರ್ಣಪ್ರಮಾಣದಲ್ಲಿ ಲಭ್ಯವಿದ್ದು ತುರುವೇಕೆರೆಯ ಮೂಲೆ ಶಂಕರೇಶ್ವರ, ನುಗ್ಗೇಹಳ್ಳಿಯ ಸದಾಶಿವ ದೇವಾಲಯಗಳು ಗುರುತಿಸಲ್ಪಟ್ಟಿವೆ. ಈ ದೇವಾಲಯಗಳನ್ನು ಪ್ರಾದೇಶಿಕ ವೈವಿಧ್ಯಗಳನ್ನೊಳಗೊಂಡ ಭುಮಿಜ ಶೈಲಿಯೆಂದು ಪ್ರೊ॥ ಢಾಕೆಯವರು ಉಲ್ಲೇಖಿಸುತ್ತಾರೆ. ನಾಗರ ಶೈಲಿಯು ಲತಿನ ಹಾಗೂ ವಿಮಾನ ನಾಗರ ಪ್ರಭೇದಗಳನ್ನೊಳಗೊಂಡಿದ್ದು ಇವು ಏಕಶೃಂಗ ಹಾಗೂ ಬಹುಶೃಂಗ ರಚನೆಗಳೆಂದು ಕ್ರಮವಾಗಿ ಗುರುತಿಸಬಹುದಾಗಿದೆ. ಲತಿನ ಅಥವಾ ಏಕಶೃಂಗ ರಚನೆಗೆ ಬೆಳಗಾವಿ ಜಿಲ್ಲೆಯ ಹತ್ತಿರಗಿಯಲ್ಲಿರುವ ಶಿಖರೇಶ್ವರ ದೇವಾಲಯವೂ, ವಿಮಾನನಾಗರ ಅಥವಾ ಬಹುಶೃಂಗ ರಚನೆಗೆ ಧಾರವಾಡ ಜಿಲ್ಲೆಯ ಹಾನುಗಲ್ಲಿನ ಗಣಪತಿ ದೇವಾಲಯವು ಉದಾಹರಣೆಗಳೆನಿಸಿವೆ. ಶಿಖರೇಶ್ವರ ದೇವಾಲಯದ ಶಿಖರವು ಸಾಕಷ್ಟು ಭಗ್ನಗೊಂಡಿದೆ. ಏಕಶೃಂಗ ಶಿಖರ ಮಾದರಿಗಳನ್ನು ಅಲಂಕರಣಕ್ಕಾಗಿ ಹಲವೆಡೆ ಭಿತ್ತಿಭಾಗಗಳಲ್ಲಿ ದೇವಾಲಯಗಳಲ್ಲಿ ರಚಿಸಿರುವು ದನ್ನು ಕಾಣಬಹುದು. ವಿಮಾನನಾಗರ ಶೈಲಿಯಹಾನುಗಲ್ಲಿನ ಗಣಪತಿ ದೇವಾಲಯದ ಮಂಟಪದ ಭಾಗವು ಕೆಲವೆಡೆ ಹಾಳಾಗಿದ್ದರೂ ಪರಿವೀಕ್ಷಣೆಗೆ ಯೋಗ್ಯವಾಗಿದೆ. ವಿಮಾನನಾಗರ ಶೈಲಿಯ ಶಿಖರ ಮಾದರಿಗಳನ್ನು ಅಲಂಕರಣಕ್ಕಾಗಿ ಕಡೆದಿರುವುದನ್ನು ಇನ್ನಿತರ ದೇವಾಲಯಗಳಲ್ಲಿ ಕಾಣಬಹುದು. ಪ್ರೊ॥ ಢಾಕೆಯವರು ಬಹುಶೃಂಗ ರಚನೆಯನ್ನು ಶೇಖರಿ ' ಮಾದರಿ ಎಂದು ಗುರುತಿಸುತ್ತಾರೆ. ಬಹುಶೃಂಗ ರಚನೆಯನ್ನು ' ಅಪರಾಜಿತ ಪೃಚ್ಛ' ಮುಂತಾದ ವಾಸ್ತು ಗ್ರಂಥಗಳು ಕೇಸರಿ ಆದಿ' ಇಪ್ಪತ್ತೆದು ಪ್ರಭೇಧಗಳು ಗುರುತಿಸುತ್ತವೆ. ಈ ಕೇಸರಿ ಮುಂತಾದ ಪ್ರಭೇದಗಳೆಂದು ಗುರುತಿಸುತ್ತವೆ. ಈ ಕೇಸರಿ ಮುಂತಾದ ಪ್ರಬೇಧಗಳು ಸ್ಥಪತಿಗಳ ದಿನನಿತ್ಯದ ಆಡುಭಾಷೆಯಲ್ಲಿ ಶೇಖರಿ ಯಾಗಿರಲು ಸಾಧ್ಯವಿದೆ. ಅಪರಾಜಿತ ಪೃಚ್ಛಾ ಗ್ರಂಥಕಾರನು ಕೇಸರಿ ಪ್ರಭೇದ

ಗಳನ್ನು ಗುರುತಿಸುವಾಗ ಶಿಖರೈರ್ವಿವಿಧಾಕಾರೈ:ನ ಏಕಾಂಡೈಶ್ಚ ವಿಭೂಷಿತಾನ್" ಎಂದು ಬಹುಶೃಂಗ ರಚನೆಗಳನ್ನು ಒಟ್ಟಿಗೆ ಸೇರಿಸಿದ್ದಾನೆ. ಕೇಸರಿ ಮುಂತಾದ ಪ್ರಭೇದಗಳು ಮುಲತಃ ಸಾಂಧಾರ ರಚನೆಗಾಗಿ ಎನಿಸಿದ್ದು ನಿರಂಧಾರ ರಚನೆಗಳಿಗೂ ಅನ್ವಯಿಸಬಹುದಾಗಿದೆ. ಬಹುಶೃಂಗ ರಚನೆಯನ್ನು ವಿಮಾನನಾಗರವೆಂದು ಗುರುತಿಸಲು ಪ್ರಾಸಾದಮಂಡನ ಗ್ರಂಥವು ನೆರವಾಗಿದೆ

. ಕೇಸರೀ ಪ್ರಮುಖಾಃ ಕರ್ಣೇ ವಿಮಾನಂ ಉರುಶೃಂಗಕಂ
ತಥೈವ ಮೂಲಶಿಖರಂ ಪಂಚ ಭೂಮಿ ವಿಮಾನಕಂ
ವಿಮಾನನಾಗರಾಜಾತಿಸ್ತದಾ ಪ್ರಾಜ್ಞೈರುದಾಹೃತಾ
ಏವಂ ಶೃಂಗೋರುಶೃಂಗಾಣಿ ಸಂಭವಂತಿಬಹೂನ್ಯಪಿ

ಈ ಹಿನ್ನೆಲೆಯಲ್ಲಿ ಹಾನುಗಲ್ಲಿನ ಗಣಪತಿ ದೇವಾಲಯವನ್ನು ಗಮನಿಸಬಹುದು. ಗಣಪತಿ ದೇವಾಲಯವು ಔತ್ತರೇಯ ದ್ರಾವಿಡ ಶೈಲಿಯ ತಾರಕೇಶ್ವರ ದೇವಾಲಯದೊಡನೆ ಈಶಾನ್ಯ ದಿಕ್ಕಿನಲ್ಲಿ ದಕ್ಷಿಣಕ್ಕೆ ಮುಖ ಮಾಡಿ ನಿಂತಿದೆ. ತಾರಕೇಶ್ವರ ದೇವಾಲಯದ ವಿಸ್ತಾರ ರಚನೆಯೊಂದಿಗೆ ಹೋಲಿಸಿದಾಗ ಗಣಪತಿ ದೇವಾಲವು ಗಾತ್ರದಲ್ಲಿ ಗೌಣವೆನಿಸಿದರೂ ಶಿಖರ ರಚನೆಯಿಂದಾಗಿ ಗಮನಾರ್ಹವೆನಿಸಿದೆ. ತಾರಕೇಶ್ವರ ದೇವಾಲಯದ ಜಂಘಾಭಾಗದಲ್ಲಿ ಬಹುಶೃಂಗರ ರಚನೆಯ ಶಿಖರ ಮಾದರಿಯನ್ನು ಕಾಣಬಹುದು. ಗಣಪತಿ ದೇವಾಲಯವು ಗರ್ಭಗೃಹ. ಕೋಲಿಕಾ ಅಥವಾ ಅಂತರಾಳ ಹಾಗೂ ಮಂಡಪ ರಚನೆಗಳನ್ನು ಹೊಂದಿದೆ. ಗರ್ಭಗೃಹವು ಪಚಾಂಗ ತಲಚ್ಛಂದವನ್ನು ಹೊಂದಿದ್ದು ಚತುರಶ್ರಾಕಾರವೆನಿಸಿದೆ. ಪ್ರಾಸಾದ ರಚನೆಯನ್ನು ಪೀಠ, ಜಂಘಾ, ಛಾದ್ಯ, ಶಿಖರ, ಆಮಲಸಾರ ಮತ್ತು ಕಳಶ ಎಂದು ವಿವಿಧ ಹಂತಗಳ್ಲಿ ಗುರುತಿಸಬಹುದು. ಪೀಠವು ಎರಡು ಹಂತಗಳ ರಚನೆಯನ್ನು ಹೊಂದಿದ್ದು ತುಸು ಎತ್ತರವುಳ್ಳದ್ದೆನಿಸುತ್ತದೆ. ಗರ್ಭಗೃಹದ ಭಾಗದಲ್ಲಿ ಪೀಠದ ಕೆಲವು ಸ್ತರಗಳು ನೆಲದಲ್ಲಿ ಸೇರಿದ್ದರೂ ಮಂಟಪದ ಭಾಗದಿಂದ ಗುರುತಿಸಲು ಸಾಧ್ಯವಾಗಿದೆ. ಪೀಠದ ಕೆಳಗೆ ಉಪಪೀಠಕ್ಕೆ ಸಮಾನದ ಭಿಟ್‌ಸ್ತರವಿದ್ದು, ನಂತರ ಖುರಕ, ಪದ್ಮಪತ್ರ, ಕಂಠ ಹಾಗೂ ಕಪೋತ ರಚನೆಯು ಪೀಠ ರಚನೆಯ ಮೊದಲಹಂತವೆನಿಸಿದೆ. ಈ ಹಂತವು ಮಂಡಪದ ಭಾಗಕ್ಕೂ ಆವರಿಸಿದ್ದು ಕಪೋತದ ನಂತರ ಗರ್ಭಗೃಹದಭಾಗದಲ್ಲಿ ಮಾತ್ರ ಎರಡನೆ ಹಂತದ ರಚನೆಯನ್ನು ಕಾಣಬಹುದು. ಈ ಹಂತದಲ್ಲಿ ಪುನಃ ಖುರಕ, ಪದ್ಮಪತ್ರ, ಕರ್ಣಿಕಾ ಮತ್ತು ಕಪೋತ ರಚನೆಗಳಿವೆ. ಎರಡು ಹಂತಗಳ ಮಧ್ಯಭಾಗದಲ್ಲಿ ದೇವಾಲಯದ ಎಡಭಾಗದಲ್ಲಿ ಪ್ರನಾಳ ರಚನೆಯಿದೆ. ಪದ್ಮಪತ್ರ, ಕರ್ಣಿಕಾ ಹಾಗೂ ಕಪೋತಗಳ ನಡುವೆ ತುಸು ಹೆಚ್ಚೆನಿಸುವ ಅಂತರಪತ್ರ ರಚನೆ ಇದೆ. ಇದು ಕಂಠ ರಚನೆಯೆನಿಸುವುದುಂಟು. ಕಪೋತದ ನಂತರ ಜಂಘಾಭಾಗವು ಅಲಂಕರಣವಿಲ್ಲದೆ, ಸ್ತಂಭದೋಪಾ ದಿಯಲ್ಲಿದ್ದು ಕುಂಭೀ, ಸ್ತಂಭ, ಭರಣ ಹಾಗೂ ಸ್ತಂಭಶೀರ್ಷ ಭಾಗಗಳನ್ನು ಗುರುತಿಸಬಹುದು. ಶೀರ್ಷದ ನಂತರ ಛಾದ್ಯ ರಚನೆಯಿದೆ. ಛಾದದ ಮುಂಚಾಚು ಹೆಚ್ಚು ಬಾಗಿಲ್ಲವೆಂದು ಗಮನಿಸಬಹುದು. ತದನಂತರ ಶಿಖರ ಭಾಗವನ್ನು ಗುರುತಿಸಬಹುದು. ಶಿಖರವು ಇಪ್ಪತ್ತೈದು ಶೃಂಗಗಳನ್ನೊಳಗೊಂಡಿದ್ದು ಮಂದರ' ಎಂಬ ಪ್ರಭೇದವೆಂದು ಗುರುತಿಸಲ್ಪಡುತ್ತವೆ.

ದ್ವೇದ್ವೇ ಕರ್ಣೇ ತಥಾಭದ್ರೇ ಶೃಂಗಂ ಪ್ರತಿರಥೇಥವಾ
ಏವಂ ವಿಧಃ ಪ್ರಕರ್ತವ್ಯೋ ಮಂದತಸ್ತುಶಿವಾತ್ಮಜಃ

ಗರ್ಭಗೃಹದ ತಲಚ್ಛಂದವು ಪಂಚಾಂಗವೆನಿಸಿದ್ದು ಕರ್ಣ, ಪ್ರತಿರಥ ಹಾಗೂ ಭದ್ರಭಾಗಗಳನ್ನು ಹೊಂದಿದೆ. ಶಿಖರ ರಚನೆಯಲ್ಲಿ ಭದ್ರಭಾಗ ಹಾಗೂ ಕರ್ಣಭಾಗಗಳಲ್ಲಿ, ಉರುಶೃಂಗಗಳೂ, ಕರ್ಣಶೃಂಗಗಳೂ ರಚಿಸಲ್ಪಟ್ಟಿವೆ. ಈ ಭಾಗಗಳಲ್ಲಿ ಎರಡೆರಡು ಶೃಂಗಗಳೂ ಪ್ರತಿರಥದ ಭಾಗದಲ್ಲಿ ಒಂದೊಂದು ಶೃಂಗಗಳಿವೆ. ಇದರಿಂದ ಮೂಲ ಶೃಂಗವನ್ನು ಸುತ್ತುವರೆದಂತೆ ಕರ್ಣಭಾಗದಲ್ಲಿ ಎಂಟು, ಭದ್ರಭಾಗದಲ್ಲಿ ಎಂಟು, ಪ್ರತಿರಥಭಾಗದಲ್ಲಿ ಎಂಟು, ಮೂಲಶೃಂಗವೂ ಸೇರಿದಂತೆ ಇಪ್ಪತ್ತೈದು ಶೃಂಗ ಗಳೆನಿಸಿದೆ. ಇದು ಮಂದರ ಪ್ರಭೇದದ ಲಕ್ಷಣವೆನಿಸಿದೆ. ಶೃಂಗಗಳ ಮೇಲ್ಭಾಗವು ಹೆಚ್ಚಿನ ಅಲಂಕರಣದಿಂದ ಕೂಡಿರದೆ ಸರಳ ರೀತಿಯದು. ಶೃಂಗಗಳ ಮುಂದುಗಡೆ ಮೇಲ್ಭಾಗದಲ್ಲಿ ಕೀರ್ತಿಮುಖ ರಚನೆಯಿದೆ. ಕಳಶವು ತುಸು ವಿಚಿತ್ರವೆನಿಸುವ ಗುಬಟೆ ಯಾಕಾರದಲ್ಲಿದೆ. ಅಪರಾಜಿತಪೃಚ್ಛ' ಗ್ರಂಥಕಾರನು ಕಳಶಕ್ಕೆ ಬದಲಾಗಿ ಕೆಲವೆಡೆ ಆಕಾಶಲಿಂಗವೆಂಬ ಪದವನ್ನು ಬಳಸಿದ್ದಾನೆ. ಇದು ಕಳಶದ ಪ್ರಭೇದವೆನ್ನಲು ಸಾಧ್ಯವಿದೆ.ಈ ಗುಬಟೆಯಾಕಾರದ ಕಳಶವು ಆಕಾಶಲಿಂಗವೆಂದು ಗುರುತಿಸಲು ಸಾಧ್ಯವಿದೆ. ಆದರೆ ಮತ್ತಷ್ಟು ಸಾಕ್ಷಾಧಾರಗಳು ಬೇಕು.

ಗರ್ಭಗೃಹಕ್ಕೆ ಹೊಂದಿಕೊಂಡಂತೆ ಕೋಲಿಕಾ ಅಥವಾ ಅಂತರಾಳ ರಚನೆಯಿದೆ. ಗರ್ಭಗೃಹದ ಬಾಗಿ

ವಾಡವು ಚತುಃಶಾಖೆಯುಳ್ಳದ್ದು. ಶಾಖಾ ರಚನೆಯು ಳವಾಗಿದ್ದು ಅಲಂಕರಣಗೊಂಡಿಲ್ಲ. ಶಾಖೆಗಳ ಧ್ಯದಲ್ಲಿ ರೂಪಸ್ತಂಭವಿದ್ದು ಅಲಂಕೃತವಾಗಿದೆ. ಾಟಬಿಂಬದಲ್ಲಿ ಗಣೇಶನ ಉಬ್ಬು ಕೆತ್ತನೆಯಿದೆ. ಪಸ್ತಂಭ ಹಾಗೂ ಶಾಖೆಗಳ ಕೆಳಭಾಗವು ಉಬ್ಬು ನೆಗಳಿಂದ ಕೂಡಿದೆ. ಉದುಂಬರ ಅಥವಾ ಹೊಸ್ತಿಲ ಂದೆ ಚಂದ್ರ ಶಿಲೆಯಿದೆ. ಅಂತರಾಳದ ಮೇಲ್ಭಾಗ ಲ್ಲಿ ಶುಕನಾಸ ರಚನೆಯಿದ್ದು ಇದರಅಲಂಕರಣವೂ ಷ್ಟವಾಗಿದೆ. ಅಂತರಾಳದ ನಂತರ ಹದಿನಾರು ಸ್ತಂಭ ಮಂಡಪವನ್ನು ಕಾಣಬಹುದು. ಗರ್ಭಗೃಹದಲ್ಲಿ ಭಾಗದ ಜಂಘಾ ರಚನೆಗೆ ಹೊಂದಿಕೊಂಡಂತೆ ದರ ಗಣಪತಿ ವಿಗ್ರಹವಿದೆ. ದೇವಾಲಯದ ಅಳತೆ, ಾರಗಳೊಂದಿಗೆ ಗಮನಿಸಿದಲ್ಲಿ ಮೂಲ ವಿಗ್ರಹವೆ ವಲ್ಲಿ ಅನುಮಾನ ಮೂಡುತ್ತದೆ. ಗರ್ಭಗೃಹದ ಗಿಲುವಾಡದ ಲಲಾಟಬಿಂಬದಲ್ಲಿರುವ ಗಣಪತಿ ಗ್ರಹದಿಂದ ಇದು ಗಣಪತಿ ದೇವಾಲಯವೆನ್ನಿಸಿತೇ? ಲಂಕಪವಾಗಿ ಗಮನಿಸಬೇಕು. ಮಂಡಪ ರಚನೆ ಲ್ಲಿ ಮಧ್ಯದ ನಾಲ್ಕು ಸ್ತಂಭಗಳು, ಅಂತರಾಳದ ಂಭಾಗದ ಎರಡು ಸ್ತಂಭಗಳು ಪೂರ್ಣ ಪ್ರಮಾಣ ಲ್ಲಿ ವ್ಯಕ್ತಗೊಂಡಿದೆ. ಗರ್ಭಗೃಹದ ಭಿತ್ತಿಭಾಗಕ್ಕೆ ಂದಿಕೊಂಡಂತೆ ಇಕ್ಕೆಲಗಳಲ್ಲಿರುವ ಎರಡು ಸ್ತಂಭ ು ಅರೆಗಂಭಗಳು. ಇನ್ನುಳಿದ ಹೊರಭಾಗದ ಸ್ತಂಭ ು ಕಕ್ಷಾಸನದೊಂದಿಗೆ ಸೇರಿವೆ. ಮಂಡಪದ ಪೀಠ ನೆಯು ಗರ್ಭಗೃಹದ ಪೀಠದಲ್ಲಿರುವಂತೆ ಮೊದಲ ತದ ಸ್ತರಗಳನ್ನು ಹೊಂದಿದೆ. ನಂತರ ಕಕ್ಷಾಸನ ರಚ ಯನ್ನು ಗಮನಿಸಬಹುದು. ಕಕ್ಷಾಸನ ರಚನೆಯಲ್ಲಿ ಜಸೇನ, ವೇದಿಕೆ, ಆಸನಪಟ್ಟು ಮತ್ತು ಮತ್ತವಾರ ಸ್ತರಗಳನ್ನು ಗುರುತಿಸಬಹುದು. ಕಕ್ಷಾಸನದ ಹೊರ ಭಾಗದಲ್ಲಿ ಅಲಂಕರಣವಿದ್ದು ಸ್ತಂಭಿಕೆ ಅಥವಾ ಶಲಾಕೆ ಗಳ ಮೇಲೆ ಲತಿನಜಾತಿಯ ಏಕ ಶೃಂಗ ರಚನೆಯನ್ನು ಕಾಣಬ ಹುದು. ಈ ರೀತಿ ಅಲಂಕೃತಗೊಂಡಿದ್ದನ್ನು ಹಲ ವಾರು ದೇವಾಲಯಗಳಲ್ಲಿ ಕಾಣಬಹುದು. ಕಕ್ಷಾಸನಕ್ಕೆ ಹೊಂದಿ ಕೊಂಡಂತೆ ಸ್ತಂಭಗಳಿದ್ದು ಸ್ತಂಭಶೀರ್ಷದ ನಂತರ ಛಾದ್ಯರ ಚನೆಯಿದೆ. ಮಂಡಪದ ಆವರಣದಲ್ಲಿ ಛಾದ್ಯದ ಬಾಗುವಿಕೆ ಗರ್ಭಗೃಹದ ಭಾಗಕ್ಕಿಂತ ತುಸು ಹೆಚ್ಚಾಗಿದೆ. ಮಂಡಪದ ಮುಂಭಾಗದಲ್ಲಿ ಪ್ರವೇಶಾವಕಾಶವಿದ್ದು ಸೋಪಾನ ರಚನೆ ಯನ್ನು ಹೊಂದಿದೆ. ಛಾದ್ಯದ ನಂತರ ಕಪೋತ ರಚನೆ ಯಿದ್ದು ಪುನಃ ಇತ್ತೀಚಿನ ಕೈಪಿಡಿ ಗೋಡೆಯಿದೆ. ಮಂಡಪದ ಮಧ್ಯೆ ವಿತಾನರಚನೆಯಿದೆ. ವಿತಾನ ರಚ ನೆಯು ತಾರಕೇಶ್ವರ ದೇವಾಲಯದ ಮಂಡಪದಲ್ಲಿರುವ ವಿತಾನ ರಚನೆಯನ್ನು ಹೋಲು ತ್ತದೆ. ತಾರಕೇಶ್ವರ ದೇವಾಲಯದ ಮಂಡಪಗಳು ಗುಜರಾತ್ ಪ್ರಾಂತ್ಯದ ದೇವಾಲಯಗಳನ್ನು ಹೋಲು ತ್ತವೆ ಎಂದು ಗಮನಿಸ ಬಹುದು. ತಾರಕೇಶ್ವರ ದೇವಾ ಲಯದ ಮುಂಭಾಗದ ಮಂಡಪದ ಮೇಲೆ ಸಂವರಣ ರಚನೆಯನ್ನು ಗಮನಿಸ ಬಹುದು. ಸಂವರಣ ರಚನೆಯು ಗುಜರಾತಿನ ದೇವಾ ಲಯಗಳ ಅವಿಭಾಜ್ಯ ಅಂಗವೆನಿ ಸಿದೆ. ಸಂವರಣ ರಚನೆಯನ್ನು ಅಪರಾಜಿತ ಪೃಚ್ಛ' ಹಾಗೂ ಪ್ರಸಾದ ಮಂಡನ ಗ್ರಂಥಗಳು ವಿವರಿಸಿವೆ. ಕರ್ನಾಟಕದ ದೇವಾ ಲಯಗಳಲ್ಲಿ ದಾಕ್ಷಿಣಾತ್ಯ ಸಂಪ್ರ ದಾಯದಂತೆ ಮಂಡಪ ರಚನೆಯ ತ್ರಿವರ್ಣಗಳು ಮುಂದುವರೆದಿದ್ದು ತಾರಕೇಶ್ವರ ದೇವಾಲಯದಲ್ಲಿ ಸಂವರಣ ಸೇರಿದ್ದು ಅಪುರೂಪದ ಲಕ್ಷಣವೆನಿಸಿದೆ. ತಾರಕೇಶ್ವರ ಹಾಗೂ ಗಣಪತಿ ದೇವಾಲಯಗಳ ನಿರ್ಮಾಣದಲ್ಲಿ ಒಂದೇ ಗುಂಪಿನ ಕಂಡರಣೆಕಾರರು ದುಡಿದರು ಎಂದು ಹೇಳಲು ಸಾಧ್ಯವಿದೆ.

---

## ಆಧಾರ ಗ್ರಂಥಗಳು:


1) ಎಂ.ಎ.ಢಾಕೆ, 'ದಿ ಇಂಡಿಯನ್ ಟೆಂಪಲ್ ಫಾರ್ಮ್ಸ್ ಇನ್ ಕರ್ನಾಟಕ', ನ್ಯೂಡೆಲ್ಲಿ. 1977

2) ಪಿ.ಎ. ಮಂಕದ್ (ಸಂ), ' ಅಪರಾಜಿತ ಪೃಚ್ಛ', ಓರಿಯಂಟಲ್ ಇನ್ಸಿಟ್ಯೂಟ್, ಬರೋಡಾ, 1950.

3) ಭಗವಾನ್‌ದಾಸ್ ಜೈನ್ (ಸಂ), 'ಪ್ರಸಾದ ಮಂಡನ', ಜೈಪುರ, 1963.

4) ಬೆಳಗಾಂ ಡಿಸ್ಟ್ರಿಕ್ ಗೆಜೆಟಿಯರ್.

ಡಾ|| ಜ್ಯೋತ್ಸ್ನಾ ಕಾಮತ

# ವಾಸ್ತು, ಶಿಲ್ಪ, ಭಿತ್ತಿಚಿತ್ರಗಳಲ್ಲಿ ತೇರು

ಪ್ರತಿ ಊರಿನ ಆರಾಧ್ಯದೇವತೆ, ಉತ್ಸವ ಮೂರ್ತಿಯ ರೂಪದಲ್ಲಿ ಊರಲ್ಲಿ ಸಂಚರಿಸುವುದುಂಟು. ಅದರಂತೆ ಮುದುಕರಿಗೆ, ಚಿಕ್ಕ ಮಕ್ಕಳಿಗೆ ಅನಾರೋಗ್ಯವಂತರಿಗೆ, ಅಶಕ್ತರಿಗೆ, ವೇಳೆಯ ಅಭಾವ ವಿರುವವರಿಗೆ. ಪ್ರವೇಶ ನಿಷಿದ್ಧವಿದ್ದ ದುರ್ದೈವಿಗಳಿಗೆ, ದೇವದರ್ಶನಕ್ಕೆ ದೇವಾಲಯಕ್ಕೆ ಹೋಗಲಾಗದ್ದರಿಂದ, ವರ್ಷಕ್ಕೊಮ್ಮೆಯಾದರೂ ಅವರ ಮನೆಯ ಬಾಗಿಲಿನಲ್ಲಿಯೇ ದೇವರು ದರ್ಶನ ಕೊಡುವುದರ ಸಲುವಾಗಿ ರಥೋತ್ಸವದ ಏರ್ಪಾಡಾಗಿದೆ. ಅಂತೆಯೇ ತೇರು ಎಂದರೆ ನಾಲ್ಕು ಗಾಲಿ ಜೋಡಿಸಿದ ಚಿಕ್ಕ ದೇವಾಲಯದಂತಿರುತ್ತದೆ. ದೇವಾಲಯದ ವಿವಿಧ ಭಾಗಗಳನ್ನು ತೇರಿನಲ್ಲಿಯೂ ಗುರುತಿಸಬಹುದು. ಚಿತ್ತಾರಗಳು, ಚಿತ್ರಪತ್ರಿಕೆಗಳು, ರಾಮಾಯಣ, ಮಹಾಭಾರತದ ಸನ್ನಿವೇಶಗಳು, ಸಾಮಾಜಿಕ ಜೀವನ, ಶೃಂಗಾರಚಿತ್ರಗಳು ತೇರಿನ ಹೊರಮೈಯಲ್ಲಿ ರೂಪಗೊಂಡಿರುತ್ತದೆ. ಈ ಭಾಗವನ್ನು ಬಹುಕಾಲ ಬಾಳುವಂತೆ ಕೊರಡಿನಲ್ಲಿ ರಚಿಸುವುದು ವಾಡಿಕೆ. ಐಶ್ವರ್ಯವಂತ ದೈವತಗಳ ತೇರುಗಳಲ್ಲಿ ಬೆಳ್ಳಿ, ಬಂಗಾರಗಳ ತಗಡುಗಳನ್ನು ಹೊದಿಸುವವರೂ ಇಲ್ಲದಿಲ್ಲ. ಉತ್ಸವ ಮೂರ್ತಿಯನ್ನು ಸ್ಥಾಪಿಸಲಾಗುವ ಗರ್ಭಗುಡಿಯನ್ನು ಚಿತ್ರಫಲಕಗಳ ಜೋಡಣೆಯಿಂದ ನಿರ್ಮಿಸಲಾಗುತ್ತದೆ. ಗೋಲಾಕಾರದ ಗೋಪುರವನ್ನು ವಿವಿಧ ವರ್ಣದ ಪತಾಕೆಗಳಿಂದ ಅಲಂಕರಿಸಲಾಗುತ್ತದೆ. ಹಿತ್ತಾಳೆ ಇಲ್ಲವೇ ಕಂಚಿನ ಕಳಶವನ್ನು ಜೋಡಿಸಲಾಗಿರುತ್ತದೆ.

ಚಲಿಸುವದಕ್ಕಾಗಿಯೇ ನಿರ್ಮಿಸಿದ ತೇರು, ಕರ್ನಾಟಕದ ವಾಸ್ತುಶಿಲ್ಪ, ಭಿತ್ತಿಚಿತ್ರಗಳಲ್ಲಿ ಸ್ಥಾಯಿಯಾಗಿರುವಂತೆಮಾಡಿದ್ದು ನಮ್ಮ ಕಲಾಕಾರರ ವೈಶಿಷ್ಟ್ಯ. ಹಂಪೆಯ ವಿಜಯ ವಿಠ್ಠಲ ದೇವಾಲಯದ ಆವಾರದಲ್ಲಿ ಎರಡನೇ ದೇವರಾಯನ ಕಾಲದಲ್ಲಿ (ಕ್ರಿ.ಶ. 1422-46) ನಿರ್ಮಾಣವಾದ ಶಿಲಾರಥವಿದೆ. ಹಿಂದೊಮ್ಮೆ ದಕ್ಷಿಣಶೈಲಿಯ ಗೋಪುರ ಇದಕ್ಕೆ ಇತ್ತು, ಎನ್ನವುದು ಹಳೆಯ ಛಾಯಾಚಿತ್ರಗಳಿಂದ ಅರಿಯಬಹುದಾಗಿದೆ. ಅದು ಇಟ್ಟಂಗಿಯಿಂದ ರಚಿತ ವಾದದ್ದರಿಂದ ಬಿದ್ದು ಹೋಗಿ ಶಿಲೆಯ ಭಾಗ ಮಾತ್ರ ಉಳಿದುಕೊಂಡಿದೆ. ಪ್ರವೇಶದ್ವಾರದ ಅಕ್ಕಪಕ್ಕದಲ್ಲಿ ಜೋಡಿ ಆನೆಗಳಿದ್ದು ಎಡಬಲದಲ್ಲಿ ತಿರುಗಿಸಬಹುದಾದಂತಹ ಎರಡು ಜೋಡಿ ಗಾಲಿಗಳಿವೆ. ಇವುಗಳ ಮೇಲೆ ಹೂ ಬಳ್ಳಿಗಳನ್ನು ಅಂದವಾಗಿ ಕೊರೆಯಲಾಗಿದೆ. ಸಾಧ್ಯ ವಿದ್ದಲ್ಲೆಲ್ಲ ಚಿತ್ರಪಟ್ಟಿಕೆಗಳನ್ನು ಜೋಡಿಸಿ ಅಲಂಕರಿಸಿದ್ದಾರೆ. ಗರ್ಭಗುಡಿಯಲ್ಲಿ ಗರುಡನ ವಿಗ್ರಹವಿದೆ. ವಿಶೇಷ ಸಮಾರಂಭದಲ್ಲಿ ವಿಠ್ಠಲನ ವಿಗ್ರಹದ ರಥೋತ್ಸವ ಏರ್ಪಡುತ್ತಿತ್ತೊ ಏನೋ! ಶಿಲಾರಥದ ಭಾರವಾದ ಗಾಲಿಗಳನ್ನು ತಿರುಗಿಸಿದರೆ ಅವರ ಆಕಾಂಕ್ಷೆಗಳು ಈಡೇರುತ್ತವೆ, ಎಂದು ಇಂದಿಗೂ ನಂಬಲಾಗುತ್ತದೆ.

ಉತ್ತರ ಕನ್ನಡ ಜಿಲ್ಲೆಯ ಭಟಕಳದಲ್ಲಿರುವ ವಿಜಯನಗರ ಕಾಲದ ಕೇತಪ್ಪಯ್ಯ ದೇವಾಲಯ (ಕ್ರಿ.ಶ.ಸು1546) ದ ಹೊರಜಗತಿಯ ಮೇಲೆ ತೇರನ್ನು ಎಳೆಯುವ ಉಬ್ಬು ಚಿತ್ರವಿದೆ. ಎತ್ತರವಿಲ್ಲದ ತೇರನ್ನು ಹಗ್ಗದ ನೆರವಿನಿಂದ ಭಕ್ತಾದಿಗಳು ಎಳೆಯುತ್ತಿದ್ದಾರೆ. ಇವರೆಲ್ಲ ನಡುವಿಗೆ ಅಡ್ಡ ಪಂಚೆ ಸುತ್ತಿಕೊಂಡು ತಲೆಗೆ ರುಮಾಲು ಧರಿಸಿದ್ದಾರೆ. ಇಂದಿಗೂ ಆ ಪ್ರದೇಶದಲ್ಲಿ ಬೀಡು ಬಿಟ್ಟ ಗೊಂಡರು, ಗ್ರಾಮ ಒಕ್ಕಲಿಗರು, ಸೇರುಗಾರರು ಇದೇ ರೀತಿಯ ಬಟ್ಟೆಗಳನ್ನು ಧರಿಸುವ ಪರಿಪಾಠ ಇಟ್ಟುಕೊಂಡಿದ್ದಾರೆ. ತೇರಿನ ಹಿಂದುಗಡೆ ತಲೆಗೆ ಕುಲಾವಿ ಧರಿಸಿದ ಮುಕಾದಂನು ತೇರಿನ ದಿಕ್ಕುಮತ್ತು ವೇಗವನ್ನು ನಿಯಂತ್ರಿಸಲು ಪೆಟಮಣೆ ಹಿಡಿದು ಸಾಗುತ್ತಿದ್ದಾನೆ. ಇಂದಿಗೂ ತೇರಿಗೆ ತಡೆಹಾಕುವ ಇಂಥ ಸಾಧನ ಬಳಕೆಯಲ್ಲಿದೆ, ಎಂದು ಇಲ್ಲಿ ಸ್ಮರಿಸಿಕೊಳ್ಳಬಹುದು. ಅದೇ ಜಿಲ್ಲೆಯ ವೆಂಕಟಾಪುರದ ವೆಂಕಟರಮಣ ದೇವಾಲಯ (ಕ್ರಿ.ಶ.1661) ದ ಗರ್ಭಗುಡಿಯ ಹೊರಗಡೆಯಲ್ಲಿ ಸಾಲಂಕೃತ ತೇರಿನ ಉಬ್ಬು ಚಿತ್ರವಿದೆ. ಇದನ್ನು ನೋಡುತ್ತಿದ್ದಂತೆ ಕರ್ನಾಟಕದ ಕರಾವಳಿಯಲ್ಲಿ ಇಂದಿಗೂ ಪ್ರಚಲಿತವಿದ್ದ ತೇರುಗಳು ಕಣ್ಣಿಗೆ ಕಟ್ಟಿದಂತಾಗುತ್ತದೆ. ವೆಂಕಟಾಪುರದಲ್ಲಿ ವಿಷ್ಣುವಿನ ವಿಗ್ರಹವನ್ನು ಉತ್ಸವ ಮೂರ್ತಿಯಾಗಿ ಬಳಸಲಾಗಿದೆ.

ಶ್ರವಣಬೆಳ್ಗೊಳದ ಜೈನಮಠ (ಕ್ರಿ.ಶ 1825) ದ ಒಳಾಂಗಣವನ್ನು ಸುತ್ತುವರಿದ ಗೋಡೆಗಳಲ್ಲಿ ರಥೋ

ವ ಆಚರಣೆಯ ಭಿತ್ತಿಚಿತ್ರಗಳು ಅಚ್ಚಳಿಯದೇ ಉಳಿದು ಂಡಿವೆ. ಅಂತಹದೇ ತೇರು ಇಂದಿಗೂ ಅಲ್ಲಿ ಬಳಕೆಯ ದೆ. ಅದೇ ತೇರು ಈಗಲೂ ಇದ್ದರೂ ಆಶ್ಚರ್ಯವಿಲ್ಲ! ಹಗಳಿಂದ ಅಲಂಕೃತ ಗರ್ಭಗುಡಿಯಲ್ಲಿ ಚತುರ್ಭುಜೆ ನ್ಮಾವತಿಯ ವಿಗ್ರಹ ಸ್ಥಾಪಿಸಿ, ರುದ್ರಾಕ್ಷಿಮಾಲೆಗಳನ್ನು ರಿಸಿದ ಈರ್ವರು ಪುಜಾರಿಗಳು ಪೂಜಾನಿರತರಾಗಿ ದ್ದರೆ. ಗೋಪುರವನ್ನು ಮಹಡಿಗಳಂತೆ ರಚಿಸಿ ಅವುಗ ದ ಭಗವಾ ಝೇಂಡಾಗಳನ್ನು ಹಾರಿಸಲಾಗಿದೆ. ಂಬದಿಗೆ ಭಕ್ತಾದಿಗಳು ಗಾಲಿಗಳ ಅಡಿಸಿಕ್ಕು ನುಚ್ಚು ರಾಗದಂತೆ ರಕ್ಷಿಸಲು ಮೂವರು ಪೈಲವಾನರು ತ್ತು ಹೊಡಿದು ನಿಂತಿದ್ದಾರೆ. ಅವರ ಎಡ ಮತ್ತು ಲಬದಿಗೆ ಆನೆ ಮತ್ತು ಒಂಟೆಗಳ ಮೇಲೆ ನಗಾರಿಗ ನ್ನು ಏಕಪ್ರಕಾರವಾಗಿ ಬಡಿಯಯಲಾಗುತ್ತಿದೆ. ತೇರಿನ ಮರು ಜೈನ ಮಠದ ಹಿರಿಯ ಗುರುಗಳು ಕಾಲುನ ಗೆಯಲ್ಲಿ ಹೊರಟಾಗ ಕಿರಿಯಗುರುಗಳು ಅವರನ್ನು ರಮಾಡಿಕೊಳ್ಳುತ್ತಿದ್ದಾರೆ. ಅವರ ಉಡುಪು ವಿಶಿಷ್ಟರೀ ಯಾಗಿದೆ. ತಲೆಗೆ ಟೋಪಿ ಧರಿಸಿ, ಧೋತರವನ್ನು ಚ್ಚು ನೆರಿಗೆಗಳು ಬರುವಂತೆ ಉಟ್ಟು ಕೈಯಲ್ಲಿ ವಿಲು ಗರಿಯ ಪಿಂಛ ಹಿಡಿದಿದ್ದಾರೆ, ಹಿರಿಯ ಗುರು ಳು ಪಾದುಕೆಗಳನ್ನು ಧರಿಸಿದ್ದರೆ, ಕಿರಿಯರು ಬರಿಗಾ ಲ್ಲಿ ಇದ್ದಾರೆ. ಅವರ ವರ್ಚಸ್ಸು, ಸ್ಥಾನಮಾನಗಳನ್ನು ೂಚಿಸುವ ಸಲುವಾಗಿ ಛತ್ರ, ಚಾಮರಗಳನ್ನು ಹಿಡಿ ವರು ಮೊದಲಾದವರನ್ನು ಸೇರಿಸಲಾಗಿದೆ. ಈ ೇವಕರೆಲ್ಲ ನಿಲುವಂಗಿ ತೊಟ್ಟು, ಸೊಂಟಕ್ಕೆ ಪಟ್ಟಿ ಗಿದುಕೊಂಡು ತಲೆಗೆ ರುಮಾಲು ಸುತ್ತಿಕೊಂಡಿ ದ್ದರೆ. ಈರ್ವರು ರಾಜದಂಡ ಕೈಯಲ್ಲಿ ಹಿಡಿದು. ದ್ಮಾವತಮ್ಮನವರ, ಶ್ರೀ ಗುರುಗಳ ಹಿರಿಮೆ ಾಡುತ್ತ ಭೋಪರಾಕು ಹಾಕುತ್ತಿದ್ದಾರೆ.

ಅವರ ಮುಂದೆ ವಿವಿಧ ಆಕಾರದ ಪತಾಕೆಗಳನ್ನು ಡಿದವರು, ಸಿಂಹ, ಮತ್ಸ್ಯ, ಶಂಖಗಳ ಲಾಂಛನ ೊತ್ತವರು ಸಾಲಾಗಿ ಹೊರಟಿದ್ದಾರೆ. ಸನಿಹದಲ್ಲಿ ಟಾಧಾರಿ ಸಾಧು ಓರ್ವನು ಕೈಯಲ್ಲಿ ಟಿಪರಿ ರಿಸಿ ಮನಸ್ವಿ ನರ್ತಿಸುವುದರಲ್ಲಿ ಮಗ್ನನಾಗಿದ್ದಾನೆ. ಹಂತದಲ್ಲಿ ಪಟ್ಟಿಕೆಯಲ್ಲಿ ನರ್ತಕಿಯೋರ್ವಳು ನರ್ತಿ ವಾಗಿ ಹಿನ್ನೆಲೆಯಾಗಿ ಹಾಡುಗಾತಿ, ಮೃದಂಗ ನುಡಿ ವವ, ತಾಳ ಹಿಡಿದವ, ತಂಬೂರಿ ಮಿಟುವವ ದ್ದಾರೆ. ಸನಿಹದಲ್ಲಿ ದೀವಟಿಗೆ ಹಿಡಿದ ಓರ್ವನಿದ್ದಾನೆ. ಲ್ಲಕ್ಕೂ ಮುಂದೆ ಬಜಂತ್ರಿ ಮೇಳ ಹೊರಟಿದೆ. ಕಿರು ಟ್ಟೆ ಧರಿಸಿದ ಇಬ್ಬರು ತಮ್ಮಟೆ ಬಾರಿಸಿದರೆ, ಹಬ್ಬದ ಉಡುಪು ಧರಿಸಿದ ಮೂವರು ನಾಗಸ್ವರ ಊದುತ್ತಿದ್ದಾರೆ. ಜೊತೆಗಿದ್ದವನು ಡೋಲು ನುಡಿಸುತ್ತಿದ್ದಾನೆ. ಇದರ ಕೆಳ ಹಂದರದಲ್ಲಿ ಭಕ್ತಾದಿಗಳು ಎರಡು ಹಗ್ಗಗಳನ್ನು ಹಿಡಿದು ತೇರನ್ನು ಎಳೆಯಲು ಸಿದ್ಧರಾಗಿ ನಿಂತಿದ್ದಾರೆ. ಜನಜಂಗುಳಿಯನ್ನು ನಿಯಂತ್ರಿಸುವುದಕ್ಕಾಗಿ ಅಲ್ಲಲ್ಲಿ ಬೆತ್ತ ಹಿಡಿದ ಜನರಿದ್ದಾರೆ. ಅವರು ಚಿತ್ತಾರದ ಬಟ್ಟೆಯ ನಿಲುವಂಗಿ, ಪಾಯಜಮಾ ತೊಟ್ಟು ನಡುವಿಗೆ ಸೆಲ್ಲೆ ಬಿಗಿದುಕೊಂಡು, ತಲೆಗೆ ರುಮಾಲು ಸುತ್ತಿಕೊಂಡಿದ್ದಾರೆ. ಸಕಲರೂ ಬರಿಗಾಲಿನಲ್ಲಿ ಇರುವುದು ಗಮನಾರ್ಹ. ತೇರಿನ ಆಗಮನವನ್ನು ಕೇರಿಗೆಲ್ಲ ಸಾರಲು ಕಹಳೆ, ತುತ್ತೂರಿ, ನಗಾರಿಗಳು ಏಕಪ್ರಕಾರವಾಗಿ ಮೊಳಗುತ್ತವೆ.

ರಥೋತ್ಸವದ ವಿವರಗಳನ್ನು ಸೊಗಸಾಗಿ ಚಿತ್ರಪಟ್ಟಿಕೆಯಲ್ಲಿ ಒಡಮೂಡಿಸಲಾಗಿದೆ. ಹಳಬರು, ಹೆಂಗಳೆಯರು, ತಮ್ಮ ಮಕ್ಕಳ ಜೊತೆಗೆ ಆಗಮಿಸುತ್ತಿದ್ದಾರೆ. ಗೃಹಸ್ಥನೋರ್ವನು ಇಬ್ಬರು ಮಕ್ಕಳೊಂದಿಗೆ ಬಂದು ಜಾತ್ರೆಯಲ್ಲಿ ಏನೇನು ಖರೀದಿಸಬೇಕೆಂದು ಗೃಹಿಣಿಯನ್ನು ವಿಚಾರಿಸುತ್ತಿದ್ದಾನೆ. ಹೆಂಗಳೆಯರಿಬ್ಬರೇ ಕರೆತಂದ ಒಂದು ಮಗು, ಕಂಡದ್ದೆಲ್ಲ ಬೇಕೆಂದು ಚಂಡಿ ಹಿಡಿದದ್ದರಿಂದ ಏನು ಮಾಡಬೇಕು? ಎಂದು ಅರಿಯದೇ ಕಂಗಾಲಾಗಿದ್ದಾರೆ. ಇವರು ತೊಟ್ಟ ಬಟ್ಟೆ-ಬರೆ ಧರಿಸಿದ ಆಭರಣಗಳು ಅಂದಿನ ವೇಷ-ಭೂಷಣಗಳನ್ನು ಪ್ರತಿನಿಧಿಸುತ್ತವೆ. ರಥೋತ್ಸವಕ್ಕೆಂದು ತಾತ್ಪೂರ್ತಿತ ಅಂಗಡಿಗಳನ್ನು ತೆರೆದ ಶೆಟ್ಟರು ಧನಸಂಪಾದನೆಯಲ್ಲಿ ಮೈಮರೆದಿದ್ದಾರೆ. ಮಿಠಾಯಿಯನ್ನು ಕೊಳ್ಳುತ್ತಿರುವ ಗಿರಾಕಿ, ತೂಕದಲ್ಲಿ ಮೋಸ ಮಾಡದಿರಲು ಅಂಗಡಿಕಾರನಿಗೆ ಅರಿಕೆಮಾಡಿ ಕೊಳ್ಳುತ್ತಿದ್ದಾನೆ.ಕಸ್ತೂರಿ ಮಾರುವ ಶೆಟ್ಟಿ ಕಾಲಿನಿಂದ ತಕ್ಕಡಿಯ ಚಲನೆಗೆ ಆತಂಕವೊಡ್ಡಿ ಮೋಸ ಮಾಡಲು ಯತ್ನಿಸಿದಾಗ ಗಿರಾಕಿಯು ಪ್ರತಿಭಟಿಸುತ್ತಿದ್ದಾನೆ. ಬಟ್ಟೆ ಅಂಗಡಿಯವನು ಮೊಳ ಕುಗ್ಗಿಸಿ, ಬಟ್ಟೆಯ ಉದ್ದವನ್ನು ಹಿಗ್ಗಿಸುವಾಗ, ಗಿರಾಕಿಯ ಪತ್ನಿ ಆಕ್ಷೇಪವೆತ್ತುತ್ತಿದ್ದಾಳೆ. ಹೆಂಗಳೆಯೋರ್ವಳು ಶೆಟ್ಟಿಕೊಟ್ಟ ತೆಂಗಿನಕಾಯಿ ಚೆನ್ನಾಗಿಲ್ಲವೆಂದು ಹಿಂದಿರುಗಿಸುತ್ತಿದ್ದಾಳೆ. ಹೆಂಗಳೆಯರೂ ವ್ಯಾಪಾರದಲ್ಲಿ ಹಿಂದೆ ಬಿದ್ದಿಲ್ಲ. ಒಬ್ಬಳು ಬಳೆತೊಡಿಸಿದರೆ, ಇನ್ನೊಬ್ಬಳು ಕಾಲುಂಗುರ ತೊಡಿಸುತ್ತಿದ್ದಾಳೆ. ಮಂಡಕ್ಕಿಯವಳು ಕಡ್ಲೆಪುರಿತುಂಬಿದ ನಾಡಶೇರನ್ನು ಗಿರಾಕಿಯು ಒಡ್ಡಿದ ಬಟ್ಟೆಯಲ್ಲಿ ಸುರಿಯುತ್ತಿದ್ದಾಳೆ. ಜಾತ್ರೆಯಲ್ಲಿ ರಸಿಕಶಿಖಾಮಣಿಗಳಿಗೂ ಕೊರತೆಯಿರುತ್ತಿರಲಿಲ್ಲವೆನಿಸುತ್ತದೆ. ಲಕ್ಷಣವಾಗಿ ಅಲಂಕರಿಸಿಕೊಂಡ ಯುವಕನೋರ್ವನು ಹೆಣ್ಣಿನೊಡನೆ ಸರಸ

ಸಂಭಾಷಣೆಯಲ್ಲಿ ಮೈಮರೆತದ್ದನ್ನು ಚಿತ್ರಿಸಲಾಗಿದೆ. ಈ ಎಲ್ಲ ನೂಕು-ನುಗ್ಗಲಿನಲ್ಲಿ ಕಳ್ಳ- ಕಾಕರು ತಮ್ಮ ಕೈಚಳಕ ತೋರಿಸದೇ ಇರುವರೇ? ಅಂತೆಯೇ ಗುಪ್ತಚರ ಸಿಪಾಯಿಯೊಬ್ಬ ಕಳ್ಳನನ್ನು ಕದ್ದ ಸಾಮಾನಿನೊಂದಿಗೆ ಬಂಧಿಸಿ ಥಳಿಸುತ್ತಿದ್ದಾನೆ.

ಇಂಥ ತೇರು ಮತ್ತು ರಥೋತ್ಸವದ ಚಿತ್ರಗಳು ಅನೇಕ ದೇವಾಲಯಗಳಲ್ಲಿ ಚಿತ್ರಿತವಾಗಿರಲು ಸಾಕು. ಅವುಗಳನ್ನೆಲ್ಲ ಆಳವಾಗಿ ಅಭ್ಯಸಿಸಿದರೆ ರಥಶಿಲ್ಪದ ಪ್ರಕಾರಗಳು, ಅವುಗಳ ಪಟ್ಟಿಕೆಗಳಲ್ಲಿ ಮೂಡಿಬಂದ ಪೌರಾಣಿಕ ಮತ್ತು ಸಾಮಾಜಿಕ ಜೀವನಗಳು ಮಹಾಪ್ರಬಂಧಕ್ಕೆ ಒಳ್ಳೆ ಸಾಮಗ್ರಿ ಒದಗಿಸುತ್ತವೆ.




ಕೇತಪ್ಪಯ್ಯ ದೇವಾಲಯ, ಭಟಕಳ. 1. ತೇರನೆಳೆವ ಉಬ್ಬು ಶಿಲ್ಪ, ವೆಂಕಟರಮಣ ದೇವಾಲಯ, ವಂಕಟಾಪುರ 2. ಸಾಲಂಕೃತ ತೇರಿನ ಉಬ್ಬು ಶಿಲ್ಪ, ಜೈನ ಮಠ, ಶ್ರವಣಬೆಳಗೊಳ 3. ಭಿತ್ತಿಚಿತ್ರದಲ್ಲಿ ತೇರು, 4. ತೇರಿಗೆ ಹೊರಟವರು 5. ಪ್ರೇಮಿಗಳು 6. ಸಿಕ್ಕಿಬಿದ್ದ ಕಳ್ಳ 7. ವಾದ್ಯಗಾರರು

ಿ. ಪಾಟೀಲ

# ಶ್ರೀಮಂತಗಡ ಕೋಟೆ ಹಾಗೂ ದೇವಾಲಯ

ಶ್ರೀಮಂತಗಡ ಧಾರವಾಡ ಜಿಲ್ಲೆಯ ಶಿರಹಟ್ಟಿ ಲೂಕಿನ ಒಂದು ಕೋಟೆಯಾಗಿದ್ದು, ಶಿರಹಟ್ಟಿಯಿಂದ ಕಿಲೋ ಮೀಟರ್ ದಕ್ಷಿಣ ದಿಕ್ಕಿಗೆ ಇರುವ ಹೆದ್ದಾ ಯ ಪಕ್ಕದಲ್ಲಿ ದೇವಿಹಾಳ ಗ್ರಾಮ ಸಮೀಪ ಇರುವ ಡ್ಡದ ಮೇಲೆ ಇದೆ. ಪುರಾತನ ಕಾಲದೊಳು ಕಪಿಲ ಮನಿ ತಪಸ್ಸು ಮಾಡಿದ ಪುಣ್ಯ ಕ್ಷೇತ್ರವೆಂದು ಹೇಳು ರೆ. ಈ ಗುಡ್ಡಕ್ಕೆ ಇದರಿಂದಾಗಿ ಕಪ್ಪೆಬೆಟ್ಟವೆಂತಲೂ ಸರು. ಆನಂತರವಾಗಿ ಅಜಮಾಸ 345 ವರ್ಷಗಳ ದೆ (1655) ನವಾಬ (ಮಂಜಲಾಪುರ) ಅಂಕುಶಿ ನರ ವಶದಲ್ಲಿತ್ತು.ಮುಂದೆ ರಣದುಲ್ಲಾಖಾನರೆಂಬು ರನ್ನು ಮಾಂಡಲಿಕರನ್ನಾಗಿ ನೇಮಿಸಿದರು. ನಂತರ ದುಲ್ಲಾಖಾನರು ಕಪ್ಪೆ ಬೆಟ್ಟವನ್ನು ತಮ್ಮ ರಾಜರ ಜಾನೆಯನ್ನು ಮಾಡಲು ಯೋಚಿಸಿ ಗುಡ್ಡದ ಮೇಲಿ ವ ಬಯಲು ಪ್ರದೇಶವನ್ನು ಕಲ್ಲು ಬಂಡೆಗಳನ್ನು ಡೆದು ಕೋಟೆ ಕಟ್ಟಲು ಪ್ರಾರಂಭವಾಯಿತು. ಇಪ್ಪ ದು ಎಕರೆ ಅಜಮಾಸ ಒಳ ಕ್ಷೇತ್ರವನ್ನು ಇಟ್ಟು ರ್ವ ಪಶ್ಚಿಮ ಉದ್ದವಾಗಿ ಉತ್ತರ ದಕ್ಷಿಣ ಅಗಲ ತಿಮೆಯಾಗಿ ಎಂಟು ಬುರುಜಗಳು, ನಾಲ್ಕು ಚಿಕ್ಕ ದ್ದಿನ ಮನೆಗಳನ್ನು ಹಾಗೂ ಆಯಾತಾಕಾರವಾಗಿ ೀಟೆಯನ್ನು ಕಟ್ಟಿದ್ದಾರೆ. ಸೈನಿಕರಿಗಾಗಿ ಗುಪ್ತ ಗೂಡು ಳನ್ನು ಕೋಟೆಯ ಮಧ್ಯದಲ್ಲಿ ನಿರ್ಮಿಸಿದ್ದಾರೆ. ರಡು ಚಿಕ್ಕ ದ್ವಾರಗಳು, ದಕ್ಷಿಣ ಮುಖವಾಗಿ ಂದು (ಗುಪ್ತ) ಚೋರಗಂಡಿ, ಪಶ್ಚಿಮ ಮುಖವಾಗಿ ಂದು ದ್ವಾರ, ಹಾಗೂ ದೊಡ್ಡ ದ್ವಾರ ಉತ್ತರ ಖವಾಗಿ ಮಾಡಿದ್ದಾರೆ. ಒಳಗಡೆ ಎಡಬಲಕ್ಕೆ ಸೈನಿಕ ಗಾಗಿ ಅಂಕಣ ಕಟ್ಟೆಗಳು ಇವೆ. ನಂತರ ಮತ್ತೊಂದು ವಾರ ಒಳಗಡೆ ಇದ್ದು, ಇದರ ಎದುರುಗಡೆ ದೇವಾ ಯವಿದೆ. ಒಳಗೆ ದೇವಿಯ ಮೂರ್ತಿ ಇದೆ. ಈ ಮೂರ್ತಿಯ ಕೆಳಗಡೆ ಗುಪ್ತ ಗುಹೆ ಇದೆ. ಈ ಗುಪ್ತ ಹೆಯಲ್ಲಿ ನವಾಬ ಅರಸರ ಖಜಾನೆ ಇತ್ತು. ಾಗೂ ನೀರಿಗಾಗಿ ಎರಡು ದೊಡ್ಡ ಹೊಂಡಗಳನ್ನು ಲ್ಲು ಗಚ್ಚಿನಿಂದ ಕಟ್ಟಿಸಿದ್ದವು ಇರುತ್ತದೆ. ಆನೆ ಕುದುರೆ ಗೆ ಒಂದು ಪ್ರತ್ಯೇಕ ಹೊಂಡ ಉಂಟು. ಹಾಗೂ ನಿಕರಿಗಾಗಿ ವಾಸಿಸಲು ಮನೆಗಳು ಇದ್ದವು. ಈಗ ಅವು ಬಿದ್ದು ಅವಶೇಷಗಳು ಮಾತ್ರ ಉಳಿದಿರುತ್ತದೆ. ಮರಾಠಾ ಚಕ್ರಾಧಿಪತಿ ಶಿವಾಜಿ ಮಹಾರಾಜನು, ದಂಡಿ ನೊಡನೆ ಉತ್ತರ ಕರ್ನಾಟಕದ ಕೋಟೆಗಳನ್ನು ವಶಪಡಿಸಿ ಕೊಂಡು ದಕ್ಷಿಣ ಮಾರ್ಗವಾಗಿ ಕಪ್ಪತ್ತ ಗಿರಿಯ ತಪ್ಪಲ ಪ್ರದೇಶಕ್ಕೆ ಬಂದಾಗ ತನ್ನ ಸೈನ್ಯದೊಂದಿಗೆ ಬಿಡಾರ ಬಿಟ್ಟನು. ಮುಂದೆ ದಂಡೆಯಾತ್ರೆಯನ್ನು ಮುಂದಿವರಿಸಿ ಈ ರಾಜ ಧಾನಿಯ ಮೇಲೆ ಯುದ್ಧಮಾಡಲು ಯೋಚಿಸಿ ರಣತೂರ ಎಂಬಲ್ಲಿ ಬಂದು ತಮ್ಮ ಠಾಣಾ ಹಾಕಿದನು. ಅಷ್ಟರೊಳಗೆ ರಣದುಲ್ಲಾಖಾನರು ಐದು ಫರ್ಲಾಂಗ ದಾರಿ ಉದ್ದಕ್ಕೂ ಸೂಜಿಗಲ್ಲು ಹಾಕಿಸಿದ್ದರು. ಶಿವಾಜಿ ಸೈನಿಕರು ಯದ್ಧಕ್ಕೆ ಸಿದ್ಧ ರಾಗಿ ಬರಲು ಅವರ ಕುದುರೆಗಳು ಗಪ್ಪನೆ ನಿಂತು ಬಿಟ್ಟವು. ಇದನ್ನು ಕಂಡು ಶಿವಾಜಿ ಸೈನಿಕರಿಗೆ ಆಶ್ಚರ್ಯವಾಗಿ ಮರಳಿ ತಮ್ಮ ಬಿಡಾರಕ್ಕೆ ಹಿಂದುರುಗಿದರು. ಆದ ಮೋಸದ ಪರಿ ಚಯವಾಗಿ ಪೂರ್ವಸಿದ್ಧತೆಮಾಡಿ ರಾಜಧಾನಿಗೆ ಮುತ್ತಿಗೆ ಹಾಕಿದರು. ಈ ಯುದ್ಧದಲ್ಲಿ ಕೊನೆಗೆ ರಣಕುಲ್ಲಾಖಾನರು ಕೂಡಾ ಮಡಿದರೆಂದು ಹೇಳುತ್ತಾರೆ. ಮುಂದೆ ಗುಡ್ಡದ ಮೇಲಿರುವ ಕೋಟೆಯನ್ನು ಮರಾಠರು ವಶಪಡಿಸಿಕೊಂ ಡರು. ಒಳಗಡೆ ಹೋಗಿ ನೋಡಿದರೆ ದೇವಿಯ ಗುಡಿ, ಶಿವಾಜಿ ಸೈನಿಕರಿಗೆ ಸಂತೋಷವಾಯಿತು ಇಲ್ಲಿ ಏನೋ ಚಮತ್ಕಾರ ವಿದೆಯೆಂದು ಶೋಧಿಸಲಾಗಿ ಒಳಗಡೆ ಗುಪ್ತ ಗುಹೆ ಸಿಕ್ಕಿತು. ಅದರಲ್ಲಿರುವ ಸಿರಿಸಂಪ್ಪತ್ತು ಶಿವಾಜಿ ಮಹಾರಾಜರ ವಶವಾಯಿತು.

**ಅವಶೇಷಗಳು** : ರಣದುಲ್ಲಾಖಾನರದೆನ್ನಲಾದ ಗೋರಿ ಇಂದಿಗೂ ಇವೆ. ಅವು ಸುಣ್ಣ ಬಳಿದು ದಾಖಾಲಾತೆ ಇರುವುದಿಲ್ಲ (ಅಳಿಸಿಹೋಗಿದೆ?) (ಹಾಗೂ) ಅವರ ಅರಮನೆಯ ಮುಖ್ಯ ದ್ವಾರಬಾಗಿ ಲುಗಳು ಬಿದ್ದು ಹೋಗಿವೆ. ದೇವಿಹಾಳ ಗ್ರಾಮದ ಹತ್ತಿರ ನೀರಾವರಿ ನಿಮಿತ್ತ ಮಾಡಲಾದ ದೊಡ್ಡ ಕೆರೆ ಉಂಟು. ಇಂದಿಗೂ ನೀರು ಮಾತ್ರ ನಿಲ್ಲುತ್ತದೆ. ಗುಡ್ಡದ ಮೇಲಿನ ಕೋಟೆ ಅಲ್ಪ ಸ್ವಲ್ಪ ಬಿದ್ದು ಉಳಿದ ಭಾಗ ಚೆನ್ನಾಗಿದೆ.

ಶಿವಾಜಿ ಮಹಾರಾಜರ ಸ್ವಾಧೀನವಾದ ನಂತರ ದೇವಿಯ ಗುಡಿಯು ಸುಂದರವಾಗಿ ಕಟ್ಟಲ್ಪಟ್ಟಿದೆ.

ಹಾಗೂ ಪ್ರತೀ ವರ್ಷ ಸಡಗರದಿಂಧ ಪ್ರತಿ ಭಾರತ ಹುಣ್ಣಿಮೆಯ ದಿನದಂದು ಜಾತ್ರೆಯಾಗುತ್ತದೆ. ಹಾಗೂ ಪ್ರತಿ ಯುಗಾದಿ ಪಾಡ್ಯದಂದು ಧ್ವಜ ಹಾರಿಸುವುದುಂಟು. ಶಿವಾಜಿ ಮಹಾರಾಜರು ಶ್ರೀಮಂತಗಡವೆಂದು ನಾಮಕರಣ ಮಾಡಿದರು. ಅಂಕುಡೊಂಕಾದ ದಾರಿ ಸುಮಾರು ಒಂದು ಕಿಲೋ ಮೀಟರ್ ದಾರಿಯಿಂದ ಗುಡ್ಡ ಹತ್ತಲು ಮುಂದೆ ಕೋಟೆ ದ್ವಾರ ಮುಟ್ಟುತ್ತದೆ. ಎಡಬಲಕ್ಕೆ ದಾರಿ ಉದ್ದಕ್ಕೂ ಕಲ್ಲು ಬಂಡೆಗಳುದೊಡ್ಡ ಪ್ರಮಾಣದಲ್ಲಿವೆ. ಶಿರಹಟ್ಟಿಯಿಂದ ಬೆಳ್ಳವರೆಗೆ ಯೋಗ್ಯವಾದ ಮಾರ್ಗವೂ ಇದೆ. ಹಾಗೂ ಅನೇಕಹಳ್ಳಿಗಳು ಇವೆ. ನಂತರ ಶಿರಹಟ್ಟಿ ಶಹರ ಸಮೀಪವಿದ್ದು ಇಲ್ಲಿ ಕೂಡಾ ಇತಿಹಾಸ ಸ್ಥಳ ಉಂಟು. ಹಾಗೂಶಿವಾಜಿ ಮಹಾರಾಜರ ಹಳೆದಾದ ಕೋಟೆ ಕೊತ್ತಲಗಳು ಅರಮನೆಗಳು ಇದ್ದಲ್ಲಿಯೇ ಬಿದ್ದು ಹೋಗಿವೆ.

ಯಶೋದಾ ರಾಜಶೇಖರಪ್ಪ

# ತ್ರದುರ್ಗ ಜಿಲ್ಲೆಯ ವಿಶಿಷ್ಟ ವೀರಮಾಸ್ತಿ ಶಿಲ್ಪ

ಚಿತ್ರದುರ್ಗ ಜಿಲ್ಲೆಯ ವೀರಗಲ್ಲುಗಳು, ಮಾಸ್ತಿ ಲ್ಲುಗಳು ಅತ್ಯಂತ ವೈವಿಧ್ಯಮಯವಾದವು. ಅಂತಹ ಗಳಲ್ಲಿ ಒಂದು ಇತ್ತೀಚೆಗೆ ಕಂಡು ಬಂದ ಸ್ಮಾರಕ ವಂದಿ ಎನ್ನುವ ಗ್ರಾಮಕ್ಕೆ ಸೇರಿದ್ದು. ಇದನ್ನು "ವೀರ ಾಸ್ತಿ ಶಿಲ್ಪ"ದ ಗುಂಪಿಗೆ ಸೇರಿಸಬಹುದು. ಏಕೆಂದರೆ ದರಲ್ಲಿ ವೀರಗಲ್ಲು ಹಾಗೂ ಮಾಸ್ತಿಕಲ್ಲು ಈ ಎರ ರ ಲಕ್ಷಣಗಳೂ ಮೇಳೈಸಿವೆ.

ತವಂದಿಯು ಹಿರಿಯೂರಿನಿಂದ ಸುಮಾರು 10 ಮೀ ದೂರದಲ್ಲಿರುವ ಒಂದು ಪುಟ್ಟ ಗ್ರಾಮ. ೂರ ಕೆರೆಯ ಸುತ್ತ ಮುತ್ತ ಇರುವ ಭಿನ್ನಗೊಂಡ ಡಿಗಳನ್ನೂ ವೀರಗಲ್ಲು ಮಾಸ್ತಿಕಲ್ಲುಗಳಂತಹ ಅವಶೇ ಗಳನ್ನೂ ಗಮನಿಸಿದರೆ ಹಿಂದೆ ಅದೊಂದು ಚಾರಿತ್ರಿಕ ಹತ್ವವುಳ್ಳ ಸ್ಥಳವಾಗಿರಬೇಕು ಯುದ್ಧ ನಡೆದ ೂಮಿ ಆಗಿರಬೇಕು - ಎನಿಸುತ್ತದೆ. ಶಾಸನಗಳಲ್ಲಿ ಗ್ರಾಮವನ್ನು 'ತವಂದಿ' ಎಂದೂ ಜನಪದ ಸಾಹಿ ದಲ್ಲಿ 'ತಾವಂದಿ' ಎಂದೂ ಕರೆಯಲಾಗಿದೆ. ಈಗ ವನ್ನು 'ತವಂದಿ' ಎಂದು ಕರೆಯಲಾಗುತ್ತಿದೆ.

ಈ ಲೇಖನದಲ್ಲಿ ವರ್ಣಿಸಲಾಗಿರುವ ವೀರಮಾಸ್ತಿ ಲ್ಪವು ತವಂದಿಯ ಕೆರೆಯ ಕೆಳಗಿರುವ ಸೂರಗೊಂಡ ಹಳ್ಳಿ ನಿವಾಸಿಗಳಾದ ಶ್ರೀ ಕರಿಬಸಯ್ಯ ಎಂಬುವರ ೋಟದಲ್ಲಿ ಇದೆ. ಹಿಂದೆ ಇದಕ್ಕೆ 'ರೇವಕ್ಕನ ತೋಟ' ಂದು ಕರೆಯುತ್ತಿದ್ದುದಾಗಿ ತಿಳಿದುಬರುತ್ತದೆ. ಈ ಪೂರ್ವಾಧ ಹೃದಯಸ್ಪರ್ಶಿ ಶಿಲ್ಪ ಕವಿಹೃದಯದ ಲ್ಪಿಯೊಬ್ಬನ ಶ್ರೇಷ್ಠ ಕಲಾಕೃತಿ ಎಂದು ಪರಿಗಣಿಸಬ ುದು. ಈ ಶಿಲ್ಪದ ಅಡ್ಡಗಲ ಆರೂವರೆ ಅಡಿ, ತ್ತರ ಎರಡು ಅಡಿ ಮತ್ತು ದಪ್ಪ ಒಂದೂವರೆ ಅಡಿ ದೆ.

## ಲ್ಪದ ಚಿತ್ರಣ

ಈ ಸುಂದರ ಶಿಲ್ಪ ಒಟ್ಟು ಮೂರು ಹಂತಗಳಲ್ಲಿ ಟ್ಟಿಕೆಗಳಲ್ಲಿ ಕೆತ್ತಲ್ಪಟ್ಟಿದೆ. ಸ್ಪಷ್ಟ ವಿವರಗಳನ್ನೊಳಗೊಂಡ ನು ಯಾವುದೋ ಭೀಕರ ಯುದ್ಧ ನಡೆದದ್ದನ್ನೂ, ತರ ಸಂಭವಿಸಿದ ಹೃದಯವಿದ್ರಾವಕ ಘಟನೆಗಳನ್ನೂ, ಹೃದಯಂಗಮ ವಾಗಿ ಹೇಳುತ್ತಿರುವಂತೆ ಭಾಸವಾಗುತ್ತದೆ. ಅದರೆ ಕೆಳಗಿನ ಹಂತದಲ್ಲಿ ಯುದ್ಧ ನಡೆದುದರ ಸೂಚನೆ ನೀಡುವ ಎರಡು ದೃಶ್ಯಗಳಿವೆ. ಮೊದಲನೆಯ ದೃಶ್ಯ-ಸರ್ವಾಲಂಕೃತವಾದ ಕುದುರೆಯ ಮೇಲೆ ಕುಳಿತ ವೀರನೊಬ್ಬ ಬರ್ಚಿ ಅಥವಾ ಬಿಚ್ಚು ಕತ್ತಿ ಹಿಡಿದು ರಣೋತ್ಸಾಹದಿಂದ ಯುದ್ಧಕ್ಕೆ ಹೊರಟಿದ್ದಾನೆ. ಹಿಂದೆ ಛತ್ರಿ ಹಿಡಿದ ಭಟ ಮುಂದೆ ಬಿಲ್ಲು ಬಾಣ ಹಿಡಿದು ಕುರುರೆಯ ಜೊತೆಯಲ್ಲಿ ನಡೆಯುತ್ತಿರುವ ಇನ್ನೊಬ್ಬ ನೆಚ್ಚಿನ ಬಂಟ ಇದ್ದಾರೆ. ಇದರದೇ ಮುಂದುವರಿಕೆ ಮುಂದಿನ ದೃಶ್ಯ - ಆ ವೀರ ಕುದುರೆಯಿಂದ ಇಳಿದು ಶತ್ರುವಿನೊಡನೆ ಯುದ್ಧ ಮಾಡುತ್ತಾ ಶತ್ರುವನ್ನು ಕತ್ತಿಯಿಂದ ತುಂಡರಿಸುತ್ತಿದ್ದಾನೆ. ಶತ್ರುವಿನ ಕತ್ತಿಯ ಏಟು ಇವನ ಕುತ್ತಿಗೆಯ ಮೇಲೂ ಬಿದ್ದಿದೆ. ಶತ್ರುವಿನ ಗಡ್ಡ ವೇಷಭೂಷಣ ಗಮನಿಸಿದರೆ ಅವು ಮುಸಲ್ಮಾನ ನಿರಬೇಕು ಎನಿಸುತ್ತದೆ. ಇಲ್ಲಿ ಇವರ ಮತ್ತು ಪರಿವಾರದ ಉಡುಗೆ ತೊಡುಗೆ ಮುಂತಾದ ಸೂಕ್ಷ್ಮ ವಿವರಗಳ ಚಿತ್ರಣವನ್ನು ಕಾಣಬಹುದು.

ಇನ್ನು ಇದರ ಮೇಲಿನ ಪಟ್ಟಿಕೆಯು ಈ ಶಿಲ್ಪದ ಹೃದಯಸದೃಶ ಭಾಗ ಎನ್ನಬಹುದು. ಅಷ್ಟೇ ಅಲ್ಲ, ಹೃದಯಸ್ಪರ್ಶಿ ಘಟನೆಯೊಂದನ್ನು ಚಿತ್ರಿಸುವ ಇದು ರಾಜಾಸ್ಥಾನದ ಸಮೂಹ ಸ್ತ್ರೀ ಸಹಗಮನ ಜೋಹರ್ ಪದ್ಧತಿಯನ್ನು ನೆನಪಿಗೆ ತರುತ್ತದೆ. ಇಲ್ಲಿ ಕೆಳಗೆ ಚಿತ್ರಿಸಿದ ಯುದ್ಧದಲ್ಲಿ ಹೋರಾಡಿ ಮಡಿದ ವೀರನ ಏಳು ಜನ ಪತ್ನಿಯರು ಜೀನು ಹಾಕಿದ ಏಳು ಅಲಂಕೃತ ಕುದುರೆಗಳ ಮೇಲೆ ಸರ್ವಾಲಂಕೃತರಾಗಿ ಒಂದು ಕೈಯಲ್ಲಿ ನಿಂಬೆಹಣ್ಣು(?) ಇನ್ನೊಂದು ಕೈಯಲ್ಲಿ ಕನ್ನಡಿ ಹಿಡಿದು ಕುಳಿತು ಮೆರವಣಿಗೆಯಲ್ಲಿ ಸಾಗುತ್ತಿದ್ದಾರೆ. ಎಲ್ಲರಿಗಿಂತ ಮುಂದಿನ ಕುದುರೆಯನ್ನು ಹಿಡಿದು ಪುರುಷನೊಬ್ಬ ಇವರನ್ನು ಮೆರವಣಿಗೆಯಲ್ಲಿ ಕೊಂಡೊಯ್ಯುತ್ತಿದ್ದಾನೆ. ಈತ ಬಹಶಃ ಇವರ ರಕ್ತಸಂಬಂಧಿಯಾಗಿದ್ದು ಈ ಸ್ಮಾರಕ ಮಾಡಿಸಿದ ವ್ಯಕ್ತಿ ಇರಬಹುದು. ಮೆರವಣಿಗೆ ಅಗ್ನಿಕುಂಡದತ್ತ ಅಥವಾ ಚಿತೆಯತ್ತ ಬರುತ್ತಿದೆ. ಇದರ ಮುಂದುವರಿಕೆ ದೃಶ್ಯವಂತೂ ಮನಕರಗಿಸುವಂತಹುದು. ಆ ಏಳೂ ಜನ ಸ್ತ್ರೀಯರು ಕುದುರೆ

ಯಿಂದಿಳಿದು ಒಬ್ಬರಿಗೊಬ್ಬರು ಬಿಡಲಾರದವರಂತೆ ಕೈ ಕೈ ಹಿಡಿದುಕೊಂಡಿದ್ದು ತೆಕ್ಕೆಹಾಕಿಕೊಂಡು ಅಗ್ನಿಕುಂಡದಲ್ಲಿ ಅಥವಾ ಚಿತೆಯಲ್ಲಿ ಬೀಳಲು ಧಾವಿಸುತ್ತಿದ್ದಾರೆ. ಧಾವಿಸುವ ಅವರ ಹೆಜ್ಜೆಗಳಲ್ಲಿ ತಮ್ಮ ಪತಿಯನ್ನು ಆದಷ್ಟು ಬೇಗೆ ಸೇರಬೇಕೆನ್ನುವ ಕಾತರ ಇರುವಂತೆ ಕಾಣುತ್ತಿದೆ. ಅಗ್ನಿಕುಂಡ ಅಥವಾ ಚಿತೆಯು ಬಾಳೆ ಕಂಬಗಳಿಂದ ಅಲಂಕೃತ ಗೊಂಡಿದೆ. ಅಗ್ನಜ್ವಾಲೆಗಳು ಧಗಧಗಿಸುತ್ತಿವೆ. ಒಬ್ಬಳಂತೂ ಆಗಲೆ ಒಂದು ಕಾಲನ್ನು ಮುಂಚಾಚಿ ಇನ್ನೇನು ಬೀಳುತ್ತಿದ್ದಾಳೆ ಎನ್ನುವ ಹಾಗೆ ಇದೆ. ಅವರು ತೆಕ್ಕೆ ಹಾಕಿಕೊಂಡಿರುವುದನ್ನು ನೋಡಿದರೆ ಅವರೆಲ್ಲ ಸೋದರಿಯರೇನೋ ಎನಿಸುವಂತಿದೆ.

ಎಲ್ಲಕ್ಕೂ ಮೇಲಿನ ಹಂತದ ದೃಶ್ಯವು ಅಗಲದಲ್ಲಿ ಕೆಳಗಿನ ಎರಡೂ ಭಾಗಗಳಿಂತ ಕಿರಿದಾಗಿದ್ದು ಒಂದೇ ಒಂದು ದೃಶ್ಯದ ವಿಸ್ತಾರದ ಚಿತ್ರವಾಗಿದೆ. ಇದರಲ್ಲಿ ಕೆಳಗೆ ಚಿತೆಗೆ ಹಾರಿದ ಆ ಏಳು ಜನ ಪತ್ನಿಯರು ತಮ್ಮ ಪತಿಯೊಡನೆ ಕೈಲಾಸದಲ್ಲಿದ್ದಾರೆ. ಶಿವಲಿಂಗ ನಂದಿಯ ಪಕ್ಕದಲ್ಲಿ ಆ ಸ್ತ್ರೀಯರು ಪಕ್ಕ ಪಕ್ಕದಲ್ಲಿ ಸಾಲಾಗಿ, ಪದ್ಮಾಸನದಲ್ಲಿ, ಭಕ್ತಿಯಿಂದ ಕೈ ಮುಗಿದು ಕುಳಿತಿದ್ದಾರೆ. ಕೊನೆಯಲ್ಲಿ ಅವರ ಪತಿಯೂ ಅದೇ ಭಂಗಿಯಲ್ಲಿ ಕುಳಿತಿದ್ದಾನೆ. ಲಿಂಗ ಪೂಜಕ ಗಡ್ಡಧಾರಿ ಆಚಾರ್ಯನೊಬ್ಬ ಇವರಿಗೆ ಪ್ರಸಾದ ನೀಡುವ ಭಂಗಿಯಲ್ಲಿದ್ದಾನೆ. ಇನ್ನೊಂದು ಪಕ್ಕದಲ್ಲಿ ಲಿಂಗಕ್ಕೆ ಧೂಪಾರತಿ ಬೆಳಗುತ್ತಿರುವ ಪುರುಷಾಮೃಗ, ವೀಣೆ ನುಡಿಸುತ್ತಾ ಇರುವ ಪಕ್ಷಿಪುರುಷನ ಚಿತ್ರ ಮತ್ತು ಶಹನಾಯಿಯಂತಹ ಮಂಗಳವಾದ್ಯ ನುಡಿಸುತ್ತಿರುವ ಪುರುಷನ ಚಿತ್ರ ಇವೆ. ಈ ಶಿಲ್ಪಭಾಗ ಯುದ್ಧದಲ್ಲಿ ಮಡಿದ ಪುರುಷ ಆತನ ಪತ್ನಿಯರು ಶಿವಸಾಯುಜ್ಯ ಹೊಂದಿದರೆಂಬ ಅಂಶವನ್ನು ತಿಳಿಸುತ್ತದೆ.

## ಶಿಲ್ಪದ ಇತಿಹಾಸ?

ಅದರೆ ಶಿಲ್ಪದಲ್ಲಿ ಎಲ್ಲಿಯೂ ಲಿಪಿ ಇಲ್ಲದಿರುವುದರಿಂದ ಇದರ ಇತಿಹಾಸ ಅಲಭ್ಯವೆಂದೇ ಹೇಳಬೇಕು. ಶಿಲ್ಪಶೈಲಿಯನ್ನು ಗಮನಿಸಿದರೆ ಇದು ವಿಜಯನಗರದ ಅಂತ್ಯದ ಅಥವಾ ಪಾಳೆಯಗಾರರ ಕಾಲದ್ದೆಂದು ಹೇಳಬಹುದು. ಶಿಲ್ಪದ ಸ್ವರೂಪ ಮತ್ತು ಅಲ್ಲಿಯ ಜನರಿಂದ ಸಂಗ್ರಹಿಸಿದ ಮಾಹಿತಿಗಳಿಂದ ಅದರ ಸಂಗತಿಗಳನ್ನು ಸದ್ಯಕ್ಕೆ ಇಷ್ಟು ಹೇಳಬಹುದು: ವಿಜಯನಗರ ಅಥವಾ ಪಾಳೆಯಗಾರರ ಕಾಲದಲ್ಲಿ ರಾಜಪ್ರತಿನಿಧಿಯೋ ಪ್ರಾಂತಾಧಿಕಾರಿಯೋ ನಾಯಕ ವಂಶಸ್ಥನೋ ಆದವನೊಬ್ಬ ಮುಸಲ್ಮಾನರ ಜೊತೆಯಲ್ಲಿ ಯುದ್ಧ ಮಾಡಿ ಮಡಿದಿರಬೇಕು. ಆಗ ಆತನ ಏಳು ಜನ ಪತ್ನಿಯರು ಅವನ ಜೊತೆಯಲ್ಲಿ ಸಹಗಮನ ಮಾಡಿ 'ಶಿವ ಸಾಯುಜ್ಯ' ಹೊಂದಿರಬೇಕು. ಈ ಸ್ಮಾರಕವಿರುವ ತೋಟವನ್ನು ಕಾಯುವ ಹುಡುಗನೊಬ್ಬ ಈ ಶಿಲ್ಪವನ್ನು ಪಕ್ಕದ ಹಳ್ಳಿಯ ಗೊಲ್ಲ ಜನಾಂಗದ ಕೆಲವರು ವರ್ಷಕ್ಕೊಮ್ಮೆ ಬಂದು ಪೂಜಿಸಿ ಹಾಡಿ ಹೋಗುತ್ತಾರೆ ಎಂದೂ ಇದರಲ್ಲಿ ಅವರ ಮೂಲ ಪುರುಷನೊಬ್ಬ ಇದ್ದಾನೆಂದು ಹೇಳುತ್ತಾರೆಂತಲೂ ಹೇಳಿದನು. ತೋಟದ ಯಜಮಾನರಾದ ಕರಿಬಸಯ್ಯನವರು ತಮಗೆ ತಿಳಿದದ್ದನ್ನು ಹೇಳುತ್ತಾ ಪಾಳೆಯಗಾರರಿಗೂ ಗೊಲ್ಲರಿಗೂ ಮುಸಲ್ಮಾನರಿಗೂ ಯುದ್ಧ ವಾಯಿತೆಂದೂ ಅದರಲ್ಲಿ ಅವರೆಲ್ಲರ ದಂಡುಗಳಲ್ಲಿ ಒಬ್ಬರಿಗೊಬ್ಬರು ಹೊಡೆದಾಡಿಕೊಂಡು ಸತ್ತರೆಂದೂ ಅದಕ್ಕೇ ಇದನ್ನು "ದಂಡಿನಕಲ್ಲು" ಎಂದು ಕರೆಯುತ್ತಾರೆಂದೂ ತಿಳಿಯಿತು. ಇದರಿಂದ ತಿಳಿದು ಬರುವ ಅಂಶವೆಂದರೆ ಮುಸಲ್ಮಾನರೊಂದಿಗಿನ ಒಂದು ಕಾಳಗದಲ್ಲಿ ನಾಯಕನೊಬ್ಬನಿಗೆ ಗೊಲ್ಲ ಜನಾಂಗದ ವೀರನೊಬ್ಬ ಸಹಾಯ ಮಾಡಿರಬೇಕು. ಆತ ಬಹುಶಃ ಪಾಳೆಯಗಾರನಿಗೆ ನೆಚ್ಚಿನ ಬಂಟನಾಗಿದ್ದು ಶಿಲ್ಪದ ಕೆಳಪಟ್ಟಿಕೆಯಲ್ಲಿರುವ ಯುದ್ಧದ ದೃಶ್ಯದಲ್ಲಿ ಇರುವ ವೀರಪುರುಷನ ಮುಂಭಾಗದಲ್ಲಿರುವ ಕುಬ್ಜ ಅಕಾರದಲ್ಲಿ ಚಿತ್ರಿಸಿರುವ ವ್ಯಕ್ತಿ ಇರಬೇಕು ಅಥವಾ ಕುದುರೆಯ ಮೇಲೆ ಕುಳಿತ ವೀರ ಪುರುಷನಿದ್ದರೂ ಇರಬೇಕು. ಒಟ್ಟಿನಲ್ಲಿ ಈ ವಿವರಗಳಿಗೆ ತಕ್ಕ ಸಮರ್ಥನೆ ಬೇಕು.

ತವಂದಿಯ ಒಂದು ಯುದ್ಧಕ್ಕೆ ಸಂಬಂಧಪಟ್ಟ ಅಂಶವೊಂದು ಜನಪದ ಗೀತೆಯೊಂದರಲ್ಲಿ ಬೆಳಕಿಗೆ ಬಂದಿದೆ. ಬಹುಶಃ ಅದಕ್ಕೂ ಈ ಶಿಲ್ಪಕ್ಕೂ ಯಾವುದಾದರೂ ಸಂಬಂಧ ಇರಬಹುದೋ ಏನೋ ತಿಳಿಯದು. ಶ್ರೀ ಕೃಷ್ಣಮೂರ್ತಿ ಹನೂರು ಅವರು ಸಂಗ್ರಹಿಸಿದ 'ಕತ್ತಾಲ ದಾರಿ ದೂರ' ಎಂಬ ಜನಪದ ಕಥನ ಗೀತೆಗಳ ಸಂಕಲನದಲ್ಲಿ ತವಂದಿಯಲ್ಲಿ ಯುದ್ಧವಾದ ಪ್ರಸಂಗವೊಂದು ಬಂದಿದೆ. ಆ ಹಾಡಿನಲ್ಲಿ ಸತಿ ಹೋದ ತಿಮ್ಮವ್ವನ ಪತಿ ವೀರನಾಗಪ್ಪ ತನ್ನ ವಿವಾಹಕ್ಕೆ ಮುಂಚೆ ಹರ್ತಿಕೋಟೆಯ ಪಾಳೆಯಗಾರ ರಂಗಣ್ಣ ನಾಯಕನ ಪರವಾಗಿ ತವಂದಿಯ ಬೇಡರ ಮೇಲೆ ಯುದ್ಧಕ್ಕೆ ಹೋಗುತ್ತಾನೆ. ಹೋಗುವ ಮುಂಚೆ ದೇವರಲ್ಲಿ ಪ್ರಾರ್ಥಿಸುವ ಕೆಲವು ಪದ್ಯಗಳು ಬರುತ್ತವೆ.

ಉದಾಹರಣೆಗೆ,

ತು ಕಾಯಿ ತಂದು ಪಡೆದು ಪೂಜೆಯ ಮಾಡಿ
ಳೆ ತಾವಂದಿ ಜಗುಳಾಕೆ
ಳಿ ತಾವಂದಿ ಜಗುಳಕೆ ಬರುತೀನೆ
ಾವ ಕೊಡಮ್ಮ ಬಲಗಡಿಗೆ

ಇಂಥ ಕೆಲವು ಪದ್ಯಗಳು ತವಂದಿಯಲ್ಲಿ ಯುದ್ಧ ಾಗಿದ್ದರ ಅಂಶವನ್ನು ತಿಳಿಸುತ್ತವೆ. ಈ ಯುದ್ಧದಲ್ಲಿ ಾಗಣ್ಣ ಗೆದ್ದು ನಾಯಕನ ಹತ್ತಿರ ಚಿನ್ನದ ಸತ್ತಿಗೆ ೂಮಿ ಪಡೆದು ಹಿಂದಿರುಗುತ್ತಾನೆ. ಅನಂತರದಲ್ಲಿ ತನ ವಿವಾಹ ತಿಮ್ಮವ್ವನ ಜೊತೆಯಲ್ಲಿ ಜರುಗುತ್ತದೆ. ವೀರನಾಗಣ್ಣ ಬಹುಶಃ ಯುದ್ಧದ ದೃಶ್ಯದ ಕೆಳಪ ಕೆಯಲ್ಲಿ ಬರುವ ಕುದುರೆಯ ಮೇಲೆ ಕುಳಿತು ೀರಪುರುಷನ ಮುಂಭಾಗದಲ್ಲಿ ಕುಬ್ಜನ ಹಾಗೆ ಕಾಣಿ ುವ ನಾಯಕನ ನೆಚ್ಚಿನ ಬಂಟನಿರಬೇಕು. ಕುದುರೆಯ ೀಲೆ ಕುಳಿತ ವೀರಪುರುಷ ಪಾಳೆಯಗಾರ ನಾಯಕ ರಬಹುದು ಎನ್ನುವ ಊಹೆಯೂ ಮಾಡುತ್ತದೆ. ಲವು ಅನುಮಾನಗಳೂ ಬರುತ್ತವೆ. ಯುದ್ಧ ನಡೆದದ್ದು ಮುಸಲ್ಮಾನರ ಜೊತೆಯಲ್ಲಿ ಎಂಬಂತೆ ಕಾಣುತ್ತಿದೆ. ಹೀಗಾಗಿ ಇದರ ಇನ್ನೂ ಹೆಚ್ಚಿನ ವಿವರಗಳನ್ನು ಸಂಗ್ರಹಿಸುವ ನನ್ನ ಪ್ರಯತ್ನ ಮುಂದುವರಿಸಲಿದ್ದೇನೆ.

1991ರ ಜುಲೈನಲ್ಲಿ ಚಿತ್ರದುರ್ಗದಲ್ಲಿ ಜರುಗಿದ ನೇ ವಾರ್ಷಿಕ ಇತಿಹಾಸ ಸಮ್ಮೇಳನದಲ್ಲಿ ಈ ಲೇಖನವನ್ನು ಮಂಡಿಸಿದಾಗ ಪ್ರಸಿದ್ಧ ಸಂಶೋಧಕರಾದ ಡಾ॥ ಚಿದಾನಂದ ಮೂರ್ತಿಯವರು ಈ ಶಿಲ್ಪದ ಬಗ್ಗೆ ಹೇಳುತ್ತಾ "ಕರ್ನಾಟಕದಲ್ಲೇ ಈವರೆಗೂ ತಿಳಿದು ಬಂದಿರುವ ಅತ್ಯಂತ ಹೆಚ್ಚಿನ ವಿವರಗಳಿರುವ ಸುಂದರವೂ ಆದ ವೀರ ಮಾಸ್ತಿ ಶಿಲ್ಪ ಇದಾಗಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು.

(ಈ ವೀರ ಮಾಸ್ತಿ ಶಿಲ್ಪದ ಇರವನ್ನು ತಿಳಿಸಿ ಸಹಕರಿಸಿದ ಸ್ನೇಹಿತೆಯಾದ ಶ್ರೀಮತಿ ಉಷಾತವನಿಧಿ ಮತ್ತು ಅವರ ಸಹೋದರ ಶ್ರೀ ಲಿಂಗಣ್ಣಯ್ಯನವರಿಗೂ ಮತ್ತು ಈ ಲೇಖನ ಬರೆಯಲು ಪ್ರೋತ್ಸಾಹಿಸಿ ವಿವರ ಸಂಗ್ರಹಿಸಲು ನೆರವಾದ ನನ್ನ ಪತಿ ಶ್ರೀ ಬಿ. ರಾಜಶೇಖರಪ್ಪನವರಿಗೂ ನನ್ನ ಕೃತಜ್ಞತೆಗಳು.)

ಎಸ್. ಹವಳಯ್ಯ

# ಬಾದಾಮಿ ಚಾಲುಕ್ಯರ ನಾಣ್ಯಗಳು

ಬಾದಾಮಿ ಚಾಲುಕ್ಯರು ನಾಣ್ಯಗಳನ್ನು ಉಪಯೋಗಿಸುತ್ತಿದ್ದರೇ ಎಂಬ ಪ್ರಶ್ನೆಯನ್ನು ಇತಿಹಾಸಕಾರರು ಆಗಿಂದ್ದಾಗ್ಗೆ ಕೇಳುತ್ತಲೇ ಬಂದಿದ್ದಾರೆ. ಏಕೆಂದರೆ ಅವರಿಗೆ ಪೂರ್ವ ಚಲುಕ್ಯರ ಅಥವಾ ಬದಾಮಿ ಚಲುಕ್ಯರ ಕಾಲದ ನಾಣ್ಯಗಳ ಬಗ್ಗೆ ತೃಪ್ತಿಕರವಾದ ಮಾಹಿತಿ ದೊರೆತಿಲ್ಲ. ಚಲುಕ್ಯರು ಪ್ರಮುಖವಾಗಿ ಕರ್ನಾಟಕದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಹಾಗೂ ದಕ್ಷಿಣ ಭಾರತದಲ್ಲಿ ಖ್ಯಾತಿಗೆ ಬಂದರೆಂಬ ವಾಸ್ತವಿಕ ದೃಷ್ಟಿಯಿಂದ ಈ ಮೇಲಿನ ಪ್ರಶ್ನೆಯು ಪ್ರಾಮುಖ್ಯತೆಯನ್ನು ಗಳಿಸುತ್ತದೆ. ಉತ್ತರ ಭಾರತದ ಹರ್ಷನನ್ನು ಸೋಲಿಸಿದ ಖ್ಯಾತಿಯು ಈ ವಂಶದ ರಾಜರಿಗೆ ಸಲ್ಲುತ್ತದೆ. ಐಹೊಳೆ ಬಾದಾಮಿ ಪಟ್ಟದ ಕಲ್ಲು ಮತ್ತು ಮಹಾ ಕೂಟದಲ್ಲಿ ಅವರ ಸಾಂಸ್ಕೃತಿಕ ರಂಗದ ಅದರಲ್ಲೂ ವಾಸ್ತುಶಿಲ್ಪಕ್ಕೆ ಅವರ ಕೊಡುಗೆ ಅಪಾರ. ಈ ಮೇಲಿನ ಅಂಶಗಳಿಂದ ನಾಣ್ಯಗಳ ಬಗೆಗಿನ ಒಂದು ಸ್ಪಷ್ಟ ಚಿತ್ರಣವನ್ನು ಯಾರೇ ಆದರೂ ನಿರೀಕ್ಷಿಸುತ್ತಾರೆ. ಆದರೆ ದುರಾದೃಷ್ಟವಶಾತ್ ಚಲುಕ್ಯರ ನಾಣ್ಯಗಳ ಬಗ್ಗೆ ನಮಗೆ ತಿಳಿದಿರುವ ವಿಷಯ ಬಲು ಕಡಿಮೆ. ಇದು ಕೆಲವು ವಿದ್ವಾಂಸರನ್ನು ಚಲುಕ್ಯರ ಕಾಲದಲ್ಲಿ ನಾಣ್ಯಗಳ ಚಲಾವಣೆಯೇ ಇರಲಿಲ್ಲ ವಸ್ತು ವಿನಿಮಯವೆ ವ್ಯಾಪಾರದ ನಿಯಮವಾಗಿತ್ತು ಎಂದು ಯೋಚಿಸುವಂತೆ ಮಾಡಿದೆ. ಈ ಮೇಲಿನ ಅಂಶವನ್ನು ದೊರೆಯುವ ಎಲ್ಲಾ ಆಧಾರಗಳ ಸಹಾಯದಿಂದ, ಕೂಲಂಕಷವಾಗಿ ತಿಳಿಯುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

ಈ ರಾಜವಂಶದ ನಾಣ್ಯಗಳ ಬಗ್ಗೆ ಎಲಿಯಟ್ ಎಂಬುವವರು ಪ್ರಥಮವಾಗಿ, ತಮ್ಮ ದಕ್ಷಿಣ ಭಾರತದ ನಾಣ್ಯಗಳು ಎಂಬ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.[1] ಆದರೆ ಅವರಿಂದ ಉಲ್ಲೇಖಿಸಲ್ಪಟ್ಟ ಈ ನಾಣ್ಯಗಳ ಮೇಲೆ ಯಾವ ರೀತಿಯ ಬರಹವಾಗಲಿ ಗುರುತುಗಳಾಗಲಿ ಮಾಡಿಲ್ಲ. ಈ ರಾಜವಂಶದ ರಾಜರುಗಳ ಯಾವ ಹೆಸರನ್ನಾಗಲಿ ಅಥವಾ ಬಿರುದನ್ನಾಗಲಿ ಈ ನಾಣ್ಯಗಳು ಒಳಗೊಂಡಿಲ್ಲ. ನಾಣ್ಯದ ಮುಮ್ಮುಖದಲ್ಲಿ ವರಾಹದ ಚಿತ್ರವಿದ್ದು ಅದರ ಹಿಮ್ಮುಖದಲ್ಲಿ ಹೂವಿನ ವಿನ್ಯಾಸದ ಚಿತ್ರ ಮಾತ್ರ ಇದೆ. ಈ ವಂಶದ ರಾಜಲಾಂಛನವಾದ ವರಾಹದ ಚಿತ್ರ ನಾಣ್ಯಗಳ ಮೇಲೆ ಕಂಡುಬಂದಿರುವ ಮುಖ್ಯ ಕಾರಣದಿಂದ ನಾಣ್ಯ ಶಾಸ್ತ್ರಜ್ಞರು, ಈ ನಾಣ್ಯಗಳನ್ನೂ ಚಾಲುಕ್ಯರ ನಾಣ್ಯಗಳೆಂದು ತೀರ್ಮಾನಿಸಿದ್ದಾರೆ. ಆದರೆ ಈ ವಂಶಕ್ಕೆ ಸೇರಿದ ನೂರಕ್ಕೂ ಹೆಚ್ಚು ಶಾಸನಗಳಿರುವುದರಿಂದ ಬರಹವಿಲ್ಲದ ಈ ನಾಣ್ಯಗಳ ಬಗ್ಗೆ ಹಲವರು ಪ್ರಶ್ನಿಸಿದ್ದಾರೆ. ಚಾಲುಕ್ಯರ ಚಿನ್ನದ ನಾಣ್ಯಗಳು ವರಾಹ ಚಿತ್ರವನ್ನು ಹೊಂದಿರುವುದರಿಂದ ಈ ನಾಣ್ಯಗಳಿಗೆ ವರಾಹ ಎಂಬ ಹೆಸರು ಬಂದಿತೆಂದು ನಂಬಲಾಗಿದೆ ಮತ್ತು ಈ ಹೆಸರು ಮುಂದಿನ ಅವಧಿಯಲ್ಲಿ ಬಹಳ ಜನಪ್ರಿಯವಾಗಿ ಒಂದು ನಾಣ್ಯ ವರಾಹದ ಚಿತ್ರ ಹೊಂದಿರಲಿ, ಹೊಂದಿಲ್ಲದಿರಲಿ, ಆ ಹೆಸರಿನಿಂದಲೇ ಕರೆಯಲ್ಪಟ್ಟಿತು. ಹೀಗೆ ವರಾಹ ನಾಣ್ಯಗಳ ಪದ್ಧತಿಯನ್ನು ಪ್ರಾರಂಭಿಸಿದ ಕೀರ್ತಿಬಾದಾಮಿ ಚಾಲುಕ್ಯರಿಗೆ ಸಲ್ಲುತ್ತದೆ.[2] ಆದರೆ ಇದು ಸಹ ಊಹೆಗಳ ಮೇಲೆ ಆಧಾರವಾಗಿದೆ. ಎಸ್. ರಾಮಯ್ಯನವರು ಎರಡು ಸಂದೇಹಾಸ್ಪದ ನಾಣ್ಯಗಳನ್ನು ಈ ವಂಶಕ್ಕೆ ಸೇರಿದ ನಾಣ್ಯಗಳೆಂದು ವಾದಿಸಿದ್ದಾರೆ.[3] ವಾಸ್ತವಿಕವಾಗಿ ಈ ನಾಣ್ಯಗಳ ಬಗ್ಗೆ ಇವರೊಬ್ಬರೇ ಈ ಮೇಲಿನ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದು. ಇದುವರೆಗೆ ಯಾರೂ ಕೂಡ ನಾಣ್ಯಗಳ ಬಗೆಗಿನ ಇವರ ವಾದವನ್ನು ಧೃಡಪಡಿಸಿದ್ದೇ ಇಲ್ಲ. ಇವುಗಳಲ್ಲಿ ಎರಡು ಚಿನ್ನದ ನಾಣ್ಯಗಳು ಉಳಿದೆರಡು ಚಿನ್ನ ಮತ್ತು ಬೆಳ್ಳಿಯ ಮಿಶ್ರ ಲೋಹದ ನಾಣ್ಯಗಳು. ಮೊದಲು ಎರಡು ನಾಣ್ಯಗಳು 117 ಗ್ರೇನ್ ತೂಕದ್ದಾಗಿದ್ದು ಅದರ ಮುಮ್ಮುಖದಲ್ಲಿ ಶ್ರೀ ವಿಕ್ರಮ ಎಂಬ ಪದವಿದ್ದು ಸೂರ್ಯ ಚಂದ್ರರ ಚಿತ್ರದ ಜೊತೆಗೆ ಅವರ ಕುಲದೇವರಾದ ಕಾರ್ತಿಕೇಯನ ಚಿತ್ರವಿದೆ. ಈ ನಾಣ್ಯಗಳ ಮೇಲೆ ಎಸ್. ರಾಮಯ್ಯನವರು ಒಂದು ನವಿಲಿನ ಚಿತ್ರವನ್ನು ಸಹ ಗುರುತಿಸಿದ್ದಾರೆ. ಇನ್ನು ಸ್ವಲ್ಪ ಮುಂದುವರೆದು ಈ ನಾಣ್ಯಗಳನ್ನು ಕ್ರಿ.ಶ. 655 ರಿಂದ 681 ರವರೆಗೆ ಆಳಿದ ಈ ವಂಶದ ದೊರೆಯಾದ ಮೊದಲನೆ ವಿಕ್ರಮಾದಿತ್ಯನು ಚಲಾವಣೆಗೆ

ದನೆಂದು ವಾದಿಸಿದ್ದಾರೆ. ಮಿಶ್ರಲೋಹದ ನಾಣ್ಯಗಳು ಟ್ಟು ಕಡಿಮೆ ಚಿನ್ನದ ನಾಣ್ಯಗಳಂತೆ ಇದ್ದು ಶ್ರೀ ವಿಕ್ರಮ ಹಾರಾಜ ಎಂಬ ಏಳನೇ ಶತಮಾನದ ಕನ್ನಡ ಲಿಪಿಯ ಹವಿದೆ. ಏನೇ ಆದರೂ ಅನೇಕ ಮಂದಿ ವಿದ್ವಾಂಸರು ನಾಣ್ಯಗಳ ಬಗೆಗಿನ ಪುರಾವೆಗಳನ್ನು ಶಂಕಿಸಿ ಅದು ಲುಕ್ಯರು ಹೊರಡಿಸಿದ ನಾಣ್ಯಗಳೇ ಅಲ್ಲವೆಂದು ಅಭಿ ಪ್ರಾಯ ಪಟ್ಟಿದ್ದಾರೆ.

ಮತ್ತೊಂದು ವಾದದ ಪ್ರಕಾರ ಶಿಲಾಶಾಸನಗಳನ್ನು ಗಣನೆಗೆ ತೆಗೆದುಕೊಂಡು ನಾಣ್ಯಗಳ ಪದ್ಧತಿಯ ಗ್ಗೆ ಈ ಶಾಸನಗಳು ಉಪಯುಕ್ತ ಮಾಹಿತಿಯನ್ನು ಡುತ್ತವೆ. ಈಗ ನಾವು ಚಲುಕ್ಯರ ನಾಣ್ಯಗಳ ಲೆ ಬೆಳಕನ್ನು ಚೆಲ್ಲುವ ಕೆಲವು ಶಾಸನಗಳನ್ನು ಡೋಣ. ಪಟ್ಟದ ಕಲ್ಲಿನ ಸಂಗಮೇಶ್ವರ ದೇವಾಲ ದ ಮಂಟಪದ ಮೊದಲನೆ ಕಂಬದ ಶಾಸನವು ಹದೇವ ಗೆರೆಯ ಹೆಗ್ಗಡೆಯಾಗಿದ್ದ ಪೊಲಿಯಾಚಿಯು ಡುಗೆಯಾಗಿ ನೀಡಿದ 51 ಚಿನ್ನದ ಗದ್ಯಾಣದ ಬಗ್ಗೆ ಸುತ್ತದೆ.[4] ಈ ಕೊಡುಗೆಯು ವಿಜೇಶ್ವರ ದೇವಾಲ ದ ಕಂಬಗಳನ್ನು ತಯಾರಿಸಲು ಉಪಯೋಗಿಸಲ್ಪ ತು. ಇದೇ ಸ್ಥಳದ ವಿಜಯಾದಿತ್ಯನ ಕಾಲದ ಶಾಸ ವು ಒಬ್ಬ ಬ್ರಾಹ್ಮಣನು 30 ನಿವರ್ತನ ಭೂಮಿ ನ್ನು, 30 ಗದ್ಯಾಣಗಳಿಗೆ ಖರೀದಿಸಿ ವಿಜಯೇಶ್ವರ ವರಿಗೆ ಅರ್ಪಿಸಿದ ವ್ಯವಹಾರದ ಬಗ್ಗೆ ತಿಳಿಸುತ್ತದೆ.[5]

ಐಹೊಳೆಯಲ್ಲಿನ ಅನೇಕ ಶಾಸನಗಳು ಹಣವನ್ನು ಥೇಚ್ಚವಾಗಿ ಬಳುಸುತ್ತಿದ್ದ ವ್ಯವಹಾರಗಳನ್ನು ತಿಳಿಸು ೆ. ಲಾಡಖಾನ್ ದೇವಸ್ಥಾನದ ಹೊರಗೋಡೆಯ ಲಿರುವ ಒಂದು ಶಾಸನವು ಚೆನ್ನಮ ಸೋಮಯಾ ು ಕೊಡುಗೆಯನ್ನು ತಿಳಿಸುತ್ತ ಒಂದು ಗದ್ಯಾಣ ್ನು ಅನ್ನಪ್ರಾಶನ ಶ್ರೀಮಂತ ಚೌಲ, ಧಾರಣ, ಪನಯನ ಮತ್ತು ಸಮವರ್ತನಕ್ಕೂ ಎರಡು ಗದ್ಯಾ ಳನ್ನು ಮದುವೆಗೆ ಮತ್ತು ಅಗ್ನಿಹೋತ್ರಕ್ಕೂ ಾರು ಗದ್ಯಾಣಗಳನ್ನು ಚಾತುರ್ಮಾಸಕ್ಕೂ ನಾಲ್ಕು ್ಯಾಣಗಳನ್ನು ಅಗ್ನಿಸ್ಟೋಮಕ್ಕೂ ಕೊಡುಗೆಯಾಗಿ ಡಿರುವುದನ್ನು ತಿಳಿಸುತ್ತದೆ. ಹೀಗೆ ಈ ಶಾಸನದಲ್ಲಿ ್ಯಾಣ ಎಂಬ ಪದವನ್ನು ನಾಲ್ಕು ಭಾರಿ ಉಪ ೋಗಿಸಲಾಗಿದೆ.[6] ದುರ್ಗ ದೇವಾಲಯದಲ್ಲಿ ವಿಕ್ರಮಾ ್ಯನ ಕಾಲದ ಇನ್ನೊಂದು ಶಾಸನವಿದ್ದು ಅದು ಸಹ ್ಯಗಳ ಬಗ್ಗೆ ಉಲ್ಲೇಖಿಸುತ್ತದೆ. ಈ ಶಾಸನವು ದು ಹೊರೆ ಭಾರಕ್ಕೆ ನಾಲ್ಕು ವೀಸೆಗಳಂತೆ, ಆದಿತ್ಯ ದೇವಾಲಯಕ್ಕೆ ಕೊಡುಗೆಯಾಗಿ ನೀಡಿರುವುದನ್ನು ತಿಳಿಸುತ್ತದೆ.[7] ದೇವಾಲಯದ ಬಳಿಯಿರುವ ಎಂಟನೆ ಶತಮಾನಕ್ಕೆ ಸೇರಿದ ಇನ್ನೊಂದು ಶಾಸನವು, ದ್ವಾದಶದ ಆಚರಣೆ, ಅಂದರೆ ಹನ್ನೆರಡು ದಿನಗಳ ಹಬ್ಬದ ಆಚರಣೆಗೆ ಒಂದು ಸಾವಿರದ ಒಂದು ನೂರ ಹನ್ನೆರಡು ಗದ್ಯಾಣಗಳನ್ನು ಕೊಡುಗೆಯಾಗಿ ನೀಡಿರುವುದನ್ನು ಉಲ್ಲೇಖಿಸುತ್ತದೆ.[8] ಮಂಗಳೇಶನ ಬಾದಾಮಿ ಗುಹಾ ಶಾಸನವು ಲಂಜಿಗೇಶ್ವರ ದೇವಾಲಯಕ್ಕೆ ಹಾರ ಮಾಡುವವನಿಗೆ ಅರ್ಧ ಮಾಸೆಯನ್ನು ದತ್ತಿ ನೀಡಿರುವುದನ್ನು ತಿಳಿಸುತ್ತದೆ.[9] ಭೋಗ ಶಕ್ತಿಯ ಅಂಜನೇರಿಯ ಶಾಸನವು ರೂಪಕ ಎಂಬ ಒಂದು ವಿಧದ ನಾಣ್ಯಗಳ ಬಗ್ಗೆ ಪ್ರಸ್ತಾಪಿಸುತ್ತದೆ.[10] ಬಹುಶಃ ಇವು ಬೆಳ್ಳಿಯ ನಾಣ್ಯಗಳಿರಬಹುದು. ಎರಡನೆ ವಿಕ್ರಮಾದಿತ್ಯನ ಲಕ್ಷ್ಮೇಶ್ವರ ಶಾಸನಗಳು ಪಣವನ್ನು ಕೊಡುಗೆಯಾಗಿ ನೀಡಿರುವುದನ್ನು ತಿಳಿಸುತ್ತವೆ.[11]

ಈ ಕಾಲದಲ್ಲಿ ವ್ಯಾಪಾರ ಮತ್ತು ವಾಣಿಜ್ಯವು ಬಹಳ ಉಚ್ಚಮಟ್ಟದಲ್ಲಿತೆಂಬುದನ್ನು ಅನೇಕ ಶಾಸನಗಳಿಂದ ತಿಳಿದು ಬರುತ್ತದೆ. ಐಯ್ಯಹೊಳೆ ಅಥವಾ ಆರ್ಯಪುರ ಅಥವಾ ಇಂದಿನ ಐಹೊಳೆಯು ವಾಣಿಜ್ಯ ಮತ್ತು ವ್ಯಾಪಾರ ಚಟುವಟಿಕೆಗಳ ಮುಖ್ಯ ಕೇಂದ್ರವಾಗಿತ್ತು. ಅವರಿಗೆ ಅವರದೇ ಆದ ಒಂದು ಸಂಘವಿದ್ದು ಸದಸ್ಯರು ವ್ಯಾಪಾರದ ಸಲುವಾಗಿ ಭಾರತದ ಹೊರಗಿನ ದೂರ ಪ್ರದೇಶಗಳಿಗೆ ತಮ್ಮ ಸರಕುಗಳೊಂದಿಗೆ ಸಾಕಷ್ಟು ಹಣವನ್ನು ತೆಗೆದುಕೊಂಡು ಹೋಗುತ್ತಿದ್ದಿರಬಹುದು. ಇದು ಟಂಕಿಸಿದ ನಾಣ್ಯಗಳ ಅವಶ್ಯಕತೆಯನ್ನು ತಿಳಿಸುತ್ತದೆ. ಈ ಮೇಲಿನ ಎಲ್ಲಾ ಆಧಾರಗಳ ಸಮೀಕ್ಷೆಯಿಂದ ನಾವು ಈ ಕೆಳಗಿನ ಮುಖ್ಯಾಂಶಗಳನ್ನು ತಿಳಿಯಬಹುದು.

1. ನಾಣ್ಯಗಳ ಅಭಾವ ಅಥವಾ ಕೊರತೆಯು, ನಾಣ್ಯಗಳೇ ಇರಲಿಲ್ಲವೆಂದು ತೋರಿಸುವುದಿಲ್ಲ.

2. ಗದ್ಯಾಣ ರೂಪಕ ಪಣ ಮತ್ತು ವೀಸ ಮುಂತಾದ ನಾಣ್ಯಗಳು ಅನೇಕ ಧಾರ್ಮಿಕ ಮತ್ತು ಇತರ ರೀತಿಯ ವ್ಯವಹಾರಗಳಲ್ಲಿ ಉಪಯೋಗಿಸುತ್ತಿದ್ದುದ್ದನ್ನು ಶಾಸನಗಳು ತಿಳಿಸುತ್ತವೆ.

3. ಚಾಲುಕ್ಯರ ನಾಣ್ಯಗಳನ್ನು ವರಾಹಗಳೆಂದು ಕರೆಯುವುದನ್ನು ಯಾವ ಶಾಸನಗಳೂ ದೃಢಪಡಿಸುವುದಿಲ್ಲ. ಗದ್ಯಾಣಗಳು ಅಂದಿನ ಅತ್ಯುತ್ತಮ ಚಿನ್ನದ

ನಾಣ್ಯಗಳಾಗಿದ್ದವು. ಬಹುಶಃ ಜನರು ಈ ನಾಣ್ಯಗಳಲ್ಲಿರುವ ವರಾಹ ಚಿತ್ರವನ್ನು ಕಂಡು ಇವುಗಳನ್ನು ವರಾಹ ಎಂದು ಕರೆದಿರಬಹುದು.

4. ಆ ಕಾಲದಲ್ಲಿ ನಡೆಯುತ್ತಿದ್ದ ಉಚ್ಚಮಟ್ಟದ ವಾಣಿಜ್ಯ ಹಾಗು ವ್ಯಾಪಾರವು ನಾಣ್ಯಗಳ ಉಪಯೋಗವನ್ನು ಸಮರ್ಥಿಸುತ್ತದೆ. ನಾಣ್ಯಗಳ ಅಭಾವವು ಅಂದಿನ ವ್ಯಾಪಾರ ಹಾಗೂ ವಾಣಿಜ್ಯದ ಕುಸಿತವನ್ನು ಸೂಚಿಸುವುದಿಲ್ಲ.

5. ಚಾಲುಕ್ಯರ ಕಾಲದ ನಾಣ್ಯಗಳನ್ನು ಬೆಳಕಿಗೆ ತರಲು ಅವರ ರಾಜಧಾನಿಯ ಸುತ್ತ ಮುತ್ತ ಉತ್ಖನನ ಕೈಕೊಳ್ಳಬೇಕು.

6.ಈ ಎಲ್ಲಾ ಸಾಕ್ಷಿ ಪುರಾವೆಗಳಿಂದ ಚಾಲುಕ್ಯ ದೊರೆಗಳು ಚಿನ್ನದ, ತಾಮ್ರದ ಬಹುಶಃ ಬೆಳ್ಳಿಯ ನಾಣ್ಯಗಳನ್ನೂ ಸಹ ಟಂಕಿಸುತ್ತಿದ್ದರೆಂದು ತೀರ್ಮಾನಕ್ಕೆ ಬರಬಹುದು.

---

## ಟಿಪ್ಪಣಿಗಳು

1. ಸರ್. ವಾಲ್ಟರ್ ಎಲಿಯಟ್: 'ಕಾಯಿನ್ಸ್ ಆಫ್ ಸದರನ್ ಇಂಡಿಯಾ' ಚಿತ್ರ 1,9,21 ಮತ್ತು 23.
2. ಎ.ವಿ. ನರಸಿಂಹಮೂರ್ತಿ: 'ದಿ ಕಾಯಿನ್ಸ್ ಆಫ್ ಕರ್ನಾಟಕ' ಪುಟ 67.
3. 'ಜರ್ನಲ್ ಆಫ್ ದಿ ನ್ಯುಮಿಸ್‌ಮ್ಯಾಟಿಕ್ ಸೊಸೈಟಿ': ಸಂ. 26, ಪು. 244, ಸಂ. 27, ಪು46.
4. ಎ.ಎಮ್. ಅಣ್ಣಿಗೇರಿ: 'ಪಟ್ಟದಕಲ್ಲಿನ ದೇವಾಲಯಗಳು' ಪು 20.
5. 'ಎಪಿ. ಇಂಡಿಕಾ' ಸಂ. 3, ಪು 1.
6. 'ಸೌತ್ ಇಂಡಿಯನ್ ಇನ್ಸ್ಕ್ರಿಪ್ಸನ್ಸ್' ಸಂ. 8, ಪು 287.
7. ಎ.ಎಮ್. ಅಣ್ಣಿಗೇರಿ: 'ಐಹೊಳೆ ದೇವಾಲಯಗಳು', ಪು 149.
8. ಎ.ಎಮ್. ಅಣ್ಣಿಗೇರಿ: 'ಐಹೊಳೆ ದೇವಾಲಯಗಳು', ಪು 151.
9. 'ಇಂಡಿಯನ್ ಆಂಟಿಕ್ವೆರಿ' ಸಂ. 10 ಪು. 59
10. 'ಎಪಿ. ಇಂಡಿಕಾ': ಸಂ. 25, ಪು 225.
11. 'ಎಪಿ. ಇಂಡಿಕಾ': ಸಂ. 14, ಪು 188.

ಡಾ॥ ಶಿವಗೌಡ ಬಾ. ಪಾಟೀಲ (ತೋಚರಿ)

# ರಾಜಾದಿತ್ಯ

ಕನ್ನಡದಲ್ಲಿ ಗಣಿತ ಗ್ರಂಥವನ್ನು ಮೊತ್ತ ಮೊದಲಿಗೆ ಬರೆದ ಕವಿ ರಾಜಾದಿತ್ಯನೆನ್ನಬಹುದು. ಈತನು ೧) ವ್ಯವಹಾರ ಗಣಿತ, ೨) ಕ್ಷೇತ್ರಗಣಿತ, ೩) ಲೀಲಾವತಿ, ೪) ಜೈನಗಣಿತಸೂತ್ರ ೫) ಟೀಕೋದಾಹರಣ, ೬) ಚಿತ್ರಹಸುಗೆ ಮೊದಲಾದ ಅನೇಕ ಗಣಿತಗ್ರಂಥಗಳನ್ನು ಬರೆದಿರುವುದಾಗಿ ತಿಳಿದುಬರುತ್ತದೆ.[1] ಆದರೆ ಯಾವೊಂದು ಗ್ರಂಥವೂ ಸೌಲಿತ್ಯವಿಲ್ಲದೆ ಸಮಗ್ರವಾಗಿ ದೊರಕದಿರುವುದು ಕನ್ನಡಿಗರ ದುರ್ದೈವ ವೆನ್ನಬಹುದು. ಈತನಿಗೆ 'ರಾಜವರ್ಮ', 'ಭಾಸ್ಕರ', ರಾಚಯ್ಯ ಎಂಬ ಹೆಸರುಗಳೂ[2] 'ಗಣಿತವಿಳಾಸ', 'ಪದ್ಯವಿದ್ಯಾಧರ', 'ಉತ್ತಮಭವ್ಯಭೂಷಣ', 'ಜನಪದ ಕಮಲ', 'ಮಧುಕರ', 3 'ಗಣಿತಶಾಸ್ತ್ರಪ್ರವೀಣ'[4], ಒಜೆವೆಡಂಗ'[5] ಮುಂತಾದ ಬಿರುದುಗಳು ಇದ್ದಂತೆ ಗೊತ್ತಾಗುತ್ತವೆ.

ಈತನ ಗುರು ಶುಭಚಂದ್ರ ತಂದೆಯ ಹೆಸರು ಶ್ರೀಪತಿ, ತಾಯಿಯ ಹೆಸರು ವಸಂತಿ, ಅಣ್ಣ ಶಾಂತ ರತ್ಮೇಶ್ವರರು; (ಪೋಷಕರು) ಬಾಹುಬಲಿಭರತರು ಎಂದು ಅವನ ಗ್ರಂಥವಾದ ವ್ಯವಹಾರ ಗಣಿತದಿಂದ ತಿಳಿದುಬರುತ್ತದೆ[6].

ಜಿನನಾಥಂ ನೇಮಿನಾಥಂ ನಿಜಗುರು ಶುಭಚಂದ್ರೋತ್ತಮಂ ತಂದೆ ಸರ್ವಾ
ವನಿ ಸಂಪೂಜ್ಯತ್ಯಾಸ್ಪದಂ ಶ್ರೀಪತಿ ಜನನಿ ವಸಂತಾಖ್ಯೆ ಯನ್ನಾಗ್ರಜಂಶಾಂ
ತನುವರತಾ ಯೋಗಮಂ ಬಾಹುಬಲಿ ಭರತರಾತ್ಮೇಶ್ವರರ್ ಕಾಮಿನಲ್ ಭಾ
ಪ್ಪಿನೆ ರಾಜಾದಿತ್ಯನೇಂ ಧನ್ಯನೋ ವಿಶದಯಶಂ ಸದ್ಗುಣಾಂಭೋಧಿ ಚಂದ್ರಂ

ರಾಜಾದಿತ್ಯನು ಸುಂದರನೂ ಸತ್ಯವಂತನೂ ಪರೋಪಾಕಾರಿಯೂ ಅಖಿಲ ವಿದ್ಯಾವಿದನೂ ಎಂದೆನಿಸಿಕೊಂಡು ರಾಜ್ಯಸಭೆಯನ್ನಲಂಕರಿಸುವ ಯೋಗ್ಯತೆಯಿಂದ ಕೂಡಿದವನಾಗಿದ್ದನು.

ಈತನ ಕಾಲದ ವಿಚಾರವಾಗಿ ಅನೇಕ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯ ಕಾಣಬಹುದು. ಎಂ. ಮರಿಯಪ್ಪ ಭಟ್ಟ[7], ಕುವೆಂಪು[8] ಇವರು ೧೨ನೇ ಶತಮಾನದ ಪೂರ್ವಾರ್ಧವೆಂದು ಅಭಿಪ್ರಾಯ ಪಡುತ್ತಾರೆ. ಆದರೆ ಕರ್ಣಾಟಕ ಕವಿಚರಿತೆಯಲ್ಲಿ ಆರ್. ನರಸಿಂಹಾ ಚಾರ್ಯರು ೧೧೯೦ ಎಂದು ಹೇಳುತ್ತಾರೆ[9] ಆದರೆ ಏನೇ ಇದ್ದರೂ ಹನ್ನೆರಡನೇ ಶತಮಾನದವನೆಂಬುದು ತಿಳಿದು ಬರುತ್ತದೆ. ಅದರಂತೆ ಇವರ ನೆಲೆಯ ಬಗ್ಗೆಯೂ ಸಾಕಷ್ಟು ವಿವಾದಗಳಿವೆ. ಇವನು ವಿಷ್ಣುವ ರ್ಧನನೆಂತಲೂ ಹೇಳುತ್ತಾರೆ[10]. ಆದರೆ ಹೊಯ್ಸಳರಲ್ಲಿ ಅನೇಕರು ಈ ಹೆಸರು ಹೊಂದಿದವರಾಗಿದ್ದರು.

ಈ ಮಾತಿನಿಂದ ರಾಜಾದಿತ್ಯನು ಕೂಹೂಂಡಿ ಮಂಡಲವನ್ನಾಳುತ್ತಿದ್ದ ರಟ್ಟರಸರ ರಾಜ್ಯದಲ್ಲಿ ಇದ್ದಿರಬಹುದೆಂದು ಹೇಳಲು ಅವಕಾಶವಿದೆ.

"ಕೂಂಡಿಮಂಡಲಕ್ಕನುಪಮ ರತ್ನ ಮಂಡನವೆನಿಪ್ಪ ಹೂವಿನಬಾಗೆ"[11] ಎಂದು ಹೇಳುವದರಿಂದ ರಾಜಾದಿತ್ಯನು ಕೂಹೂಂಡಿಮಂಡಲದ ಆಡಳಿತ ವಿಭಾಗವಾದ 'ಪೂವಿನ ಬಾಗೆ' ಇಂದಿನ 'ರಾಯಬಾಗ' ಆಗಿರಬಹುದು. ರಟ್ಟರು ಈ ಕೂಹೂಂಡಿ ಮಂಡಲವನ್ನು ಸುಮಾರು ೯೨೦ರಿಂದ ೧೨೩೦ರವರೆಗೆ ಆಳಿದ್ದಾರೆ. ಇವರು ರಾಷ್ಟ್ರಕೂಟರಿಗೂ ಚಾಲುಕ್ಯರಿಗೂ ಕಲಚೂರಿಗಳಿಗೂ ಸಾಮಂತ ಮಹಾಸಾಮಂತ, ಮಂಡಳಿಕ ಮಹಾಮಂಡಳಿತರಾಗಿ ಕೊನೆಗೆ ಸ್ವತಂತ್ರರಾಗಿ ಸೌಂದತ್ತಿಯಿಂದ ಬೆಳಗಾವಿಗೆ ತಮ್ಮ ರಾಜ್ಯಧಾನಿಯನ್ನು ಬದಲಿಸಿದರು[12].

ಹಿಂದೆಯಾವನೋ ಒಬ್ಬ ಪೂರ್ವಾಚಾರ್ಯನು ಬರೆದದ್ದನ್ನು ತಾನು "ಕುಂತಣ ಬಾಗೆಯ ಪರಿಭಾಷೆಯಲ್ಲಿ – ಪೂರ್ವಾಚರ್ಯರ್ಂ ಲೋಗರರಿವಂತು ಕುಂತಣಬಾಗೆಯ ಪರಿಭಾಷೆಯಲ್ಲವಂ ರಚಿಸಿದಂ" ಎಂದು ಹೇಳುವದರಿಂದ ಪುಷ್ಟಿಸಿಗುತ್ತದೆ. ರಟ್ಟರ ರಾಜ್ಯದಲ್ಲಿದ್ದುಕೊಂಡು ಅಂದಿನ ಕನ್ನಡ ಪರಿಭಾಷೆಯಲ್ಲಿ ಗಣಿತ ವಿಷಯವನ್ನು ಕಾವ್ಯದಲ್ಲಿ ಅದರ ಸೂತ್ರಗಳೊಂದಿಗೆ ವಿವರಿಸುವದೆಂದರೆ ಕನ್ನಡಿಗರಿಗೆಲ್ಲ ಹೆಮ್ಮೆ ಎನ್ನಬಹುದು. ರಾಜಾದಿತ್ಯನಗ್ರಂಥಗಳ ಕುರಿತು ಸಂಕ್ಷಿಪ್ತ ವಿವರಣೆ:

**೧) ವ್ಯವಹಾರ ಗಣಿತ[13]:** ಈ ಗ್ರಂಥವು ಗದ್ಯ ಪದ್ಯಾತ್ಮಕವಾಗಿದೆ. ಸೂತ್ರಗಳನ್ನು ಪದ್ಯರೂಪ

ವಾಗಿರಬರೆದು ಅದಕ್ಕೆ ಗದ್ಯದಲ್ಲಿ ಟೀಕೆಗಳನ್ನು ಕೊಟ್ಟಿದ್ದಾನೆ. ಈ ಗ್ರಂಥವು ಎಂಟು ಅಧಿಕಾರಗಳಾಗಿ ವಿಭಾ ಗಿಸಿದೆ ಒಂದೊಂದು ಅಧಿಕಾರಕ್ಕೂ ಹಾರವೆಂದು ಸಂಜ್ಞೆಯಿದೆ.

ಈ ಗ್ರಂಥದಲ್ಲಿ ಸಹಜತ್ರಿರಾಶಿ, ಸಹಜ ಪಂಚ ರಾಶಿ, ವ್ಯಸ್ತಪಂಚರಾಶಿ, ಸಹಜ ಸಪ್ತರಾಶಿ, ವ್ಯಸ್ತ ತ್ರಿರಾಶಿ, ವ್ಯಪ್ತಸಪ್ತರಾಶಿ, ಮುಂತಾದವು ಅಲ್ಲದೆ ಶ್ರೇಣಿ ಸೂತ್ರ, ಬೀಜ ಗಣಿತ ಇತ್ಯಾದಿಯನ್ನು ಹೇಳಿರುವದ ರಿಂದ ಆ ಕಾಲದ ಜನರಲ್ಲಿ ಗಣಿತದ ಬಗ್ಗೆ ಇದ್ದ ತಿಳುವಳಿಕೆ ಗೊತ್ತಾಗುತ್ತದೆ. ಉದ್ದಾಳತೆ, ತೂಕ, ಘನ ಹಾಗೂ ದ್ರವಗಳ ಅಳತೆ ಕೋಷ್ಟಕಗಳನ್ನು ಕೊಡಲಾಗಿದೆ. ಇದರಿಂದ ಅಂದಿನ ವ್ಯವಹಾರದ ಕಲ್ಪನೆಯಾಗುತ್ತದೆ.

೨) **ಕ್ಷೇತ್ರಗಣಿತ**[14]: ಕ್ಷೇತ್ರ ಫಲದ ನಿಯಮಗಳನ್ನು ಇದರಲ್ಲಿ ಹೇಳಲಾಗಿದೆ

**ವೃತ್ತಾಕಾರದ ಭೂಮಿಯ**

ಸುತ್ತಳೆದ ಧರ್ಮಮನೆ ಬಿಡುಪುದುಳಿದರ್ಧದೊಳಂ
ಮತ್ತರಡು ಭಾಗಮಾಡಿಯೆ
ಮತ್ತೊಂದರೆಳಿಂದ ನೊತ್ತಿ ಕಂಭಂಬರ್ಕಂ

ಈ ಪ್ರಕಾರವಾಗಿ ಪದ್ಯದಲ್ಲಿ ಹೇಳಿಕೊಳ್ಳುತ್ತಾನೆ.

೩) **ಲೀಲಾವತಿ:** ಇದದರಲ್ಲಿ ಪದ್ಯರೂಪದಲ್ಲಿ ಗಣಿತ ವಿಷಯವನ್ನು ಬಿಡಿಸಿ ತೋರಿಸಲಾಗಿದೆ

೪) **ಜೈನಗಣಿತ ಸೂತ್ರ :** ಪ್ರಶ್ನೆಗಳನ್ನು ಕೇಳಿ ಅವುಗಳಿಗೆ ಉತ್ತರವನ್ನು ಪಡೆಯುವ ಸುಲಭ ವಿಧಾನ ವನ್ನು ತೋರಿಸಿಕೊಡಲಾಗಿದೆ.

೫) **ಚಿತ್ರ ಹಸುಗೆ :** ಇದೂ ಕೂಡ ಸೂತ್ರ ಟೀಕಾರೂಪವಾಗಿದೆ

೬) **ವ್ಯವಹಾರ ರತ್ನ** – ಇದರಲ್ಲಿ ಪದ್ಯರೂಪ ದಲ್ಲಿ ಐದು ಅಧಿಕಾರಿಗಳಿದ್ದು ಗಣಿತ ಸೂತ್ರವನ್ನು ಹೇಳಲಾಗಿದೆ

**ತ್ರಿತಶತದೆ ಕೊಂಡು ತಾಂ ಪಂ**

ಚಶತದಿಂ ಕೊಟ್ಟು ಲಾಭಮರಿವತ್ತ ಚಂ
ಪ್ರಕಟಮನೆ ಪಡೆಯೆ ಬರಿಸ
ಕ್ಕರಂಕ ಚರಿತ್ರ ಮೊದಲ ಪೊನ್ನೆನಿತಕ್ಕುಂ''

ಪ್ರಾಯಶಃ ಗಣಿತಶಾಸ್ತ್ರಕ್ಕೆ ಸಂಬಂಧ ಪಟ್ಟ ಎಲ್ಲ ವಿಷಯಗಳನ್ನು ತನ್ನ ಗ್ರಂಥಗಳಲ್ಲಿ ತಕ್ಕಮಟ್ಟಿಗೆ ಪ್ರತಿಪಾದಿಸಿದ್ದಾನೆ. ಗಣಿತ ಸೂತ್ರಗಳನ್ನು ಜನರಿಗೆ ಇಷ್ಟ ವಾಗುವಂತೆ ಪದ್ಯರೂಪವಾಗಿ ಬರೆಯುವದು ಕಷ್ಟ. ಆದರೂ ಈ ಕವಿಯು ಸೂತ್ರಗಳನ್ನು ಉದಾಹರಣೆಗಳನ್ನು ಬಹಳ ಲಲಿತವಾದ ಪದ್ಯಗಳಲ್ಲಿ ಚೆನ್ನಾಗಿ ತಿಳಿ ಯುವಂತೆ ಪ್ರಯತ್ನಿಸಿದ್ದಾನೆ. ಈತನಿಗೆ ಗಣಿತ ಶಾಸ್ತ್ರ ಪ್ರಾವೀಣತೆಯೇ ಅಲ್ಲದೆ ಕವಿತಾಪ್ರೌಢಿಮೆಯೂ ಉಂಟೆಂಬುದು ವ್ಯಕ್ತವಾಗುತ್ತದೆ.

---

1. ಆರ್. ನರಸಿಂಹಾಚಾರ್, 'ಕರ್ನಾಟಕ ಕವಿಚರಿತೆ', I, ಪು 331
2. ಎಂ. ಮರಿಯಪ್ಪ ಭಟ್ಟ, 'ವ್ಯವಹಾರ ಗಣಿತ' ಮುನ್ನುಡಿ
3. ಅದೇ
4. ಆರ್. ನರಸಿಂಹಾಚಾರ್, 'ಕರ್ನಾಟಕ ಕವಿಚರಿತೆ' ಪುಟ 331
5. ಕುವೆಂಪು ಸಂಪಾದನೆ, 'ಸಾಹಿತ್ಯ ಭಾರತಿ' ಪು 345
6. ಎಂ. ಮರಿಯಪ್ಪ ಭಟ್ಟ, 'ವ್ಯವಹಾರ ಗಣಿತ' ಮುನ್ನುಡಿ
7. ಎಂ. ಮರಿಯಪ್ಪ ಭಟ್ಟ, 'ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತೆ', ಪು 170
8. ಕುವೆಂಪು, 'ಸಾಹಿತ್ಯ ಭಾರತಿ' ಪು 345
9. 'ಕವಿಚರಿತೆ' ಪು 331
10. ಎಸ್.ಬಿ. ಹಳಕಟ್ಟಿ, 'ಜೀವನಶಿಕ್ಷಣ' 1984ರ ಮಾಸಪತ್ರಿಕೆ
11. 'ಕವಿಚರಿತೆ', ಪುಟ 331
12. 'ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ' ಡಾ॥ ಶಿ.ಬಾ. ಪಾಟೀಲ (ಅಪ್ರಕಟಿತ) ಪಿ ಎಚ್.ಡಿ. ಪ್ರಬಂಧ
13. 'ಕವಿಚರಿತೆ', ಪುಟ 337
14. ಅದೇ
15. ಈ ಪದ್ಯದಲ್ಲಿ ಪ್ರಾಸವು ತಪ್ಪಿದೆ

ಂ.ಪಿ.ಮಹದೇವಯ್ಯ

# ಾಚೀನ ಕರ್ನಾಟಕದ ಮಂತ್ರಿಗಳು ಮತ್ತು ಅಧಿಕಾರಿಗಳು – ಲವು ವಿಚಾರಗಳು

ಕರ್ನಾಟಕ ರಾಜವಂಶಗಳ ಚರಿತ್ರೆಯನ್ನು ಬರೆಯುವಾಗ ಈ ಕೆಲವು ಅಧಿಕಾರಿಗಳನ್ನು ಮತ್ತು ಂತ್ರಿಗಳನ್ನು ಕುರಿತು ವಿದ್ವಾಂಸರು ಮಾಹಿತಿಯನ್ನು ದಗಿಸಿದ್ದಾರೆ.[1] ಆದರೆ ಈ ಮಂತ್ರಿಯನ್ನು ಮತ್ತು ಧಿಕಾರಿಗಳನ್ನು ಒಟ್ಟಿಗೆ ಗಮನಿಸಿದಾಗ ಕೆಲವು ತೂಹಲಕರ ಅಂಶಗಳು ಬೆಳಕಿಗೆ ಬರುತ್ತಿದ್ದ ಅಂತಹ ವನ್ನು ಇಲ್ಲಿ ಗಮನಿಸಲಾಗಿದೆ. ಶಾಸ್ತ್ರ ಗ್ರಂಥಗಳಲ್ಲಿ ಳಿರುವ ಅರ್ಹತೆಯ ಆಧಾರದ ಮೇಲೆ ಇವರುಗನ್ನು ನಿಯಮಿಸಿ ಕೊಳ್ಳುತ್ತಿದ್ದರು ಎಂದು ನಂಬಹುದಾದರೂ, ರಾಜನು ಇವರ ನಿಜವಾದ ಅರ್ಹತೆಯನ್ನು ಪರೀಕ್ಷಿಸಿ ಅನಂತರ ಇವರುಗಳನ್ನು ನೇಮಿಸುತ್ತಿದ್ದನು. ಪ್ರಾಚೀನ ಕರ್ನಾಟಕದಲ್ಲಿ ರಾಜ್ಯ ವಿಸ್ತರಣೆ ತ್ಯಂತ ಮುಖ್ಯ ಕೆಲಸವಾಗಿದ್ದಿತು. ಇದಕ್ಕಾಗಿ ರಾಜನು ತ್ತಾರು ಯುದ್ಧಗಳನ್ನು ಮಾಡಬೇಕಾಗಿದ್ದಿತು. ಸಾಮಂ ರನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳುವುದು ಮುಖ್ಯವಾದ ಸವಾಗಿದ್ದಿತು. ಆದುದರಿಂದ ಮಂತ್ರಿಗಳು ಮತ್ತು ಧಿಕಾರಿಗಳು ಯುದ್ಧಕಲೆಯಲ್ಲಿ ನಿಪುಣರಾದವರಾಗಿರ ಕಾಗಿದ್ದಿತು. ಆದುದರಿಂದ ಬಹುಮಂದಿ ಮಂತ್ರಿಗಳು ತ್ತು ಅಧಿಕಾರಿಗಳು ದಂಡಾಧಿಪತಿ, ದಂಡನಾಯಕ, ನಾಧಿಪತಿ ಮುಂತಾದ ಬಿರುದುಗಳನ್ನು ಹೊಂದಿರು ರೆ. ಅಂದರೆ ಯುದ್ಧದಲ್ಲಿ ನಿಪುಣರಾದವರನ್ನು ಮನಿಸಿ ಅಂತಹವರನ್ನು ಮಂತ್ರಿಯಾಗಿ ಆರಿಸುತ್ತಿದ್ದರು ಬುದು ಖಚಿತವಾಗುತ್ತದೆ. ಉದಾಹರಣೆಗೆ ಸೇವುಣ ಜ್ಯದಲ್ಲಿ ಬನವಾಸಿ, ಬೆಳ್ವೊಲ ಮತ್ತು ಪುಲಿಗೆರೆ ಡುಗಳ ಪ್ರಾಂತಾಧಿಕಾರಿಯಾಗಿದ್ದ ವಂಕದೇವನು ನಾಧಿಪತಿಯಾಗಿದ್ದನು.[2]. ಹಾಗೆಯೇ ಕರಡಿಕಲ್ಲಿನ ರಾಂತಾಧಿಕಾರಿಯಾಗಿದ್ದ ದಾಮೋದರನು ಸೇನಾಧಿಪತಿ ಾಗಿದ್ದನು. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ದಂಡ ಯಕ ಕಾವರಾಜಯ್ಯನು ಎಡೆದೊರೆ ನಾಡಿನ ರಾಂತ್ಯಾಧಿಕಾರಿಯಾಗಿದ್ದನು.[3] ಹೊಯ್ಸಳರ ಕಾಲ ಲ್ಲಿಯೂ ಇದೇ ರೀತಿ ಇದ್ದಿತೆಂದು ತಿಳಿದುಬರುತ್ತದೆ. ಡನಾಯಕ ಪುಣಿಸನು ಮಹಾಪ್ರಧಾನಿಯೂ ಸಂಧಿವಿಗ್ರಹಿಯೂ ಆಗಿದ್ದು, ವಿಷ್ಣುವರ್ಧನನ ಯುದ್ಧಗಳಲ್ಲಿ ಪಾಲ್ಗೊಂಡಿದ್ದನು.[4]

ಈ ರೀತಿ ಹತ್ತಾರು ಉದಾಹರಣೆಗಳು ಗಂಗ ಮತ್ತು ರಾಷ್ಟ್ರಕೂಟ ವಂಶಗಳಲ್ಲಿಯೂ ದೊರಕುತ್ತವೆ . ಯುದ್ಧ ಕೌಶಲ್ಯವನ್ನು ಹೊಂದಿರುವವರನ್ನು ವಿವಿಧ ಹುದ್ದೆಗಳಿಗೆ ಆರಿಸುವಾಗ ಆದ್ಯತೆ ನೀಡಲಾಗುತ್ತಿದ್ದಿತು.

ಮಂತ್ರಿ ಮತ್ತು ಅಧಿಕಾರಿಗಳನ್ನು ಆರಿಸುವಾಗ ಜಾತಿ ಮತ್ತು ಮತಧರ್ಮದ ಭೇದವಿರಲಿಲ್ಲ ಎಂಬುದು ಇನ್ನೊಂದು ಗಮನಾರ್ಹವಾದ ಅಂಶ. ಆನೇಕ ಮಂತ್ರಿಗಳು ಮತ್ತು ಅಧಿಕಾರಿಗಳು ಬ್ರಾಹ್ಮಣ, ಕ್ಷತ್ರಿಯ, ಜೈನ, ವೈಶ್ಯ ಮತ್ತು ಶೂದ್ರ ಜಾತಿಗೆ ಸೇರಿದ್ದವರಾಗಿದ್ದರು. ಹೊಯ್ಸಳ ವಿಷ್ಣುವರ್ಧನನ ಮಹಾಪ್ರಧಾನಿಯಾಗಿದ್ದ ದೇವರಾಜನು ಬ್ರಾಹ್ಮಣ, ಕೌಶಿಕ ಗೋತ್ರದವನು.[5] ಸಿಂಘಣನ ಕಾಲದಲ್ಲಿ ರಾಜ್ಯಪಾಲನಾಗಿದ್ದ ಖೋಲೇಶ್ವರನೂ ಬ್ರಾಹ್ಮಣ. ತಂದೆಯ ಕಡೆಯಿಂದ ಮೌದ್ಗಲ ಗೋತ್ರಕ್ಕೂ ತಾಯಿಯ ಕಡೆಯಿಂದ ಕಾಶ್ಯಪ ಗೋತ್ರಕ್ಕೂ ಸೇರಿದವನೆಂದು ಅಂಚಿಜೋಗೈ ಶಾಸನ ತಿಳಿಸುತ್ತದೆ.[6]

ಗಂಗದೊರೆ ಮೂರನೆಯ ಮಾಧವನ ಕೈಕೆಳಗೆ ಇಪ್ಪತ್ತೆರಡು ಬ್ರಾಹ್ಮಣರು ಅಧಿಕಾರದಲ್ಲಿದ್ದರು, ಅವರು ಎಲ್ಲಾ ವಿಷಯಗಳಲ್ಲಿಯೂ ಅಂದರೆ ರಾಯಭಾರಿಗಳ ಕೆಲಸ, ಯುದ್ಧಮಾಡುವುದು, ಶಾಂತಿಯನ್ನು ಕಾಪಾಡುವುದು, ಹಣಕಾಸು ವ್ಯವಹಾರ, ಸ್ಥಳೀಯ ರಾಜಕಾರಣ ಮತ್ತು ಬಂದರುಗಳನ್ನು ನಿರ್ಮಾಣಮಾಡುವುದು ಮುಂತಾದ ಎಲ್ಲ ಕೆಲಸಗಳಲ್ಲಿಯೂ ಸಮರ್ಥರಾಗಿದ್ದರೆಂದು ಒಂದು ತಾಮ್ರಶಾಸನವಿಶದೀಕರಿಸುತ್ತದೆ.[7]

ಕ್ಷತ್ರಿಯ ಅಧಿಕಾರಿಗಳು ಅಷ್ಟಾಗಿ ಕಾಣಸದಿದ್ದರೂ, ವೈಶ್ಯಕುಲಕ್ಕೆ ಸೇರಿದ ಅಧಿಕಾರಿಗಳು ಮತ್ತು ಮಂತ್ರಿಗಳು ಹೇರಳವಾಗಿ ಕಾಣಸಿಗುತ್ತಾರೆ. ಸೇವುಣರ ಕಾಲದಲ್ಲಿ ಬನವಾಸಿ ನಾಡಿನ ಪ್ರಾಂತಾಧಿಕಾರಿಗಳಾಗಿದ್ದ ಮಲ್ಲಿಸೆಟ್ಟಿ,

ಹೊನ್ನಸೆಟ್ಟಿ, ಬೀಚಿಸೆಟ್ಟಿ ವೈಶ್ಯಕುಲದವರು.[8] ಸಾಮಾನ್ಯವಾಗಿ ಈ ವೈಶ್ಯಕುಲದವರು ತಮ್ಮ ಸ್ವಸಾಮರ್ಥ್ಯದಿಂದ ವ್ಯಾಪಾರದಲ್ಲಿ ಹಣಗಳಿಸಿ, ಜನಾನುರಾಗಿಯಾದ ಕೆಲಸ ಕಾರ್ಯಗಳನ್ನು ಮಾಡಿರಾಜರ ಕೃಪೆಗೆ ಪಾತ್ರರಾಗಿ ಅಧಿಕಾರವನ್ನು ಪಡೆದವರಾಗಿದ್ದರು. ಇವರುಗಳು ವಿಶೇಷವಾಗಿ ಪಟ್ಟಣಸ್ವಾಮಿಗಳಾಗಿ ಕರ್ನಾಟಕದಲ್ಲಿ ಕಾಣಿಸಿಕೊಳ್ಳುತ್ತಾರೆ.

ನಾಲ್ಕನೆಯ ವರ್ಣದವರು ಅಧಿಕಾರಿಗಳಾಗಿ ಕಾಣಿಸಿಕೊಂಡರೂ, ಅವರನ್ನು ಆರೀತಿ ವರ್ಣಿಸುವುದು ಬಲುಅಪರೂಪ. ಅವರ ಹೆಸರಿನ ಭಾಗವಾದ ಗವುಡ, ಗಾವುಂಡ ಮುಂತಾದ ಪದಗಳಿಂದ ಅವರನ್ನು ಹಾಗೆ ಗುರುತಿಸಬಹುದು. ಆದರೆ ಕೆಲವು ಸಾರಿ ಅವರನ್ನು ಚತುರ್ಥಕಾಲಕ್ಕೆ ಸೇರಿದವರು ಎಂದು ವರ್ಣಿಸಲಾಗಿದೆ. ನಾಗಮಂಗಲದ ಹೊಯ್ಸಳ ಇಮ್ಮಡಿ ನರಸಿಂಹನ ಶಾಸನದಲ್ಲಿ ಸೇನಾನಾಯಕ ಕಾಚಿದೇವನನ್ನು ಚತುರ್ಥ ವಂಶವೆಂದು ಕರೆಯಲಾಗಿದೆ.[9]

ಬಹಳಷ್ಟು ಮಂತ್ರಿಗಳು ಹಾಗೂ ಅಧಿಕಾರಿಗಳು ಜೈನಧರ್ಮಕ್ಕೆ ಸೇರಿದವರು. ಹೊಯ್ಸಳ ವಿಷ್ಣುವರ್ಧನನ ಸೇನಾಧಿಪತಿಯೂ ಸಂಧಿವಿಗ್ರಹಿಯೂ ಆದ ಪುಣಿಸಮಯ್ಯನು ಜೈನ ಧರ್ಮಕ್ಕೆ ಸೇರಿದವನು.[10] ಇವನು ತನ್ನ ಮಗನಿಗೆ ಬಿಟ್ಟಿಗ ಎನ್ನವ ಹೆಸರನ್ನೂ ಇಟ್ಟನು. ಇವನು ಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿದ್ದೇ ಅಲ್ಲದೆ ಗಂಗವಾಡಿಯಲ್ಲಿ ಅನೇಕ ಬಸದಿಗಳನ್ನು ಊರ್ಜಿತಗೊಳಿಸಿದನೆಂದು ಶಾಸನವು ತಿಳಿಸುತ್ತದೆ.

ಆದರೆ ಈ ಮಂತ್ರಿಗಳು ತಾವು ಯಾವ ಧರ್ಮಕ್ಕೆ ಸೇರಿದವರಾಗಿದ್ದರೂ ರಾಜ್ಯದ ಎಲ್ಲಾ ಧರ್ಮಗಳಿಗೂ ಪ್ರೋತ್ಸಾಹವನ್ನು ಸಮಾನವಾಗಿ ಕೊಡುತ್ತಿದ್ದರು. ಹಾಗೂ ರಾಜನ ಧರ್ಮದ ಒಲವನ್ನು ತಿಳಿದು ಅದರಂತೆ ನಡೆಯುತ್ತಿದ್ದರು. ಇದರಿಂದ ವೈಷ್ಣವ ಮಂತ್ರಿಗಳು, ಶೈವದೇವಾಲಯಗಳ ನಿರ್ಮಾಣ ಇಲ್ಲವೇ ದತ್ತಿಗಳನ್ನು ಕೊಡುವುದು, ಜೈನಮಂತ್ರಿಗಳು ಶಿವ ದೇವಾಲಯಗಳನ್ನು ನಿರ್ಮಾಣಮಾಡುವುದನ್ನು ನಾವು ಕಾಣುತ್ತೇವೆ. ಇದರಿಂದಾಗಿ ಧಾರ್ಮಿಕ ದೃಷ್ಟಿಯಿಂದ ಅಧಿಕಾರಿಗಳು ಮತ್ತು ಮಂತ್ರಿಗಳು ತಮ್ಮ ಸ್ವಂತ ಪ್ರಭಾವವನ್ನು ಇತರರ ಮೇಲೆ ಬೀರುತ್ತಿರಲಿಲ್ಲ ಹಾಗೂ ಹೇರುತ್ತಿರಲಿಲ್ಲ.

ಅನೇಕ ವೇಳೆಯಲ್ಲಿ ಮಂತ್ರಿಗಳು ಆ ಪದವಿಗಳನ್ನು ವಂಶಪಾರಂಪರ್ಯವಾಗಿಯೂ ಪಡೆಯುತ್ತಿದ್ದರು. ಇದಕ್ಕೆ ಸಾಕಷ್ಟು ಉದಾಹರಣೆಗಳು ಕರ್ನಾಟಕದಲ್ಲಿ ದೊರೆಯುತ್ತವೆ. ಅರ್ಹತೆಯಿದ್ದರೆ ವಂಶಪಾರಂಪರ್ಯವಾಗಿ ಅಧಿಕಾರವನ್ನು ಕೊಡುವ ಸಂಪ್ರದಾಯ ಬೆಳೆದು ಬಂದಿತ್ತೇ ಹೊರತು, ಅಧಿಕಾರಿಯ ಮಗ ಅಥವಾ ಅಳಿಯ ಎನ್ನುವ ಒಂದೇ ಕಾರಣಕ್ಕಾಗಿ ಅಲ್ಲ. ಹೊಯ್ಸಳರ ಕಾಲದಲ್ಲಿ ಅಧಿಕಾರಿಯಾಗಿದ್ದ ಪುಣಿಸಮಯ್ಯನಿಗೆ ಮಹಾಪ್ರಧಾನಿಯ ಕೆಲಸವು ವಂಶಪಾರಂಪರ್ಯವಾಗಿಯೇ ದೊರಕಿತ್ತೆಂದು ಶಾಸನವು ತಿಳಿಸುತ್ತದೆ.[11]

ಸೇವುಣ ದೇಶದಲ್ಲಿ ಬನವಾಸಿ ನಾಡಿನ ಅಧಿಕಾರಿಗಳಾಗಿದ್ದ ಮಲ್ಲಿಸೆಟ್ಟಿಯ ವಂಶಜರು ವಂಶಪಾರಂಪರ್ಯವಾಗಿ ಅಧಿಕಾರವನ್ನು ಪಡೆದವರು. ಚಿಕ್ಕದೇವನ ಮಕ್ಕಳಾದ ಮಲ್ಲಿಸೆಟ್ಟಿ ಮತ್ತು ಅವನ ತಮ್ಮ ಬೀಚಿಸೆಟ್ಟಿ ಸಿಂಘಣನ ಆಶ್ರಯದಲ್ಲಿ ಪ್ರಾಂತಾಧಿಕಾರಿಗಳಾಗಿದ್ದರು. ನಂತರ ಮಲ್ಲಿಸೆಟ್ಟಿಯ ಮಗನಾದ ಚಾವುಂಡಿಸೆಟ್ಟಿಯು ಅಧಿಕಾರಿಯಾದನು. ಇತ್ತಕಡೆ ಬೀಚಿಸೆಟ್ಟಿಯ ಅಳಿಯನಾದ ಮಲ್ಲಿಸೆಟ್ಟಿಯು ಅಧಿಕಾರವನ್ನು ಪಡೆದನು. ಹಾಗೆಯೇ ಅವನು ದತ್ತು ತೆಗೆದುಕೊಂಡ ಸಾಕಿಸೆಟ್ಟಿಯ ಮಗನಾದ ಪಾಯಿಸೆಟ್ಟಿಯು ಮತ್ತೆ ಬನವಾಸಿಯ ಅಧಿಕಾರಿಯಾದನು. ಹೀಗೆ ಕೊನೆಯ ಪಕ್ಷ ಈ ವಂಶದಲ್ಲಿ ಐದು ಜನ ಅಧಿಕಾರಿಗಳಾಗಿದ್ದರು ಎನ್ನವುದು ಶಾಸನಗಳಿಂದ ತಿಳಿಯುತ್ತದೆ.[12]

ಸಿಂಘಣನ ಪ್ರಾಂತಾಧಿಕಾರಿಯಾದ ಖೋಲೇಶ್ವರನ ಮಗನಾದ ರಾಮನು ಅದೇ ಅಧಿಕಾರವನ್ನು ತನ್ನ ತಂದೆಯಿಂದ ಪಡೆದನು.[13]

ಮಂತ್ರಿಗಳ ಮುಖ್ಯವಾದ ಅರ್ಹತೆಯೆಂದರೆ ಚಾರಿತ್ರ್ಯ ಮತ್ತು ಧಾರ್ಮಿಕ ಭಾವನೆ, ಸತ್ಯ ಸಂಧತೆ ಮುಂತಾದ ಗುಣಗಳು. ಶಾಸನಗಳಲ್ಲಿ ಮಂತ್ರಿಗಳನ್ನಾಗಲೀ ಅಧಿಕಾರಿಗಳನ್ನಾಗಲೀ ವರ್ಣಿಸುವಾಗ ಅವರ ಒಳ್ಳೆಯ ಚಾರಿತ್ರ್ಯಕ್ಕೆ ಹೆಚ್ಚು ಮಹತ್ವ ಕೊಡುತ್ತವೆ. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಏಚಿಸೆಟ್ಟಿಯನ್ನು ಟಂಕಾಧಿಕಾರಿಯನ್ನಾಗಿ ನಿಯಮಿಸಿದ್ದು. ನರಗುಂದದ ಹೇಮಗೇರಿಯಲ್ಲಿ ಮೂರನೆಯ ತೈಲಪನ ಕಾಲದಲ್ಲಿ ಒಂದು ಟಂಕಾಶಾಲೆಯಿದ್ದಿತು. ಅಲ್ಲಿ ಚಾಲುಕ್ಯರ ಚಿನ್ನದ ನಾಣ್ಯಗಳು ತಯಾರಾಗುತ್ತಿದ್ದವು. ಇಂತಹ ಟಂಕಶಾಲೆಗೆ

ರಿಯಾದ ಅಧಿಕಾರಿಯನ್ನು ನಿಯಮಿಸಬೇಕಾಗಿದ್ದಿತು. ಆ ಮಯದಲ್ಲಿ ರಾಜನು ಒಳ್ಳೆಯ ಚಾರಿತ್ರ್ಯವುಳ್ಳ, ಸತ್ಯ ಂಧನೂ, ಯಾವ ಆಸೆಗಳಿಗೂ ಒಳಗಾಗದ ಏಚಿಸೆಟ್ಟಿ ಯನ್ನು ಟಂಕಾಧಿಕಾರಯನ್ನಾಗಿ ನಿಯಮಿಸಿದನೆಂದು ಾಸನ ತಿಳಿಸುತ್ತದೆ. ಅವನು ತನ್ನ ಕೆಲಸವನ್ನು ಬಲು ಮರ್ಪಕವಾಗಿ ಮಾಡಿ ರಾಜನಿಂದ 'ಹೇಮಕುಪ್ಪಟಿ ಚಿಸೆಟ್ಟಿ' ಎಂಬ ಬಿರುದನ್ನೂ ಪಡೆದನು.[14]

ಇದೇ ರೀತಿ ಗಂಗರಾಜ, ಬೀಚಣ್ಣ, ಖೋಲೇಶ್ವರ, ಾಮ ಮುಂತಾದವರು ತಮ್ಮ ಉತ್ತಮ ಚಾರಿತ್ರ್ಯ ಂದ ರಾಜರನ್ನು ಮಾತ್ರವಲ್ಲ, ಜನಗಳನ್ನೂ ಆಕರ್ಷಿಸಿ ುತ್ತಮ ಆಡಳಿತಾಧಿಕಾರಿಗಳಾಗಿ ಹೆಸರನ್ನು ಳಿಸಿದರು.

ಅಧಿಕಾರಿಗಳು ವಿಶೇಷವಾಗಿ ಪುರುಷರೇ ಆಗಿ ದ್ದರೂ, ಸ್ತ್ರೀಯರು ಉತ್ತಮ ಅಧಿಕಾರಿಗಳಾಗಿ ಹೆಸರು ಪಡೆದ ಉಲ್ಲೇಖಗಳು ಇಲ್ಲದೇ ಇಲ್ಲ. ಉದಾಹರಣೆಗೆ ೀವುಣರ ಕಾಲದಲ್ಲಿ ಖ್ಯಾತಳಾಗಿದ್ದ ಭಾಗುಬಾಯಿ ಯನ್ನು ಗಮನಿಸಬಹುದು. ಈಕೆಯು ಸಿಂಘಣನ ರಮ ವಿಶ್ವಾಸಿ ಹಾಗೂ ಸರ್ವಾಧಿಕಾರಿಯಾಗಿದ್ದು ರ್ದವಾಡಿ, ಹೇಡ ಮತ್ತು ರನ್ನಂಬಾಡಿ ಪ್ರಾಂತ್ಯಗಳಿಗೆ ಧಿಕಾರಿಯಾಗಿದ್ದಳು.[15] ಈಕೆಯು 1239 ರಿಂದ 245ರವರೆಗೆ ಈ ಪ್ರಾಂತ್ಯದ ಅಧಿಕಾರಿಯಾಗಿದ್ದು, ವಳ ಅನಂತರ ಇವಳಮಗನು ಈ ಪ್ರಾಂತ್ಯಕ್ಕೆ ಅಧಿ ಾರಿಯಾದನು.

ಸ್ಥಳೀಯರೇ ಸಾಮಾನ್ಯವಾಗಿ ಅಧಿಕಾರಿಗಳಾಗಿ ಯಮಿತರಾಗುತ್ತಿದ್ದರೂ, ದೂರ ದೇಶದಿಂದ ಬಂದು ಲ್ಲಿ ನೆಲೆಸಿ ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಪ್ರದರ್ಶಿ ದ ಅನೇಕರು ಮಂತ್ರಿಗಳಾಗಿ ಇಲ್ಲವೇ ಅಧಿಕಾರಿಗ ಾಗಿ ನೇಮಕಗೊಂಡಿರುವ ನಿದರ್ಶನಗಳು ಕರ್ನಾಟಕ ಲ್ಲಿ ಹತ್ತಾರು ಸಿಗುತ್ತವೆ. ಹೊಯ್ಸಳ ಇಮ್ಮಡಿ ಲ್ಲಾಳನ ಆಶ್ರಯದಲ್ಲಿ ಸೇನಾಧಿಪತಿಯಾಗಿದ್ದ, ುಚ್ಚಂಗಿ ದುರ್ಗದ ಯುದ್ಧದಲ್ಲಿ ಜಯವನ್ನು ತಂದು ಟ್ಟವನು ಮಹಾಪ್ರಧಾನ ಕುಂಜಸೆಟ್ಟ; ಇವನು ರಳದವನು, ಇವರ ಶೌರ್ಯಕ್ಕೆ ಮೆಚ್ಚಿ ಬಲ್ಲಾಳನು ವನಿಗೆ ಸುಭಟಪಟ್ಟವನ್ನು ಕೊಟ್ಟನು. ಇವನ ಅಳಿ ಯನ ತಮ್ಮನೂ ಹೊಯ್ಸಳರಲ್ಲಿಯೇ ಅಧಿಕಾರಿಯಾಗಿ ನು.[16] ಹೊಯ್ಸಳ ಬಲ್ಲಾಳನಿಗೂ ಸೇವುಣ ಕೃಷ್ಣ ಗೂ ಆದ ಯುದ್ಧದ ನಂತರ ಅವರು ಮಾಡಿಕೊಂಡ ಪ್ಪಂದದ ಕರಡನ್ನು ಸಿದ್ಧಪಡಿಸಿ ಖ್ಯಾತಿವೆತ್ತ ಸಂಧಿವಿ ಹಿ ಎಂದು ಎನಿಸಿಕೊಂಡನು. ಇವನ ಅಳಿಯನೂ ೂಯ್ಸಳರ ಆಶ್ರಯದಲ್ಲಿ ಅಧಿಕಾರಿಯಾಗಿದ್ದನು. ಹೀಗೆ ಕೇರಳದಿಂದ ಬಂದು ಕರ್ನಾಟಕದ ರಾಜರ ಆಶ್ರಯದಲ್ಲಿ ಅಧಿಕಾರಿಗಳಾಗಿ ಮೆರೆದ ಇವರ ವಂಶವನ್ನು ಶಾಸನಗಳು ಹೊಗಳುತ್ತವೆ.[17]

ಸೇವುಣ ಜೈತುಗಿಯ ದಂಡನಾಥನಾಗಿದ್ದ ಸಹ ದೇವನು ಕಾಶ್ಮೀರದಿಂದ ಬಂದವನಾಗಿದ್ದನು. ಇವರ ಶೌರ್ಯಕ್ಕೆ ಮೆಚ್ಚಿ, ಇವನನ್ನು ತರ್ದವಾಡಿಯ ಪ್ರಾಂತಾಧಿಕಾರಿಯಾಗಿ ನಿಯಮಿಸಲಾಯಿತು.[18] ಇದೇ ರಾಜವಂಶದ ಕೃಷ್ಣನ ಕೈಕೆಳಗೆ ಮಹಾಪ್ರಧಾನರಾಗಿದ್ದ ಚಂದ್ರ ಮತ್ತು ಕೇಶವ ಗೂರ್ಜರ ದೇಶದವರು.[19] ಇವರ ವಂಶದವರೇ ನಾಲ್ಕೈದು ತಲೆಮಾರಿನವರೆಗೆ ಸೇವುಣರಲ್ಲಿ ಅಧಿಕಾರಿಗಳಾಗಿದ್ದರು. ಸಿಂಘಣನ ಕಾಲ ದಲ್ಲಿ ಪ್ರಾಂತಾಧಿಕಾರಿಯಾಗಿದ್ದ ಖೋಲೇಶ್ವರ ಮಹಾ ರಾ ಷ್ಟ್ರದವನು. ಹೀಗೆ ಕರ್ನಾಟಕದ ರಾಜರು ಅಕ್ಕ ಪಕ್ಕದ ಪ್ರಾಂತ್ಯಗಳಾದ ಆಂಧ್ರ, ತಮಿಳುನಾಡು, ಕೇರಳ, ಗುಜರಾತ್, ಮಹಾರಾಷ್ಟ್ರ ಮತ್ತು ದೂರದ ಕಾಶ್ಮೀರಗಳಿಂದ ಬಂದ ಅರ್ಹರನ್ನೂ ಅಧಿಕಾರಿಗಳ ನ್ನಾಗಿ ನಿಯಮಿಸಿಕೊಳ್ಳುತ್ತಿದ್ದರು.

ಇನ್ನೊಂದು ಕುತೂಹಲಕರವಾದ ವಿಷಯವನ್ನು ಈಗ ಪ್ರಸ್ತಾಪಿಸಬಹುದು ಸಾಮಾನ್ಯವಾಗಿ ಈ ಮಂತ್ರಿ ಗಳು ಮತ್ತು ಅಧಿಕಾರಿಗಳು ಒಂದಕ್ಕಿಂತ ಹೆಚ್ಚು ಅಧಿ ಕಾರ ಸೂಚಕವಾದ ಪದಗಳನ್ನು ತಮ್ಮ ಹೆಸರಿನ ಜೊತೆ ಹೊಂದಿರುತ್ತಾರೆ. ಉದಾಹರಣೆಗೆ ಸೇನಾಧಿಪತಿ ಸಂಧಿವಿಗ್ರಹಿ ಪುಣಿಸಮಯ್ಯ.

ಸೇನಾಧಿಪತಿ ಸಂಧಿ ವಿಗ್ರಹಿ ಪುಣಿಸಮಯ್ಯ; ಮಹಾಪ್ರಧಾನ ಸೇನಾಧಿಪಪತಿ ಸಂಕರಸ; ಮಹಾ ಪ್ರಧಾನ ಸೇನಾಧಿಪತಿ ಮಹಾಪಾಶಾಯಿತ ಲಕ್ಷ್ಮೀಧರ; ಮಹಾಪ್ರಧಾನ ಸರ್ವಾಧಿಕಾರಿ ಪಾರಿಸೆಟ್ಟಿ; ಮಹಾ ಮಾತ್ಯ ಮಹಾಪ್ರಧಾನ ಮಲ್ಲಿಸೆಟ್ಟಿ; ಮಹಾಪ್ರಧಾನ ಸರ್ವಾಧಿಕಾರಿ ವಾಸುದೇವ ನಾಯಕ; ದಂಡನಾಥ ಸರ್ವಾಧಿಕಾರಿ ಸಂಧಿ ವಿಗ್ರಹಿ ಶ್ರೀಧರ ಪಂಡಿತ; ಬಾಹತ್ತರ ನಿಯೋಗಾಧಿಪತಿ ಸರ್ವಾಧಿಕಾರಿ ಬಸವರಸ, ಇತ್ಯಾದಿ. ಇದರಿಂದ ಒಬ್ಬ ಅಧಿಕಾರಿಯು ಎಷ್ಟೊಂದು ಅಧಿಕಾರಿಗಳನ್ನು ಹೊಂದಿದ್ದನು ಎಂಬುದು ತಿಳಿಯು ತ್ತದೆ. ಆದರೆ ಇದು ಸಾಧ್ಯವೇ ಎನ್ನುವ ಪ್ರಶ್ನೆಯೂ ಬರುತ್ತದೆ. ಡೆರೆಟ್‌ರವರು ಇವುಗಳಲ್ಲಿ ಅನೇಕ ಪದ ಗಳು ಅಧಿಕಾರ ಸೂಚಕವಲ್ಲ ಅವು ಕೇವಲ ಬಿರುದು ಗಳು ಎಂದು ಅಭಿಪ್ರಾಯಪಡುತ್ತಾರೆ.[20] ಅಂದರೆ ವರಿಷ್ಠ ಅಧಿಕಾರಿಯನ್ನು ಸೇನಾಧಿಪತಿ ಅಥವ ದಂಡ ನಾಯಕ. ಮಹಾಪ್ರಧಾನ ಎಂದು ಕರೆಯುವುದು ಅವನ ಉನ್ನತ ಅಧಿಕಾರವನ್ನು ತೋರಿಸುವುದಕ್ಕಾ

ಗಿಯೇ ಹೊರತು, ಆತನು ಆ ಅಧಿಕಾರವನ್ನು ಹೊಂದಿರ ಬೇಕೆಂಬ ನಿಯ ಮವಿರಲಿಲ್ಲ ಎನ್ನುವ ಮಾತನ್ನು ವಿಶದಿಪ ಡಿಸುತ್ತಾರೆ. ಮಹಾಲಿಂಗಂ ಅವರು ಇವುಗಳಲ್ಲಿ ಸೈನ್ಯದ ಸೇವೆಯೂ ಸೇರಿರುವುದರಿಂದ, ಯುದ್ಧದ ಸಮಯದಲ್ಲಿ ಅವರು ಸೇನೆಯ ಅಧಿಕಾರಿಗಳಾಗಿಯೂ, ಶಾಂತಿಯ ಸಮಯ ದಲ್ಲಿ ವರಿಷ್ಠ ಅಧಿಕಾರಿಗಳಾಗಿಯೂ, ಕೆಲಸ ನಡೆಸುತ್ತಿದ್ದರು.[21]

ಇದರಲ್ಲಿ ಒಂದಕ್ಕೊಂದು ವಿರೋಧವೆನಿಸುವುದಿಲ್ಲ ಎಂದಿದ್ದಾರೆ. ಸಂಧಿವಿಗ್ರಹಿಯಾಗಿದ್ದವನು ಬೇರೊಂದು ಕೆಲಸವನ್ನು ವಹಿಸಿಕೊಂಡು ಮಹಾಪ್ರಧಾನನಾದಾಗ, ತನ್ನ ಹಿಂದಿನ ಅಧಿಕಾರದ ದ್ಯೋತಕವಾಗಿ ಸಂಧಿವಿಗ್ರಹಿ ಎನ್ನವುದನ್ನು ತನ್ನ ಹೆಸರಿನ ಜೊತೆ ಸೇರಿಸಿಕೊಂಡಿರ ಬೇಕು ಎನ್ನವು ವಾದವೂ ಇದೆ.[22] ಒಟ್ಟಿನಲ್ಲಿ ಅದರವಿಷ ಯದಲ್ಲಿ ಹೆಚ್ಚಿನ ಮಾಹಿತಿಗಳು ದೊರಕುವವರೆಗೆ ಹೆಚ್ಚಿಗೆ ಏನನ್ನೂ ಹೇಳಲು ಸಾಧ್ಯವಾಗುವುದಿಲ್ಲ.

ಈ ಎಲ್ಲಾ ಅಂಶಗಳನ್ನೂ ಗಮನಿಸಿದರೆ ಪ್ರಾಚೀನ ಕರ್ನಾಟಕದ ಮಂತ್ರಿಗಳ ಮತ್ತು ಅಧಿಕಾರಿಗಳ ಬಗೆಗೆ ಕೆಲವು ಉತ್ತಮ ಮಾಹಿತಿಗಳು ಸಿಗುತ್ತವೆ. ಇವುಗಳಲ್ಲಿ ಮುಖ್ಯಾವಾದವುಗಳನ್ನು ಮಾತ್ರ ಇಲ್ಲಿ ಗಮನಿಸಲಾ ಗಿದೆ. ಇದು ಇನ್ನೂ ಆಳವಾಗಿ ಹಾಗೂ ವಿಸ್ತಾರವಾಗಿ ಅಭ್ಯಾಸ ಮಾಡುವ ವಿಷಯ ಎನ್ನುವುದನ್ನು ಮರೆ ಯುವ ಹಾಗಿಲ್ಲ. ಆ ಅಭ್ಯಾಸ ನಡೆದರೆ ಪ್ರಾಚೀನ ಕರ್ನಾಟಕದ ಅಡಳಿತ ವಿಷಯದಲ್ಲಿ ಹೆಚ್ಚಿನ ವಿವರ ಗಳು ಹಾಗೂ ಮಾಹಿತಿಗಳು ದೊರೆಯುತ್ತವೆ.

---

## ಅಡಿ ಟಿಪ್ಪಣಿಗಳು

1. ಮಹಾಲಿಂಗಂ, ಡೆರೆಟ್, ರಿತ್ತಿ, ನರಸಿಂಹಮೂರ್ತಿ, ಗೋಪಾಲ್, ಕೃಷ್ಣಮೂರ್ತಿ ಮುಂತಾದವರು ರಾಜವಂಶಗಳ ಇತಿಹಾಸವನ್ನು ಬರೆಯುವಾಗ ಈ ವಿಷಯವನ್ನು ಗಮನಿಸಿದ್ದಾರೆ.
2. ಎ.ವಿ.ನರಸಿಂಹಮೂರ್ತಿ : ' ದಿ ಸೇವುಣಾಸ್ ' ಪು 148
3. ಬಿ.ಆರ್.ಗೋಪಾಲ್ : ' ಕಲ್ಯಾಣಿ ಚಾಲುಕ್ಯಾಸ್ ' ಪು 320
4. ಡೆರೆಟ್ : ' ಹೊಯ್ಸಳಾಸ್ ' ಪು 47
5. 'ಎಪಿ. ಕರ್ನಾಟಕ ', 7, ನಾಮಂ 64
6. 'ದಿ ಸೇವುಣಾಸ್' ಪು 237
7. ಷೇಕ್ ಆಲಿ : 'ಗಂಗಾಸ್ ಆಫ್ ತಲಕಾಡ್' ಪು 252
8. 'ಸೇವುಣಾಸ್': ಪು 244
9. 'ಎಪಿ. ಕರ್ನಾಟಕ', 7, ನಾಮಂ 81
10. ಅದೇ, 4, ಚಾಮರಾಜನಗರ 2
11. ಅದೇ,
12. 'ಸೇವುಣಾಸ್' ಪು. 241
13. ಅದೇ, ಪು.238
14. 'ಸೌ.ಇಂ.ಇ' 18, ಸಂ.160
15. 'ಸೇವುಣಾಸ್' ಪು 242
16. 'ಎಪಿ. ಕರ್ನಾಟಕ'5 ಅರಸೀಕೆರೆ 108
17. ಅದೇ.
18. 'ಸೇವುಣಾಸ್', ಪು 236
19. ಅದೇ, ಪು.245
20. 'ಹೊಯ್ಸಳಾಸ್': ಪು 191
21. 'ಸೌತ್ ಇಂಡಿಯನ್ ಪಾಲಿಟಿ', ಪು.136
22. 'ಸೇವುಣಾಸ್' ಪು.146.

...॥ ಅ. ಸುಂದರ

# ...ಡಿಂಬ ಪಟ್ಟಣ: ಒಂದು ವಿಮರ್ಶಾತ್ಮಕ ಟಿಪ್ಪಣಿ.

ಚಿತ್ರದುರ್ಗ ಪ್ರದೇಶದ ಜನರು ಮರೆಯಲಾಗದ ...ಲ್ಲೂರು ಶ್ರೀನಿವಾಸ ಜೋಯ್ಸರು ೧೯೨೮ ...ಯ[1] ಚಿತ್ರದುರ್ಗ ಪ್ರದೇಶಕ್ಕೆ ಪ್ರಾಚೀನ ಕಾಲದಲ್ಲಿ ...ಡಿಂಬ ಕ್ಷೇತ್ರವೆಂಬ ಹೆಸರಿತ್ತೆಂದು ಸ್ಥಳೀಯ ಕಥೆ ...ತ್ತು ಕೆಲವು ವಿಜಯನಗರ – ವಿಜಯನಗರೋತ್ತರ ...ಲದ ಶಾಸನಗಳ ಆಧಾರದ ಮೇಲೆ ಪರಿಶೀಲಿಸಿ ...ದ್ದಾರೆ. ಸ್ಥಳೀಯ ಕಥೆಯಂತೆ ಇದು ಮಹಾಭಾರತ ...ವ್ಯದ ಹಿಡಿಂಬಾಸುರನ ವಾಸ ಸ್ಥಳವಾಗಿತ್ತು. ಈಗ ...ಟ್ಟದ ಮೇಲಿರುವ ಹಿಡಿಂಬೇಶ್ವರ ದೇವಾಲಯವೆ ...ಶ.1412ರ ಸ್ಥಳೀಯ ಒಂದು ಶಾಸನದಲ್ಲಿಯ[2] ...ಮನ್ಮಹಾನಗರ ಬೆಮ್ಮತ್ತನಕಲ್ಲ ಪಟ್ಟಣದಲ್ಲಿ ...ಂಡುನಂದನ ವೃಕೋದರ ಮಥತ ಹಿಡಿಂಭಕಾಸುರ ...ಾರಣ ಕಾಲಪ್ರಸನ್ನ ಪ್ರತ್ಯಕ್ಷ ಪರಮೇಶ್ವರ ಶ್ರೀ ...ದಾಶಿವಮೂರ್ತಿಶ್ರೀ ಹಿಡಿಂಬನಾಥ ದೇವರು ಎಂದು ...ರುತಿಸಿದರು. ಈ ದೇವಾಲಯದಲ್ಲಿರುವ ಒಂದು ...ನೆಯ ಕೋರೆ ಹಲ್ಲನ್ನು ಹಿಡಿಂಬನ ಹಲ್ಲು ಎಂದು, ...ಲ್ಲಿರುವ ಗುಂಡು ಕಲ್ಲುಗಳಲ್ಲಿ ಒಂದನ್ನು ಭೀಮನ ...ಲ್ಲು ಮತ್ತೊಂದನ್ನು ಹಿಡಿಂಬನ ಕಲ್ಲು ಎಂದು ಕರೆ ...ಲಾಗುತ್ತಿದೆ. ಈದೇವಾಲಯದ ಉತ್ತರ ಬದಿಗಿದ್ದ ...ನೇ ಶತಮಾನದ ಶಾಸನವೊಂದರಲ್ಲಿ[3] ಈ ಪ್ರದೇ ...ನ ಒಂದು ಭಾಗವನ್ನು ಹಿಡುಂಬಾವನ ಎಂದು ...ರ್ಣಿಸಿದೆ. ಶ್ರೀ ಗೋಪಾಲಕೃಷ್ಣ ದೇವಾಲಯದ ...ಮೀಪದ 1338ರ ಶಾಸನದ[4] ಪ್ರಕಾರ ಇದು ...ಡಿಂಬನಾಥ ಪಟ್ಟಣ ವಿಜಯನಗರ ರಾಜ್ಯದ ಅರಸು ...ದಾಶಿವರಾಯನ ಕಾಲದ ಹೊಳಲ್ಕೆರೆಯ ತಾಮ್ರ ...ಸನ[5] (ಶಕವರ್ಷ ೧೪೬೦ ಕ್ರಿ.ಶ. ೧೫೩೮) ದಲ್ಲಿ ...ನಮೇಜಯ ರಾಜನು ಹಿಡಿಂಬ ಪಟ್ಟಣದಲ್ಲಿ ...ೋಪಾಲಕೃಷ್ಣ ದೇವರನ್ನು ಪ್ರತಿಷ್ಠಾಪಿಸಿದನೆಂದಿದೆ.

ಹಿಡಿಂಬನ ಉಲ್ಲೇಖಗಳುಳ್ಳ ಶಾಸನಗಳಲ್ಲಿ ...ಚ್ಚಂಗಿ ದುರ್ಗದ ಶಾಸನ[6] (ಸಂ ೧೯೪೯) ವೇ ...ಾಶಃ ಅತ್ಯಂತ ಪ್ರಾಚೀನ. ಇದರ ಕಾಲಮಾನ ...)46 ಕ್ರಿ.ಶ. ಇದರಲ್ಲಿ. ಉಚ್ಚಂಗಿ ದುರ್ಗ ಪೂರ್ವಕ್ಕೆ ...ಡಿಂಬವನವಿದ್ದು ಅಲ್ಲಿ ಹಿಡಿಂಬನು ಸ್ವಯಂಭು ಕಲಿ ದೇವ ಸ್ವಾಮಿಗೆ ಒಂದು ದೇವಾಲಯವನ್ನು ಕಟ್ಟಿಸಿದನೆಂದಿದೆ. ಈ ಶಾಸನದಲ್ಲಿಯ ಮೂರು ನಾಲ್ಕು ಅಂಶಗಳು ಗಮನಾರ್ಹ: ೧) ಹಿಡಿಂಬ ಎಂಬ ಹೆಸರಿನ ಉಲ್ಲೇಖದ ಪ್ರಾಚೀನತೆ. ೨) ಹಿಡಿಂಬವನವೆಂಬ ವರ್ಣನೆ, ೩) ಹಿಡಿಂಬನಿಂದ ಸ್ವಯಂಭು ಕಲಿದೇವಸ್ವಾಮಿ ಸ್ಥಾಪನೆ ಮತ್ತು ೪) ಹಿಡಿಂಬವನ ಇರುವ ದಿಕ್ಕು. ಹಿಡಿಂಬ ನಗರವೆಂದು ಹೇಳಲಾದ ಚಿತ್ರದುರ್ಗವು ಉಚ್ಚಂಗಿ ದುರ್ಗದ ಪೂರ್ವದಲ್ಲಿದೆ. ಆದ್ದರಿಂದ ಬಹಳ ಹಿಂದಿನಿಂದಲೂ ಈಗಿನ ಚಿತ್ರದುರ್ಗ ಪ್ರದೇಶದ ಒಂದು ಭಾಗವನ್ನು ಹಿಡಿಂಬವನವೆಂದೇ ಕರೆಯಲಾಗುತ್ತಿತೆಂದು ತೋರುವುದು. ಕ್ರಮೇಣ ಬೆಳೆದ ಭಾಗದ ಈ ಊರಿಗೆ ಇಸಾಮುದ್ರದ (ಚಿತ್ರದುರ್ಗತಾ) 1059ರ ಮತ್ತು ಚಿತ್ರದುರ್ಗದ ಹುಲೆಗುಂದಿಯ ಸಿದ್ಧೇಶ್ವರ ದೇವಸ್ಥಾನದ ಹಿಂಬದಿಯ 1073ರ ಶಾಸನದಲ್ಲಿ ಕ್ರಮವಾಗಿ ಸೂಳಂಗಲ್ಲೆರ್ಪ್ಪತ್ತು ಹಾಗೂ "ಸೂಳ್ಗಲ್ಲಿಪ್ಪತ್ತು" ಎಂದು ನಂತರ ಮಹಾನಗರ ಬೆಮ್ಮತ್ತ ಕಲ್ಲಪಟ್ಟಣ[7] ಎಂದು ಹೆಸರು ಬಂದಿರಬೇಕು. ಸು.12ನೇ ಶತಮಾನದಿಂದ ಬೆಮ್ಮತ್ತ ಕಲ್ಲು ಪಟ್ಟಣ (1186) ಇಲ್ಲವೆ ಬೆಂ(ಮ್ಮ) ಚನೂರು (ಕ್ರಿ.ಶ.1199), ಬೆಂಮತ್ತನೂರು ಪಟ್ಟಣ (1286), ಬೆಂಮತ್ತೂರು ಕಲ್ಲು (1391), ಬೆಮ್ಮತನೂರು (1355) ಎಂದು ಸುಮಾರು ಆರು ಶಾಸನಗಳಲ್ಲಿ ಇದೆ. ಕಾಲಾಂತರದಲ್ಲಿ ಈ ಹೆಸರು ಬದಲಾಯಿಸಿ ಚಿತ್ರದುರ್ಗವೆಂದು ಕರೆಯಲಾಯಿತು. ಚಿತ್ರದುರ್ಗ ಎಂಬ ಹೆಸರಿನ ವಿವಿಧ ರೂಪಗಳು ಚಿತ್ರ ಹಳ್ಳಿಸೀಮೆ, ಚಿತ್ರ ಹಳ್ಳಿನಾಡು, ಚಿತ್ರಕಲ್ಲುದುರ್ಗ, ಇವೇ ಮೊದಲಾಗಿ ಶಾಸನಗಳಲ್ಲಿವೆ.[9] 1730ರ ಶಾಸನದಲ್ಲಿ[10] ಈಗಿನ ಹೆಸರಾದ ಚಿತ್ರದುರ್ಗವೆಂದಷ್ಟೇ ಇದೆ. ಆದ್ದರಿಂದ ಈ ಪ್ರದೇಶಕ್ಕೆ ಅತಿ ಪ್ರಾಚೀನ ಕಾಲದಿಂದಲೂ ಹಿಡಿಂಬವನ / ಗ್ರಾಮ / ಪುರವೆಂದಷ್ಟೆ ಹೆಸರಿದ್ದು ಮಧ್ಯ ಯುಗೀನ ಕಾಲದಲ್ಲಿ ಸೂಳ್ಗಲ್ಲು, ಬೆಂಮತ್ತಕಲ್ಲು ಪಟ್ಟಣ ಚಿತ್ರಹಳ್ಳಿ, ಚಿತ್ರಕಲ್ಲುದುರ್ಗವೆಂದು ಹಳೆಯ ಹೆಸರಿನ ಬದಲಾಗಿ ಕಾಲಕಾಲಕ್ಕೆ ಬಂತೆಂದು ಶಾಸನಗಳಿಂದ ಸ್ಪಷ್ಟವಾಗುತ್ತದೆ.

ಹಿಂಡಿಬವನದ ಸುತ್ತಮುತ್ತ ಪ್ರದೇಶದಲ್ಲೂ ರಾಮಾಯಣ ಮತ್ತು ಮಹಾಭಾರತದಲ್ಲಿ ಬರುವ ಹೆಸರುಗಳುಳ್ಳ ಪ್ರದೇಶಗಳಿವೆ. ಉದಾ: ಚಿತ್ರದುರ್ಗದ ಉತ್ತರಕ್ಕಿರುವ ಜಟಂಗ ರಾಮೇಶ್ವರ ಇದರ ಬಗ್ಗೆ ಈ ಅಕಾಡೆಮಿಯ 1990ರ ಸಾಲಿನ ದಾವಣಗೆರೆ ಸಂಕಿರಣದಲ್ಲಿ ವಿವೇಚಿಸಿದ್ದೇನೆ ಇದಲ್ಲದೆ ಇನ್ನೂ ಕೆಲವು ಸ್ಥಳಗಳಿವೆ. ಒಂದೆರೆಡು ಉದಾಹರಣೆಗಳನ್ನು ಇಲ್ಲಿ ಪರಿಶೀಲಿಸುವ, ಚಿತ್ರದುರ್ಗದ ವಾಯುವ್ಯಕ್ಕೆ ಸುಮಾರು ೧೫೦ ಕಿ.ಮೀ. ದೂರದಲ್ಲಿ ಬನ್ನಿಕೊಪ್ಪ (ಧಾರವಾಡ ಜಿಲ್ಲಾ,ಶಿಗ್ಗಾಂವ್ ತಾ) ಗ್ರಾಮ ಪ್ರದೇಶದಲ್ಲಿ ಪ್ರಚಲಿತ ದಂತ ಕಥೆಯ ಪ್ರಕಾರ ಅಜ್ಞಾತ ವಾಸದಲ್ಲಿದ್ದ ಪಂಚ ಪಾಂಡವರು ಅಲ್ಲಿಯೆ ಇದ್ದ ಬನ್ನಿ ಮರ (ಶಮೀ ವೃಕ್ಷ) ದಲ್ಲಿ ತಮ್ಮಲ್ಲಿಯ ಅಸ್ತ್ರಗಳನ್ನೆಲ್ಲಾ ಅಡಗಿಸಿಟ್ಟಿದ್ದರಿಂದ ಆ ಗ್ರಾಮಕ್ಕೆ ಬನ್ನಿಕೊಪ್ಪವೆಂದು ಹೆಸರು[12] ಬಂತು. ಇಲ್ಲಿಯ ಮೂರು ಶಾಸನಗಳನ್ನು ಹಾಗೂ ವಿಶೇಷವಾಗಿ ಭೀಮ (ಭೀಮೇಶ್ವರ) ದೇವಾಲಯ ಮತ್ತು ಕೃಷ್ಣ, ಧರ್ಮರಾಯ, ಅರ್ಜುನ, ನಕುಲ, ಸಹದೇವ, ಕುಂತೀ, ಕಾಳಿಕಾ, ಬಸವಣ್ಣ ದೇವಾಲಯಗಳ ಬಗ್ಗೆ ಟಿಪ್ಪಣಿಗಳನ್ನು[13] ಪ್ರಕಟಿಸಲಾಗಿದೆ. ಸು.೮ನೇ ಶತಮಾನದ ಬಾದಾಮಿ ಚಾಲುಕ್ಯ ಅರಸು ವಿಜಯಾದಿತ್ಯನ ಕಾಲದ ಶಾಸನದಲ್ಲಿ[14] ಇಲ್ಲಿಯ ಅರ್ಜುನೇಶ್ವರ ದೇವರಿಗೆ ಉತ್ತರಾಪಥ (ಉತ್ತರ ಭಾರತ) ದಿಂದ ಬಂದ ಒಬ್ಬ ವ್ಯಕ್ತಿಯು ಒಂದು ದೇವಾಯಲವನ್ನು ಕಟ್ಟಿ ಭೂಮಿದಾನ ಮಾಡಿದನೆಂದು ಹೇಳಿದೆ ಮತ್ತು ಈ ದೇವಾಲಯದಲ್ಲಿ ನಂದೀಶ್ವರನನ್ನು ಪ್ರತಿಷ್ಠಾಪಿಸಿದನು. ಈ ಶಾಸನವಿರುವ ಸ್ಥಳದಲ್ಲಿಯೆ ಧರ್ಮರಾಯನ ಮತ್ತು ಕೃಷ್ಣನ ಅರ್ವಾಚಿನ ಕಾಲದ ಗುಡಿಗಳಿವೆ. ಮೊದಲನೆಯದರಲ್ಲಿ ಪ್ರಾಚೀನ ಕಾಲದ ಶಿವಲಿಂಗವಿದೆ. ಇದರ ಗರ್ಭಗುಡಿಯ ಮುಂದಿನ ಅಂಕಣದಲ್ಲಿ ಬಂದು ಅಪರೂಪದ ಸು.೨ಮೀ. ಎತ್ತರದ ಪುರಷಾಕೃತಿಯ ಶಿಲಾಮೂರ್ತಿ (ಚಿತ್ರ ೧) ಯಿದೆ. ಇದನ್ನು ಅರ್ಜುನ ದೇವರೆಂದು ಸ್ಥಳೀಯರು ಹೇಳುತ್ತಾರೆ. ಶಾಸನದ ಅರ್ಜುನೇಶ್ವರನೇ ಈ ಮೂರ್ತಿಯೆಂದು ಭಾವಿಸಿರಬಹುದು. ಬೆನ್ನಿನ ಹಿಂದೆ ಎರಡೂ ಬದಿಗಳಲ್ಲಿ ಬತ್ತಳಿಕೆಗಳನ್ನು ಬಿಗಿದು ಎಡಗೈಯಲ್ಲಿ ಧನುರ್ಧಾರಿಯಾಗಿ, ಬಲಗೈಯಲ್ಲಿ ಬಾಣವನ್ನು ಮೇಲ್ಮುಖವಾಗಿ ಹಿಡಿದು ರಾಜೋಚಿತವಾದ ಕಿರೀಟವೇ ಮೊದಲಾದ ಆಭರಣಗಳಿಂದ ಅಲಂಕೃತನಾಗಿ ಸ್ವಲ್ಪಬಾಗಿ ನಿಂತ ದೃಢ ಮೈಕಟ್ಟಿನ ದ್ವಿಭುಜ ಪುರುಷ (ಚಿತ್ರ ೧) ಎಡಬದಿಯಲ್ಲಿ ಬಿಲ್ಲಿಗೆ ಹೊಂದಿಕೊಂಡಂತೆ ಒಂದು ಕಪಿಯು ಕುಳಿತು ಹಣ್ಣು ತಿನ್ನುತ್ತಿದೆ. ಅತ್ಯಂತ ಗಮನಾರ್ಹ ಲಕ್ಷಣವೆಂದರೆ ಬಲಭುಜಕ್ಕೆ ಹೊಂದಿಕೊಂಡಂತೆ ಚಕ್ರ ಬಿಲ್ಲುಹಿಡಿದ ಎಡಗೈಯಲ್ಲಿದ್ದಂತೆ ಶಂಖ. ಆದ್ದರಿಂದ ಇದು ವಿಷ್ಣುವಿನ ಅವತಾರಗಳಲ್ಲೊಂದಾದ ಶ್ರೀರಾಮನ ಮೂರ್ತಿಯೆಂದು ಕಾಣುತ್ತದೆ. ಮೂರ್ತಿಯ ಮಾಟ, ಶೈಲಿ, ಶಂಖ ಚಕ್ರಗಳ, ಆಭರಣಗಳ, ಉಡಿಗೆ, ತೊಡಿಗೆಗಳ ಶೈಲಿಯನ್ನು ಅನುಲಕ್ಷಿಸಿದಾಗ ಈ ಮೂರ್ತಿಯು ಸುಮಾರು ೮ನೇ ಶತಮಾನ ಉತ್ತರ ಭಾಗ ಇಲ್ಲವೆ ೯ನೇ ಶತಮಾನ ಆದಿಭಾಗದ್ದೆಂದು ಹೇಳಬಹುದು. ಇದು ಶಾಸನದ ಅರ್ಜುನೇಶ್ವರ ಮೂರ್ತಿಯೇ ಆಗಿದ್ದರೆ ಜೊತೆಗೆ ವಿಶೇಷವಾದ ಶಂಖ ಚಕ್ರಗಳನ್ನು ಮತ್ತು ಕಪಿಯನ್ನು ತೋರಿಸಿರುವುದು ಸಾಮಾನ್ಯವಾಗಿ ಸಮಂಜಸವಾಗುವುದಿಲ್ಲ ಮತ್ತು ಶಾಸನದ ಕಾಲಕ್ಕಿಂತಲೂ ಮೊದಲೆ ಆ ಮೂರ್ತಿಯು ಇದ್ದಿರಬೇಕು. ಆದರೆ ಮೂರ್ತಿಯ ಲಕ್ಷಣ ಮತ್ತು ಶೈಲಿಯು ಅಷ್ಟು ಪ್ರಾಚೀನವಲ್ಲ. ಅರ್ಜುನೇಶ್ವರ ವೆಂಬ ಹೆಸರು ಸೂಚಿಸುವಂತೆ ಬಹುಶಃ ಅರ್ಜುನನ ಹೆಸರಿನ ಶಿವಲಿಂಗವಿರಬಹುದು ಅದನ್ನು ಗುರುತಿಸಬೇಕಾಗಿದೆ. ಕೃಷ್ಣನ ದೇವಾಲಯದಲ್ಲಿಯ ಮೂರ್ತಿಯು ನಿಜಕ್ಕೂ ಸುಮಾರು ೯ನೇ ಶತಮಾನದ ವಿಶೇಷ ಮಾದರಿಯ ಸೂರ್ಯ ವಿಗ್ರಹ ದುಸ್ಥಿತಿಯಲ್ಲಿದ್ದ ಈ ದೇವಾಲಯಗಳನ್ನು ಅರ್ವಾಚೀನ ಕಾಲದಲ್ಲಿ ಮೊದಲಿನ ಕಂಬಗಳೇ ಮೊದಲಾದುವುಗಳನ್ನು ಉಪಯೋಗಿಸಿ ಜೀಣೋದ್ಧಾರ ಮಾಡಲಾಗಿದೆ. ಇನ್ನು ಭೀಮ (ಭೀಮೇಶ್ವರ) ದೇವಾಲಯವು ಇಟ್ಟಿಗೆಯಿಂದ ಕಟ್ಟಲ್ಪಟ್ಟಿದೆ. ಇದರ ಮುಂದಿರುವ 1130ರ ಶಾಸನದಲ್ಲಿ ಬನ್ನಿಯೂರ ತೀರ್ಥದ ಶ್ರೀ ಭೀಮೇಶ್ವರ ದೇವರು ಎಂದು ದೇವಾಲಯವನ್ನು ವರ್ಣಿಸುತ್ತದೆ. ಇಟ್ಟಿಗೆಗಳ ಅಳತೆ ಆಕಾರ ಮತ್ತು ಲಕ್ಷಣಗಳಿಂದ ಭೀಮೇಶ್ವರ ದೇವಾಲಯವು ಕನಿಷ್ಠ ೯ನೇ ಶತಮಾನದ್ದೆಂದು ತರ್ಕಿಸಬಹುದು. ಒಟ್ಟಿನಲ್ಲಿ ಸುಮಾರು ೮ನೇ ಶತಮಾನದ ಪೂರ್ವದಲ್ಲಿಯೇ ಈ ಸ್ಥಳವು ಪಂಚಪಾಂಡವರ ಚಟುವಟಿಕೆಗಳ ನೆಲೆಗಳಲ್ಲಿ ಒಂದಾಗಿದ್ದು ತೀರ್ಥ ಕ್ಷೇತ್ರವೆಂಬ ನಂಬಿಕೆ ಬೆಳೆದಿತ್ತೆಂದು ಹೇಳಲಡ್ಡಿಯಿಲ್ಲ.

ಹಿಡಿಂಬವನ (ಅಂದರೆ ಚಿತ್ರದುರ್ಗ) ದ ಉತ್ತರಕ್ಕೆ ಸುಮಾರು ೨೦೦ ಕಿ.ಮಿ.ದೂರದಲ್ಲಿಯ ಹಗರಟಗಿಯು (ಸುರಪುರ ತಾ.ಗುಲ್ಬರ್ಗಾ ಜಿ.) ಮಹಾಭಾತರ ಕಾಲದ ಏಕಚಕ್ರ[15] ನಗರವೆಂದು ನಂಬಿಕೆ. ಇಲ್ಲಿಯು ಪಂಚಪಾಂಡವರ ಮತ್ತು ಕುಂತಿಯ ಹೆಸರಿನಲ್ಲಿ

ಸುಮಾರು ೧೧-೧೨ನೇ ಶತಮಾನದ ದೇವಾಲಯಗ [16]. ಆದರೆ ಸ್ಥಳೀಯ ಶಾಸನಗಳಲ್ಲಿ ಉಲ್ಲೇಖಿತ ನ ದೇವಾಲಯಗಳಲ್ಲಿ ಕೆಲವಾದರೂ ಪಾಂಡವರ ರಿನ ದೇವಾಲಯಗಳಾಗಿದ್ದು ಇವುಗಳ ಮೂಲ ರುಗಳು ಬೇರೆ ಇವೆ. ಆದ್ದರಿಂದ ಈ ದೇವಾಲ ಗಳನ್ನು ಪಾಂಡವರ ಹೆಸರುಗಳಿಂದ ಕಾಲಾಂತರದಲ್ಲಿ ಯರು ಗುರುತಿಸಲು ಪ್ರಾರಂಭಿಸಿರಬಹುದು. ತ್ತೆ ಉತ್ತರಕ್ಕೆ ಸುಮಾರು ೧೦೦ ಕಿ.ಮಿ ದೂರದ ರು ಕುಡುತಿನಿ (ಬಳ್ಳಾರಿ ತಾ. ಬಳ್ಳಾರಿ ಜಿ.) ಲ್ಲಿ ಸುಮಾರು ಕ್ರಿ.ಪೂ.೧೫೦೦- ೧೦೦೦ ವರ್ಷದ, ದಿಗುಡ್ಡೆ (Ashmound)ಯು ಹಿಡಿಂಬಾಸುರ ಅಗ್ನಿಸಂಸ್ಕಾರ ಮಾಡಿದ ಕುರುಹು ಎಂದು ತಿ ಇದೆ. ಹೀಗೆಯೇ ಶಾಸನಗಳನ್ನು ಪರಿಶೀಲಿಸಿ ಇದುವರೆಗೆ ಪಾಂಡುನಂದನರನ್ನು ಉಲ್ಲೇಖಿಸುವ ಕ್ಕಿನ ಸಂಖ್ಯೆಯಲ್ಲಿ ಅಂದರೆ ಸುಮಾರು ೬೦ಕ್ಕೂ ಟ್ಟುಶಾಸನಗಳು ಚಿತ್ರದುರ್ಗ - ಶಿವಮೊಗ್ಗ - ಸನ ಜಿಲ್ಲೆಗಳ ಪ್ರದೇಶದಲ್ಲಿವೆ. ಅವುಗಳಲ್ಲಿ ಭೀಮ, ಂಬಾಸುರನ ಕಥೆಗೆ ಸಂಭಂದಿಸಿದ ಶಾಸನಗಳು ದುರ್ಗ ಪ್ರದೇಶದಲ್ಲಿ ಮಾತ್ರ ಇವೆ. ಕರ್ನಾಟಕದ ದೆಡೆಗಳಲ್ಲಿ ಅಪರೂಪವಾಗಿ ಅಲ್ಲೊಂದು ಲ್ಲೊಂದು ಇಂಥ ಉಲ್ಲೇಖಗಳಿವೆ. ಆದ್ದರಿಂದ ಪಂಚ ಂಡವರ ಅರಣ್ಯವಾಸ ಕಾಲದ ಕಥಾ ಭಾಗದ ದ್ರ ಪ್ರದೇಶ ಚಿತ್ರದುರ್ಗ - ಶಿವಮೊಗ್ಗ - ಸನ. ಆದ್ದರಿಂದ ಈ ಕಥೆಗಳು ಅಲ್ಲಲ್ಲಿ ಮಧ್ಯ ುಗೀನ ಕಾಲದಲ್ಲಿ ತಮ್ಮ ತಮ್ಮ ಸ್ಥಳಗಳ ಹಿರಿಮೆ ನ್ನು ಸೂಚಿಸುವುದಕ್ಕೋಸ್ಕರ ಸ್ಥಳಗಳಿಗೆ ಪಂಚ ಂಡವರ ಸಂಬಂಧವನ್ನು ಕಲ್ಪಿಸಿಕೊಂಡಂತೆ ಕಾಣುವು . ಹಾಗಿದ್ದಲ್ಲಿ ಇವುಗಳಲ್ಲಿ ಭೌಗೋಳಿಕ ಸಾಂದ ಕ ಹೊಂದಾಣಿಕೆ ಇರುತ್ತಿರಲಿಲ್ಲ. ಆದ್ದರಿಂದ ಈ ಗಳ ಪ್ರಸರಣದಲ್ಲಿ ಐತಿಹಾಸಿಕ ಅಂಶವಿರುವ ಗೆ ಕಾಣುತ್ತದೆ.

## ರಾತತ್ವ ಅವಶೇಷಗಳು ಮತ್ತು ಶಾಸನಗಳ ಲ್ಲೇಖ : ಸಮನ್ವಯ

ಈಗ ಈ ಪ್ರದೇಶದ ಪ್ರಾಚೀನ ಉಲ್ಲೇಖಗಳನ್ನು ಕ್ರೀಕರಿಸಲು ಪುರಾತತ್ವ ಅವಶೇಷಗಳೇನಾದರೂ ಯೆ ಎಂಬುದನ್ನು ಪರಿಶೀಲಿಸೋಣ. ಈ ನಗರದ ು ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿಯ ಬೇರೆ ೆ ಕಾಲದ ಜನ ವಾಸ್ತವ್ಯವಿದ್ದ ನೂತನ-ಬೃಹತ್ ಾ ಸಂಸ್ಕೃತಿಗಳ ನೆಲೆಗಳು, ಗುಹಾ-ಕಲ್ಲಾಸರೆಯ ವರ್ಣಚಿತ್ರಗಳು[17], ಇತಿಹಾಸ ಆರಂಭಕಾಲದ ನಗರದ ಇಟ್ಟಿಗೆ ಕಟ್ಟಡಗಳು, ನಾಣ್ಯಗಳು[18], ಶಿವಲಿಂಗಗಳು[19], ಗಣೇಶ ಶಿಲ್ಪ, ಕಲ್ಯಾಣ ಚಾಲುಕ್ಯ - ಹೊಯ್ಸಳ - ವಿಜಯನಗರ - ನಾಯಕರ ಕಾಲದ ದೇವಾಲಯಗಳು, ಶಿಲ್ಪಗಳು, ಶಾಸನಗಳು, ಜನವಸತಿ ಗುಹೆಗಳು, ಅರಮನೆ ಕೋಟೆ ಮೊದಲಾದುವುಗಳು ಹೇರಳವಾಗಿವೆ. ಇವುಗಳ ಬಗ್ಗೆ ತಕ್ಕ ಮಟ್ಟಿನ ಅಧ್ಯಯನವೂ[20] ಆಗಿದೆ.

ಮಹಾಭಾರತದ ಹಿಡಿಂಬ ಪಟ್ಟಣದ ಬಗ್ಗೆ ತಿಳಿಯಲೆತ್ನಿಸಿದಾಗ ಈ ಪುರಾತತ್ವ ಸಾಂಸ್ಕೃತಿಕ ಕುರುಹುಗಳಲ್ಲಿ ಹೆಚ್ಚು ಪುರಾತನವಾದವುಗಳನ್ನು ಗಣನೆಗೆ ತೆಗೆದುಕೊಳ್ಳುವುದು ಸೂಕ್ತ. ನೂತನ (ಸು. ಕ್ರಿ.ಪೂ. ೨೦೦೦-೮೦೦) - ಬೃಹತ್ ಶಿಲಾ (ಸು. ಕ್ರಿ.ಪೂ. ೧೦೦೦-೨೦೦) - ಇತಿಹಾಸ ಆರಂಭಕಾಲ (ಸು. ಕ್ರಿ.ಪೂ.೩೦೦ - ಕ್ರಿ.ಶ.೨೦೦) ಸಾಂಸ್ಕೃತಿಕ ಅವಶೇಷಗಳು ತತ್ಸಂಬಂಧ ವರ್ಣ-ರೇಖಾ ಚಿತ್ರಗಳು, ಪಂಚ ಪಾಂಡವರ ಹಿಡಿಂಬಾಸುರನ ಹೆಸರಿನ ಶಿವಲಿಂಗಗಳು ಈ ಸಂದರ್ಭದಲ್ಲಿ ಗಮನಾರ್ಹ.

## ಶಿವಲಿಂಗಗಳು

ಚಂದ್ರವಳ್ಳಿ ಭಾಗದ ಬೆಟ್ಟದಲ್ಲಿಯ ಪಂಚಲಿಂಗೇಶ್ವರ ಗವಿಯಲ್ಲಿರುವ ಹತ್ತುಲಿಂಗಗಳಲ್ಲಿ ಐದು ಲಿಂಗಗಳಿಗೆ ಪಂಚಪಾಂಡವರ ಹೆಸರು ಗಳಿವೆಯಷ್ಟೆ[21]. ಜೊತೆಗೆ ಹಿಡಿಂಬೇಶ್ವರ ಲಿಂಗವೂ ಇದೆ. 1286ರಲ್ಲಿ ಪೆರುಮಾಳ್ ದಣನಾಯಕನು ಈ ಪಂಚಲಿಂಗಗಳಿಗೆ ದಾನ ಕೊಟ್ಟ ವಿಷಯವನ್ನು[22] ಮೇಲೆ ಹೇಳಿದೆ. ಆದ್ದರಿಂದ ಈ ಲಿಂಗಗಳಿಗೆ ಈ ಹೆಸರುಗಳು ಮಧ್ಯಯುಗೀನ ಕಾಲದ ಹಿಂದಿನಿಂದಲೂ ಇದೆ ಎಂಬುದು ನಿಶ್ಚಿತ. ಇನ್ನು ಲಿಂಗಗಳ ಆಕಾರ, ಲಕ್ಷಣ ಮತ್ತು ಅವುಗಳ ಮೇಲಿನ ಬ್ರಹ್ಮಸೂತ್ರ ರೇಖೆಗಳ ಪ್ರಕಾರಗಳನ್ನು ಪರಿಶೀಲಿಸಿದಾಗ ಅವುಗಳಲ್ಲಿ ಒಂದೆರೆಡು ಕನಿಷ್ಠ ೪ನೇಯ ಶತಮಾನದ್ದೆಂದು ಬೇರೆಡೆಯಲ್ಲಿ ತರ್ಕಿಸಿದೆ.[23] ಎರಡನೆಯದಾಗಿ ಈ ಪಂಚಲಿಂಗಗಳು ಹಾಗೂ ಹಿಡಿಂಬೇಶ್ವರ, ಫಲ್ಗುಣೇಶ್ವರದೇವಾಲಯಗಳು ಮೂಲತಃ ನಿಸರ್ಗ ಗುಹೆಗಳೇ ಅನಂತರ ಇವುಗಳಿಗೆ ಸಾಧ್ಯವಾದೆಡೆಗಳಲ್ಲಿ ಗೋಡೆಗಳನ್ನು ಮುಂಭಾಗದಲ್ಲಿ ಮಂಡಪಗಳನ್ನು ಗುಹೆಯ ಮೇಲೆ ಶಿಖರವನ್ನು ನಿರ್ಮಿಸಲಾಗಿದೆ. ಉದಾಃ ಬೆಟ್ಟದ ಮೇಲಿನ ಹಿಡಿಂಬೇಶ್ವರ ದೇವಾಲಯದ ದಕ್ಷಿಣ ದ್ವಾರದ ಗೋಪುರವನ್ನು[24] 1412ರಲ್ಲಿ ಕಟ್ಟಲಾಯಿತು. ಈ ರೀತಿ ಇಲ್ಲಿ

ಗುಹೆಗಳಲ್ಲಿ ಲಿಂಗ ಸ್ಥಾಪನೆ ಮಾಡಿರುವುದು ವಿಶೇಷವಾಗಿದ್ದು ಇವುಗಳ ಪ್ರಾಚೀನತೆಯನ್ನು ಸೂಚಿಸುತ್ತದೆ. ಇಲ್ಲಿಯ ದೇವಾಲಯವನ್ನು ಈ ಪ್ರದೇಶದ ಶಾಸನಗಳಲ್ಲಿ ಹಿಡಿಂಬೇಶ್ವರ, ಹಿಡಿಂಭನಾಥ, ಹಿಡಿಂಭದೇವ ಎಂದು ಪದೇ ಪದೇ ಉಲ್ಲೇಖಿಸಲಾಗಿದೆ. ಒಂದೆಡೆಯಲ್ಲಿ ಹಿಡಿಂಬನಾಥ ಪಟ್ಟಣವೆಂದು ವರ್ಣಿಸಿರುವುದು ಗಮನಾರ್ಹ. ಹಿಡಿಂಬ ಪಟ್ಟಣದಲ್ಲಿ ಯೋಗ್ಯವಾಗಿ ಕ್ರಮೇಣ ಹಿಡಿಂಬೇಶ್ವರ ದೇವಾಲಯವು ನಿರ್ಮಾಣವಾಯಿತೇ ಇಲ್ಲವೇ ಸ್ಥಳೀಯ ಹಿಡಿಂಬೇಶ್ವರ ದೇವಾಲಯದಿಂದ ಹಿಡಿಂಬನಾಥ ಪಟ್ಟಣ ಎಂದು ಊರಿಗೆ ಹೆಸರು ಬಂತೆ? ಇದರಲ್ಲಿ ಮೊದಲನೇ ಅನುಮಾನ ಸರಿಯೆಂದು ತೋರುತ್ತದೆ. ಎರಡನೆ ಅನುಮಾನ ಸರಿಯಿದ್ದಲ್ಲಿ ಆ ಹೆಸರು ಮಧ್ಯಯುಗೀನ ಕಾಲದ ಶಾಸನಗಳಲ್ಲಿ ಪದೇ ಪದೇ ಬರಬೇಕಿತ್ತು. ಆದರೆ ಈ ಎರಡೂ ದೃಷ್ಟಿಯಿಂದ ಈ ಸ್ಥಳವು ಹಿಡಿಂಬಾಸುರನ ಕಥೆಗೆ ಸಂಬಂಧಿಸಿರುವುದನ್ನು ಸೂಚಿಸುತ್ತದೆ. ಹೆಸರುಗಳ ಕೂಡ ಮೊದಲಿಂದಲೆ ಬಂದಿವೆಯೆಂದು ತಿಳಿದಲ್ಲಿ ತಪ್ಪಾಗಲಾರದು.

ಲಿಂಗಗಳಲ್ಲಿ ಹಿಂದೆ ಮಯೂರವರ್ಮನ ಶಾಸನ ಬಳಿ ಇದ್ದ ಒಂದು ಲಿಂಗ ಮತ್ತು ಹಿಡಿಂಬೇಶ್ವರ ಲಿಂಗವು ಶೈಲಿ ಮತ್ತು ಲಕ್ಷಣಗಳಿಂದ ಅವು ಆ ಕದಂಬ ರಾಜನ ಕಾಲದ್ದೆಂದು ಬೇರೆಡೆಯಲ್ಲಿ ಚರ್ಚಿಸಿದ್ದೇನೆ[25]. ಅವನ ಕಾಲದಲ್ಲಿಯೆ ಬಹುಮಟ್ಟಿಗೆ ಈ ಪ್ರದೇಶಕ್ಕೆ ಸಂಬಂಧಿಸಿದಂತೆ ಈ ಕಥೆಯು ಜನಸಾಮಾನ್ಯರ ತಿಳುವಳಿಕೆಯಲ್ಲಿದ್ದರಿಂದ ವೈದಿಕ ಮತಾವಲಂಬಿಯಾದ ಮಯೂರವರ್ಮನು ಇಲ್ಲಿಯ ತಟಾಕವನ್ನು ದುರಸ್ತಿಗೊಳಿಸಿದಾಗ ಆ ಮಹಾ ವ್ಯಕ್ತಿಗಳ ಹೆಸರಿನಲ್ಲಿ ಲಿಂಗ ಸ್ಥಾಪನೆ ಮಾಡಿರುವ ಸಾಧ್ಯತೆಯಿದೆ. ಆ ಕಾಲದಲ್ಲಿ ಇಟ್ಟಿಗೆಯಲ್ಲಿ ದೇವಾಲಯವನ್ನು ಕಟ್ಟುವುದು ಹಿಂದಿನ ಶಾತವಾಹನ ಕಾಲದಿಂದಲೂ ಮುಂದುವರೆದಿತ್ತು. ಶಾತವಾಹನ – ಕದಂಬ ಕಾಲದ ಇಟ್ಟಿಗೆ ಜೈನ ಶಿವಾಲಯಗಳು ಐಹೊಳೆ – ಪಟ್ಟದಕಲ್[27], ಹಲಶಿ, ಹರೀಶಿ, ಬನವಾಸಿ[28], ಹೈಗುಂದ[29], (ಹೊನ್ನಾವರಹತ್ತಿರ), ಹಟ್ಟಿಯಂಗಡಿ[30] (ಕುಂದಾಪುರದ ಹತ್ತಿರ) ಇದ್ದವು. ಬಹುಶಃ ಕಾಲಾಂತರದಲ್ಲಿ ಈ ದೇವಾಲಯಗಳು ಜೀರ್ಣಾ ವಸ್ಥೆಯಲ್ಲಿದ್ದುದರಿಂದ ಇವುಗಳಲ್ಲಿಯ ಲಿಂಗಗಳನ್ನು ಈ ನಿಸರ್ಗ ಗುಹೆಗಳಲ್ಲಿ ಸ್ಥಾಪಿಸಿರಬಹುದೆಂದು ತೋರುತ್ತದೆ. ಎಲ್ಲಿ ಲಿಂಗಗಳು ಏಕ ಕಾಲದಲ್ಲಿ ಇಲ್ಲವೆ ಒಬ್ಬನಿಂದಲೇ ಸ್ಥಾಪಿಸಿದಂತೆ ಕಾಣುವುದಿಲ್ಲ. ಏಕೆಂದರೆ ಲಿಂಗಗಳೆಲ್ಲವೂ ಶೈಲಿ ಆಕಾರ ಲಕ್ಷಣಗಳಲ್ಲಿ ಭಿನ್ನ ಭಿನ್ನವಾಗಿವೆ. ಪಂಚಪಾಂಡವರಲ್ಲಿ ಪ್ರಚಲಿತ ಕಥೆಯಲ್ಲಿ ಮುಖ್ಯ ವ್ಯಕ್ತಿಗಳಾದ ಪ್ರಾಯಶಃ ಹಿಡಿಂಬಾಸುರ ಮತ್ತು ಭೀಮನ ಹೆಸರಿನಲ್ಲಿ ಲಿಂಗಗಳು ಸುಮಾರು ೩–೪ನೇ ಶತಮಾನದಲ್ಲಿ ಸ್ಥಾಪನೆಯಾಗಿದ್ದು ಕ್ರಮೇಣ ೮ನೇ ಶತಮಾನದೊಳಗೆ ಇನ್ನುಳಿದ ಪಾಂಡವರ ಹೆಸರಿನಲ್ಲಿ ಲಿಂಗಗಳಿ ಸ್ಥಾಪನೆಯಾಗಿರಬಹುದು ಅಥವ ಕಾಲಾಂತರದಲ್ಲಿ ಅದಲು ಬದಲಾಗಿರಬಹುದು. ಕ್ರಮೇಣ ಪಾಂಡವರಿಂದಲೆ ಸ್ಥಾಪನೆಯಾಯಿತೆಂದು ದಂತ ಕಥೆ ಬೆಳೆದಿರಬೇಕು. ಆದ್ದರಿಂದ ಈ ಸ್ಥಳಕ್ಕೆ ಸಂಬಂಧಿಸಿದಂತೆ ಹಿಡಿಂಬ–ಪಾಂಡವರ ಕಥೆಯು ಬಹುಮಟ್ಟಿಗೆ ೧–೨ನೇ ಶತಮಾನದ ಹೊತ್ತಿಗಾಗಲೆ ಜನರಲ್ಲಿ ಪ್ರಚಲಿತವಾಗಿತ್ತೆಂದು ತೋರುತ್ತದೆ. ಇಲ್ಲಿ ಮಾತ್ರವಲ್ಲದೆ ಇತರ ಕೆಲವೆಡೆಗಳಲ್ಲಿಯೂ ಹೀಗೆಯೆ ೧–೨ನೇ ಶತಮಾನದ ಹೊತ್ತಿಗೆ ಅಲ್ಲಲ್ಲಿ ಈ ಮಹಾಕಾವ್ಯಗಳ ಪುರಾಣೋಕ್ತ ವ್ಯಕ್ತಿಗಳಿಗೆ ಸಂಬಂಧಿಸಿದ ಕಥೆಗಳು ಜನರಲ್ಲಿ ಪ್ರಚಲಿತವಾಗಿತ್ತೆಂಬುದನ್ನು ಬೇರೆಡೆಗಳಲ್ಲಿ ವಿಮರ್ಶಿಸಿದ್ದೇವೆ.[31]

ಇಲ್ಲಿ ಇನ್ನೊಂದು ಅಂಶವನ್ನು ಪರಿಶೀಲಿಸಬೇಕಾಗುತ್ತದೆ. ಮಾನವ ಜೀವನದ ಮೂಲಭೂತ ಮೌಲ್ಯಗಳ ಪ್ರತಿಪಾದನೆಯೇ ಪ್ರಮುಖವಾಗಿರುವ ರಾಮಾಯಣ ಮತ್ತು ಮಹಾಭಾರತ ಮಹಾಕಾವ್ಯಗಳಿಂದ ಪ್ರಭಾವಿತರಾಗಿ ಆಯಾಯ ಪ್ರದೇಶಗಳಲ್ಲಿ ಈ ಕಾವ್ಯಗಳ ಮಹಾ ವ್ಯಕ್ತಿಗಳಿಗೆ ಸಂಬಂಧಿಸಿದಂತೆ ತಮ್ಮ ತಮ್ಮ ಪ್ರದೇಶಗಳ ಹಿರಿಮೆಯನ್ನು ಹೆಚ್ಚಿಸುವುದಕ್ಕೋಸ್ಕರ ಇಂಥ ಕಥೆಗಳನ್ನು ಹೇಳುತ್ತಿದ್ದಿರಬಹುದೆ? ಇಲ್ಲವೆ ಈ ಕಾವ್ಯಗಳ ಕಥೆಗಳಿಗೆ ಸಂಬಂಧಿಸಿದ ವಿವಿಧ ಜನವರ್ಗಗಳಲ್ಲಿ ಅಂದರೆ ವಾನರರು, ಹಿಡಿಂಬಾಸುರ ವರ್ಗಗಳ ಪೀಳಿಗೆಯವರು ತರುವಾಯ ಅವರು ಹೋದೆಡೆಗಳಲ್ಲೆಲ್ಲಾ ತಮ್ಮ ಹಿಂದಿನ ತಲೆಮಾರಿನ ಈ ಮಹಾನ್ ವ್ಯಕ್ತಿಗಳ ಕಥೆಗಳನ್ನು ಹೇಳಿಕೊಳ್ಳುತ್ತಾ ಅವರವರ ಹೆಸರುಗಳಲ್ಲಿ ತಾವಿದ್ದ ಪ್ರದೇಶಗಳನ್ನು ಹಿಡಿಂಬವನ/ಪಟ್ಟಣ. ಕಿಷ್ಕಿಂದಾ ನಗರವೆಂದು ಕರೆದುಕೊಂಡಿರಬಹುದೆ? ಅಥವ ಐತಿಹಾಸಿಕವಾಗಿ ಮೂಲಕಥೆಗಳಲ್ಲಿ ಉಲ್ಲೇಖಿತ ಸ್ಥಳಗಳೇ ಇವಾಗಿರಬಹುದೆ? ಈ ಮೂರು ಊಹೆಗಳಲ್ಲಿ ಎರಡನೆಯದು ನಮ್ಮ ಸಧ್ಯದ ವಿಷಯಕ್ಕೆ ಹೆಚ್ಚು ಪ್ರಸ್ತುತವಾಗಿದೆ.

ಹಿಡಿಂಭಾಸುರನ ಪೀಳಿಗೆಯವರು ಬಹುಶಃ ಈ ಪ್ರದೇಶದಲ್ಲಿದ್ದು ಇದನ್ನು 'ಹಿಂಡಿಬವನ'ವೆಂದು ತಮ್ಮ ಪೂರ್ವಜರ ಹೆಸರಿನಲ್ಲಿ ಕರೆದಿರಲೂ ಸಾಕು. ಕ್ರಮೇಣ

ಿ ಒಂದು ಪಟ್ಟಣವನ್ನು ಕಟ್ಟಿರಬಹುದು ಹಿಡಿಂಬ
ವೇ ಹಿಡಿಂಭ ಪಟ್ಟಣವಾಯಿತು.

ಇಲ್ಲಿಯ ಪುರಾತತ್ವ ಉತ್ಖನನಗಳಲ್ಲಿ ಒಂದಾದ ಲೆ ಒಂದರಂತೆ ಒಟ್ಟಿನಲ್ಲಿ ಮೂರು ಸಾಂಸ್ಕೃತಿಕ ಗಳು[31] ಶೋಧವಾಗಿವೆ; ಅತ್ಯಂತ ಹಿಂದಿನ ನೂತನ ಾಯುಗ (ಸು.ಕ್ರಿ.ಪೂ.೧೮೦೦–೮೦೦), ಕಬ್ಬಿಣ ುಗದ ಬೃಹತ್ ಶಿಲಾ ಸಂಸ್ಕೃತಿ, (ಸು.ಕ್ರಿ.ಪೂ. ೦೦–೨೦೦) ಮತ್ತು ಇತಿಹಾಸ ಆರಂಭಕಾಲದ ಸ್ಕೃತಿ (ಸು.ಕ್ರಿ.ಪೂ.೩೦೦ – ಕ್ರಿ.ಶ. ೨೦೦) ಕೊನೆ ಘಟ್ಟವು ನಾಣ್ಯ ಚಲಾವಣೆ, ಲಿಪಿಯ ಬಳಕೆ, ಟ್ಟಿಗೆ ಕಟ್ಟಡ ನಿರ್ಮಾಣ ಮೊದಲಾದ ವಿಶಿಷ್ಟ ಲಕ್ಷ ಳುಳ್ಳ ನಾಗರಿಕ ಸಂಸ್ಕೃತಿಯಾಗಿತ್ತು. ಇದರ ಹಿಂದಿನ ಟ್ಟದಲ್ಲಿ ಗ್ರಾಮೀಣ ಜೀವನದ ಲಕ್ಷಣಗಳಿವೆ. ಕ್ಕೂ ಹಿಂದಿನ ಶಿಲಾಯುಧ ಉಪಕರಣಗಳು ಾಗಿ ಬಳಕೆಯಲ್ಲಿದ್ದ ಘಟ್ಟವು ಹಾಗೆಯೆ. ಆದರೂ ಧ್ಯದ ಘಟ್ಟದಲ್ಲಿ ಪ್ರಥಮವಾಗಿ ಕಬ್ಬಿಣದ ಉಪಕರ ಗಳು ಆಯುಧಗಳು, ಬಳಕೆಯಲ್ಲಿದ್ದು ಇವರೂ ರ್ಹಿಕ ಜೀವನದಲ್ಲಿ ಹೆಚ್ಚು ಸುಧಾರಣೆ ಆಗಲು ಧ್ಯವಾಯಿತು. ಕೊನೆಯ ಹಂತದ ಕಾಲದಲ್ಲಿಯೆ ಲೆ ತರ್ಕಿಸಿದಂತೆ ಹಿಡಿಂಬಾಸುರ ಕಥೆ ಬಳಕೆಯಲ್ಲಿ ತ್ತು. ಆದ್ದರಿಂದ ಈ ಗ್ರಾಮೀಣ ಎರಡು ಘಟ್ಟಗ ಳನ್ನು ಮತ್ತು ನಾಗರೀಕ ಘಟ್ಟವು ಪ್ರಚಲಿತ ಕಥೆಯ ಲ್ಲಿಯ ಹೆಸರುಗಳಲ್ಲಿ ಸೂಚಿತವಾಗಿದೆಯೇನೊ ಎಂಬ ಸಂಶಯಃ ಹಿಡಿಂಬವನ, ಹಿಡಿಂಬಗ್ರಾಮ ಮತ್ತು ಹಿಡಿಂಬ ಪಟ್ಟಣ. ಈ ಸಂದರ್ಭದಲ್ಲಿ ಭೀಮ–ಹಿಡಿಂ ಬೆಯ ಮಗ ಘಟೋತ್ಗಜನು ಇಲ್ಲಿ ಪಟ್ಟಣವನ್ನು ಕಟ್ಟಿ ಹಿಡಿಂ ಬನವನ್ನು ಹಿಡಿಂಬಪಟ್ಟಣವನ್ನಾಗಿ ನಿರ್ಮಿಸಿದ ಸ್ಥಳೀಯ ಕಥೆಯು ಅತ್ಯಂತ ಗಮನಾರ್ಹ. ಆದ್ದರಿಂದ ಕ್ರಿ.ಶ.೧–೨ನೇ ಶತಮಾನದ ನಾಗರಿಕ ಘಟ್ಟದ ವಿವಿಧ ಪ್ರಕಾರಗಳ ಇಟ್ಟಿಗೆ ಕಟ್ಟಡಗಳುಳ್ಳ ನಗರವೆ ಹಿಡಿಂಬ ಪಟ್ಟಣವೆಂದು ಹೇಳಬಹುದು. ಈ ಪ್ರದೇಶದಲ್ಲಿದ್ದ ದೊಡ್ಡ ತಟಾಕದಲ್ಲಿ ಬಹುಶಃ ಮಯೂರವರ್ಮನ ನಂತರ ನೀರಿನ ಅಭಾವದಿಂದಲೆ ಕ್ರಮೇಣ ಜನರು ಹಿಡಿಂಬ ಪಟ್ಟಣವನ್ನು ಬಿಟ್ಟು ಸ್ವಲ್ಪ ದೂರದಲ್ಲಿ ದೊಡ್ಡ ಬೆಟ್ಟದ ಪಕ್ಕದಲ್ಲಿ ಅಂದರೆ ಈಗಿನ ಚಿತ್ರದುರ್ಗ ಭಾಗದಲ್ಲಿ ನೆಲೆಸಿರಬೇಕು. ಆದ್ದರಿಂದ ಅದೇ ಕ್ರಮೇಣ ಸೂಳ್ಗಲೆಳ್ಪಿತ್ತು ಬೆಮ್ಮತ್‌ಕಲ್ (ಬೆಟ್ಟದ ಬೆನ್ನು ಹತ್ತಿದ?) ಪಟ್ಟಣವಾಯಿತು. ಸುತ್ತಿನ ಕೋಟೆ ಕೊತ್ತಳ ನಿರ್ಮಾಣ ವಾದ ಹಾಗೆಲ್ಲ ಚಿತ್ರಕಲ್ಲುದುರ್ಗ ಚಿತ್ರದುರ್ಗವಾಯಿ ತೆಂದು ತರ್ಕಿಸಬಹುದು.

---

## ಗ್ರಂಥ ಋಣ

೧. ಹುಲ್ಲೂರು ಶ್ರೀನಿವಾಸ ಜೋಯ್ಸರುಃ ೧೯೭೬: "ಚಿತ್ರದುರ್ಗದ ಇತಿಹಾಸ":, ಐತಿಹಾಸಿಕ ಲೇಖನಗಳು, ಹುಲ್ಲೂರು ಶ್ರೀನಿವಾಸ ಜೋಯಿಸ ಗ್ರಂಥ ಪ್ರಕಟಣ ಸಮಿತಿ, ಚಿತ್ರದುರ್ಗ, ಪುಟಗಳು ೧–೧೪; ಎಪಿಗ್ರಾಫಿಯಾ ಕರ್ನಾಟಿಕಾ, (ಎ.ಕ) ಸಂಪುಟ XI, ಶಾಸನ ಸಂಖ್ಯೆ (ಶಾ.ಸಂ) ಚಿತ್ರದುರ್ಗ ೩೨.

೨. 'ಎ.ಕ' ಸಂಪುಟ XI, ಚಿತ್ರದುರ್ಗ ೧೪

೩. ಅದೇ ೧೩.

೪. ಅದೇ ಸಂ.೬

೫. ಅದೇ, ಹೊಳಲ್ಕೆರೆ ೭.

೬. 'ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್', ಸಂಪುಟ IX ಭಾಗ 1 ಶಾ.ಸಂ.126

೭. 'ಎ.ಕ', ಚಿತ್ರದುರ್ಗ ೪. ೧೨, ೧೪, ೩೨ – ೩೪ ೩೬..
"ಪರ್ವತದ ಮೂಡಣದೆಸೆಯೊಳು ಹಿಡಿಂಬವಮಾ ಬನದೊಳು ಸ್ವಯಂಭು ಕಲೆ ದೇವಸ್ವಾಮಿಯೆಂಬುದು ಆ ದೇವರ್ಗ್ಗೆ ದೇಗುಲವ ಮಾಡಿಸಿದಳು ಹಿಡಿಂಬೆ ಹಿಡಿಂಬೇಸ್ವವೆಂಬುದು ಆಲಿಂಗ" (ಸಾಲು 27-29)

೮. ಅದೇ. ಚಿತ್ರದುರ್ಗ ೭೮ ಮತ್ತು ೮೨.

೯. ಅದೇ. ಚಿತ್ರದುರ್ಗ, ೨೧, ೫೧, ೮೪; ೪೮ – ೫೧, ೭೬.

೧೦. ಅದೇ. ಚಿತ್ರದುರ್ಗ ೫೪.

೧೨. ಈ ಸ್ಥಳವನ್ನು ಸ್ವಲ್ಪ ಮಟ್ಟಿಗೆ ಸೆಪ್ಟೆಂಬರ್, ೧೯೯೧, ೫ರಂದು ಇಲ್ಲಿಯ ಧರ್ಮೇಶ್ವರ ಮತ್ತು ಕೃಷ್ಣ ದೇವಾಲಯಗಳನ್ನು ಮತ್ತು ೮ನೇ ಶತಮಾನದ ಒಂದು ಶಾಸನವನ್ನು ಪರಿಶೀಲಿಸಿದ್ದೇನೆ.

೧೩. ಷಡಕ್ಷರಯ್ಯ. ರು.ಮ;೧೯೯೦: "ಧಾರವಾಡ ಜಿಲ್ಲೆಯಲ್ಲಿ ಮಹತ್ವದ ಇಟ್ಟಿಗೆ ದೇವಾಲಯಗಳು" 'ಕರ್ನಾಟಕ ಭಾರತಿ', ಸಂಪುಟ ೨೩, ಸಂಚಿಕೆ ೧, ಪುಟ ೧೧೦–೧೫.

೧೪. 'ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್', ಸಂಪುಟ ೧೮ ಶಾ. ಸಂಖ್ಯೆ ೩.

೧೫. ಚಿತ್ರದುರ್ಗದ ವಾಯುವ್ಯಕ್ಕೆ ಸುಮಾರು ೧೨೦ ಕಿ.ಮಿ. ದೂರದಲ್ಲಿರುವ ಹಾನಗಲ್ (ಧಾರವಾಡ ಜಿ.) ಕೂಡ ಮಹಾಭಾರತದ "ವಿರಾಟನಗರ"ವೆಂದು ಹೇಳಲಾಗುತ್ತಿದೆ. ಇಲ್ಲಿಯೆ ಬಕಾಸುರನನ್ನು ಭೀಮನ ಕೊಂದನೆಂದು ನಂಬಿಕೆ. ಇಲ್ಲಿಯ ಒಂದು ದಿಬ್ಬವನ್ನು ಬಕಾಸುರನನ್ನು ಕೊಂದ ಸ್ಥಳವೆಂದು ತೋರಿಸಲಾಗುತ್ತಿದೆ.

೧೬. ಸುಂದರ, ಅ.೧೯೮೨: "ಟೆಂಪಲ್ಸ್ ಅಂಡ್ ಮಾತೃಕಾ ಪ್ಯಾನಲ್ ಫ್ರಂ ಹಗರಟಗಿ", 'ಜರ್ನಲ್ ಆಫ್ ಕರ್ನಾಟಕ ಯೂನಿವರ್ಸಿಟಿ' (ಸೋಷಿಯಲ್ ಸೈನ್ಸ್‌ಸ್), ಸಂಪುಟ ೧೮, ಪುಟಗಳು ೩೮–೪೧.

೧೭. ಶ್ರೀಶೈಲಾರಾಧ್ಯ, ಎಚ್.೧೯೮೩: ಸಂಶೋಧನೆಯ ಹಾದಿಯಲ್ಲಿ, ಆರೋಹಣ ಪ್ರಕಾಶನ, ಚಿತ್ರದುರ್ಗ.

೧೮. ಕೃಷ್ಣ.ಎಂ.ಎಚ್.೧೯೭೦: 'ಎಕ್ಸಕವೇಶನ್ಸ್ ಆಟ್ ಚಂದ್ರವಳ್ಳಿ'
ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, ಮೈಸೂರು (ಪ್ರಾ.ಸಂ.ನಿ) ಮತ್ತು 'ಏನ್ಷಿಯೆಂಟ್ ಇಂಡಿಯಾ', ಸಂಚಿಕೆ, ೪ (ಪುರಾತತ್ವ ಸರ್ವೇಕ್ಷಣ ಕೇಂದ್ರ ಸರ್ಕಾರ ದೆಹಲಿ).

೧೯. ಸುಂದರ ಅ; ೧೯೭೮: "ಚಿತ್ರದುರ್ಗ ಪರಿಸರ: ಇತ್ತೀಚಿನ ಪುರಾತತ್ವ ಶೋಧನೆಗಳು", 'ಮಾನವಿಕ ಭಾರತಿ' ಸಂಪುಟ ೨, ಸಂಚಿಕೆ ೧. ಪು. ೧–೧೫.

೨೦. ಪಾ.ಸಂ.ನೀ. ೧೯೨೯ರ ವಾರ್ಷಿಕ ವರದಿ, ಪುಟಗಳು ೧೪–೨೨.

೨೧. 'ಎ.ಕ.' ಸಂಪುಟ XI, ಶಾ.ಸಂ. ಚಿತ್ರದುರ್ಗ ೩೨. ಸಾಲುಗಳು ೫೩–೫೪...ಆ ತೀರ್ಥ ಶ್ರೀ ಧರ್ಮೇಶ್ವರ ದೇವರು ಶ್ರೀ ಭೀಮೇಶ್ವರ ದೇವರು ಶ್ರೀ ಅರ್ಜುನೇಶ್ವರ ದೇವರು ಶ್ರಿ ಲಕುಲೇಶ್ವರ ದೇವರು ಶ್ರೀ ಸಹದೇವೇಶ್ವರ ದೇವರುಯಿಂತೀ ಪಂಚಲಿಂಗ ದೇವರೊಳಗಾದ ದೇವರು".

೨೨. ಅದೇ.

೨೩. ಸುಂದರ, ಅ; ೧೯೭೮ : ಅದೇ ಕಡೆ

೨೪. 'ಎ.ಕ.' ಚಿತ್ರದುರ್ಗ ೧೪. ಸಾಲುಗಳು ೧೫–೧೬.

೨೫. ಸುಂದರ, ಅ; ೧೯೭೮ : ಅದೇ ಕಡೆ.

೨೬. ರಾಜಶೇಖರಪ್ಪ ಬಿ; ೧೯೮೪ : "ಚಂದ್ರವಳ್ಳಿ ಶಾಸನದ ಮೇಲೆ ಹೊಸಬೆಳಕು"
'ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ'. ಸಂ.೬೯. ಸಂಚಿಕೆ ೨, ಬೆಂಗಳೂರು, ಪುಟಗಳು ೧–೧೨.

೨೭. ಸುಂದರ, ಅ; ೧೯೭೨ ; "ಬಾದಾಮಿ ಚಾಲುಕ್ಯ ಪೂರ್ವದ ಒಂದು ಇಟ್ಟಿಗೆಯ ಕಟ್ಟಡ", 'ಕರ್ನಾಟಕ ಭಾರತಿ', ಕರ್ನಾಟಕ ವಿಶ್ವವಿದ್ಯಾಲಯ, ಸಂಪುಟ ೫, ಸಂಚಿಕೆ ೩, ಪುಟಗಳು ೩೫–೪೨.

೨೮. ಸುಂದರ, ಅ; ೧೯೭೯ ; "ಸಮ್ ನೋಟ್‌ವರ್ದಿ ಆಂಟಿಕ್ವಿಟಿಸ್ ಆಫ್ ಬನವಾಸಿ ಏರಿಯ", 'ಕ್ವಾರ್ಟರ್ಲಿ ಜರ್ನಲ್ ಆಫ್ ದಿ ಮಿಥಿಕ್ ಸೊಸೈಟಿ', ಸಂ XX, ಸಂಖ್ಯೆ 3. ಪುಟಗಳು, ೧೬೪–೧೭೦.

೨೯. ಸುಂದರ ಅ; ೧೯೭೯ : "ಬುದ್ದಿಸ್ಟ್ ಸ್ಕಲ್ಪರ್ಸ್ ಇನ್ ನಾರ್ತ್ ಕೆನರ ಡಿಸ್ಟ್ರಿಕ್ಟ್", ದೇರ ಇಂಪ್ಲಿಕೇಶನ್ಸ್"
'ಜರ್ನಲ್ ಆಫ್ ದಿ ಕರ್ನಾಟಕ ಹಿಸ್ಟಾರಿಕಲ್ ರಿಸರ್ಚ್ ಸೊಸೈಟಿ', ಸಂ XIV, ಸಂ.೨.

೩೦. ಸುಂದರ ಅ; ೧೯೭೨ "ದಕ್ಷಿಣ ಕನ್ನಡದ ಪ್ರಾಚೀನತಮ ಸಾಂಸ್ಕೃತಿಕ ಅವಶೇಷಗಳು", 'ಸುದರ್ಶನ'(ಡಾ. ತೋನ್ಸೆ ಮಾಧವ ಅನಂತ ಪೈ ಅಭಿನಂದನ ಗ್ರಂಥ). ಪುಟಗಳು ೧೦೨–೧೦೪.

೩೧. ಸುಂದರ ಅ; ೧೯೯೨ : "ಹಂಪಿ; ದಿ ಏನ್ಷಯೆಂಟ್ ಕಿಷ್ಕಿಂಧಾ", 'ಡಾ.ವಿಸ್. ಪಾಠಕ್, ಫೆಲಿಸಿಟೇಶನ್ ವಾಲ್ಯುಂ' (ಪ್ರಕಟಣೆಯಲ್ಲಿದೆ).
ಸುಂದರ ಅ; ೧೯೯೦ : "ಜಟಂಗ ರಾಮೇಶ್ವರದಲ್ಲಿಯ ಪ್ರಾಗೈತಿಹಾಸಿಕ ಅವಶೇಷಗಳು ಮತ್ತು ಐತಿಹ್ಯ", 'ಇತಿಹಾಸ ದರ್ಶನ' ಸಂ.೬,
ಸುಂದರ ಅ; ೧೯೯೧ : "ಪ್ರಿ ಹಿಸ್ಟಾರಿಕ್ ಅಂಡ್ ಪ್ರೋಟೊ ಹಿಸ್ಟಾರಿಕ್ ಕಲ್ಚರ್ಸ್ ಆಫ್ ದಕ್ಷಿಣ ಕನ್ನಡ" 'ಪರ್‌ಸ್ಪೆಕ್ಟಿವ್ಸ್ ಆನ್ ದಕ್ಷಣ ಕನ್ನಡ ಅಂಡ್ ಕೊಡಗು', ಮಂಗಳೂರು ಯೂನಿವರ್ಸಿಟಿ. ಡೆಸಿನಿಯಲ್ ವಾಲ್ಯೂಂ, ಮಂಗಳೂರು.

೩೨. ಸುಂದರ ಅ; 'ಇಂಡಿಯನ್ ಆರ್ಕಿಯಾಲಜಿ, ಎ ರಿವ್ಯೂ', ೧೯೭೭–೭೮.

ಎ.ಎಸ್.ಹೆಗಡೆ ಕಣ್ಣಿ

# ಗೇರುಸೊಪ್ಪೆಯಲ್ಲಿ ಜೈನೇತರ ವಾಸ್ತು ಶಿಲ್ಪಾವಶೇಷಗಳು

ಕರ್ನಾಟಕ ರಾಜ್ಯದ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿನಲ್ಲಿ ಪೂರ್ವಕ್ಕೆ ೩೨ ಕಿ.ಮೀ ದೂರದಲ್ಲಿರುವ 'ಗೋರುಸೊಪ್ಪೆ' ಪ್ರದೇಶ ಜೈನ ಸಾಳುವ ಮನೆತನದಿಂದ ಸುಮಾರು 400 ವರುಷಗಳ ಕಾಲ ಮಿಕ್ಕಿ ಆಡಳಿತಕ್ಕೆ ಒಳಗಾಗಿತ್ತು ಎಂಬುದು ಐತಿಹಾಸಿಕ ದಾಖಲೆ. ಗೇರುಸೊಪ್ಪೆಯ 'ನಗರಬಸ್ತೀಕೇರಿ' ಎಂಬ ಪ್ರದೇಶದಲ್ಲಿ ಜೈನಧರ್ಮದ ಕುರಿತಾದ ವಾಸ್ತುಶಿಲ್ಪಾವಶೇಷಗಳು ಅಧಿಕವಾಗಿ ಸಿಗುತ್ತವೆಯಾದರೂ ಅನ್ಯಧರ್ಮಗಳಾದ ಶೈವ ಮತ್ತು ವೈಷ್ಣವ ವಾಸ್ತುಶಿಲ್ಪಾವಶೇಷಗಳೂ ಇಲ್ಲದಿಲ್ಲ. ಈ ಪ್ರದೇಶದ ಸುತ್ತೆಲ್ಲ ಇಂಥ ಅಂಶಗಳು ಗೋಚರಿಸುತ್ತವೆ. ಉದಾಹರಣೆಗಾಗಿ ಗೋವರ್ಧನಗಿರಿ ಮತ್ತು ನಗರ ಎಂಬ ಸ್ಥಳಗಳನ್ನು ಇಲ್ಲಿ ಹೆಸರಿಸಬಹುದು. ಜೈನ ಧರ್ಮಾ ಚರಣೆಯ ಸಾಳುವ ದೊರೆಗಳು ಈ ಧರ್ಮವನ್ನು ಪ್ರಬಲವಾಗಿ ಅನುಸರಿಸುತ್ತಿದ್ದರೆಂಬುದಕ್ಕೆ ಇತರ ಧರ್ಮೀಯರಿಗೂ ಒಗ್ಗುವ ಹಾಗೆ ಅನ್ಯಧರ್ಮ ಪೋಷಕರೂ ಆಗಿದ್ದರೆಂಬುದಕ್ಕೆ ಅಳಿದುಳಿದ ವಾಸ್ತುಶಿಲ್ಪಾವಶೇಷಗಳು ಮತ್ತು ಶಾಸನಗಳು ಒಳ್ಳೆಯ ಆಧಾರಗಳಾಗಿವೆ.

ನಗರ ಬಸ್ತೀಕೇರಿಯಲ್ಲಿನ ಪ್ರಮುಖ ಬಸದಿಗಳಾದ ಚತುರ್ಮುಖ ಬಸದಿ, ನೇಮನಾಥ ಬಸದಿ, ವರ್ಧಮಾನ ಬಸದಿ ಮತ್ತು ಪಾರ್ಶ್ವನಾಥ[1] ಬಸದಿಗಳಲ್ಲಿರುವ ವಿಸ್ತಾರವಾದ ಪ್ರಾಂಗಣದಲ್ಲಿ ಈ ಶೈವಾಲಯವನ್ನು ನಿರ್ಮಿಸಲಾಗಿತ್ತು. ಇದು ಜೀರ್ಣಾವಸ್ಥೆಯಲ್ಲಿದ್ದರೂ ಕೂಡ ಅಧ್ಯಯನಕ್ಕೆ ಕೆಲವು ಅಂಶಗಳನ್ನು ನೀಡಬಲ್ಲದು. ಸದ್ಯಕ್ಕೆ ಗರ್ಭಗುಡಿಯಲ್ಲಿರುವ ಶಿವಲಿಂಗ ಮೂಲಸ್ಥಿತಿಯಲ್ಲಿ ಇಲ್ಲವಾದರೂ ಅಭ್ಯಸಿಸುವುದಕ್ಕೆ ಯೋಗ್ಯವಾಗಿದೆ. ಬ್ರಹ್ಮಸೂತ್ರದಲ್ಲಿರುವ ಈ ಲಿಂಗ ಸಾಳುವ ದೊರೆಗಳ ಕೊಡುಗೆಯೇ ಎನ್ನಬಹುದು. ಇದರಲ್ಲಿ ಬಸದಿಗಳ ರಚನೆಯಲ್ಲಿ ಸಾಮ್ಯತೆಯಿದ್ದರೂ ಕೂಡ ಈ ಶೈವಾಲಯದ ರಚನೆ ಅವುಗಳಿಗಿಂತ ತುಸು ಭಿನ್ನತೆಯಿಂದ ಕೂಡಿದೆ. ಈ ಹಿನ್ನೆಲೆಯಲ್ಲಿ ನೋಡುವುದಾದರೆ ಮುಲತಃ ಇದುಶೈವಾಲಯವೇ ಆಗಿತ್ತೆಂದು ತರ್ಕಿಸಬಹುದು. , ಇಲ್ಲಿಯ ಶೈವಧರ್ಮದ ಅಸ್ಥಿತ್ವದ ಯಾವುದೇ ದಾಖಲೆ ಲಭಿಸಿಲ್ಲ.

ಶೈವ ಧರ್ಮದ ಪ್ರಭಾವ ಗೇರುಸೊಪ್ಪೆಯಲ್ಲಿ ಪ್ರಬಲವಾಗಿತ್ತೆಂಬುದಕ್ಕೆ ಆಧಾರವಾಗಿ ನಗರ ಬಸ್ತೀಕೇರಿಯಲ್ಲಿಯೇ ಇರುವ ಇನ್ನೆರಡು ವೀರಭದ್ರ ವಿಗ್ರಹಗಳು ಸಾಕ್ಷಿಗಳಾಗಿವೆ.[2] ಇದರಂತೆ ಅಳಿದುಳಿದ ವಾಸ್ತುಶಿಲ್ಪಾವಶೇಷಗಳೂ ಕೂಡ ಸಾಕ್ಷಿಗಳು. ವಿಗ್ರಹಗಳನ್ನು ಕಳೆದುಕೊಂಡ ಕೆಲವು ಕಟ್ಟಡಗಳಿದ್ದು, ಇವು ರಚನೆಯಲ್ಲಿ ಬಸದಿಗಳಿಗಿಂತ ಭಿನ್ನವಾಗಿವೆ. ಸರಳ ಅಲಂಕರಣೆಯ ದ್ವಾರಬಂಧಗಳನ್ನು ಹೊಂದಿವೆ. ಈ ಹಿನ್ನೆಲೆಯಲ್ಲಿ ನೋಡಿದರೆ ಬಹುಶಃ ಇಂಥಹ ಅವಶೇಷಗಳು ಶೈವಾಲಯಗಳೇ ಆಗಿದ್ದವೆಂಬುದರಲ್ಲಿ ಸತ್ಯತೆಯಿದ್ದಂತೆ ತೋರುತ್ತದೆ. ಅಲ್ಲಲ್ಲಿ ಬಿದ್ದ ಪಾಣೀಪೀಠ ಭಾಗಗಳೂ ಸಹಿತ ಇಂತಹ ದೇಗುಲಗಳು ಶೈವಾಲಯಗಳೇ ಆಗಿದ್ದವೆಂದು ಪ್ರಚುರ ಪಡಿಸುತ್ತವೆ. ಗಣೇಶನ ಒಂದು ವಿಗ್ರಹ ಹಾಗೂ ನಂದಿಯ ಎರಡು ವಿಗ್ರಹಗಳು ಈ ಪ್ರದೇಶಗಳಲ್ಲಿವೆ. ಈ ಹಿನ್ನೆಲೆಯೊಂದಿಗೆ ಬರೆಯುವುದಾದರೆ ಗೇರುಸೊಪ್ಪೆ ಪ್ರದೇಶ ಶೈವ ಧರ್ಮೀಯ ದಿಂದಲೂ ಕೇಂದ್ರೀಕರಿಸ ಲ್ಪಟ್ಟಿರಬೇಕು. ಜೈನ ಸಾಳುವ ಮನೆತನಕ್ಕಿಂತ ಹಿಂದೆಯೇ ಇಲ್ಲಿ ಶೈವ ಧರ್ಮದ ಕಾರ್ಯಚರಣೆಗಳು ನಡೆದಿರಬೇಕೆಂಬುದರಲ್ಲಿ ಸತ್ಯತೆಯಿದೆ. ಕಾರಣ ಗೇರುಸೊಪ್ಪೆಯಲ್ಲಿನ ಸುತ್ತ ಮುತ್ತಲ ಪ್ರದೇಶಗಳಲ್ಲಿ ಕೂಡ ಶೈವಾಲಯಗಳು ಮೂಲ ವಿಗ್ರಹಗಳೊಡನೆ (ಲಿಂಗವೂ ಸೇರಿ) ಜೀರ್ಣವಾಗಿರುವುದು ತೋರುತ್ತದೆ. ಇಂಥಹ ಅವಶೇಷಗಳು ಸಾಳುವ ದೊರೆಗಳ ಅಭಿವೃದ್ಧಿ ದಿನಗಳಿಗಿಂತ ಹಿಂದಿನ ಲಕ್ಷಣಗಳನ್ನು ಸೂಚಿಸುತ್ತವೆ. ಈ ಆಧಾರದ ಮೇಲೆ ಚಿಂತಿಸುವುದಾದರೆ ಗೇರುಸೊಪ್ಪೆಯಲ್ಲಿನ ಶೈವ ಧರ್ಮದ ಹಿನ್ನೆಲೆಯ ಬಗೆಗೆ ಇನ್ನೂ ಹೆಚ್ಚಿನ ಸಂಶೋಧನೆಯಾಗಬೇಕಾಗಿದೆ. ಈ ಕುರಿತ ಪ್ರಯತ್ನ ಅಗತ್ಯ.

ಈ ಪ್ರದೇಶದಲ್ಲಿರುವ ವೈಷ್ಣವ ವಾಸ್ತು ಶಿಲ್ಪಾವಶೇಷಗಳು(ಕೆಲಮಟ್ಟಿಗೆ ಇದೆ) ಅಧ್ಯಯನ ಯೋಗ್ಯ. ಸಾಳುವ ದೊರೆಗಳಲ್ಲಿ ಪ್ರಖ್ಯಾತಳಾದ ರಾಣಿ ಚೆನ್ನಭೈ

ರಾದೇವಿಯ ಕಾಲದಲ್ಲಿ (1575ರಲ್ಲಿ) ನಿರ್ಮಾಣವಾದ ನಗರ ಬಸ್ತೀಕೇರಿಯಲ್ಲಿನ 'ತಿರುವೆಂಗಳನಾಥ ಸ್ವಾಮಿ' ದೇವಸ್ಥಾನವೊಂದು[3] ವಾಸ್ತುಶಿಲ್ಪದ ದೃಷ್ಟಿಯಿಂದ ವಿಶಿಷ್ಟ. ತಿಮ್ಮಪ್ಪ ಸೇನುಭೋವನೆಂಬವನು ಈ ದೇವ ಸ್ಥಾನವನ್ನು ಕಟ್ಟಿಸಿ ಅದರಲ್ಲಿ ತಿರುವೆಂಗಳನಾಥ ಸ್ವಾಮಿ ವಿಗ್ರಹವನ್ನು ಪ್ರತಿಷ್ಠಾಪಿಸಿದನೆಂದೂ, ರಾಣಿ ಚೆನ್ನಭೈರಾ ದೇವಿ ಹೆಸರಿನಲ್ಲಿ ಅಲ್ಲಿ ಪೂಜೆ ಪುನಸ್ಕಾರ ನಡೆಯು ವಂತೆ ನೋಡಿಕೊಂಡನೆಂದೂ ಮತ್ತು ಈ ಕ್ರಮವನ್ನು ತನ್ನ ವಂಶೀಯರು ಮುಂದುವರಿಸಬೇಕೆಂದುಭೂಮಿ ಯನ್ನು ದಾನಮಾಡಿನ ಸಂಗತಿಯನ್ನು ಇದೇ ದೇವಾಲ ಯದ ಆವರಣದಲ್ಲಿರುವ ಶಿಲಾಶಾಸನವು ತಿಳಿಸುತ್ತದೆ.[4] ವಿಗ್ರಹವಿಲ್ಲದಿರುವ ಈಗಿನ ಈ ದೇವಾಲಯ ಜೀರ್ಣ ಸ್ಥಿತಿಯಲ್ಲಿ ಇದೆ.

ವಾಸ್ತುವಿನ್ಯಾಸದ ದೃಷ್ಟಿಯಿಂದ ಹೇಳುವುದಾದರೆ ಗೇರುಸೊಪ್ಪೆಯಲ್ಲಿ ಉಪಲಬ್ಧವಿರುವ ಐತಿಹಾಸಿಕ ಕಟ್ಟ ಡಗಳಲ್ಲಿಯೇ ಇದು ಭಿನ್ನವಾದದ್ದು. ಮೂಲ ಸ್ವರೂಪ ವನ್ನು ತೋರ್ಪಡಿಸುವ ಈ ತಿರುವೆಂಗಳನಾಥ ಸ್ವಾಮಿ ದೇಗುಲದ ಅಧಿಷ್ಠಾನ, ಭಿತ್ತಿ, ಕಪೋತ, ಗರ್ಭಗುಡಿ ಅಂತರಾಳ ಅಥವಾ ನವರಂಗ ಎಂಬ ವಿಭಿನ್ನ ಭಾಗಗ ಳನ್ನು ಗುರುತಿಸಬಹುದು. ಎತ್ತರವಾದ ಅಧಿಷ್ಠಾನವಿದ್ದು ಅಷ್ಟೇನೂ ಅಲಂಕರಣೆಗಳಿಲ್ಲ. ಉಪಾನ, ಜಗತಿ, ಕಂಠ ಮತ್ತು ಗ್ರೀವ ಎಂಬ ಭಾಗಗಳು ಅಧಿಷ್ಠಾನದಲ್ಲಿ ಗೋಚರಿಸುತ್ತವೆ. ಭಿತ್ತಿ ಅಥವಾ ಗೋಡೆ ಭಾಗದಲ್ಲಿ ಕಡಗಲ್ಲುಗಳನ್ನು (ಲ್ಯಾಟ್‌ರೈಟ್) ಶಿಲ್ಪಿ ನಯವಾಗಿ ಮತ್ತು ವಿಶಿಷ್ಟವಾಗಿ ಬಳಸಿಕೊಂಡಿದ್ದಾನೆ.ಗೋಡೆಯ ಹೊರಭಾಗದಲ್ಲಿ ಏರಿಳಿತ ಅಥವಾ ಹಿಂಬಣೆ ಮುಂಬ ಣೆಗಳಿವೆ. ಇಂಥಹ ಪಟ್ಟಿಕೆಗಳು ಗೋಡೆಯ ತುಂಬೆಲ್ಲ ಗೋಚರಿಸುತ್ತವೆ.[5]

ಗರ್ಭಗುಡಿ ಹಾಗೂ ಅಂತರಾಳ (ನವರಂಗ?)ಗಳು ಚಚ್ಚೌಕವಾಗಿದ್ದು ಒಂದೇ ಪ್ರಮಾಣದಲ್ಲಿವೆ. ಇವುಗಳ ಹೊರಗೆ ಪ್ರದಕ್ಷಿಣಾ ಪಥವು ಸುತ್ತುವರಿದಿದೆ. ಇದರಿಂ ದಾಗಿ ಇದೊಂದು ಸಾಂದಾರ ಶೈಲಿಯ ದೇಗುಲ. ಗರ್ಭಗುಡಿ ಹಾಗೂ ಅಂತರಾಳಗಳ ಸಮಪ್ರದೇಶಗಳಿ ಗಿಂತ ತಗ್ಗು ಪ್ರದೇಶದಲ್ಲಿ ಪ್ರದಕ್ಷಿಣಾ ಪಥವಿದೆ. ಪ್ರದ ಕ್ಷಿಣೆ ಮಾಡುವುದರ ಮೂಲಕ ಮೆಟ್ಟಿಲುಗಳನ್ನೇರಿ ಅಂತರಾಳ ಹಾಗೂ ಗರ್ಭಗುಡಿಯನ್ನು ಪ್ರವೇಶಿಸುವ ವ್ಯವಸ್ಥೆಯು ಈ ದೇಗುಲಕ್ಕಿತ್ತು. ಕುಸಿದ ಈ ದೇಗು ಲದ ಸುತ್ತಲೂ ಕಡಗಲ್ಲಿನಿಂದಲೇ ಕೊರೆದ ಕಮಾನಾಕೃತಿಯ ತುಂಡುಗಳು ಬಿದ್ದಿವೆ. ಬಹುಶಃ ಇವು ಗರ್ಭಗುಡಿ ಹಾಗೂ ಗೋಡೆ ಭಾಗದ ತಲೆಯ ಮೇಲಿಂದ ಸಂಪರ್ಕ ಹೊಂದಿದ್ದವು. ಈ ಸಂಶಯಕ್ಕೆ ಬರಲು ಕಾರಣವೇನೆಂದರೆ ಒಂದು ಕಮಾನಾಕೃತಿಯಕಲ್ಲಿನ ತುಂಡು ಗೋಡೆ ಭಾಗಕ್ಕೆ ಸೇರಿಕೊಂಡಿದೆ. ಇಂಥ ವ್ಯವಸ್ಥೆ ಗೇರುಸೊಪ್ಪೆಯಲ್ಲಿಯ ಇನ್ನಾವುದೇ ಅಳಿದುಳಿದ ದೇವಸ್ಥಾನಗಳಲ್ಲಿ ಗಣನೆಗೆ ಬರಲಾರದು. ಅಧಿಷ್ಠಾನ, ಗೋಡೆ, (ಭಿತ್ತಿ), ಪ್ರದಕ್ಷಿಣಾ ಪಥ, ಗರ್ಭಗುಡಿ ಅಂತರಾಳ ಮತ್ತು ಕಮಾನಾಕೃತಿಯ ರಚನೆಗಳಿಂದಾವೃ ತವಾದ ಕಲ್ಲು ತುಂಡುಗಳಲ್ಲಿ ಭಿನ್ನವಾದ ಲಕ್ಷಣಗಳು ಗ್ರಹಿಕೆಗೆ ಬರುತ್ತವೆ. ಪೂರ್ತಿಯಾಗಿ ಕಡಗಲ್ಲುಗಳಿಂದ ರಚನೆಯಾದ ಈ ತಿರುವೆಂಗಳನಾಥ ಸ್ವಾಮಿ ದೇವಾ ಲಯ ಗೇರುಸೊಪ್ಪೆಯ ವಾಸ್ತುವಿನ್ಯಾಸದ ಪ್ರಾದೇಶಿಕ ಶೈಲಿಗೆ ಉತ್ತಮ ಉದಾಹರಣೆ.

ಗೇರುಸೊಪ್ಪೆಯ ಗೋವರ್ಧನಗಿರಿ ಪ್ರದೇಶದಲ್ಲಿ ಹಾಗೂ ನಗರಬಸ್ತೀಕೇರಿ ಎಂಬ ಕೇಂದ್ರ ಪ್ರದೇಶದಲ್ಲಿ ವೈಷ್ಣವ ಧರ್ಮದ ಎರಡು ಹನುಮಂತನ ದೇವಸ್ಥಾನ ಗಳಿದ್ದವೆಂಬುದಕ್ಕೆ ಹನುಮಂತನ ವಿಗ್ರಹಗಳು ಲಭ್ಯವಿದೆ. ಗೋವರ್ಧನಗಿರಿಯ ಕೋಟೆಯ ಆವರಣದಲ್ಲಿರುವ ಒಂದು ವಿಗ್ರಹ ಕೆಲವು ವಾಸ್ತು ಅವಶೇಷಗಳಿಂದ ಇರುವುದನ್ನು ಕಾಣಬಹುದು.[6] ಇನ್ನೊಂದು ವಿಗ್ರಹ ನಗರಬಸ್ತೀಕೇರಿಯ ಆಧುನಿಕ ದೇವಾಲಯದಲ್ಲೂ ಈಗ ಪೂಜೆಗೆ ಒಳಾಗಾಗಿದೆ.[7] ಇದೂ ಅಲ್ಲದೇ ಗೇರೊಸೊಪ್ಪೆಯ ಸುತ್ತಮುತ್ತಲ ಪ್ರದೇಶಗಳಲ್ಲೂ ವೈಷ್ಣವ ದೇವಸ್ಥಾನಗಳು ಇವೆ. ವಿಷ್ಣು ವಿಗ್ರಹಗಳು ಕಂಡುಬರುತ್ತದೆ.

ಈ ನಿಟ್ಟಿನಲ್ಲಿ 'ಗೇರುಸೊಪ್ಪೆ', ಜೈನ ಸಾಳುವ ಮನೆತನದವರಿಂದ ವಿಶೇಷವಾಗಿ ಜೈನ ವಾಸ್ತುಶಿಲ್ಪಾವ ಶೇಷಗಳಿಗೆ ಹೆಸರಾಗಿದ್ದರೂ ಶೈವ, ವೈಷ್ಣವ ಮತ್ತು ಶಾಕ್ತ ವಾಸ್ತುಶಿಲ್ಪಾವಶೇಷಗಳನ್ನು ಕೂಡ ಗಣನೆಗೆ ಮಾಡಬೇಕು. ಕೆಲವೊಮ್ಮೆ ಇದಕ್ಕೆ ಶಾಸನಾಧಾರವಿದೆ. ಈ ಕುರಿತು ಗೇರುಸೊಪ್ಪೆ ಪ್ರದೇಶದಲ್ಲಿರುವ ಜೈನ ಧರ್ಮೇತರ ಶೈವ ಮತ್ತು ವೈಷ್ಣವ ಧರ್ಮಗಳ ಅಸ್ತಿ ತ್ವದ ಅವಶೇಷಗಳಿರುವುದನ್ನು ಸಹ ಗ್ರಹಿಸಿ ಇನ್ನು ಹೆಚ್ಚಿನ ಸಂಶೋಧನೆ ನಡೆಸಬೇಕಾಗಿದೆ.

## ಆಕರ ಗ್ರಂಥಗಳು – ಟಿಪ್ಪಣಿಗಳು

1. ಕಜಿನ್ಸ್, ಹೆನ್ರಿ : "ಗೇರ್ಸಪ್ಪಾ ಓಲ್ಡ್ ಸೈಟ್ ಅಂಡ್ ರುಯಿನ್ ಟೆಂಪಲ್ಸ್' 'ಚಾಲುಕ್ಯನ್ ಆರ್ಕಿಟೆಕ್ಚರ್ ಆಫ್ ದಿ ಕೆನರೀಸ್ ಡಿಸ್ಟ್ರಿಕ್ಟ್' – ಕಲ್ಕತ್ತಾ 1926, ಪುಟ 126.

2. ಹೆಗಡೆ ಕಣ್ಣೆ ಎಂ.ಎಸ್ : "ಗೇರುಸೊಪ್ಪೆ – ಒಂದು ಸಾಂಸ್ಕೃತಿಕ ಅಧ್ಯಯನ", 'ಗೇರುಸೊಪ್ಪೆಯ ಮೂರ್ತಿಶಿಲ್ಪ ಕಲೆ', ಪುಟ 217 – (ಎಂ.ಫಿಲ್.ಪ್ರಬಂಧ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ 1991) ಅಪ್ರಕಟಿತ

3. ಕಾಮತ್ ಸೂರ್ಯನಾಥ ಯು. (ಸಂ) 'ಕರ್ನಾಟಕ ಸ್ಟೇಟ್ ಗೇಜೆಟಿಯರ್ ಉತ್ತರ ಕನ್ನಡ ಡಿಸ್ಟ್ರಿಕ್ಟ್' ಪುಟ. 910.

4. ಎಂ.ಎ.ಆರ್ – 1928 – ಬೆಂಗಳೂರು 1929, ಶಾಸನ .ಸಂಖ್ಯೆ 112, ಪುಟ 101.

5. ಹೆಗಡೆ ಕಣ್ಣೆ ಎಂ.ಎಸ್ : ಗೇರುಸೊಪ್ಪೆ – ಒಂದು ಸಾಂಸ್ಕೃತಿಕ ಅಧ್ಯಯನ. ಗೇರುಸೊಪ್ಪೆ ವಾಸ್ತುಕಲೆ, ಪುಟ 164.

6. ಅದೇ, ಪುಟ 214.

7. ಅದೇ, ಪುಟ 212.

ಡಾ॥ ಜಿ.ಎಸ್. ದೀಕ್ಷಿತ್

# ಕೆರೆಗಳ ಬಗ್ಗೆ ಐತಿಹಾಸಿಕ ಸಂಶೋಧನೆಯ ಅವಶ್ಯಕತೆ.

ಐತಿಹಾಸಿಕ ಸಂಶೋಧನೆಯಿಂದ ದೊರಕುವ ಫಲ ಅನೇಕ ವೇಳೆ ನಮ್ಮ ದೈನಂದಿನ ಜೀವನಕ್ಕೆ ನೇರವಾಗಿ ಸಂಬಂಧಿಸಿರುವುದಿಲ್ಲ. ಆದ್ದರಿಂದ ಸಾರ್ವಜನಿಕರಿಗೆ ಇಂತಹ ಸಂಶೋಧನೆ ವಿದ್ವಾಂಸರಿಗೆ ಸಂಬಂಧಿಸಿದ್ದು, ತಮಗೂ ಅದಕ್ಕೂ ಸಂಬಂದವಿಲ್ಲವೆಂದೆನಿಸಿದರೆ ಆಶ್ಚರ್ಯವಿಲ್ಲ. ಆದರೆ, ಕೆರೆಗಳ ಬಗೆಗಿನ ಸಂಶೋಧನೆ ಸಾರ್ವಜನಿಕರಿಗೆ ನೇರವಾಗಿ ಸಂಬಂಧಿಸಿದ್ದನ್ನು ಒತ್ತಿ ಹೇಳಬೇಕಾದ್ದಿಲ್ಲ. ಮಹಾಪೂರಗಳ ಮತ್ತು ನೀರಿನ ಬರಗಳ ನಿಯಂತ್ರಣದಲ್ಲಿ ಕೆರೆಗಳ ಪಾತ್ರ ಮಹತ್ವವಾದದ್ದು.

ಈ ಸಂಶೋಧನೆ ಅವಶ್ಯಕವೆನ್ನುವ ಚರ್ಚೆ ಚಿತ್ರದುರ್ಗದಲ್ಲಿ ನಡೆಯುವುದರಲ್ಲಿ ಔಚಿತ್ಯವಿದೆ. ಚಿತ್ರದುರ್ಗದ ಹತ್ತಿರವಿರುವ ಚಂದ್ರವಳ್ಳಿಯಲ್ಲಿ ಕರ್ನಾಟಕ ಇತಿಹಾಸದಲ್ಲಿ ಮೊಟ್ಟಮೊದಲನೆ ಕೆರೆಯಿತ್ತು. ಇದಕ್ಕೂ ಹಿಂದಿನದೆನ್ನ ಬಹುದಾದ ಕೆರೆಗಳು ಬನವಾಸಿ ಮತ್ತು ಆದವಾನಿಗಳ ಹತ್ತಿರವಿದ್ದವೆನ್ನುವುದಕ್ಕೆ ದಾಖಲೆಗಳಿದ್ದರೂ, ಆ ಕೆರೆಗಳು ಎಲ್ಲಿದ್ದವೆನ್ನುವುದಕ್ಕೆ ಕುರುಹುಗಳಿಲ್ಲ. ಚಂದ್ರವಳ್ಳಿ ಕೆರೆಯ ದಂಡೆಯಮೇಲೆ ಆ ಕೆರೆಯನ್ನು ಕದಂಬರ ಮಯೂರ ಶರ್ಮನು (ಸು.350ರಲ್ಲಿ) ಕಟ್ಟಿಸಿದನೆನ್ನುವ ಶಾಸನವಿರುವುದರಿಂದ, ಇದು ಕರ್ನಾಟಕದಲ್ಲಿ ಅತ್ಯಂತ ಪುರಾತನ ಕೆರೆ ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ. ಇನ್ನೊಂದು ಔಚಿತ್ಯವೆಂದರೆ, ಹಾಳಾದಕೆರೆಗಳನ್ನು ಹೇಗೆ ಉಪಯೋಗಿಸಬಹುದೆಂಬುದನ್ನು ನಮ್ಮ ತಂತ್ರ ಜ್ಞಾನಿಗಳು ಚಂದ್ರವಳ್ಳಿಕೆರೆಯ ಪುನರುತ್ಥಾನ ಮಾಡಿ ಇತ್ತೀಚೆಗೆ ತೋರಿಸಿ ಕೊಟ್ಟಿದ್ದಾರೆ. ಕೊನೆಯ ಔಚಿತ್ಯವೆಂದರೆ ಗುಡ್ಡಗಳ ಮೇಲೆ ಬಿದ್ದನೀರನ್ನು ಕೆರೆಗಳಲ್ಲಿ ಸಂಗ್ರಹಿಸಿ ಅದನ್ನು ಕೃಷಿಗೂ ಮತ್ತು ಕುಡಿಯುವುದಕ್ಕೂ ಉಪಯೋಗಿಸಬಹುದೆನ್ನುವುದನ್ನು ಇವತ್ತಿಗೂ ಸ್ವಲ್ಪಮಟ್ಟಿಗೆ ಚಿತ್ರದುರ್ಗದಲ್ಲಿ ನೋಡಬಹುದು. ಈ ಔಚಿತ್ಯವನ್ನು ಕುರಿತು ಕೊನೆಯಲ್ಲಿ ಹೇಳಿದ್ದೇನೆ.

ನಾವು ಸಂಶೋಧನೆಯನ್ನು ಆರಂಭಿಸುವ ಮೊದಲು ಯಾರಾದರೂ ಕೇಳಬಹುದು, ನಾವಿರುವುದು ಇಪ್ಪತ್ತನೆಯ ಶತಮಾನದ ಕೊನೆಯ ದಶಕದಲ್ಲಿ. ಈಗ ವಿಜ್ಞಾನ-ತಂತ್ರಜ್ಞಾನ ಅಪಾರವಾಗಿ ಬೆಳೆದಿದೆ. ಅತ್ಯಾಧುನಿಕ ರೀತಿಯಲ್ಲಿ ನದಿಗಳಿಗೆ ಆಣೆಕಟ್ಟುಗಳನ್ನು ಕಟ್ಟಿ ಲಕ್ಷಾಂತರ ಎಕ್ರೆ ಭೂಮಿಗೆ ನೀರಾವರಿಯನ್ನು ಒದಗಿಸಬಹುದು. ಬಹಳ ದೊಡ್ಡಕೆರೆಗಳು ನೂರಾರು ಎಕ್ರೆ ಭೂಮಿಗೆ ಮಾತ್ರ ಉಪಯೋಗವಾಗುವವು. ಆದ್ದರಿಂದ ಇಂದಿಗೆ ಅವುಸರಿಯಲ್ಲವೆಂದು ವಾದಿಸಬಹುದು. ಇದಕ್ಕೆ ಉತ್ತರ, ಭಾರೀಜಲಾಶಯಗಳನ್ನು ಎಲ್ಲಾ ಕಡೆಯಲ್ಲಿಯೂ ಕಟ್ಟಲು ಸಾಧ್ಯವಿಲ್ಲ. ಅಂತಹ ಸ್ಥಳಗಳಲ್ಲಿ ಕೆರೆಗಳು ಅನಿವಾರ್ಯ; ಕೆರೆಗಳ ಪರ ಇರುವವರು ಭಾರೀ ಆಣೆಕಟ್ಟುಗಳ ಶತ್ರುಗಳಲ್ಲ. ಎರಡಕ್ಕೂ ಬೇರೆಬೇರೆ ಸ್ಥಾನವಿದೆ. ಕೆರೆಗಳ ಅವಶ್ಯಕತೆಯನ್ನು ಒಪ್ಪಿಕೊಂಡರೂ ಹಳೆಕೆರೆಗಳನ್ನು ಕಟ್ಟಿಕೊಂಡು ಏನು ಮಾಡಬೇಕು, ಹೊಸಕೆರೆಗಳನ್ನು ಹೊಸರೀತಿಯಲ್ಲಿ ಕಟ್ಟಿದರೆ ಒಳ್ಳೆಯದಲ್ಲವೆ ಎನ್ನಬಹುದು. ಹಳೆಯ ಮೈಸೂರಿನಲ್ಲಿ ಮುಖ್ಯ ಎಂಜನಿಯರ್ ಆಗಿದ್ದು ಹಳೆಯ ಕೆರೆಗಳನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡಿದ ತಜ್ಞ ಸ್ಯಾಂಕಿ (Sankey). ಈತನ ಹೆಸರಿನಲ್ಲಿ ಇವತ್ತಿಗೂ ಒಂದು ಕೆರೆ ಬೆಂಗಳೂರಿನಲ್ಲಿದೆ. ಈ ತಜ್ಞನ ಪ್ರಕಾರ ನಮ್ಮ ಪೂರ್ವಜರು ಎಲ್ಲೆಲ್ಲಿ ಕೆರೆಯನ್ನು ಕಟ್ಟಲೂ ಸಾಧ್ಯವೋ ಅಲ್ಲೆಲ್ಲಾ ಕೆರೆಗಳನ್ನು ಕಟ್ಟಿಬಿಟ್ಟಿದ್ದಾರೆ. ಹೊಸಕೆರೆಗಳಿಗೆ ಸ್ಥಳವನ್ನು ಹುಡುಕುವುದು ದುಸ್ತರ. ಒಂದು ವೇಳೆ ಸ್ಥಳವಿದೆಯೆಂದು ಹೊಸಕೆರೆಯನ್ನು ಕಟ್ಟಲಾರಂಭಿಸಿದರೆ ಅದರಿಂದ, ಈಗಿರುಕವ ಹಳೆಯ ಕೆರೆಗಳಲ್ಲಿ ನೀರುಸೇರುವುದಕ್ಕೆ ತಡೆಯುಂಟಾಗಬಹುದೆಂದು ಸ್ಯಾಂಕಿಯು ಅಭಿಪ್ರಾಯ ಪಟ್ಟಿದ್ದಾನೆ.

ಹಳೆಯ ಕೆರೆಗಳ ಪುನರುತ್ಥಾನ ಮಾಡುವ ಮೊದಲು ಅವುಗಳನ್ನು ಕಟ್ಟಿದ ರೀತಿಯನ್ನು ನಾವು ಅಭ್ಯಾಸ ಮಾಡಬೇಕು, ಎಷ್ಟೋಸಲ ಆ ತಂತ್ರಜ್ಞಾನ ಇಂದಿಗೂ ಉಪಯೋಗವಾಗುವ ಸಂಭವವಿದೆ. ಪಾಂಡ್ಯರು ಕಟ್ಟಿದ ಕಾಲುವೆಯನ್ನು ದುರಸ್ತು ಮಾಡಲು ಹೊರಟ ಹಾರ್ಸ್ಲಿ (Horsly) ಯೆನ್ನುವ ಎಂಜನಿಯರನು, ಹಿಂದಿನವರು ಕಟ್ಟಿದರೀತಿಯನ್ನೇ ಅನುಸರಿಸುವುದರಲ್ಲಿ ತನಗೆ ಬಹಳ ಸಂತೋಷವಾಯಿತೆಂದು

ಕೊಂಡಿದ್ದಾನೆ. "I have no hesitation in ying that it has been an un mixed asure to me, from a professional inting view, to merely follow the ginal constructors of the Pandyan nal".

ತಂತ್ರಜ್ಞಾನ ಒಂದೇ ಅಲ್ಲದೆ ನಮ್ಮ ಹಿಂದಿನವರು ಗಳನ್ನು ನಿರ್ವಹಿಸುತ್ತಿದ್ದ ವಿಧಾನವು ನಮಗೆ ಅವ ಾಗಬಹುದು. ಈ ನಿರ್ವಹಣೆಯನ್ನು ಪಂಚಾಯಿತಿ ಮಾಡುತ್ತಿದ್ದವು. ಈಚೆಗೆ ಸರ್ಕಾರದವರು ಈ ರ್ವಹಣೆಯನ್ನು ವಹಿಸಿಕೊಂಡು ತಮ್ಮಿಂದ ಸಣ್ಣಕೆರೆ ನಿರ್ವಹಣೆ ಸಾಧ್ಯವಿಲ್ಲ, ಅದನ್ನು ಸ್ಥಳೀಯರು ಡಿದರೆ ಒಳ್ಳೆಯದೆನ್ನುವ ಅಭಿಪ್ರಾಯಕ್ಕೆ ಬಂದಿದ್ದಾರೆ. 34ರಲ್ಲಿ ಮೈಸೂರಿನ ದಿವಾನ್ ಸರ್.ಎಸ್.ಶೇಷಾದ್ರಿ ಯ್ಯರ್ ಇವರು ಇದನ್ನು ಹೀಗೆ ಹೇಳಿದ್ದಾರೆ. "Any orm in our tank system must start h a clear recognition of the fact that s beyond the ability of Government undertake the repairs and main-nance of all tanks in the province". ರೆ ಈ ಕೆಲಸವನ್ನು ನಮ್ಮ ಪಂಚಾಯತಿಗಳು ರ್ಥವಾಗಿ ನಿರ್ವಹಿಸುತ್ತಿದ್ದವೆನ್ನುವುದಕ್ಕೆ ಆ ಕೆರೆಗಳು ರಾರು ವರ್ಷ ಸುಸ್ಥಿತಿಯಲ್ಲಿ ಇದ್ದುದ್ದೇ ಸಾಕ್ಷಿ.

ಮೇಲೆ ಹೇಳಿದ್ದನ್ನೆಲ್ಲಾ ಒಪ್ಪಿಕೊಂಡರೂ, ಈ ಶೋಧನೆ ಈಗಲೆ ಯಾಕೆ ಮಾಡಬೇಕು, ಸ್ವಲ್ಪ ಾನವಾಗಿ ಮಾಡಿದರೆ ಆಗದೆ ಎಂದು ಕೇಳಿದರೆ, ಕ್ಕೆ ಉತ್ತರ, ಈ ಸಂಶೋಧನೆ ಎಷ್ಟು ಶೀಘ್ರವಾಗಿ ದರೆ ಅಷ್ಟು ಒಳ್ಳೆಯದು. ಯಾಕೆಂದರೆ, ಕುಡಿಯುವ ನ ಅಭಾವ, ಬೆಳೆಯುತ್ತಿರುವ ಜನಸಂಖ್ಯೆಗೆ ಾರಧಾನ್ಯ ಬಟ್ಟೆಯನ್ನು ಒದಗಿಸುವುದು ಇದಕ್ಕೆಲ್ಲಾ ಾವರಿಯನ್ನು ಹೆಚ್ಚಿಸುವುದು ಒಂದೇ ಮಾರ್ಗ. ನ್ನು ಕಂಡುಕೊಂಡು ಸರ್ಕಾರದವರು ಸಾವಿರಾರು ಳವೆ ಬಾವಿಗಳನ್ನು ತೋಡುತ್ತೇವೆ ಎನ್ನುತ್ತಾರೆ. ರೆ ಈ ಕೊಳವೆ ಬಾವಿಗಳಿಗೆ ಮತ್ತು ಮಾಮೂಲು ವಿಗಳಿಗೆ ನೀರು ಎಲ್ಲಿಂದ ಬರುತ್ತದೆನ್ನುವುದನ್ನು ೋಚಿಸಿದರೆ, ಅದಕ್ಕೆ ಕೆರೆಗಳಿಂದಲೇ, ನೀರು ಬರು . 'No tanks, no wells' ಎನ್ನುವ 1902ರ gation Commission ವರದಿಯಲ್ಲಿರುವ ವಾಕ್ಯ ಅಕ್ಷರಶಃ ನಿಜ. ಇದನ್ನೆಲ್ಲಾ ಮನಗಂಡು, ಕೆಲವು ವಿದೇಶಿ ಸೇವಾಸಂಸ್ಥೆಗಳು ಕೆರೆಗಳ ಬಗೆಗಿನ ಸಂಶೋಧ ನೆಗೆ ಆದ್ಯತೆಯನ್ನು ಕೊಟ್ಟಿವೆ. ಹೊರಗಿನ ಸಂಸ್ಥೆಗಳು ಇಷ್ಟು ಆಸಕ್ತಿಯನ್ನು ತೋರಿಸುತ್ತಿರುವ ವಿಷಯದಲ್ಲಿ ನಾವು ಸುಮ್ಮನಿರುವುದು ಸರಿಯಲ್ಲ.

ಚಿತ್ರದುರ್ಗದಲ್ಲಿ ಅತ್ಯಂತ ಪುರಾತನ ಕೆರೆ ಇದ್ದುದಲ್ಲದೆ, ನಮ್ಮ ಪೂರ್ವ ಸಂಪ್ರದಾಯದ ರೀತಿಯಲ್ಲಿ ಕಟ್ಟಕಡೆಗೆ ಕಟ್ಟಿದ ಕೆರೆಗಳ ಜಾಲವು ಇತ್ತು. ಇದಕ್ಕೆ ಕಾರಣರಾದವರು ಬಹುಮಟ್ಟಿಗೆ ಚಿತ್ರದುರ್ಗದ ಪಾಳೆಯಗಾರರು. ಇದರಿಂದಾಗಿ ಚಿತ್ರದುರ್ಗದಲ್ಲಿ ಮೊನ್ನೆ ಮೊನ್ನೆಯವರೆಗು ಕುಡಿಯುವ ನೀರಿನ ಒಳ್ಳೆಯ ವ್ಯವಸ್ಥೆ ಇತ್ತು. ಎರಡು ಗುಡ್ಡಗಳ ಮೇಲೆ ಬಿದ್ದನೀರನ್ನು ಹಂತ ಹಂತವಾಗಿ ಕೆಳಗೆ ತೆಗೆದುಕೊಂಡು ಬರಲಾಗಿತ್ತು. ಮೊದಲಿನ ಗುಡ್ಡ ಜೋಗಿಮಟ್ಟಿ. ಈ ಗುಡ್ಡದ ಮೇಲೆ ಬಿದ್ದನೀರನ್ನು ದೊಡ್ಡಣ್ಣನ ಕೆರೆ, ಅದು ತುಂಬಿದ ಮೇಲೆ ತಿಮ್ಮಣ್ಣನ ಕೆರೆ ಮತ್ತು ಸಣ್ಣಕೆರೆ ಮತ್ತು ಅವು ತುಂಬಿದ ಮೇಲೆ ದಬದಬ ಮತ್ತು ವಡ್ಡು ಎನ್ನುವ ಕೆರೆಗಳಿಗೆ ತರಲಾಗುತ್ತಿತ್ತು, ಈ ನೀರನ್ನು ವ್ಯವಸಾಯಕ್ಕೂ ಮತ್ತು ಕುಡಿಯುವುದಕ್ಕೂ ಉಪಯೋಗಿಸಲಾಗುತ್ತಿತ್ತು. ಈ ಎಲ್ಲಾ ಕೆರೆಗಳು ತುಂಬಿದ ಮೇಲೆ ನೀರು ಕೋಟೆಯ ಸುತ್ತಲ ಕಂದಕಕ್ಕೆ ಬಂದು ಅದನ್ನು ತುಂಬುತಿತ್ತು. ಹೀಗೆ ಗುಡ್ಡದ ಮೇಲೆ ಬಿದ್ದ ಮಳೆಯ ನೀರಿನ ಒಂದು ಹನಿಯೂ ಪೋಲಾಗುತ್ತಿರಲಿಲ್ಲ. ಇನ್ನೊಂದು ಗುಡ್ಡವಾದ ಮೇಲದುರ್ಗ ಅಥವಾ ಕೋಟೆಯ ಮೇಲುಭಾಗದ ಮೇಲೆ ಬಿದ್ದ ನೀರು ಕ್ರಮವಾಗಿ ಗೋಪಾಲಕೃಷ್ಣದೇವರ ಹೊಂಡ, ಅಕ್ಕತಂಗಿಯರ ಹೊಂಡ, ಸಿಹಿನೀರಿನ ಹೊಂಡಗಳನ್ನು ತುಂಬಿ ಕೊನೆಯದಾಗಿ ಭೂಮಿಯೊಳಗೆ ಮಾಡಿದ ಕಾಲುವೆ ಮುಖಾಂತರ ಸಂತೆ ಹೊಂಡವನ್ನು ಸೇರಿ ಊರಿನವರಿಗೆ ನೀರನ್ನು ಒದಗಿಸುತ್ತಿತ್ತು. ಹೀಗೆ ಹಿಂದಿನ ಕೆರೆಗಳ ಬಗೆಗಿನ ಸಂಶೋಧನೆಯು ಇತರ ಸಂಶೋಧನೆಯಂತೆ ನಮ್ಮ ಪೂರ್ವಜರ ಜನಜೀವನದ ಕೆಲವು ಅಂಶಗಳನ್ನು ತೋರಿಸುವ ... ಜತೆಗೆ, ಇಂದಿನ ಕಾಲದ ಜನರಿಗೆ ಪ್ರವಾಹವನ್ನು ಮತ್ತು ನೀರಿನ ಬರವನ್ನು ನಿಯಂತ್ರಿಸುವಲ್ಲಿ ಸಹಾಯಕವಾಗುವುದು.

### ಆಧಾರಗಳ ಬಗ್ಗೆ ಟಿಪ್ಪಣಿ.

ಕೆರೆಗಳ ಅಧ್ಯಯನಕ್ಕೆ ಮುಖ್ಯ ಆಧಾರವೆಂದರೆ ಶಾಸನಗಳು. ಭಾರತದಲ್ಲಿಯ ಪ್ರಮುಖ ಕೆರೆಗಳ

ಉಲ್ಲೇಖವಿರುವ ಎಲ್ಲಾ ಶಾಸನಗಳ ಪಟ್ಟಿ ಮತ್ತು ಅವು ಪ್ರಕಟವಾಗಿರುವ ಸ್ಥಳ – ಈ ಮಾಹಿತಿಯನ್ನೊಳಗೊಂಡ ಏಕೈಕ ಪುಸ್ತಕ "Irrigation through the Ages", CPWDಯವರ ಪ್ರಕಟಣೆ. ಕೆರೆಗಳನ್ನು ಏಕೆ ಮತ್ತು ಹೇಗೆ ಕಟ್ಟಬೇಕೆಂಬುದರ ಬಗೆಗೆ ನಮ್ಮ ಪೂರ್ವಜರು ಗ್ರಂಥಗಳನ್ನು ಬರೆದಿದ್ದಾರೆ. ಇಂತಹ ಗ್ರಂಥಗಳಲ್ಲಿ ಮುಖ್ಯವಾದದ್ದು ಪರಾಶರರ ಕೃಷಿಸೂಕ್ತ (10ನೇ ಶತಮಾನ) ಇಂತಹ ಗ್ರಂಥಗಳ ಪಟ್ಟಿ ಮತ್ತು ಪರಾಮರ್ಶೆ ಎಸ್.ಜಿ.ರಾಯ ಚೌಧರಿಯವರರಿಂದ, ಸಂಪಾದಿತವಾದ Agriculture in Ancient India ಈ ಪುಸ್ತಕದಲ್ಲಿದೆ. ಈ ಪುಸ್ತಕವನ್ನು Indian Council of Agricultural Research, New Delhi, ಇವರು ಪ್ರಕಟಿಸಿದ್ದಾರೆ.

ಕರ್ನಾಟಕದ ಕೆರೆಗಳ ಬಗೆಗೆ ವಿಸ್ತೃತವಾಗಿ ಬರೆದಿರುವವರು ಡಾ.ಜಿ.ಆರ್.ಕುಪ್ಪಸ್ವಾಮಿ. ಇವರ ಲೇಖನಗಳು Quarterly Journal of the mythic Society ಯಲ್ಲಿ ಸುಮಾರು 10 ವರ್ಷಗಳಿಂದೀಚೆಗೆ ಪ್ರಕಟವಾಗುತ್ತಿದೆ. ಇದೇ ಅವಧಿಯಲ್ಲಿ ಅವರ ಒಂದೆರಡು ಲೇಖನಗಳು ಕರ್ನಾಟಕ ಯೂನಿವರ್ಸಿಟಿ ಜರ್ನಲ್‌ನಲ್ಲಿಯೂ ಬಂದಿದೆ. ಕನ್ನಡದಲ್ಲಿ ಕೆರೆಗಳ ಬಗೆಗೆ ಡಾ.ಚಿದಾನಂದ ಮೂರ್ತಿಯವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ದಲ್ಲಿ ಉತ್ಕೃಷ್ಟವಾದ ಮಾಹಿತಿ ಇದೆ. ಸ್ಯಾಂಕಿಯಕವರ ಅಭಿಪ್ರಾಯ ಹಯವದನ ರಾಯರ ಮೈಸೂರ್ ಗೆಜೆಟಿಯರ್ ಮೂರನೇಯ ಸಂಖಪುಟದ 157ನೆಯ ಪುಟದಲ್ಲಿದೆ. ಪಾರ್ಸ್ಲಿಯವರ ಅಭಿಪ್ರಾಯ ಎ.ಅಪ್ಪಾದೊರೈಯವರ 'ಎಕನಾಮಿಲ್ ಕಂಡಿಷನ್ಸ್ ಇನ್ ಸೌತ್ ಇಂಡಿಯಾ' ಸಂಪುಟ 1, ಪುಟ 211ರಲ್ಲಿದೆ. ಶೇಷಾದ್ರಿ ಅಯ್ಯರ್ ಅವರ ಅಭಿಪ್ರಾಯ ಅವರನ್ನು ಕುರಿತು ಶ್ರೀ ಎನ್.ಎಸ್.ಚಂದ್ರಶೇಖರ್ ಅವರು ಬರೆದ ಪುಸ್ತಕದಲ್ಲಿದೆ. ಚಿತ್ರದುರ್ಗದ ಕೆರೆಗಳ ವಿಷಯ ಶ್ರೀ ಲಕ್ಮಣ ತೆಲಗಾದಿ ಮತ್ತು ಕೆ.ವೆಂಕಣ್ಣಾಚಾರ್ ಸಂಪಾದಿಸಿದ ಐತಿಹಾಸಿಕ ಚಿತ್ರ ದುರ್ಗ ದಲ್ಲಿ ಶ್ರೀ ಟಿ.ಎನ್.ಗಂಡುಗಲಿಯವರ ಚಿತ್ರದುರ್ಗದ ಜಲಾಶಯಗಳು" ಎನ್ನುವ ಲೇಖನದಲ್ಲಿವೆ.

.ಕೆ.ಮೋಹನ್

# ರ್ನಾಟಕದ ಕೆಲವು ಹಳೆಯ ಕೆರೆಗಳು

### ಗಳೆಂದರೇನು?

ಮಳೆಯ ಬಹುಭಾಗ ಭೂಮಿಯ ಮೇಲೆ ದು ಹೊಳೆಯಾಗುತ್ತದೆ. ಹಲವಾರು ಹೊಳೆಗಳು ನದಿಯಾಗುತ್ತದೆ. ಈ ಹೊಳೆಗಳಿಗೆ ಅಥವಾ ಗಳಿಗೆ ಅಡ್ಡವಾಗಿ ಕಟ್ಟೆಗಳನ್ನು ನಿರ್ಮಿಸಿ ನೀರಿನ ರಣೆಮಾಡುತ್ತೇವೆ. ಶೇಖರಿಸುವ ನೀರು ದೊಡ್ಡ ಣದ್ದಾದರೆ ಅದು ಜಲಾಶಯವಾಗುತ್ತದೆ. ಸಣ್ಣ ಣದ್ದಾದರೆ ಅದು ಕೆರೆಯಾಗುತ್ತದೆ.

ಕೆರೆಯಲ್ಲಿ ಶೇಖರಿಸುವ ನೀರು ಜಲಾನಯನ ದ ಗಾತ್ರ, ಆ ಪ್ರದೇಶದಲ್ಲಿ ಬೀಳುವ ಮಳೆ ನ್ನು ಅವಲಂಬಿಸಿರುತ್ತದೆ. ಮಳೆಯ ಸ್ವಲ್ಪ ಭಾಗ ನ ನೆಲದಲ್ಲಿ ಇಂಗಿ ಹೋಗುತ್ತದೆ. ಸ್ವಲ್ಪ ಭಾಗ ರುವಗಿಡಮರ, ಸಸ್ಯರಾಶಿಗಳಿಂದ ಗ್ರಹಿಸಲ್ಪಡುತ್ತದೆ. ಭಾಗ ಆ ಪ್ರದೇಶದ ಉಷ್ಣತೆಗೆ ಆವಿಯಾಗಿ ಗುತ್ತದೆ. ಉಳಿದ ಭಾಗ ಮಾತ್ರ ಹರಿದುಹೊಳೆ ನ್ನು ಸೇರುತ್ತದೆ.

ನಮಗೆ ನಮ್ಮ ಪೂರ್ವ ಇತಿಹಾಸ ತಿಳಿಯುತ್ತಿರು ು ಬಹುಮಟ್ಟಿಗೆ ಶಿಲಾ ಶಾಸನಗಳಿಂದ. ಕೆರೆಗಳ ಣವನ್ನು ಸೂಚಿಸುವ ಶಾಸನಗಳು ಬಹು ಸ್ವಲ್ಪ. ನವಾಗಿ ಕೊಟ್ಟ ಪ್ರದೇಶದ ಸರಹದ್ದುಗಳ ವಿವರಣೆ ಲ್ಲಿ ಕೆರೆಗಳ ಇರುವಿಕೆ ನಮ್ಮ ಗಮನಕ್ಕೆ ಬರುತ್ತದೆ. ಗಳ ಗಾತ್ರ, ನೀರಾವರಿಯಾಗುತ್ತಿದ್ದ ವಿಸ್ತೀರ್ಣ, ವಾಗ ನಿರ್ಮಿತವಾದುವು, ಈ ವಿವರಗಳು ತಿಳಿ ವುದಿಲ್ಲ.

ಈ ಕೆರೆಗಳ ವಿಷಯವಾಗಿ ನಮಗೆ ಪ್ರಥಮವಾಗಿ ವ ದಾಖಲೆ, ಕರ್ನಲ್ ಮೆಕೆಂಜೀ ಮಾಡಿದ ಸೂರು ದೇಶದ ಸರ್ವೆ (ಸಮೀಕ್ಷೆ)ಯ ವಿವರಗಳಲ್ಲಿ. ಹೋಬಳಿಯಲ್ಲಿ ಅಂದು ಇದ್ದ, ಕೆರೆಗಳ, ಕಟ್ಟೆ ಕುಂಟೆಗಳ ಸಂಖ್ಯೆ ಅದರಲ್ಲಿ ನಮಗೆ ಸಿಗುತ್ತದೆ. 99 - 1806) ಆದರೆ ಅವುಗಳಿಂದ ನೀರಾವರಿ ಗುತ್ತಿದ್ದ ಜಮೀನಿನ ವಿವರವಾಗಲಿ, ಕೆರೆಗಳ ವಿವ ಗಲಿ ತಿಳಿಯುವುದಿಲ್ಲ. ಕೆರೆ, ಕಟ್ಟೆ, ಕುಂಟೆಗಳ ವರ್ಗೀಕರಣ ಯಾವ ಆಧಾರದ ಮೇಲೆ ಮಾಡಲಾಯಿತೆಂದೂ ತಿಳಿಯುವುದಿಲ್ಲ.

ಇದೇ ಕಾಲದಲ್ಲಿ ಮೈಸೂರಿನ ಪ್ರವಾಸ ಮಾಡಿದ ಫ್ರಾನ್ಸಿಸ್ ಬುಕಾನನ್ ತನ್ನ ಪ್ರವಾಸನ ಕಥನದಲ್ಲಿ ಸಣ್ಣ ಪ್ರಮಾಣದ ಜಲಾಶಯಗಳನ್ನು ಕಟ್ಟೆಗಳು ಎನ್ನುತ್ತಾನೆ. ದೊಡ್ಡದಾಗಿರುವ ಜಲಾಶಯಗಳನ್ನು ಕೆರೆಗಳು ಎನ್ನುತ್ತಾನೆ. ಆದರೆ ಇವುಗಳ ವ್ಯತ್ಯಾಸವನ್ನು ತಿಳಿಸುವುದಿಲ್ಲ. (ಮೇ 13ನೇ 1800). ಈ ಎರಡೂ ಜಲಾಶಯಗಳು ಹಳ್ಳಗಳಿಗೆ ಅಡ್ಡವಾಗಿ ನಿರ್ಮಿಸಲಾಗಿದ್ದು, ಯಾವುದೇ ಪ್ರದೇಶದಲ್ಲಿ ಭೂಮಿಯಲ್ಲಿ ಒಂದು ಗುಂಡಿಯನ್ನು ಅಗೆದು ಅದರಲ್ಲಿ ಜಲ ಶೇಖರಣೆ ಮಾಡುವಲ್ಲಿ ಅದು ಕುಂಟೆಯಾಗುತ್ತದೆ. ಸಾಧಾರಣವಾಗಿ ಈ ಕಟ್ಟೆ, ಕುಂಟೆಗಳು ಪ್ರಾಣಿಗಳಿಗೆ ನೀರಿನ ಆಧಾರವಾಗಿದ್ದವು. (ಜೂನ್ 21ನೇ 1800) ಹಲವು ಪ್ರದೇಶಗಳಲ್ಲಿ ಕಟ್ಟೆಗಳಿಂದ ನೀರಾವರಿಯಾಗುತ್ತಿತ್ತು. ಬುಕಾನನ್ ಸಹಿತ, ಕೆರೆ, ಕಟ್ಟೆಗಳ ವರ್ಗೀಕರಣಕ್ಕೆ ಸ್ಪಷ್ಟ ಆಧಾರವನ್ನು ಒದಗಿಸಿಲ್ಲ.

ನಮ್ಮ ಹಳೆಯ ಕೆರೆ, ಕಟ್ಟೆಗಳಿಗೆ, ಇಂದಿನಂತೆ ನಿಖರವಾದ ಗಾತ್ರ ಆಧಾರವನ್ನು ಅನುಸರಿಸಿ ವರ್ಗೀಕರಣ ಮಾಡುತ್ತಿರಲಿಲ್ಲ. ಪ್ರತಿ ಪ್ರದೇಶದಲ್ಲಿ ಬೇರೆ ಬೇರೆ ರೀತಿಯಲ್ಲಿ ಕರೆಯುತ್ತಿದ್ದರೆಂದು ತಿಳಿಯುತ್ತದೆ.

### ಕೆರೆಯ ಭಾಗಗಳು

ಕೆರೆಯ ಅತಿ ಮುಖ್ಯ ಭಾಗ ಕೆರೆಯ ಕಟ್ಟೆ ಅಥವಾ ಏರಿ. ಕೆರೆಯ ಏರಿ ಸಾಧಾರಣವಾಗಿ ಮಣ್ಣಿನದೇ ಆಗಿರುತ್ತದೆ. ಕಾರಣ ಮಣ್ಣು ಎಲ್ಲೆಡೆಯೂ ಸುಲಭವಾಗಿ ಸಿಗುತ್ತದೆ. ಹಾಗೂ ಮಣ್ಣಿನಿಂದ ನಿರ್ಮಿಸುವ ಕಾರ್ಯಕ್ಕೆ ಹೆಚ್ಚಿನ ನಿಪುಣತೆ ಅಗತ್ಯವಿಲ್ಲ. ಕಟ್ಟೆ ಭದ್ರವಾಗಿರಬೇಕಾದರೆ, ಅದರ ಅಡಿಯಲ್ಲಿ ಅಗಲ ಹೆಚ್ಚಾಗಿದ್ದು, ಶಿರದಲ್ಲಿ ಕಡಮೆಯಾಗಿರುತ್ತದೆ. ಶಿರದಲ್ಲಿ ಕಟ್ಟೆಯ ಅಗಲ ಸಾಧಾರಣವಾಗಿ ಒಂದು ವಾಹನದ ಪ್ರಯಾಣಕ್ಕೆ ಅನುಕೂಲವಾಗುವಷ್ಟು ಇರುತ್ತದೆ. ನಮ್ಮ ಹಿಂದಿನ ದೊಡ್ಡ ಕೆರೆಗಳಲ್ಲಿ ಈ ಭಾಗ ಬಹು ಅಗಲವಾಗಿರುತ್ತದೆ. ಬಹುಶಃ ಇಂತಹ ಕಟ್ಟೆಗಳನ್ನು ನದಿ

ಯನ್ನು ದಾಟಲು ಉಪಯೋಗಿಸುತ್ತಿದ್ದಿರಬೇಕು. ಆದ್ದರಿಂದಲೆ, ಹಲವು ಸಂಧರ್ಭಗಳಲ್ಲಿ, ಕೆರೆಗಳನ್ನು ಸೇತುವೆಯೆಂದು ಕರೆದಿರಬೇಕು. ಮಳೆಗಾಲದಲ್ಲಿ ಜಲಾನಯನ ಪ್ರದೇಶದಿಂದ ಬರುವ ನೀರಿನ ರಭಸ, ಆ ಪ್ರದೇಶದಲ್ಲಿರುವ ಗಾಳಿಯ ತೀವ್ರತೆ, ಎರಡೂ ಸೇರಿ ಭಾರಿ ಅಲೆಗಳು ಹುಟ್ಟುತ್ತವೆ. ಈ ಅಲೆಗಳು ಮಣ್ಣಿನ ಕಟ್ಟೆಯನ್ನು ಕೊರೆದು ನಾಶಮಾಡುವುದು ಸಾಧ್ಯ. ಈ ಅಲೆಗಳ ಹೊಡೆತದಿಂದ ರಕ್ಷಣೆಗಾಗಿ, ಕಟ್ಟೆಯ ಇಳಿಜಾರು ಭಾಗದಲ್ಲಿ ದೊಡ್ಡ ಬಂಡೆಗಳನ್ನು ಜೋಡಿಸಲಾಗುತ್ತದೆ. ಇದನ್ನೇ ರಿವೆಟ್‌ಮೆಂಟ್ ಅನ್ನುತ್ತೇವೆ. ನಮ್ಮ ಶಾಸನಗಳಲ್ಲಿ ಕೆರೆಗೆ ಕಲ್ಲಿನ ಕಟ್ಟಡ ನಿರ್ಮಿಸಿದರು ಎಂದಾಗ ಕೆರೆಯ ಕಟ್ಟೆಗೆ ರಿವೆಟ್‌ಮೆಂಟ್ ಕಲ್ಲನ್ನು ಕಟ್ಟಿದರೆಂದು ತಿಳಿಯಬಹುದು. (ಇ.ಸಿ.V, ಸಿ.ಆರ್.ಪಟ್ನ 237 ಮತ್ತು ಇ.ಸಿ.XII, ತಿಪಟೂರ್ 57).

ಕಟ್ಟೆಯಲ್ಲಿ ಶೇಖರಿಸುವ ನೀರನ್ನು ಕಾಲುವೆಗಳ ಮೂಲಕ ವ್ಯವಸಾಯಕ್ಕೆ ಒಯ್ಯಲಾಗುತ್ತದೆ. ಈ ಕಾಲುವೆಗಳಿಗೆ ತೂಬಿನ ಮೂಲಕ ನೀರನ್ನು ಕಟ್ಟೆಯಿಂದ ಹೊರಬಿಡಲಾಗುತ್ತೆ. ಹಿಂದಿನ ಕಾಲದಲ್ಲಿ ತೂಬಿಗೆ ಅಡ್ಡವಾಗಿ ಮರದ ಬಿರಡೆಗಳನ್ನು ಇಡುತ್ತಿದ್ದರು. ಕಾಲುವೆಗ ನೀರು ಹಾಯಿಸಬೇಕಾದಲ್ಲಿ, ಈ ಬಿರಡೆಯನ್ನು ಎತ್ತಿ, ನೀರು ಕಟ್ಟೆಯಿಂದ ಕಾಲುವೆಗೆ ಪ್ರವಹಿಸಲು ಅನುಕೂಲಮಾಡುತ್ತಿದ್ದರು. ಈ ಶತಮಾನದಲ್ಲಿ ಮರದ ಬಿರಡೆಯ ಬದಲು, ಕಬ್ಬಿಣದ ಕವಾಟಗಳು ಉಪಯೋಗಕ್ಕೆ ಬಂದಿವೆ. ಕಟ್ಟೆಯ ಒಳಭಾಗದಿಂದ, ಕಟ್ಟೆಯ ಹೊರಭಾಗದಲ್ಲಿರುವ ಕಾಲುವೆಯವರೆಗೂ ನೀರು ಸುರಂಗ ಮಾರ್ಗವಾಗಿ ಹರಿಯುತ್ತದೆ. ಹಿಂದೆ ಈ ಸುರಂಗ ಕಲ್ಲಿನ ಕಟ್ಟಡವಾಗಿತ್ತು. ಈಗ ಸಾಧಾರಣವಾಗಿ, ಇದು ಕಾಂಕ್ರೀಟ್ ಪೈಪಾಗಿರುತ್ತದೆ.

ಪ್ರತಿಯೊಂದು ಕಟ್ಟೆಯಲ್ಲೂ ನಿರ್ದಿಷ್ಟ ಪ್ರಮಾಣದ ನೀರನ್ನು ಶೇಖರಿಸಲು ನಿರ್ಧರಿಸಲಾಗುತ್ತದೆ. ಅದಕ್ಕೆ ಅನುಗುಣವಾಗಿ ಕಟ್ಟೆಯ ಎತ್ತರ ನಿಗದಿ ಪಡಿಸಲಾಗುತ್ತದೆ. ಅಲ್ಲದೆ, ಶೇಖರಿಸುವ ನೀರಿನಿಂದ ಮುಳುಗಡೆಯಾಗುವ ಪ್ರದೇಶದ ಇತಿ ಮಿತಿಗಳನ್ನು ಸಹಿತ ಅವಲಂಬಿಸಿತ್ತದೆ. ಕಟ್ಟೆಯ ಎತ್ತರ, ನಮ್ಮಲ್ಲಿ ಈಗ ಕಟ್ಟುವ ಕೆರೆಗಳಿಂದ ನೀರಾವರಿಯಾಗುವ ಭೂಮಿ ಸಾಧಾರಣವಾಗಿ ಮುಳುಗಡೆಯಾಗುವ ಭೂಮಿಗಿಂತ ಮೂರರಿಂದ ಎರಡರಷ್ಟು ಹೆಚ್ಚಾಗಿರುತ್ತದೆ. ಅಂದರೆ ಮುಳುಗಡೆಗೆ ಒಳಪಡುವ ಪ್ರದೇಶಕ್ಕಿಂತ, ಹೆಚ್ಚಿನ ಭೂಮಿ ನೀರಾವರಿಯನ್ನು ಪಡೆಯುತ್ತದೆ. ಆದರೆ ನಮ್ಮ ಹಿಂದಿನ ಕೆರೆಗಳಲ್ಲಿ ಮುಳುಗಡೆಯಾಗುವ ಭೂಮಿ ನೀರಾವರಿಯಾಗುವ ಪ್ರದೇಶಕ್ಕಿಂತ ಹೆಚ್ಚಿನದಾಗಿರುತ್ತದೆ. ಕಾರಣ ಇಂದಿನಂತೆ ಅಂದು ಜನಸಂಖ್ಯೆ ಅಷ್ಟು ಹೆಚ್ಚಿರಲಿಲ್ಲ.

ನದಿ ಪ್ರವಾಹದಲ್ಲಿರುವಾಗ, ನಿರ್ದಿಷ್ಟ ಪ್ರಮಾಣಕ್ಕಿಂತ ಹೆಚ್ಚುವರಿ ಬರುವ ನೀರನ್ನು ಕಟ್ಟೆಯಿಂದ ಹೊರಬಿಡಬೇಕು. ಹಾಗೆ ಮಾಡದಿದ್ದಲ್ಲಿ ಕಟ್ಟೆಗೆ ಹಾನಿಯಾಗುವುದು. ಆ ಹೆಚ್ಚಿನ ನೀರನ್ನು ಹೊರಬಿಡುವ ಭಾಗವೇ ಕೋಡಿ. ಕೋಡಿಯಿಂದ ಕೆಳಕ್ಕೆ ಧುಮುಕುವ ನೀರು ನದಿಯ ಪ್ರದೇಶವನ್ನು ತಲುಪಿ ನದಿಯಲ್ಲಿ ಕಲೆತು ಹೋಗುತ್ತದೆ. ನದಿಯ ಎಡ ಭಾಗದಲ್ಲಿ ಹರಿಯುವ ಕಾಲುವೆ, ಎಡದಂಡೆ ಕಾಲುವೆ, ಅದೇ ರೀತಿ ಬಲಭಾಗದಲ್ಲಿರುವ ಕಾಲುವೆ ಬಲದಂಡೆ ಕಾಲುವೆ. ಕೆರೆಯ ತೂಬಿನ ಮಟ್ಟದಿಂದ, ನದಿಯ ಮಟ್ಟದವರೆಗೆ ಇರುವ ಭೂಮಿ ನೀರಾವರಿಯಾಗುವ ಭೂಮಿ. ಅಚ್ಚುಕಟ್ಟು.

ಕಾಲುವೆಯಿಂದ ನೀರನ್ನು ಗದ್ದೆಗಳಿಗೆ ಸಣ್ಣ ತೂಬುಗಳಿಂದ ಬಿಡಲಾಗುತ್ತದೆ. ಈ ತೂಬುಗಳನ್ನು ಮಡಬಾಯಿ ಎನ್ನವುದೂ ಉಂಟು. ಪ್ರತಿಯೊಂದು ಕಾಲುವೆಗೆ ಇಂತಹ ಹಲವಾರು ಮಡಬಾಯಿಗಳು ಇರುತ್ತವೆ. ಮಡಬಾಯಿನಿಂದ ಬಿಡುವ ನೀರನ್ನು ನಿಯಂತ್ರಿಸುವುದು ನೀರಾವರಿ ಇಲಾಖೆಯ ಕೆಲಸ. ಹಾಗೆ ಬಿಟ್ಟ ನೀರನ್ನು ತಮ್ಮ ತಮ್ಮ ಗದ್ದೆಗಳಿಗೆ ಸಮವಾಗಿ ಹಂಚಿಕೊಳ್ಳುವುದು ರೈತರ ಕೆಲಸ.

ಕೆಲವು ಹಳೆಯ ಕೆರೆಗಳ ವೈಶಿಷ್ಟ್ಯ: –

### ಮಾಸೂರು ಕೆರೆ

ಹಿರೇಕೆರೂರ್ ತಾಲ್ಲೂಕಿನಲ್ಲಿರುವ ಮಾಸೂರುಕೆರೆ, ವಿಜಯನಗರ ಅರಸರ ಕಾಲದಲ್ಲಿ ಕಟ್ಟಿಸಿದ್ದು. ಈ ಕಟ್ಟೆಯ ಎತ್ತರ ಸುಮಾರು ನೂರು ಅಡಿಗಳಿಗೂ ಹೆಚ್ಚು. ಇದರ ಉದ್ದ ಸುಮಾರು ಒಂದು ಮೈಲಿ. ಇದರ ಶಿಖರ ಸುಮಾರು 400 ಅಡಿ ಅಗಲ. ಇದರ ಅಡಿ ಸುಮಾರು 800 ರಿಂದ 1000 ಅಡಿ ಅಗಲ. ನಮ್ಮಲ್ಲಿರುವ ಹಳೆಯ ಕೆರೆಗಳ ಪೈಕಿ ಇದೊಂದೇ ಇಷ್ಟು ಎತ್ತರವಾದ, ದೊಡ್ಡದಾದ ಕೆರೆ. ಇಂದಿಗೂ ಇಷ್ಟು ಎತ್ತರದ ಮಣ್ಣಿನ ಕೆರೆ ಕಟ್ಟೆ ನಮ್ಮಲ್ಲಿ ಕಟ್ಟಿಲ್ಲ. ಆ ಕಾಲದಲ್ಲಿ ಸಹಿತ, ಇದೊಂದೇ ಇಷ್ಟು ಎತ್ತರದ ಕಟ್ಟೆ. ಮಿಕ್ಕೆಲ್ಲಾ ಕಟ್ಟೆಗಳು, 50 ಅಡಿಗಳಿಗೆ ಸೀಮಿತವಾಗಿದ್ದವು. ಮಾಸೂರು ಕೆರೆ ಕಟ್ಟಿದ ನಂತರ, ಅದು

ವಾಗ ಒಡೆಯಿತೆಂದು ತಿಳಿಯದು. ಬಹುಕಾಲ ಪಯುಕ್ತವಾಗಿತ್ತು. 1862ರಲ್ಲಿ ಆಂಗ್ಲ ಇಂಜನಿ ರು ಪ್ಲೇಫೇರ್ ಕಟ್ಟೆಯನ್ನು ದುರಸ್ತಿಮಾಡಿ ಕಾಲುವೆ ಲ್ಲಿ ನೀರು ಹರಿಯುವ ಸ್ಥಿತಿಗೆ ತಂದನು. ಆ ಜನಿಯರಿನ ಕಷ್ಟದ ಫಲ ಇಂದು ಮಾಸೂರು ಮ ಸೊಗಸಾದ ಸಂಪತ್ ಭರಿತವಾದ ಮವಾಗಿದೆ.

ಮಾಸೂರು ಕೆರೆ ಒಡೆದು ಹೋಗಲು, ಕಾರಣ ರ ಕೋಡಿಯ ಗಾತ್ರ ನದಿಯ ಪ್ರವಾಹದ ಗಾತ್ರಕ್ಕೆ ಲಿಲ್ಲ. ನದಿಯ ಜಲಶಕ್ತಿ ಕಟ್ಟೆಯನ್ನು ಕೊರೆದು ದೇ ಆದ ಮಾರ್ಗ ನಿರ್ಮಿಸಿಕೊಂಡಿತು. ವಿಜಯನ ಅರಸರ ಕಾಲದಲ್ಲಿ ಕಟ್ಟಿದ ಕಟ್ಟೆ, ಒಡೆದ ನಂತರ ರಾರು ವರ್ಷಗಳ ಕಾಲ ನಿರುಪಯುಕ್ತವಾಗಿತ್ತು. ಣ ಬಹುಶಃ ಈ ಕೆರೆಯಿಂದ ಮುಳುಗಡೆಯಾಗುವ ದೇಶ ಬೇರೆ ಬೇರೆ ರಾಜ್ಯಗಳಿಗೆ ಸೇರಿದ್ದಾಗಿರಬೇಕು. ಕಟ್ಟೆಯನ್ನು 1862ರಲ್ಲಿ ದುರಸ್ತಿ ಮಾಡಿದಾಗ ತ ಮುಳುಗಡೆ ಪ್ರಾಂತದ ಜನ, ಮೈಸೂರಿನ ಜನ, ಕೆಲಸಕ್ಕೆ ಅಡ್ಡಿಮಾಡಿದರೆಂದು ಪ್ಲೇಫೇರ್ ಳಿದ್ದಾನೆ.

## ರಾಮಸಾಗರ ಕೆರೆ

ಕೋಲಾರದದ ರಾಮಸಾಗರದಲ್ಲಿ ಪಾಲಾರ್ ಒಂದು ದ್ವೀಪಕ್ಕೆ ಎರಡು ಪಾರ್ಶ್ವಗಳಲ್ಲಿ ಹರಿ ತ್ತದೆ. ಆ ದ್ವೀಪವನ್ನು ಎತ್ತರಿಸಿ ಕಟ್ಟೆಯಾಗಿ ಪರಿ ಸಿ ನದಿ ಹರಿಯುವ ಎರಡು ಭಾಗಗಳಲ್ಲಿ ಡಿಯನ್ನು ನಿರ್ಮಿಸಿದ್ದಾರೆ. ನದಿ ಹರಿಯುತ್ತಿರುವ ದೇಶವನ್ನು ಬಂಧಿಸಲಿಲ್ಲ. ಎಂದಿನಂತೆ ತನ್ನ ಜಾಡಿ ಹರಿಯಲು ಬಿಟ್ಟರು. ಆದರೂ ಈ ಕೆರೆಯೂ ದು ಹೋಗಿತ್ತು. ಬಹುಶಃ ಕೋಡಿಯ ಗಾತ್ರ ದಾಗಿದ್ದಿರಬೇಕು.ದಿವಾನ್ ಪೂರ್ಣಯ್ಯ ಇದನ್ನು ರ್ ನಿರ್ಮಾಣಮಾಡಿಸಿದರು (1800-1811). ಃ ಈ ಶತಮಾನದ ಆದಿಯಲ್ಲಿ (1903) ಕೋಡಿ ಯಿತು. ಪುನರ್ ನಿರ್ಮಾಣವಾಯಿತು.

ಸಾಧಾರಣವಾಗಿ ತೂಬು ಕಟ್ಟೆಯ ಒಂದು ಭಾಗ ಗಿರುತ್ತದೆ. ರಾಮಸಾಗರದಲ್ಲಿ ಕಾಲುವೆಯ ತೂಬು ಯ ಭಾಗವಾಗಿರಲಿಲ್ಲ. ಕೋಡಿಯಿಂದ ಹರಿಯುವ ದ ದಂಡೆಯ ಭಾಗವಾಗಿತ್ತು. ಕೋಡಿಯಿಂದಹರಿ ವ ನೀರು ನದಿಯ ಮಟ್ಟದಲ್ಲಿರುತ್ತದೆ. ತೂಬು ಯ ಮಟ್ಟಗಿಂತ ಎತ್ತರದಲ್ಲಿತ್ತು. ನೀರು ಆ ಎತ್ತರಕ್ಕೆ ಏರಲು ಕೋಡಿಯ ಹಳ್ಳಕ್ಕೆ ಒಂದು ಅಡ್ಡಗೋಡೆಯನ್ನು ಕಟ್ಟಿ ನೀರನ್ನು ಕಾಲುವೆಯ ಮಟ್ಟಕ್ಕೆ ತಲಪುವಂತೆ ಮಾಡಿದ್ದರು. ಇದು ಒಂದು ವಿಚಿತ್ರವಾದ ರೀತಿ. ಅಂದಿನ ಅವರು ಕೌಶಲ್ಯವನ್ನು ತೋರುವ ಸುಲಭ ವ್ಯವಸ್ಥೆ. ಆದರೆ ಈಗ ಈ ವ್ಯವಸ್ಥೆಯನ್ನು ಕೈಬಿಟ್ಟು, ಕೋಡಿಯಲ್ಲಿ ತೂಬು ನಿರ್ಮಿಸಿ, ಅಲ್ಲಿಂದ ಕಾಲುವೆವರೆಗೂ ಒಂದು ಕಾಂಕ್ರೀಟ್ ಕೊಳವೆ ಮುಲಕ ನೀರು ಕಾಲುವೆಗೆ ತಲುಪುವಂತೆ ಮಾಡಿದ್ದಾರೆ.

## ರಿವೆಟ್‌ಮೆಂಟ್

ಇಂದಿಗೂ ಕಟ್ಟೆಯ ಇಳಿಜಾರಿನಲ್ಲಿ ರಿವೆಟ್‌ಮೆಂಟ್ ಕಲ್ಲುಗಳು ಜೋಡಿಸಲಾಗುತ್ತದೆ. ಸಾಧಾರಣವಾಗಿ ಆ ಕಲ್ಲುಗಳ ಗಾತ್ರ ಒಂದು ಅಥವಾ ಎರಡು ಅಡಿಗಳಷ್ಟು ಮಾತ್ರ. ಆದರೆ ನಮ್ಮ ಹಿಂದಿನ ಕೆರೆಗಳಲ್ಲಿ ಜೋಡಿಸಿರುವ ಕಲ್ಲುಗಳ ಗಾತ್ರ ಅಗಾಧವಾದದ್ದು. ಮೂರು ಅಥವಾ ನಾಲ್ಕು ಅಡಿಗಳಿಗೂ ಹೆಚ್ಚು. ಇವುಗಳನ್ನು ಮಾಸೂರು ಕಟ್ಟೆಯ ಅಷ್ಟು ಎತ್ತರಕ್ಕೆ ಸಾಗಿಸಲು ಯಾವ ವಿಧಾನವನ್ನು ಅನುಸರಿಸಿದ್ದರೋತಿಳಿಯದು. ನಿಜಕ್ಕೂ ಇದೊಂದು ಬೃಹತ್ ಕಾರ್ಯ. ಸಾವಿರಾರು ಜನ, ನೂರಾರು ಆನೆ, ಶ್ರಮಿಸಿರಬೇಕು.ದಪ್ಪನಾದ ಹಗ್ಗಗಳನ್ನಾಗಲಿ, ಕಬ್ಬಿಣದ ಸರಪಳಿಗಳನ್ನಾಗಲಿ, ಉಪಯೋಗಿಸಿರಬೇಕು.

ಕಲ್ಲಿನ ಜೋಡಣೆ, ಅದರ ನಿಪುಣತೆಯನ್ನು, ಗುಡಿಬಂಡೆಯ ಸಮೀಪದ, ವಾಟದ ಹೊಸಹಳ್ಳಿಯಲ್ಲಿ ಕಟ್ಟೆಯಲ್ಲಿ ನೋಡಿದ ಆಂಗ್ಲ ಇಂಜನಿಯರಾದ ಸ್ಯಾಂಕೆ ಆಶ್ಚರ್ಯಗೊಂಡು ಇಂತಹ ಕಟ್ಟಡ ತಾನು ಇನ್ನೆಲ್ಲೂ ನೋಡಿಲ್ಲವೆಂದು ಹೇಳಿದ್ದಾನೆ. ಇಂದಿಗೂ ಈ ಕೆರೆಯ ಕಲ್ಲಿನ ಕಟ್ಟಡ ಅಂದವಾಗಿ ಭದ್ರವಾಗಿದೆ.

## ತೂಬು

ಮಾಸೂರು ಕೆರೆಯ ತೂಬು ಸುಮಾರು 800 ಅಡಿ ಉದ್ದ. ಸುರಂಗದ ಎತ್ತರ ಎಂಟು ಅಡಿ. ಅಗಲ ಸುಮಾರು ಮೂರು ಅಡಿ. ಈ ಸುರಂಗ ಕೋವಿಯಂತೆ ನೇರವಾಗಿರದೆ, ಅಂಕು ಡೊಂಕುಗಳಿಂದ ಕೂಡಿದೆ. ಕಾರಣ ಭದ್ರವಾದ ಬಂಡೆಯ ಜಾಡಿನಂತೆ ಹೋಗಿದೆ. ಈ ಸುರಂಗದ ಹಾದಿಃ ಭದ್ರವಾದ ಬುನಾದಿಗೆ ಇಂದಿಗೂ ಈ ರೀತಿಯ ಸೂತ್ರವನ್ನೇ ಅವಲಂಬಿಸುತ್ತೇವೆ. ಈ ಹಳೆಯ ಸುರಂಗದ ಕೆಳಗೆ 1862ರಲ್ಲಿ ಹೊಸಸುರಂಗ ನಿರ್ಮಾಣವಾಯಿತು. ಹಳೆಯ ಸುರಂಗದ ಅವಶೇಷಗಳನ್ನು ಇಂದಿಗೂ ನೋಡಬಹುದು. ಈಗಿನ ಯಂತ್ರಯುಗದಲ್ಲಿ ನಾವು ನಿರ್ಮಿಸುತ್ತಿರುವ ಸುರಂಗಗಳ

ಸರಿಸಾಟಿಯಾಗಿದೆ ಈ ಹಳೆಯ ಸುರಂಗ. ಸುರಂಗಗಳ ರಚನೆ ಮಾಡುವಂತಹ ತಜ್ಞರು ಅಂದು, ಈ ಕೆರೆಯನ್ನು ಕಟ್ಟಿದ ಕಾಲದಲ್ಲಿ ಇದ್ದರೆನ್ನುವುದು ಖಚಿತ.

ತೂಬಿನ ಬಿರಡೆಯನ್ನು ಚಾಲನೆ (ಅಪರೇಟ್) ಮಾಡಲು ಮೇಲಿನ ಮಟ್ಟದಲ್ಲಿ ಒಂದು ಕಟ್ಟೆ (ಪ್ಲೇಟ್ ಫಾರಂ) ಇರುತ್ತದೆ. ಮಾಸೂರಿನಲ್ಲಿ ಈ ಕಟ್ಟೆಗೆ ಆಧಾರ ವಾಗಿ ಕಂಬಗಳು ಇವೆ. ಈ ಕಂಬಗಳ ಎತ್ತರ ಸುಮಾರು ಹತ್ತು–ಹನ್ನೆರಡು ಅಡಿಗಳು. ಪ್ರತಿಯೊಂದು ಕಂಬದ ತೂಕ ಸುಮಾರು ಇಪ್ಪತ್ತು ಟನ್. ಈ ಕಂಬ ಗಳು ಇಂದಿನ ಕಾಂಕ್ರೀಟ್ ಕಂಬಗಳಂತೆ ಬೋಳಾಗಿದರೆ ಅಂದಿನ ಕೆತ್ತನೆಯ ಪದ್ಧತಿಯಲ್ಲಿ ತಮ್ಮದೇ ಶಿಲ್ಪ ಕಲೆ ಯಪ್ರತೀಕವಾಗಿವೆ. ಅದರ ಕೆತ್ತನೆಯ ಮಾದರಿ ವಿಜ ಯನಗರ ಅರಸರ ಕಾಲದ್ದು. ಈ ಕೆರೆಯನ್ನು ವಿಜಯನಗರ ಅರಸರ ಕಾಲದಲ್ಲಿ ಕಟ್ಟಿರುವುದಕ್ಕೆ ಇದೊಂದು ಖಚಿತ ಆಧಾರ.

ಈ ರೀತಿಯ ಅಚ್ಚುಕಟ್ಟಾದ ಸುರಂಗವಾಗಿರದ ದೊಡ್ಡ ಬಂಡೆಯಲ್ಲಿ ಒಂದು ದಾರಿಯನ್ನು ಕೊರೆದು ಕಾಲುವೆಯನ್ನು ಮೇಲುಕೋಟೆಯ ತೊಂಡನೂರು ಕೆರೆಯಲ್ಲಿ ನಿರ್ಮಿಸಿದ್ದಾರೆ.

ನಮ್ಮ ಈ ಹಳೆಯ ಕೆರೆಗಳು ಭಾಗಗಳು, ಅವ ಶೇಷಗಳನ್ನು ಪರಿಶೀಲನೆ ಮಾಡಿದಲ್ಲಿ, ನಮಗೆ ಈ ಕೆರೆಗಳಚರಿತ್ರೆ, ಅಂದಿನ ಜನಾಂಗದ ಕಾರ್ಯ ಕುಶಲತೆ ಬಗ್ಗೆ ಮತ್ತಷ್ಟು ಪುರಾವೆಗಳು ಸಿಗುವುದು ಖಚಿತ.

॥ ಎಚ್.ಎಸ್. ಉಪಾರಾಣಿ

# ಹೊಯ್ಸಳರ ಕಾಲದ ಕೆರೆ ನೀರಾವರಿ – ಒಂದು ವಿಶ್ಲೇಷಣೆ

ಅನಾದಿ ಕಾಲದಿಂದಲೂ ನೀರಾವರಿ ಪದ್ಧತಿ ಡಿಯಲ್ಲಿದೆ. ಇಂದು ಭಾರತದ ಶೇ 47ರಷ್ಟು ಮಿ ಮಾತ್ರ ಸಾಗುವಳಿಗೆಗೊಳಪಟ್ಟಿದೆ. ಅದರಲ್ಲಿ 27ರಷ್ಟು ಭಾಗಕ್ಕೆ ಮಾತ್ರ ನೀರಾವರಿ ಸೌಲಭ್ಯ ದೆ. ನಮ್ಮಲ್ಲಿ ಹೇರಳ ಜಲಸಂಪತ್ತಿದ್ದರೂ ಶೇ. ರಷ್ಟು ನೀರನ್ನು ನೀರಾವರಿ ಮೂಲಕ ಬಳಸಿಕೊಳ್ಳ ಗುತ್ತಿದೆ ಎಂದು ಅಂದಾಜು ಮಾಡಲಾಗಿದೆ. ದಾಗ ಉಳಿದ ಶೇ. 66 ರಷ್ಟು ನೀರು ವ್ಯರ್ಥ ಗುತ್ತಿದೆಯಲ್ಲವೇ? ಪ್ರಸ್ತುತ ದಿನಗಳಲ್ಲೇ ನೀರಾವರಿ ಹೀಗೆಂದಾದರೆ, ಇತಿಹಾಸದ ಪುಟಗಳನ್ನು ತಿರುವಿ ಕಿದಾಗ ಗಮನ ಸೆಳೆಯುವ ಕೆಲವು ವಿಷಯಗಳು ಚರಿಸುತ್ತದೆ. ದಕ್ಷಿಣ ಕರ್ನಾಟಕದಲ್ಲಿ ಸುಮಾರು 0 ವರ್ಷಗಳ ಕಾಲ ಪ್ರವರ್ಧಮಾನದಲ್ಲಿದ್ದ ಯ್ಸಳರು ನೀರಾವರಿಗೆ ನೀಡಿದ ಪ್ರೋತ್ಸಾಹ ಅದ ಲ್ಲೂ ಕೆರೆ ನೀರಾವರಿಯನ್ನು ಕುರಿತು ಈ ಲೇಖನ ಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಭೌಗೋಳಿಕ ಅಂಶಗಳು ವ್ಯವಸಾಯದ ಮೇಲೆ ನ್ನುದೇ ಅದ ಪ್ರಭಾವ ಬೀರುತ್ತವೆ. ಹೊಯ್ಸಳ ಜ್ಯದ ಬಹುಭಾಗವು ಮಲೆನಾಡು ಮತ್ತು ದಕ್ಷಿಣ ದಾನ ಪ್ರದೇಶ ಅಥವಾ ಪ್ರಸ್ಥಭೂಮಿಯನ್ನು ಒಳ ಂಡಿತ್ತು. ಶಿವಮೊಗ್ಗ, ಚಿತ್ರದುರ್ಗ, ಚಿಕ್ಕಮಗಳೂರು ತ್ತು ಹಾಸನ ಜಿಲ್ಲೆಯನ್ನೊಳ ಗೊಂಡಿರುವ ಮಲೆ ಡು ಕೆಂಪು, ಕಪ್ಪು, ಕಂದು ಬಣ್ಣದ ಮಣ್ಣಿನ ಮಿಯಾಗಿದ್ದು, ವನಸಿರಿಗೆ ಹೆಸರುವಾಸಿಯಾಗಿದೆ. ಲ್ಲಿ ಮಳೆಯ ಪ್ರಮಾಣ ಹೆಚ್ಚಿದ್ದರೂ ಅದು ಅಲ್ಪಾ ಗೆ ಸೀಮಿತವಾದುದ್ದರಿಂದ ಇಂದಿಗೂ ನೀರಾವ ರು ಅಗತ್ಯವಿದೆ. ಬೆಂಗಳೂರು, ಕೋಲಾರ, ಮಂಡ್ಯ, ಮಕೂರು ಮತ್ತು ಮೈಸೂರು ಜಿಲ್ಲೆಯ ಪೂರ್ವ ಗಗಳು ದಕ್ಷಿಣ ಮೈದಾನ ಪ್ರದೇಶ ಅಥವಾ ಪ್ರಸ್ಥ ಮಿ ಎನಿಸಿದ್ದು ಕೆಂಪು ಮಿಶ್ರಿತ ಕಪ್ಪು ಹಾಗು ಧಾನವಾಗಿ ಕೆಂಪು ಮಣ್ಣಿನ ಭೂಮಿಯಾಗಿದೆ. ಯ್ಸಳ ರಾಜ್ಯಕ್ಕೆ ತುಂಗಭದ್ರಾ, ಕಾವೇರಿ, ಕಪಿಲಾ, ಗಚ, ಹೇಮಾವತಿ ಇತ್ಯಾದಿ ನದಿಗಳ ನೀರು ಲಭ್ಯ ದ್ದರೂ, ಅವು ಮಳೆಗಾಲದಲ್ಲಿ ಮಾತ್ರ ತುಂಬಿ ಹರಿಯುತ್ತಿರುವುದರಿಂದ ನೀರನ್ನು ಸಂಗ್ರಹಿಸಿಕೊಳ್ಳುವುದು ಅನಿವಾರ್ಯವಾಗಿತ್ತು. ಮಿಗಿಲಾಗಿ ಅಂದು ನದಿಗೆ ಅಣೆ ಕಟ್ಟು ಕಟ್ಟುವ ಕಾರ್ಯಕ್ಕೆ ಸರ್ಕಾರ ವಿಶೇಷ ಗಮನ ಕೊಡದೆ ಕಡಿಮೆ ಖರ್ಚಿನಲ್ಲಿ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಲು ಕ್ರಮ ಕೈಗೊಂಡಿತ್ತು. ಅದೇ ಇಂದಿನ ಕಿರಿಯ ಯೋಜನೆಯಡಿಯಲ್ಲಿ ಸೇರಿರುವ ಕೆರೆ ನೀರಾವರಿ.

ಮಧ್ಯಕಾಲಿನ ಯುಗದ ಕೆರೆ ನೀರಾವರಿ ಬಗ್ಗೆ ಅಧ್ಯಯನ ಮಾಡಲು ಶಾಸನಗಳೇ ಪ್ರಮುಖ ಆಧಾರ. ಹೊಯ್ಸಳರ ಶಾಸನಗಳಲ್ಲಿ ಕೆರೆ, ದೊಣೆ ಕಟ್ಟೆ, ಸಮುದ್ರ, ಎಂಬ ಪದಗಳ ಉಲ್ಲೇಖವಿದೆ. ಹದಿಮೂರನೇ ಶತಮಾನದ "ರಟ್ಟಮತ" ಕೃತಿ ಕೃಷಿಕರಿಗೆ ಸಂಬಂಧಪಟ್ಟದ್ದಾಗಿದೆ. ಕೆರೆ, ತೊರೆ, ಬಾವಿ ಮತ್ತು ಕೊಳಗಳು ನೀರಾವರಿಯ ಮೂಲವೆಂದು ಹೇಳುತ್ತದೆ. "ಕೆರೆಯಂ ಕಂಡು ಕಳವೆಯಂ ಬಿತ್ತುವಂತೆ" ಎಂಬುದಾಗಿ ನಯನೇನನು ಧರ್ಮಾ ಮೃತದಲ್ಲಿ ಕೆರೆಯ ಮಹತ್ವವನ್ನು ಉದ್ದರಿಸಿದ್ದಾನೆ.

ಸಮಾಜದ ಬೆನ್ನಲುಬಿನಂತಿರುವ ರೈತರಿಗೆ ನೀರಾವರಿ ಸೌಕರ್ಯವನ್ನು ಒದಗಿಸುವುದು ಪುಣ್ಯ ಕಾರ್ಯವೆಂದು ಪರಿಗಣಿಸಲಾಗಿತ್ತು. ಹಾಗಾಗಿ ಖಾಸಗಿ ವ್ಯಕ್ತಿಗಳು, ಗ್ರಾಮದ ಮಹಾಜನರು ಸರ್ಕಾರದೊಡನೆ ತಮ್ಮ ಸ್ವಂತ ಖರ್ಚಿನಲ್ಲಿ ಕೆರೆಗಳ ನಿರ್ಮಾಣ ಕಾರ್ಯದಲ್ಲಿ ಪಾಲ್ಗೊಳ್ಳುತ್ತಿದ್ದರು. ಹರದ ಗೌಡನೆಂಬುವನು ಕುರುಕ್ಕೆ ನಾಡಿನಲ್ಲಿ ಹರದ ಸಮುದ್ರ ಮತ್ತು ದೇವಾಲಯವೊಂದನ್ನು ಕಟ್ಟಿಸಿದನು[1]. ಅರಸೀಕೆರೆಯ ಮಹಾ ಜನರು ನವಿಲುದೊಣೆಗೆ ತೂಬನ್ನು ಕಟ್ಟಿಸಿ ಭೂ ದಾನ ನೀಡಿದ್ದರು[2]. ಹಿರಿಯ ದಂಡನಾಯಕ ಗಂಗಪ್ಪಯ್ಯ ಕನ್ನೇಗಾಲ ಕದನದಲ್ಲಿ ಜಯಗಳಿಸಿದ್ದಕ್ಕಾಗಿ ಗಂಗಸಮುದ್ರ ಕಟ್ಟಿಸಿ ದೇವರಿಗೆ ದತ್ತಿ ಬಿಟ್ಟಿದ್ದರು[3]. ಶ್ರೀಕರಣಾಧಿಕಾರಿ ವಿಶ್ವನಾಥನು ನಿರಗುಂದ ನಾಡಿನಲ್ಲಿ ವೀರನರಸಿಂಹಪುರ ಅಗ್ರಹಾರ ನಿರ್ಮಿಸಿದ್ದಲ್ಲದೆ ಕೆರೆಗಳನ್ನು ಕಟ್ಟಿಸಿದೆ[4]. ಮಹಾ ಪ್ರಧಾನ ಕೇಶಿರಾಜ ಚಮುಪತಿಯ ನೇತೃತ್ವದಲ್ಲಿ ಕೇಶವಪುರ ಅಗ್ರಾಹರದ ಜೊತೆಗೆ ಕೇಶವ ಸಮುದ್ರ ಮತ್ತು ಲಕ್ಷ್ಮೀ ಸಮುದ್ರ

ಕೆರೆಗಳು ಅಸ್ತಿತ್ವಕ್ಕೆ ಬಂದಿದ್ದವು[5]. ಮಾದಿಗಿ ದೇವದಂಡ ನಾಯಕರು ತಮ್ಮ ಪತ್ನಿ ಮಾಯಿ ದೇವಿಯ ಹೆಸರಿನಲ್ಲಿ ಮಹಾಸಮುದ್ರ ನಿರ್ಮಿಸಿದ್ದರು[6]. ಇದರಿಂದ ಅಗ್ರಹಾರ, ದೇವಾಲಯ ಹಾಗೂ ಕೆರೆಗಳ ನಿರ್ಮಾಣ ಧಾರ್ಮಿಕ ತಳಹದಿಯನ್ನೊಳಗೊಂಡಿತ್ತೆಂಬುದು ಸ್ಪಷ್ಟ.

ಅಂದಿನ ದಿನಗಳಲ್ಲಿ ಕೆರೆಗಳಿಗೆ ತಗುಲುತ್ತಿದ್ದ ವೆಚ್ಚದ ಬಗ್ಗೆ ಮಾಹಿತಿ ಇದೆ. ಉದಾಹರಣೆಗೆ ತುಮಕೂರು ಶಾಸನದ[7] ಪ್ರಕಾರ ಎರಡನೇ ಬಲ್ಲಾಳನ ಕಾಲದಲ್ಲಿ ಹೊನ್ನಮಾರಗೌಡನೆಂಬುವನು ತಮ ತಾಯಿ ಮಾಯಕ್ಕನ ಹೆಸರಿನಲ್ಲಿ ಮಾಚಸಮುದ್ರ ಕಟ್ಟಿಸಿದ್ದರೆಂದು 1314ರ ಶಿಲಾ ಶಾಸನದಿಂದ[8] ಗೋಚರವಾಗುತ್ತದೆ. ಬೇಲೂರು[9] ಶಾಸನವು 20 ಪೊನ್‌ಗೆ ಕೆರೆ ಅಸ್ತಿತ್ವಕ್ಕೆ ಬಂದಿದ್ದರ ಬಗ್ಗೆ ಬೆಳಕನ್ನು ಚೆಲ್ಲುತ್ತದೆ. ಸಂಕ್ಷಿಪ್ತವಾಗಿ ಹೇಳುವುದಾದರೆ ನಿರಂತರವಾಗಿ ನಿರ್ಮಾಣಗೊಳ್ಳುತ್ತಿದ್ದ ಕೆರೆಗಳಿಗೆ ತಗುಲುತ್ತಿದ್ದ ವೆಚ್ಚದಿಂದ ಅವುಗಳ ವಿಸ್ತೀರ್ಣವನ್ನು ಅಂದಾಜು ಮಾಡಬಹುದು. ಅದರಂತೆ ಸಣ್ಣ ಹಾಗೂ ದೊಡ್ಡ ಕೆರೆಗಳು ಅನುಕ್ರಮವಾಗಿ 'ಕಿರಿಯ ಕೆರೆ' ಮತ್ತು 'ಪಿರಿಯ ಕೆರೆ' ಎಂದು ಶಾಸನಗಳಲ್ಲಿ ಉಲ್ಲೇಖಿತವಾಗಿವೆ.

ಕೆರೆಗಳಿಗೆ ವಿನಿಯೋಗಿಸಲ್ಪಡುತ್ತಿದ್ದ ಮೊತ್ತ ಹಾಗೂ ವಿಸ್ತೀರ್ಣವನ್ನೇನೋ ತಿಳಿದಂತಾಯಿತು. ಆದರೆ ಕಟ್ಟುತ್ತಿದ್ದ ಬಗೆ ಹೇಗೆಂಬುದು ಬಗ್ಗೆ ಸ್ಪಷ್ಟ ಚಿತ್ರಣವಿಲ್ಲ. 'ಕಾಡಂ ಕಡಿದು, ಕೆರೆಯಂ ಕಟ್ಟಿಸಿ, ಊರು ಮಾಡಿದರು', ಎಂದು ಶಾಸನಗಳು[10] ತಿಳಿಸುತ್ತವೆಷ್ಟೆ. ಅಲ್ಲದೆ ಸಾರ್ವಜನಿಕರ ಉಪಯೋಗಕ್ಕಾಗಿ ಬಳಸಲ್ಪಡುತ್ತಿದ್ದ ಕೆರೆಗೆ 'ಊರೊಂಬ ಕೆರೆ'[11]ಗಳಲ್ಲಿ ಕುಡಿಯಲು ಯೋಗ್ಯವಾಗಿದ್ದುದಕ್ಕೆ ಕುಡಿನೀರಕೆರೆ[12] ಎಂದು ಪ್ರತ್ಯೇಕವಾಗಿ ಶಾಸನಗಳಲ್ಲಿ ಉಲ್ಲೇಖಿಸಿರುವು ದನ್ನು ಗಮನಿಸುತ್ತೇವೆ. ನೀರಾವರಿ ಪ್ರಯೋಜನಕ್ಕಾಗಿ ಅಸ್ತಿತ್ವಕ್ಕೆ ಬಂದಿದ್ದ ಕೆರೆಗಳಿಗೆ ತೂಬು, ಕೋಡಿ, ನೀರೊತ್ತು ಮತ್ತು ಕಾಲುವೆ ಗಳಿದ್ದವೆಂದು ಪರೋಕ್ಷವಾಗಿ, ದಾನ ಶಾಸನಗಳಿಂದ ವೇದ್ಯವಾಗುತ್ತದೆ.

ಕೆರೆ ಕಟ್ಟಲು ಮುಂದೆ ಬಂದವರಿಗೆ ದಾನದತ್ತಿಗಳನ್ನು ನೀಡಿ ಪ್ರೋತ್ಸಾಹಿಸಲಾಗುತ್ತಿತ್ತು. ಸೀಯಣ್ಣನೆಂಬುವನು ಒಟ್ಟಿನಲ್ಲಿ ದೊಡ್ಡ ಕೆರೆಯೊಂದನ್ನು ನಿರ್ಮಿಸಿದ್ದಕ್ಕಾಗಿ ಪೆರಿಯನಾಡಿನ ನಿವಾಸಿಗಳು ಆತನಿಗೆ 6 ಖಂಡುಗ ಗದ್ದೆಯನ್ನು 'ಕಟ್ಟು ಕೊಡುಗೆಯಾಗಿ' ನೀಡಿದ್ದರು[13]. ಓರ್ವ ಎಕ್ಕಲಶೆಟ್ಟಿ ಎಕ್ಕಸಮುದ್ರ ಕಟ್ಟಿಸಿದ್ದಕ್ಕಾಗಿ 40 ಕಂಬ ಜಮೀನನ್ನು ಆತ 'ಕೆರೆಕೊಡುಗೆ'ಯಾಗಿ ಪಡೆದಿದ್ದ[14] ಬೊಮ್ಮಯ್ಯ ಎಂಬ ಮಹನೀಯ ಕೆರೆಗೆ ದಕ್ಷಿಣದ ತೂಬನ್ನು ಕಟ್ಟಿಸಿಕೊಟ್ಟಿದ್ದಕ್ಕಾಗಿ ಆ ಕೆರೆಯ ಸಮೀಪ ಒಂದು ಸಲಗೆ 10 ಖಂಡುಗ ಗದ್ದೆಯನ್ನು ಆತನ ಕೆಲಸಕ್ಕೆ ಪ್ರತಿಫಲವಾಗಿ ಕೊಡಲಾಗಿತ್ತು[15].

ಇನ್ನು ಕೆರೆ ಕಟ್ಟುವ ಕಾರ್ಯದಲ್ಲಿ ಯಾವುದಾದರೂ ಪಂಗಡ ನಿರತವಾಗಿದ್ದಿತೇ ಎಂಬ ಕುತೂಹಲ ನಮ್ಮನ್ನು ಕಾಡುತ್ತದೆ. ಇದನ್ನು ನಿವಾರಿಸುವಲ್ಲಿ ಬೇಳೂರು ಶಾಸನ[16] ಸಹಾಯ ಮಾಡುತ್ತದೆ. ಅದರಂತೆ ಅರಸೀಕೆರೆಯ ಜಗತೀಶ್ವರರು ಕೆರೆ ಹಾಗೂ ದೇವಾಲಯ ನಿರ್ಮಾಣ ಕಾರ್ಯದಲ್ಲಿ ನಿರತರಾಗಿದ್ದರು. ಜೊತೆಗೆ ದಾನದತ್ತಿ ಕಾರ್ಯಗಳನ್ನು ಕೈಗೊಳ್ಳುತ್ತಿದ್ದರು.

ಕೆರೆಯ ನಿರ್ಮಾಣದಷ್ಟೆ ಅಗತ್ಯ, ಅದರ ನಿರ್ಮಾಣ ಮತ್ತು ದರಸ್ತಿ. ಕೆರೆಯ ಧರ್ಮವನ್ನು ಪಾಲಿಸದಿರುವುದು ಪಾಪವೆಂದು ಭಾವಿಸಲಾಗಿತ್ತು. ಹಾಗಾಗಿ ಈ ನಿಟ್ಟಿನಲ್ಲಿ ಭೂಮಿ ಮತ್ತು ಹಣವನ್ನು ದಾನ ದತ್ತಿರೂಪದಲ್ಲಿ ಕೊಡುತ್ತಿದ್ದರು. ಸರ್ಕಾರಿ ಅಧಿಕಾರಿಗಳು ಬ್ರಾಹ್ಮಣರೂ ಹಾಗೂ ಖಾಸಗೀ ವ್ಯಕ್ತಿಗಳು ಇದರತ್ತ ಗಮನ ಹರಿಸಿದ್ದರು. ಚನ್ನರಾಯ ಪಟ್ಟಣ ಶಾಸನದಲ್ಲಿ[17], ಉದ್ಭವ ವಿಶ್ವನಾಥಪುರದ ಬ್ರಾಹ್ಮಣರು ಭೂಮಿಯನ್ನು ಪಂಚಿಕೇಶ್ವರ ದೇವರಿಗೆ ದತ್ತಿ ಬಿಟ್ಟರೆಂದು ಕೆರೆ ಕಾಲುವೆ ನಿರ್ವಹಣೆಗೆ ಅದನ್ನು ಉಪಯೋಗಿಸಬೇಕೆಂದು ಅದು ಅತ್ಯಂತ ಶ್ರೇಯಸ್ಕರ ಕಾರ್ಯವೆಂದು ಒತ್ತಿ ಹೇಳಲಾಗಿದೆ. 'ಬಿತ್ತುವಟ್ಟ' ಎಂಬ ದತ್ತಿಯನ್ನು ಕೆರೆಯ ನಿರ್ವಹಣೆಗೆಂದೇ ಕೊಡಲಾಗುತ್ತಿತ್ತು. ಮಹಾಸಾಮಂತ ಗಂಧರಾಧಿತ್ಯನು ಮಂಜೇಶ್ವರ ದೇವರ ಕೆರೆಯ ನಿರ್ವಹಣೆಗೆ 5 ಗುಳ ಗದ್ದೆಯನ್ನು ಬಿತ್ತು ವಟ್ಟವಾಗಿ ಕೊಟ್ಟಿದ್ದನು.[18] ಸಮಸ್ತ ಜಗಕ್ಕೆ ಆಶ್ರಯವಾಗಿ ಕಟ್ಟಿಸಿದ ಕೆರೆಗೆ ಮದುವೆಯ ಹಂದರದ ಹಣವನ್ನು ಕೊಟ್ಟರೆಂದು ಅರಸೀಕೆರೆ ಶಾಸನ[19] ಹೇಳುತ್ತದೆ. ಅಲ್ಲಾಳ ದೇವನು ವಿಷ್ಣು ಸಮುದ್ರ ಕೆರೆಗೆ 200 ಗದ್ಯಾಣ ದಾನವಾಗಿ ಕೊಟ್ಟ ಬಗ್ಗೆ ಮತ್ತು ಅದರ ಬಡ್ಡಿಯಲ್ಲಿ ಒಂದು ಬೇಳೆ 30 ಗದ್ಯಾಣವನ್ನು ವರ್ಷಂಪ್ರತಿ ಕೆರೆ, ತೂಬು, ಮತ್ತು ಕಾಲುವೆಗೆ ವಿನಿಯೋಗಿಸಬೇಕಿತ್ತೆಂದು ಕಡೂರು ಶಾಸನದಿಂದ[20] ತಿಳಿದು ಬರುತ್ತದೆ,. ಕುರುವಂಕ ನಾಡಿನ ಹೊಳೆಯ ಸುಂಕ 64 ಗದ್ಯಾಣವನ್ನು ತೊಂಡನೂರಿನ

ಹಿನ ಕಾಲುವೆಯನ್ನು ರಿಪೇರಿ ಮಾಡಿಸಲು ಕೊಡಲಾ ತ್ತ[21], ಕೆರೆಗಳ ಕೆಲಸಕ್ಕೆ ಹೂಡುವ ಬಂಡಿಗೆ ಆಳು ಜೀವನೋಪಾಯಕ್ಕೂ ಭೂದಾನ ಕೊಡುತ್ತಿದ್ದ ದು ನಾಗಮಂಗಲ ಶಾಸನ[22] ತಿಳಿಸುತ್ತದೆ. ಒಬ್ಬ ತ್ತಿಯು ಹಳೆಯ ಕೆರೆಯನ್ನು ನೋಡಿಕೊಳ್ಳಲೆಂದು 0 ಗದ್ಯಾಣ ದಾನ ನೀಡಿದ್ದನೆಂದು 1223ರ ಶಾಸ ಲ್ಲಿ[23] ದಾಖಲಿಸಲಾಗಿದೆ. ಹೀಗೆ ಕೆರೆಯ ನಿರ್ವಹ ೆ ದಾನ ಕೊಡುವುದು ಕರ್ತವ್ಯವೆಂದು ಜನ ತಿಳಿದಿ ೆಂಬ ಅಂಶ ಮೇಲಿನ ಉದಾಹರಣೆಗಳಿಂದ ನವರಿಕೆಯಾಗುತ್ತದೆ.

ದುರಸ್ತಿ ಕಾರ್ಯ ಇಂದಿನಷ್ಟೆ ಮಂದಗತಿಯಿಂದ ಗುತ್ತಿತ್ತು. ಬಹಳ ದೀರ್ಘಕಾಲ ಕೆರೆಗಳಿಗೆ ದುರಸ್ತಿ ರ್ಯ ನಡೆಯುತ್ತಿರಲಿಲ್ಲ. ಅಂತಹ ಕಾರ್ಯಗಳನ್ನು ಳ್ಳಲು ಮುಂದೆ ಬರುವವರಿಗೆ ದಾನ ದತ್ತಿ ನೀಡಿ ತ್ತೇಜಿಸಲಾಗುತ್ತಿತ್ತು. ಉದಾಹರಣೆಗೆ ಬಹಳ ಕಾಲ ದ ಪುಲಿಯೂರು ನಾಡಿನ ಕರಿಕಿರ್ರೆ ದುರಸ್ತಿಗೊಳಿಸಿ ಕ್ಕಾಗಿ ಆ ಊರ ನಿವಾಸಿಗಳು ಮತ್ತು ಸಿಂಗೇಯ ಡನಾಯಕರು ಆತನಿಗೆ 'ಕೊಡುಗೆಯಾಗಿ' ಭೂಮಿ ನ್ನಿತ್ತಿದ್ದರು[24] ಅದೇ ರೀತಿಯಲ್ಲಿ ಸುಗುಣೆಯಲ್ಲಿ ಶ್ರೀ ಸ ಮಾರಪ್ಪನ್ ಎಂಬುವವನು ತನ್ನ ಸ್ವಂತ ನಲ್ಲಿ ಒಡೆದು ಹೋಗಿದ್ದ ಕೆರೆಯನ್ನು ಊರ್ಜಿತ ಳಿಸಿದ್ದಕ್ಕಾಗಿ ಆತನಿಗೆ ಕಂದಾಯರಹಿತ ಮಿಯನ್ನು ಕೊಡಲಾಗಿತ್ತು[25].

ಸರ್ಕಾರವೂ ವ್ಯವಸಾಯವನ್ನು ವಿಸ್ತರಿಸಲು ತ ಹಂತವಾಗಿ ಸಾಗುವಳಿ ಭೂಮಿಯ ಮೇಲೆ ಗೆಯನ್ನೇರಿಸುವ ನೀತಿಯನ್ನು ಅನುಸರಿಸಿತ್ತು. ದು ಸಾಗುವಳಿ ಭೂಮಿ ಸೀಮಿತವಾಗಿದ್ದು ಜನಸಂ ಖ್ಯೆಯೂ ಕಡಿಮೆಯಾಗಿದ್ದುದರ ಪರಿಣಾಮವಾಗಿ ರ, ಆದಾಯವನ್ನು ಹೆಚ್ಚಿಸಿಕೊಳ್ಳಲು ಪ್ರಗತಿಪರ ಯನ್ನು ಅಳವಡಿಸಿಕೊಳ್ಳಬೇಕಾಗಿತ್ತು. ಮೇಲಿನ ಯಿಂದಾಗಿ ಸರ್ಕಾರದ ಆದಾಯವೂ ಕ್ರಮೇಣ ಚ್ಚುತ್ತಿತ್ತು. ಜೊತೆಗೆ ನೀರಾವರಿ ಸೌಕರ್ಯಗಳು ಚ್ಚುತ್ತಿದ್ದವು. ಬೇಲೂರು ಶಾಸನದ[26] ಪ್ರಕಾರ ಯ್ಯ ದಂಡನಾಯಕ ನೀರಾವರಿ ಸೌಲಭ್ಯವನ್ನು ಗಿಸಲು ರುದ್ರಸಮುದ್ರ, ಗಂಗಸಮುದ್ರ, ಅಚ್ಚುತಸ ದ್ರ ಮತ್ತು ವೀರಸಮುದ್ರ, ಕೆರೆಗಳನ್ನು ನಿರ್ಮಿಸಿ, ತಹ ಕೆರೆ ಕಟ್ಟಿಸಿದವರಿಗೆ 12 ವರ್ಷಗಳ ಕಾಲ ಗೆ ಮಾನ್ಯವೆಂದು, ನಮತರ 10 ಸಲಗೆ ಭತ್ತದ ಭೂಮಿ ಮಾನ್ಯವೆಂದು ಸ್ಪಷ್ಟಪಡಿಸಿದ್ದ, ಇನ್ನು ನೀರಾವರಿ ತೆರಿಗೆ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಿಲ್ಲ. ಕೇವಲ 'ನೀರುವಣ', 'ನೀರುಕುಲ', 'ನೀರುಸಂದಿ' ಎಂಬ ಪದಗಳ ಉಲ್ಲೇಖವಿದೆ, ನಾಗಮಂಗಲ ಶಾಸನವೊಂದು[27] ಖಂಡುಗಕ್ಕೆ 4 ಹಣಗಳ ಲೆಕ್ಕದಲ್ಲಿ ನೀರಾವರಿ ತೆರಿಗೆ ಕೊಡಬೇಕಿತ್ತೆಮದು ತಿಳಿಸುತ್ತದೆ. ದಶವಂದಂ ಅಥವಾ ಹತ್ತನೇ ಒಂದು ಭಾಗ ನೀರಾವರಿ ತೆರಿಗೆ ಕೊಡಬೇಕಿತ್ತೆಂದು ಶಾಸನವೊಂದು[27ಎ] ತಿಳಿಸುತ್ತದೆ.

ಅಂದು ಕೆರೆ ಕಟ್ಟಿಸಿಕೊಳ್ಳಬೇಕೆಂದು ತಿಳಿಸುವ ಪರಿಪಾಠವಿತ್ತೆಂಬುದು ಕೆರೆಗಳ ಪ್ರಾಮುಖ್ಯತೆ ಬಗ್ಗೆ ಪ್ರಚಾರಪಡಿಸುತ್ತದೆ. ಮೂರನೇ ನರಸಿಂಹನ ಕಾಲದಲ್ಲಿ ಪುರುಷೋತ್ತಮ ದೇವ ಮತ್ತು ನಂಬಿಪಳ್ಳೆಯರು ಪದ್ಮನಾಭಪುರ ಬ್ರಾಹ್ಮಣರಿಗೆ ಕೊಟ್ಟ ದಾನ[28] ಶಾಸನದ ಕ್ರಮ ಹೀಗಿತ್ತು. : "ಆ ಕೇಶದ ದೇವರ ದಾನದ ವೂರ ಕಾಡಿನಗದ್ದೆ ಬೆದ್ದಲೊಳಗಾದ ಭೂಮಿಯೊಳಗೆ ತೆಂಗು ಕವುಂಗು ಮುಖ್ಯವಾದ ಸಮಸ್ತಸ್ಥಾವರವಹ ಫಲಪುಷ್ಪಂಗಳನ್ನೂ ಯುಕ್ತಿಕೊಂಡು ಕೆರೆವಾ ಕಟ್ಟ ಕೊಮಡು ಕಾಲುವೆಯನ್ನು ತಂದುಕೊಂಡು ಸಂತಾನ ಗಾಮಿಯಾಗಿ ಭೋಗಿಸವರು" ಎಂದು. ಹಾಗೆಯೇ ತರೀಕೆರೆ ಶಾಸನವು[29] ತಮ್ಮ ತಮ್ಮ ಹಳ್ಳಿಯಲ್ಲಿ ಕೆರೆ ಕಾಲವೆ ಕಟ್ಟಿಸಿ ತೋಟ ಮಾಡಬೇಕೆಂದು ಉಲ್ಲೇಖಿಸುತ್ತದೆ..

ನೀರಗಂಟಿ ಮತ್ತು ತೋಟಿಗಳು ಸಾಗುವಳಿ ಭೂಮಿಗೆ ನೀರನ್ನು ಬಿಡುತ್ತಿದ್ದರು. ಈ ಕೆಲಸಕ್ಕಾಗಿಯೇ ಅವರು ನೇಮಕಗೊಳ್ಳುತ್ತಿದ್ದರು. ಇವರ ಸೇವೆಗೆ ಪ್ರತಿಯಾಗಿ ಭೂಮಿಯನ್ನು ನೀಡಲಾಗುತ್ತಿತ್ತು. ಅದರಂತೆ ತೋಟಿಗಳ ಜೀವನೋಪಾಯಕ್ಕೆ 30 ಕೊಳಗ ಗದ್ದೆ ಬಿಡಲಾಗಿತ್ತೆಂದು 1250ರ ಅರಕಲಗೂಡು ಶಾಸನ ತಿಳಿಸುತ್ತದೆ.

ಕೆರೆ ನೀರಾವರಿಯನ್ನು ಕುರಿತು ಚರ್ಚಿಸಿದುದರಿಂದ ಹೊಯ್ಸಳರು ಕೇವಲ ಕೆರೆ ನೀರಾವರಿಗೆ ಪ್ರಾಧಾನ್ಯತೆ ನಿಡಿದ್ದರೆಂದಲ್ಲ. ಬಾವಿ ಮತ್ತು ಕಾಲವೆಗಳು ನೀರಾವರಿಯ ಅಗತ್ಯವನ್ನು ಪೂರೈಸುತ್ತಿದ್ದವು ಬಾವಿ, ತೋಟದ ಬೆಳೆಗಳಿಗೆ ನೀರನ್ನು ಪೂರೈಸುತ್ತಿದ್ದ ಕಾಲುವೆಗಳು ಹೆಚ್ಚಿನ ಪ್ರಮಾಣದಲ್ಲಿರಲಿಲ್ಲ. ಯಗಚಿ ಕಾಲುವೆ[30] ಬಾಸಿವೂರ ಕಾಲವೆ ಬಾಗೆವೂರ ಕಾಲುವೆ [31]ಗಳ ಬಗ್ಗೆ ದಾಖಲೆಗಳಿವೆಯಷ್ಟೆ. ಅಂದು ಕೆರೆಗಳ ಮೂಲಕ ನೀರನ್ನು ಹಾಯಿಸುವುದು ಬಳಕೆಯಲ್ಲಲ್ಲದ್ದಷ್ಟು

ನದಿಕಾಲುವೆಗಳ ಮೂಲಕವಿರಲಿಲ್ಲ. ನದಿಗೆ ಅಡ್ಡಗಟ್ಟುವುದು ಜನರ ಆಧ್ಯಾತ್ಮಿಕ ಪ್ರವೃತ್ತಿಗೆ ಒಗ್ಗುತ್ತಿರಲಿಲ್ಲ.

ಒಟ್ಟಿನಲ್ಲಿ ವೈವಿಧ್ಯತೆಯಿಂದ ಕೂಡಿದ ಭೌಗೋಳಿ ಕಾಂಶಗಳನ್ನು ಹೊಂದಿದ್ದ ಹೊಯ್ಸಳ ರಾಜ್ಯವು ಕೆರೆ ನೀರಾವರಿಗೆ ಹೆಚ್ಚು ಮಹತ್ವ ನೀಡಿತ್ತು. ಹಳೆ ಕೆರೆ, ಹೊಸ ಕೆರೆ, ಎಂದು ಶಾಸನಗಳಲ್ಲಿ ಕಂಡು ಬರುವ ಪದಗಳು ಹೊಯ್ಸಳರ ಕಾಲದ ಮುನ್ನ ಹಾಗೂ ಅವರ ಕಾಲದಲ್ಲಿ ನಿರ್ಮಾನಗೊಂಡಿದ್ದ ಕೆರೆಗಳ ಬಗ್ಗೆ ಸಾಕ್ಷಿಗಳನ್ನು ಒದಗಿಸುತ್ತವೆ. ಅತಿವೃಷ್ಠಿ, ಅನಾವೃಷ್ಠಿಯ ಬಗ್ಗೆ ಹೆಚ್ಚಿನ ಮಾಹಿತಿಗಳಿರದಿದ್ದರೂ, ಅದರಿಂದ ಹೊರತಾಗಿರಲಿಲ್ಲ ಎಂಬುದಂತೂ ವಾಸ್ತವ ಇಂದು ಬೇಲೂರು ತಾಲೂಕಿನ ವಿಷ್ಣು ಸಮುದ್ರ ಕೆರೆ 700 ಎಕರೆ ಜಮೀನಿಗೆ ನೀರನ್ನು ಹಾಯಿಸುತ್ತಿದೆ. ಲಭ್ಯವಿರುವ ಅಂಕಿ ಅಂಶಗಳ ಪ್ರಾಕಾರ ಕರ್ನಾಟಕದಲ್ಲಿ 22, 632 ಕೆರೆಗಳು ಪರಂಪರಾನುಗತವಾಗಿ ಅಸ್ತಿತ್ವದಲ್ಲಿದ್ದು 9.5ಲಕ್ಷ ಹೆಕ್ಟೇರು ಭೂಮಿಗೆ ನೀರನ್ನೊದಗಿಸುತ್ತಿವೆ. ಅವುಗಳಲ್ಲಿ ನೂರಾರು ಕೆರೆಗಳಂತೂ ಹೊಯ್ಸಳರ ಕೊಡುಗೆ ಎಂಬುದರಲ್ಲಿ ಸಂದೇಹವಿಲ್ಲ. ಇದರ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನ ನಡಂಬೇಕಾಗಿದೆ.

---

## ಗ್ರಂಥ ಋಣ


1 ಎ.ಕ. ಸಂಪುಟ 6(ಪರಿಷ್ಕತ ಅವೃತ್ತಿ); ಪಾಂಡವಪುರ 20, 1176)
2. ಎಂ.ಎ.ಆರ್. 1911 ಪುಟ 47, 'ಎ.ಕ.', ಸಂಪುಟ 15, ಅರಸೀಕೆರೆ 204, ಕ್ರಿ.ಶ. 1238
3. ಎ.ಕ. ಸಂಪುಟ 2 (ಪರಿಷ್ಕೃತ) ನಂ. 558 ಕ್ರಿ.ಶ. 1145
4. 'ಎ.ಕ.', ಸಂಪುಟ 5 ಚನ್ನರಾಯಪಟ್ಟಣ 203 ಕ್ರಿ.ಶ. 1223
5. ಅದೇ, ಚನ್ನರಾಯಪಟ್ಟಣ 244, ಕ್ರಿ.ಶ. 1210
6. ಅದೇ ಸಂಪುಟ 15, ಹಾಸನ 59, ಕ್ರಿ.ಶ. 1310
7. ಅದೇ ಸಂಪುಟ 12 ತುಮಕೂರು 27, 28, 33
8. ಅದೇ ಸಂಪುಟ 5, ಹಾಸನ 96, 1314
9. ಅದೇ ಸಂಪುಟ 5, ಬೇಲೂರು 129, 1192
10. ಅದೇ ಬೇಲೂರು 137, 1183, ಅದೇ ಬೇಲೂರು 175, 1186
11. ಅದೇ ಸಂಪುಟ 4, ಕೃಷ್ಣರಾಜಪೇಟೆ 68, 1168, ಅದೇ 7, ಸೊರಬ 140, 1198
12. ಅದೇ ಸಂಪುಟ 4, (ಪರಿಸ್ಕತ) ಯಳಂದೂರು 15: 1283
13. 'ಎವಮ್.ಎ.ಆರ್.' 1919 ನಂ. 81 - 83 ಪುಟ 32, 1340
14. ಅದೇ 1928, ನಂ. 19, 1227
15. 'ಎ.ಕ.', ಸಂಪುಟ 5 ಅರಸೀಕೆರೆ, 180, 1215
16. 'ಎಂ.ಎ.ಆರ್.' 1934, ನಂ. 1, ಪುಟ 76, ಎ.ಕ., ಸ. 5, ಅರಸೀಕೆರೆ 48
17. 'ಎ.ಕ.' ಸಂಪುಟ 5, ಚೆನ್ನರಾಯಪಟ್ಟಣ 269, 1276

18. ಅದೇ ಸಂಪುಟ, 12 ತಿಪಟೂರು 104, 1130.
19. ಅದೇ ಸಂಪುಟ 15, ಅರಸೀಕೆರೆ 220, 1177
20. ಅದೇ ಸಂಪುಟ 6, ಕಡೂರು 92, 1259
21. ಅದೇ ಸಂಪುಟ 3, ಶ್ರೀರಂಗಪಟ್ಟಣ 154, 1160
22. ಅದೇ ಸಂಪುಟ 4, ನಾಗಮಂಗಲ 39, 1271
23. ಅದೇ ಸಂಪುಟ 5, ನಾಗಮಂಗಲ 86, 1223
24. ಅದೇ ಸಂಪುಟ 9 ಹೊಸಕೋಟೆ 139, 1314
25. ಅದೇ ಸಂಪುಟ 9 ಅನೇಕಲ್ 80, 1302
26. ಅದೇ ಸಂಪುಟ 5 ಬೇಲೂರು 175, 1186
27. ಅದೇ ಸಂಪುಟ 4, ನಾಗಮಂಗಲ 48, 49, 1270
27ಏ. ಅದೇ, ನಾಗಮಂಗಲ 70
28. ಅದೇ ಸಂಪುಟ 3, ಮಂಡ್ಯ 70, 1276
29. ಅದೇ ಸಂಪುಟ 6, ತರೀಕೆರೆ 55
30. ಅದೇ ಸಂಪುಟ 15, ಬೇಲೂರು 301. 1300
31. ಅದೇ ಸಂಪುಟ 3, ತಿರುಪಕೂಡಲು ನರಸೀಪುರ 98, 1300 - ತಿರುಮಕೂಡಲು 101, 1276.

ಡಾ॥ ಚೆನ್ನಾಂಬಿಕಾ ಪಾವಟೆ

# ಹಂಡೆಯ ಪಾಳೆಯಗಾರರ ಮೇಲೆ ಹೊಸಬೆಳಕು

ಕರ್ನಾಟಕದಲ್ಲಿ ಬಾಳಿ ಬದುಕಿದ ಕೆಲವು ಪಾಳೆಯಪಟ್ಟುಗಳಲ್ಲಿ ಹಂಡೆ ಮನೆತನವೂ ಒಂದು. ವಿಜಯನಗರದ ಅಚ್ಯುತರಾಯನ ಕಾಲದಲ್ಲಿ ವಿಜಾಪುರಜಿಲ್ಲೆಯ ಮುತ್ತಿಗೆ ಗ್ರಾಮದಲ್ಲಿ ಗೌಡಿಕೆ ಮಾಡಿ ಕೊಂಡಿದ್ದ ಮನೆತನವಿದು. ಅಚ್ಯುತರಾಯ, ಕೃಷ್ಣದೇವರಾ ಯರ ತರುವಾಯ ಆದಿಲಶಹನ ಕಾಲದಲ್ಲಿ ವಿಜಾಪೂರದ ಕೃಷ್ಣಾನದಿಯ ಉತ್ತರ ದಿಗ್ಭಾಗದಲ್ಲಿರುವ ಮೂರ್ತಿಗಿರಿ ಗ್ರಾ ಮದಲ್ಲಿ ಇವರು ಅಧಿಕಾರ ಮುಂದುವರೆಸಿಕೊಂಡು ಹೋಗಿದ್ದರು.

ಹಂಡೆ ಪಾಳೆಯಗಾರರ ಬಹುಮಟ್ಟಿನ ವಿಷಯ ಆಂಧ್ರ ಪ್ರದೇಶದಲ್ಲಿ ದೊರಕುತ್ತಿದ್ದು ಈ ವಿಷಯವನ್ನು ತಿಳಿಸುವಲ್ಲಿ 'ಹಂಡೆ ಅನಂತಪುರ ಕೈಫಿಯತ್ತು' ಮಹತ್ವದ ದಾಖಲೆ ಎನಿಸಿದೆ. ಇವುಗಳೊಂದಿಗೆ ಹಂಡೆ ಮನೆತನದ ಸಮಕಾಲೀನ ತೆಲುಗು ಕಾವ್ಯಗಳಾದ ಪುಲ್ಲಕವಿ ವಿರಚಿತ 'ಶ್ರೀ ಶೈಲ ಪಂಡಿತಾರಾಧ್ಯ ಚರಿತ್ರೆ', ಸಿರಿಪಿ ಆಂಜನೇಯಲು ವಿರಚಿತ 'ಕರಿಬಸವಸ್ವಾಮಿ' ಕಾವ್ಯ, ನಾಗಸಂದ್ರಂವಾಸುದೇವರಾವ್ ವಿರಚಿತ, 'ಅನಂತಪುರ ಮಂಡಲಚರಿತ್ರ ಕಥಲು' ಕೃತಿಗಳು, 'ಶ್ರೀ ಶೈಲ ಪೀಠದರ್ಶನ' ವೆಂಬ ಕನ್ನಡ ಕೃತಿ ಈ ಮನೆತನದ ಬಗೆಗೆ ವಿವರವಾದ ವಿಷಯವನ್ನು ತಿಳಿಸಿವೆ.

ಇವರು ಆಂಧ್ರಪ್ರದೇಶದ ಅನಂತಪುರವನ್ನು ತಮ್ಮ ಕೇಂದ್ರಸ್ಥಳವನ್ನಾಗಿರಿಸಿಕೊಂಡಿದ್ದರಿಂದ ಇವರನ್ನು 'ಹಂಡೆ ಅನಂತಪುರ ಪಾಳೆಯಗಾರರು' ಎಂದು ಕೃತಿಗಳು ಕರೆದಿವೆ. ನಿಡುಮಾಮಿಡಿ ಶ್ರೀ ಶೈಲ ಪೀಠದಲ್ಲಿ ಅಪಾರ ವಿಶ್ವಾಸವಿಟ್ಟ ಮನೆತನವಿದು. ಈ ಮೇಲಿನ ಕಾವ್ಯಗಳು ಶ್ರೀ ಶೈಲ ಪೀಠದ ಪರಂಪರೆಯ ಇತಿಹಾಸಕ್ಕೆ ಸಂಬಂಧಿಸಿದವು. ಈ ಪರಂಪರೆಯ ಜೊತೆಗೆ ಹೆಣೆದುಕೊಂಡ ಹಂಡೆ ಪಾಳೆಯಗಾರರ ಚರಿತ್ರೆಯನ್ನು ತುಂಬ ಸೂಕ್ಷ್ಮವಾಗಿ ಬಿಡಿಸಿಕೊಳ್ಳಬೇಕಿದೆ.

ವಿಜಯನಗರದ ಸದಾಶಿವರಾಯನ ಕಾಲದಲ್ಲಿ ಅಳಿಯ ರಾಮರಾಯ (ಕ್ರಿ.ಶ. 1542-1565) ಸರ್ವಾಧಿಕಾರ ನಡೆಸಿದ್ದನು. ಆತನ ಪ್ರಾಬಲ್ಯ ಸಹಿಸದೆ ಆಗ ಕೋಶಾಧಿಕಾರಿಯಾಗಿದ್ದ ಬೊಕ್ಕಸಂ ತಿಮ್ಮಯ್ಯನೆಂಬವನು ಚತುರಂಗಬಲವನ್ನು ಸ್ವಾಧೀನ ಪಡಿಸಿಕೊಂಡು ರಾಮರಾಯನನ್ನು ಸೆರೆಯಲ್ಲಿಡುವು ದರಲ್ಲಿದ್ದನು. ಆಗ ರಾಮರಾಯನು ಶ್ರೀ ಶೈಲಪೀಠದ ಇಮ್ಮಡಿ ಕರಿಬಸವ ಸ್ವಾಮಿಗಳಿಗೆ ಶರಣಾಗಿ ಅವರ ಕೃಪೆ ಯಿಂದ ಹಂಡೆ ಹನುಮಪ್ಪನಾಯಕನನ್ನು ಸಹಾಯಕ್ಕೆ ಬರಮಾಡಿಕೊಂಡನು.

ಹಂಡೆ ಹನುಮಪ್ಪನಾಯಕನ ಸಕಾಲಿಕ ನೆರವಿನಿಂದ ರಾಮರಾಯನು ತಿಮ್ಮಯ್ಯನ ಬಂಡಾಯ ಮುರಿದು ವಿಜಯನಗರನ್ನು ಸ್ವಾಧೀನಪಡಿಸಿಕೊಂಡನು. ತರುವಾಯ ಹನುಮಪ್ಪನಾಯಕ ನಿಜಾಂ ಪಾದುಷಹನನ್ನು ಕೈಸೆರೆ ಹಿಡಿದು ರಾಮರಾಯನಿಗೆ ಒಪ್ಪಿಸಿದನು. ಇದರ ಫಲವಾಗಿ ಹನುಮಪ್ಪನಾಯಕನು ವಿಜಯನಗರದ ಮಾಂಡಲಿಕನಾದನು. ಈತನ ಪರಾಕ್ರಮಕ್ಕೆ ಮೆಚ್ಚಿದ ರಾಮರಾಯನು ಹನುಮಪ್ಪನಿಗೆ ನಂದ್ಯಾಲ ಬುಕ್ಕರಾಯಸಮುದ್ರ, ಧರ್ಮಾವರ, ಕಣೇಕಲ್ಲು, ಬಳ್ಳಾರಿ, ಕುರಗೋಡ ಗ್ರಾಮವನ್ನು- ಉಂಬಳಿ ಹಾಕಿಕೊಟ್ಟ. ಈ ಮನೆತನದವರು ಮೊದಲು ಬುಕ್ಕರಾಯ ಸಮುದ್ರವನ್ನು ತಮ್ಮ ಕೇಂದ್ರಸ್ಥಳವನ್ನಾಗಿ ಸಿಕೊಂಡರೆ ಕಾಲಾಂತರದಲ್ಲಿ ಅನಂತಪುರವನ್ನು ತಮ್ಮ ರಾಜಧಾನಿಯನ್ನಾಗಿಸಿಕೊಂಡು ಆಳಿರುವರು.

ನವಾಬ ಮಹಮ್ಮದ ಆದಿಲಶಹ (ಕ್ರಿ.ಶ. 1625-56) ಸೈನ್ಯದಲ್ಲಿ ವಜೀರನಾಗಿದ್ದ ಹನುಮಂತಭೂಪಾಲರ ವ್ಯಕ್ತಿತ್ವವನ್ನು ತೆಲುಗು ಕೃತಿಯೊಂದು

ಚಂಡ ಪ್ರೌಢಿಮನಾಮಹೀಪತಿ ನಿಚ್ಚಲ್ ಮೆಚ್ಚುಸೇರ್ಯವಜೀರುಂಡ್ಶೈ . ಸಂಪದಲುಲ್ಲಸಿಲ್ಲಗನು ದೋಭ್ರ್ರಾಯಿಪ್ಪ ಶೌರ್ಯಾಢ್ಯುಡೈ
ಹಂಡೇವಂಶಕೂಲಾಬ್ಧಿ ಚಂದ್ರುಡನ ವಿಖ್ಯಾತಿ ಮಹಾವೈಭವೂ
ದ್ದಂಡುಂಡೈ ಹನುಮಕ್ಷಿತೀಶುಡಲರ್ಥ ಧರ್ಮ ಪ್ರಭಾವಂಬುಲರ್॥

(ಶ್ರೀ ಶೈಲಪಂಡಿತರಾಧ್ಯ ಚರಿತ್ರೆ - 4-39)

ಎಂದು ವಿವರಿಸಿದೆ. ವಜೀರ ಹನುಮಕ್ಷಿತೀಶನ ಮೂಲಕ ಕರಿಬಸವದೇಶಿಕೇಂದ್ರ ಶಿವಾಚಾರ್ಯರ ಪ್ರಭಾವವನ್ನು ಅರಿತ ಆದಿಲಶಹನು ಅವರನ್ನು ಉತ್ಸವಪೂರ್ವಕ ನಗರಕ್ಕೆ ಬರಮಾಡಿಕೊಂಡು ಇಸ್ಲಾಂ ಧರ್ಮದ ಶ್ರೇಷ್ಠತೆಯನ್ನು ಹೊಗಳಿ ಪರೀಕ್ಷೆಯೊಂದನ್ನು

ಡಿಸಿದನು. ಈ ಪರೀಕ್ಷೆಯಲ್ಲಿ ಸ್ವಾಮಿಯವರು ಗಳಿಸಿದ್ದುದಕ್ಕೆ ನವಾಬ ಮೂಕವಿಸ್ಮಿತನಾಗಿ ಅವರಿಗೆ ದೂ ಫಕೀರ' ಎಂಬ ಬಿರುದುಕೊಟ್ಟು ರ್ಸು'ಗಳನ್ನು ನೆರವೇರಿಸಿ ತಮ್ಮ ಕುಲಕ್ಕೆ ಂಧಿಸಿದ 'ಕಾಟಿಪಾವಡ' ಮೊದಲಾದ ದುಗಳನ್ನು ಕೊಟ್ಟಿರುವನು. ಆಗ ಕರಿಬ ದೇಶಿಕೇಂದ್ರರ ಯೌಗಿಕ ಶಕ್ತಿಗೆ ಮೆಚ್ಚಿದ ವಜೀರ ಮ ಭೂಪಾಲ ಗುರುಗಳಿಗೆ ಅನೇಕ ನಗಳನ್ನಿತ್ತು ಪೂಜಿಸಿ ಬೀಳ್ಕೊಟ್ಟನು.

ಹೀಗಾಗಿ ಕರಿಬಸವದೇಶಿಕೇಂದ್ರ ಅನುಜ್ಞೆಯ ರೆಗೆ ವಿಜಾಪೂರದ ಮಹಮ್ಮದ ಆದಿಲಶಹನು ತೆ ಹನುಮಕ್ಷಿತೀಶನನ್ನು ಅನಂತಪುರದ ಒಡೆಯನ ನೇಮಿಸಿದನು. ಗುರುಗಳವರು ಹಂಡೆ ವಂಶೋ ಕರಾಗಿ ನಿಂತು ಆತನಿಗೆ ಪಟ್ಟಗಟ್ಟಿದರು.

ತೇವಂಶ ಕಿರೀಟಮ್ಮೈ ತೆಲಯು ಹೃದ್ಯಶ್ರೀ
ಾಪಾಹೃತೋದ್ದಂಡಾರಾತಿ ಧರಾಧಿನಾಥುಡುಯಿ ಸತ್ಯ
ಫವೌದಾರ್ಯದ ಕ್ಸುಂಡ್ಡೆ ಕೀರ್ತಿವಹಿಂಚಿನಟ್ಟಿ
ುಮಕ್ಷೋಣೀಂಶು ಧರ್ಮಾಡ್ಯುಡೈಯುಂದರ್ ಬಟ್ಟ
ಗಟ್ಟಿ ತತ್ಪುರಿನಿ ನಿತ್ಯೋಲ್ಲಾಸಮುಲ್ಮೀರರ್ಗ.

(ಶ್ರೀ ಶೈಲ ಪಂಡಿತಾರಾಧ್ಯ ಚರಿತ್ರೆ, 4-146)

ಅಂದಿನಿಂದ ಅನಂತಪುರಕ್ಕೆ 'ಹಂಡೆ ಅನಂತಪುರ ಬ ಹೆಸರು ಬಂದಿತು. ಆಗಾಗ್ಗೆ ಹಂಡೆ ವಂಶೀಯ ಮುಸ್ಲಿಮರಿಂದ ಬಂದೊದಗುತ್ತಿದ್ದ ಅನೇಕ ಂದರೆಗಳನ್ನು ಈ ಪೀಠಾಧೀಶ್ವರರು ಪರಿಹರಿಸಿ ಾಡಿದ ಹೇರಳ ಉದಾಹರಣೆಗಳು ಸಿಗುತ್ತವೆ.

ಕ್ರಿ.ಶ. ಸುಮಾರು 1690ರಿಂದ 1720ರ ವರೆಗೆ ಂತಪುರವನ್ನಾಳುತ್ತಿದ್ದವನು ಹಂಡೆ ಮನೆತನದ ನ್ನಪ್ಪನಾಯಕ. ಈತನನ್ನೇ ಕೆಲವು ಕೃತಿಗಳು ಯು ಪವಾಡಪ್ಪನೆಂದು ಕರೆದಿವೆ. ಈತನಿಗೆ ಕುಷ್ಠ ೀಗವು ಪ್ರಾಪ್ತವಾಗಿರಲು ಯಾವ ಚಿಕಿತ್ಸೆಯಿಂದಲೂ ನ್ನು ವಾಸಿ ಮಾಡಲಾಗಿರಲಿಲ್ಲ. ಆತನು ಕರಿಬಸ ದ್ರರ ಪ್ರಭಾವ ಕೇಳಿ ಅವರನ್ನು ಬರಮಾಡಿ ಡನು. ಅರಮನೆಯ ಪಕ್ಕದಲ್ಲಿಯೆ ಹಿರಿಯರು ಸಿಕೊಟ್ಟದ್ದ ಶಾಖಾಮಠದಲ್ಲಿ ಸ್ವಾಮಿಗಳು ಬೀಡಾರ ಡಿದರು. ಪ್ರತಿನಿತ್ಯವೂ ಅವರು ಅನುಗ್ರಹಿಸಿದ ವನ್ನು ನಾಯಕನು ಶರೀರಕ್ಕೆ ಲೇಪನ ಮಾಡಿ ಡು, ಅವರ ಸೇವೆಯಲ್ಲಿ ನಿರತನಾದನು.

ವಿಮಲಾತ್ಮುಡಿಚ್ಚಿನ ವಿಭೂತಿಧರಿಯಿಂಚಿ
ನಿತ್ಯಂಬು ಗುರುವುಲ ನೇಮಮುಗನು
ಕೊಲ್ಚುಚುಂಡಾಗಾ ಕುಷ್ಠರೋಗಮು ಬಾಸಿ
ವಜ್ರಕಾಯಂಬೈನವಾನಿಚೂಚಿ॥
ನವ್ಯ ಮಣಿಮಯ ಭೂಷಣಾಂಬರಮುಲೊಸಗಿ
ಕೊನ್ನಿಗ್ರಾಮುಂಬುಲರ್ಪಿಂಚಿ ಕುತುಕಮಲರ
ಅಂದಲಂಬನು ವಸ್ತುವಾಹನಮುಲಿಚ್ಚಿ
ಯಂಗನಯು ತಾನು ಸಾಷ್ಟಾಂಗಮಾಚರಿಂಚಿ॥

(ಶ್ರೀ ಶೈಲ ಪಂಡಿತಾರಾಧ್ಯ ಚರಿತ್ರೆ – 5-68)

ಆತನ ಕುಷ್ಠರೋಗವು ವಾಸಿಯಾಗಿ ನಾಯಕನು ನಿರೋಗಿಯಾದನು. ಪ್ರಸನ್ನಪ್ಪನಾಯಕನು ವಿಶೇಷ ಶ್ರದ್ಧಾಭಕ್ತಿಯಿಂದ ಗುರುವಿಗೆ ನವ್ಯ ವಸ್ತ್ರಭೂಷಣವನ್ನು ಕೆಲವು ಗ್ರಾಮಗಳನ್ನು ಕೊಟ್ಟು ಗೌರವಿಸಿದನು ಎಂದು ತೆಲುಗು ಪದ್ಯ ಹೇಳಿದೆ.

ಹಂಡೆ ಪ್ರಸನ್ನಪ್ಪನಾಯಕನ ತಮ್ಮ 2ನೆಯ ಪವಾಡಪ್ಪ ನಾಯಕ. ಕ್ರಿ.ಶ. 1770ರ ಸುಮಾರಿಗೆ ಅನಂತಪುರವು ಕಡಪನವಾಬರ ಆಡಳಿತಕ್ಕೆ ಒಳಪಟ್ಟಿತು. ಪ್ರತಿವರ್ಷವೂ ಪವಾಡಪ್ಪ ನವಾಬರಿಗೆ ಕಪ್ಪಕಾಣಿಕೆ ಕಳಿಸುತ್ತಿದ್ದನು. ಪವಾಡಪ್ಪನ ಆಸ್ಥಾನದಲ್ಲಿದ್ದು 'ರಾಮಾಜಿ' ಎಂಬ ಒಬ್ಬ ಅಧಿಕಾರಿಯು ನವಾಬನ ಪ್ರಭಾವಕ್ಕೆ ಒಳಗಾಗಿ ರಾಜ್ಯವನ್ನು ನವಾಬರಿಗೆ ವಶಪಡಿಸಿಕೊಡಲು ಯೋಚಿಸಿದನು.

ರಾಮಾಜಿ ಪ್ರೇರಣೆಯಂತೆ ನವಾಬನು ಕೆಲವು ಸೈನ್ಯವನ್ನು ಕಳಿಸಿದನು. ಸೇನಾನಿಗಳು ಪವಾಡಪ್ಪನನ್ನು ಬಂಧಿಸಿದರು. ಭಾವಮೈದುನ ಚನ್ನಬಸಪ್ಪನ ಮೂಲಕ ಪವಾಡಪ್ಪ ಈ ಕಷ್ಟದಿಂದ ತನ್ನನ್ನು ಪಾರುಮಾಡಲು ಗುರುಗಳಿಗೆ ಬೇಡಿಕೊಂಡನು. ಗುರುಗಳು ಚನ್ನಬಸಪ್ಪನೊಡನೆ ಅನಂತಪುರಮಠಕ್ಕೆ ಆಗಮಿಸಿದರು. ಅರಮನೆಯ ಪಕ್ಕದಲ್ಲಿದ್ದ ಗುರುಮಠದ ಹಿಂದೆ ಒಂದು ಬಾಗಿಲು ಇತ್ತು. ಹುಲ್ಲುಹೊರೆಗಳಲ್ಲಿ ಕತ್ತಿಕಠಾರಿಗಳನ್ನು ಅಡಗಿಸಿಕೊಂಡು ಸಿಪಾಯಿಗಳು ಮಠದಲ್ಲಿ ಸೇರಿದರು. ಪವಾಡಪ್ಪನಿಗೆ ಅನ್ನಕೊಟ್ಟು ಬರುತ್ತಿದ್ದ ಸೇವಕಿಯ ಮೂಲಕ ರಹಸ್ಯವನ್ನು ಅರಿತ ಆತನು ದಿಡ್ಡಬಾಗಿಲಿನ ಮೂಲಕ ಮಠಕ್ಕೆ ಬಂದು ತಲೆ ಮರೆಯಿಸಿಕೊಂಡನು. ಮಠದಲ್ಲಿದ್ದ ಸೈನಿಕರಿಗೂ ನವಾಬನ ಸೈನ್ಯಕ್ಕೂ ಹೋರಾಟವಾಯಿತು. ನವಾಬನ ಬಹುಸಂಖ್ಯೆಯ ಸೈನಿಕರು ಹತರಾದರು. ಉಳಿದವರೆಲ್ಲ ಕಾಲ್ತೆಗದರು. ಇದಕ್ಕಾಗಿ ಪವಾಡಪ್ಪ ಅಜೀವ ಪರ್ಯಂತ ಗುರುಗಳಲ್ಲಿ

ವಿಶೇಷ ಶ್ರದ್ಧಾಭಕ್ತಿಯುಳ್ಳವನಾದನು. ಈ ಸಂದರ್ಭವನ್ನು ಕುರಿತು ಧರ್ಮಾವರದ ಸೀರಿಪಿ ಅಂಜನೇಯಲು ಎಂಬ ಕವಿಯು ತಮ್ಮ 'ಕರಿಬಸವಸ್ವಾಮಿ' ಎಂಬ ಕೃತಿಯಲ್ಲಿ ಈ ವಿಷಯ ತಿಳಿಸಿರುವುರು.

ಹಂಡೇಯನಂತ ಪುರಾಖ್ಯಲಕ್ಷ್ಮಿನಿ ಪವಾ
ಡಪ್ಪನಾಯಕುಡು ಕ್ಷಯಿನುದಿನಪುಡು
ಸ್ವಾಮಿ ವಿದ್ರೋಹಿಯೈ ರಾಮಾಜಿನ್ನಪುನಿ ಸಂ
ಸ್ಥಾ ನಂಬಗೋಲ್ಪಿಟ ಬೂನಿನಪುಡು
ಕಡಪ ಸೇನಲು ಕಡುನೊಂದಿ, ದೊರನೇಮ
ರಿಂಚಿ ಯೊಂಟರಿಗ ಬಂಧಿಂಚಿನಪುಡು
ಕೋಟಲುತಲ್ಪುಲು ಮಿತ್ರ ಕೂಟಗುರಿಸಿ ಮಿರಿ
ತುರುಕ ಮೂಕಲ ತೋಡ ಚೆರಸಿನ ಪುಡು
ತನ ಮಹಾಮಂತ್ರ ಶಕ್ತಿನೇರ್ಪುನ, ದದೀಯಾ
ಯವನ ಸೇನನು ಡುನಿಮಿ, ನಾಯಕುನಿಬ್ರೋಚ
ಲಲಿನಿ ರಾಜಭಕ್ತಿ ಬೂರ್ಣ ಲಕ್ಷ್ಮಮುಗುಚು
ಮೋಕ್ಷನರೆ ಕರಿಬಸವಸ್ವಾಮಿ ಮೋಕ್ಷಕಾಮಿ॥
(ಶ್ರೀ ಶೈಲಪಂಡಿತಾರಾಧ್ಯ ಚರಿತ್ರೆ)

ನಾಗಸಂದ್ರಂ ವಾಸುದೇವರಾವ್ ಅವರ 'ಅನಂತ ಪುರ ಮಂಡಲ ಚರಿತ್ರಕಥಲು' ಎಂಬ ಕೃತಿಯಲ್ಲಿ, ಕೊರಟಿ ಶ್ರೀನಿವಾಸ ಅವರ ನಿಡುಮಾಮಿಡಿ (ಪಾಳೆಯ ಗಾರರ ಕತೆಗಳು) ಶಿರೋನಾಮೆ ಕತೆಗಳಲ್ಲೂ ಈ ಗುರುಗಳು ಅನಂತಪುರದ ಪವಾಡಪ್ಪ ನಾಯಕನನ್ನು ಬಂಧವಿಮುಕ್ತಿಗೊಳಿಸಿದ ಸಂದರ್ಭವನ್ನು ಉಲ್ಲೇಖಿ ಸಿರುವರು.

ಹಂಡೆ ಪ್ರಸನ್ನಪ್ಪನ ಮಗ ರಾಮಪ್ಪನಾಯಕ, ಈತನು ತನ್ನ ಚಿಕ್ಕಪ್ಪನಾದ ಪವಾಡಪ್ಪನ ರಾಜ್ಯಭಾರ ಕಾಲದಲ್ಲಿ ಹೊಸೂರಿನಲ್ಲಿದ್ದನು. ಪವಾಡಪ್ಪನ ಮಗ ಸಿದ್ದಪ್ಪನಾಯಕನೆಂಬವ ತುಂಬ ದುರ್ಮಾರ್ಗಿಯಾಗಿದ್ದ. ಆತನ ಕಾಟ ತಡೆಯಲಾರದೆ ಜನ ಹೊಸೂರಿನಲ್ಲಿದ್ದ ರಾಮಪ್ಪನನ್ನು ಕರೆತಂದರು. ರಾಮಪ್ಪನ ಆಗಮನದ ಸುದ್ದಿ ಕೇಳಿ ಬೊಕ್ಕಸದಲ್ಲಿನ ಧನವನ್ನು ತೆಗೆದುಕೊಂಡು ಸಿದ್ದಪ್ಪನು ಊರುಬಿಟ್ಟನು. ರಾಮಪ್ಪನು ಅನಂತಪುರಕ್ಕೆ ಬಂದು ತಾನೇ ಅಧಿಪತಿಯಾದನು.

ಈತನ ರಾಜ್ಯಭಾರದ ಕಾಲದಲ್ಲಿ ನಿಡುಮಾಮಿಡಿ ಶ್ರೀ ಶೈಲಪೀಠದಲ್ಲಿ ಜಗದ್ಗುರು ಮರಿಕರಿಬಸವರಾ ಜೇಂದ್ರದೇಶಿಕೇಂದ್ರ ಶಿವಾಚಾರ್ಯರು (ಕ್ರಿ.ಶ. 1756-75) ಅದಿಪತಿಗಳಾಗಿದ್ದರು. ಒಮ್ಮೆ ಅವರು ಅನಂತ ಪುರಕ್ಕೆ ಆಗಮಿಸಿದರು. ಅಷ್ಟು ಹೊತ್ತಿಗೆ ಹಂಡೆ ರಾಮವಲ್ಲಭ 'ರಾಜ್ಯಮದಾಂಧ'ನಾಗಿದ್ದ. ಈತ ಗುರು ಗಳನ್ನು ಬರಮಾಡಿಕೊಂಡು ಅವರಿಗೆ ಅನೇಕ ದುರ್ಭಾ ಷೆಗಳನ್ನಾಡಿದ. ಗುರುಗಳ ಮನಸ್ಸು ನೊಂದಿತು ಕೂಡಲೇ ಅವರು 'ನಿನಗೆ ದುರ್ಮರಣವುಂಟಾಗಲಿ' ಎಂದು ಶಪಿಸಿದರು. ಇದರ ಫಲವಾಗಿ ಕ್ರಿ.ಶ. 1752ರಲ್ಲಿ ಅವನ ಬಂಧುಗಳೇ ಅವನನ್ನು ಬಳ್ಳಾರಿ ಯಲ್ಲಿ ಕೊಂದರು.

ಗುರುಗಳನ್ನು ನಿಂದಿಸಿದ ದುರ್ಮಾರ್ಗಿ ರಾಮಪ್ಪ ನಿಗೆ ಆದ ಗತಿಯನ್ನು ಕಂಡು ಅವನ ಹೇಯ ಸ್ವಾಭಾವಕ್ಕೆ ಅರಮನೆಯ ಪರಿವಾರ ಪರಿತಪಿಸಿತು. ಎಲ್ಲರೂ ಗುರುಗಳಲ್ಲಿ ಬಂದು ಅಪರಾಧಕ್ಕೆ ಕ್ಷಮೆ ಬೇಡಿದರು. ಮುಳ್ಳುಗಿಡವಾದರೂ ಅದನ್ನು ನಾವೇ ನಟ್ಟು ಕತ್ತರಿಸಿಬಾರದೆಂದು ಬಿನ್ನವಿಸಿದರು. ಗುರುಗಳು ಕೃಪೆ ದೋರಿ ರಾಮಪ್ಪನ ಮಗ ಸಿದ್ಧರಾಮಪ್ಪನಾಯಕ ನಿಗೆ ಕ್ರಿ.ಶ 1753ರಲ್ಲಿ ಪಟ್ಟಾಭಿಷೇಕ ಮಾಡಿದರು. ಈ ಸನ್ನಿವೇಶವನ್ನು

ಪುರಮ್ಲು ಪಾಲಿನ ಸೇಯುನು
ಸುರುಚಿರಮುಗ ರಾಮವಿಭುನಿ ಸೂನುಂಡನುರ್ಚು
ಪುರಜನುಲಂದರು ಚೂಡಗ
ಪರಮಾನಂದಂಬುತೋಡ ಪಟ್ಟಮುಗಟ್ಟೇ॥
ಎಂದು ವಿವರಿಸಲಾಗಿದೆ.

ಹೀಗೆ ಹಂಡ ಪಾಳೆಯಗಾರರಿಗೆ ಸಂಬಂಧಪಟ್ಟಂತೆ ಸುಮಾರು 4 ತಲೆಮಾರಿನ ಇತಿಹಾಸವನ್ನು ತೆಲಗು ಕವಿ ಮಲ್ಲಯ್ಯ ತನ್ನ ಶ್ರೀಶೈಲ ಪಂಡಿತಾರಾಧ್ಯ ಚರಿತ್ರೆ ಯಲ್ಲಿ ತುಂಬ ಅಚ್ಚುಕಟ್ಟಾಗಿ ಸಂಗ್ರಹಿಸಿ ಕೊಟ್ಟಿರುವನು. ಹೀಗೆ ಹಂಡೆ ಪರಂಪರೆಯಲ್ಲಿ ದೊರಕುವ ಹಲವು ಘಟನೆಗಳು ಐತಿಹಾಸಿಕ ದೃಷ್ಟಿಯಿಂದ ಉಪಯು ಕ್ತವಾಗಿವೆ.

ಕೆಳದಿ ವೆಂಕಟೇಶ್

# ೦ದಕರಿನಾಯಕನ ಕಾಲದ 'ಆಯಗಾರರ ನಿರ್ಣಯ ಗ್ರಂಥ'

ಚಿತ್ರದುರ್ಗದಲ್ಲೆ ಆಳಿದ ಮದಕರಿನಾಯಕನ ೦ದ 'ಅಯಗಾರರ ನಿರ್ಣಯ ಗ್ರಂಥ' ಎಂಬ ೨ತ್ರಿಕ ದಾಖಲೆಯೊಂದನ್ನು ಪುಣೆ ವಿಶ್ವವಿದ್ಯಾಲ ದ ಪ್ರಾಧ್ಯಾಪಕ ಡಾ॥ ಚಿಟ್ನೀಸ್‌ರವರ ಮಾರ್ಗದರ್ಶ ಲ್ಲಿ ಡಾ॥ಹೆಚ್.ಟಿ.ದೇಶಪಾಂಡೆಯವರು ತಮ್ಮ ತ್ರದುರ್ಗ ಸ್ಟೇಟ್'[1] ಎಂಬ ಅಪ್ರಕಟಿತ ಮಹಾ ಂಥದಲ್ಲಿ ಸಾದರಪಡಿಸಿದ್ದು ಈ ಕೃತಿಯು ೀಯ ಸಂಸ್ಥಾನದ ಆರ್ಥಿಕ, ಸಾಮಾಜಿಕ ಹಾಗೂ ಸ್ಕೃತಿಕ ಇತಿಹಾಸದಲ್ಲೆ ವಿನೂತನ ಬೆಳಕನ್ನು ಲು ಆಕರ ಗ್ರಂಥವಾಗಿದೆ. ಇದನ್ನು ನನ್ನ ಲೇಖನ ಉಪಯೋಗಿಸಿಕೊಳ್ಳಲು ಅನುಮತಿ ನೀಡಿದ ಚಿಟ್ನೀಸ್ ಹಾಗೂ ಡಾ। ದೇಶಪಾಂಡೆರವರಿಗೆ ಜ್ಞತೆ ಸಲ್ಲಿಸುವೆನು.

ಆರಂಭದಿಂದ 13 ಪತ್ರದವರೆಗೆ ಕನ್ನಡ ಭಾಷೆ ಲ್ಲಿರುವ ಈ ಕೃತಿಯು ಹಳ್ಳಿಗಳ ಸ್ವಾವಲಂಬನೆಗೆ ನ ದೇಶೀಯ ಸಂಸ್ಥಾನಗಳು ನೀಡಿದ ಪ್ರಮುಖ ರಣೆಗಳು ಗಮನಾರ್ಹವಾಗಿದೆ. ಕ್ರಿ.ಶ.1594 ನ 1762ರವರೆಗಿನ ಗ್ರಾಮಾಡಳಿತದ ದಾಖಲೆಗಳು, ತ್ತು ತಿಮ್ಮಪ್ಪನೇ ಹೇಳಿ ಬರೆಸಿದ ಸಂಗತಿಗಳು ಗೂ ಕೊಟ್ಟ ಗ್ರಾಮಗಳು, ಹಿರಿಯ ಭರಮಪ್ಪ ಯಕನ ಪಟ್ಟದ ಕಾಲ, ಗುಂಟನೂರ ಮಲ್ಲಪ್ಪನಿಗೆ ನಾನಿತನ ಬಂದ ಬಗ್ಗೆ ಹಳೇಪೈಕದ ರಾಮನು ೋತ್ಸವ ಕಾಲದಲ್ಲಿ ವ್ಯಾಜ್ಯ ಬಂದಿದ್ದನ್ನು ಭರ್ಮಪ್ಪ ಯಕನ ಸಮ್ಮುಖದಲ್ಲೆ ತೀರ್ಮಾನವಾದ ಸಂಗತಿ, 94 ರಲ್ಲಿದ್ದ ಪ್ರಧಾನ ಅಪ್ಪರಸಯ್ಯನ ಸಂಗತಿಗಳು, ಗಲ್ಲು ದೊರೆ ಮುಮ್ಮಡಿ ವೀರತಿಮ್ಮಣ್ಣನಾಯಕರು, ಡ್ಡೇರಿ ಪಟಡಿಬೊಮ್ಮನ ಕುಂಟೆ ಗ್ರಾಮವನ್ನು ಹಾರ ಪೂರ್ವಕ ಬಕ್ಸಿಕೊಟ್ಟ ನಿರೂಪಗಳು ಇವು ನ್ನು ತುಲನಾತ್ಮಕವಾಗಿ ವಿವೇಚಿಸಿದಾಗ ಸಮಕಾ ನ ಇತಿಹಾಸದಲ್ಲಿ ಪರಸ್ಪರವಾಗಿ ಹೋಲಿಕೆ ಕಂಡು ುತ್ತದೆ. ದೇಶೀಯ ಸಂಸ್ಥಾನಗಳಲ್ಲಿ[2] ಮಧ್ಯಕಾಲೀನ ಲದ ಗ್ರಾಮೀಣ ಆಡಳಿತ ಇತಿಹಾಸವನ್ನು ರೂಪಿ ು ಅಮೂಲ್ಯ ಆಕರಗಳನ್ನು ಒದಗಿಸಿವೆ.

ಲೇಖನ ವಿಸ್ತಾರಭಯದಿಂದ ಕೇವಲ ಮುಖ್ಯ ಉಲ್ಲೇಖಗಳನ್ನು ನೀಡಿ, ಅಯಗಾರರ ನಿರ್ಣಯ ಗ್ರಂಥದ ಉಲ್ಲೇಖಿಸಿದ ಸಂಗತಿಯೊಂದು ಹುಬ್ಬಳ್ಳಿ 3000 ಮಠದಲ್ಲಿರುವ ಚಿತ್ರಶೇಖರನ ಕಥೆ 130ನೇ ಓಲೆಗರಿ ಹಸ್ತಪ್ರತಿಯಲ್ಲಿ ಕಂಡು ಬಂದಿರುವುದನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಲಾಗಿದೆ.

ಕೃತಿಯ ಚಾರಿತ್ರಿಕಾಂಶಗಳು: ಆಯಗಾರರ ನಿರ್ಣಯ ಗ್ರಂಥದಲ್ಲಿರುವ ಹಲವು ಮುಖ್ಯಾಂಶಗಳನ್ನು ಇಲ್ಲಿ ನಿರೂಪಿಸಲಾಗಿದೆ. ಲೇಖನ ವಿಸ್ತಾರದ ಭಯ ದಿಂದ ಅದನ್ನು ಸಂಕ್ಷೇಪಿಸಲಾಗಿದೆ.

1. ಚಿನ್ಮೂಲಗಿರಿದುರ್ಗದ ಆಯಗಾರ ವಿವರ, ವಿವರ ಜನ 12ಕ್ಕೆ ನಿಜ ಆಯಗಾರರು. 2. ಜೋಯಿಸ. 3. ಮಠದೈಯ್ಯ. 4. ಅಕ್ಕಸಾಲೆ. 5. ಚಿತ್ರದುರ್ಗದ ತಳವಾರಿಕೆ 6. ಪುಜಾರಿಕೆ.[3]

7. ಶಾ.ಶ.1627ನೇ ಬಹುಧಾನ್ಯ ಸಂವತ್ಸರದ ಚೈತ್ರ ಮಾಸದಲ್ಲಿ ಭರಮಪ್ಪನಾಯಕರ ದಿವಸದಲ್ಲಿ ಯೇಕನಾತಮ್ಮನ ಪಾದದ ಗುಡಿಯನ್ನು ಕಟ್ಟಿಸಿ ಕೆಳಗ ಣಪೇಟೆಯಲ್ಲಿ ರಥೋತ್ಸವದ ಬಂಡಿ, ಸಿಹಿ ಮಾಡಿಸುವಾಗ್ಗೆ ಹಳೇಪೈಕದ ರಾಮಗುಪ್ಪಡಿಗನು ಕೊಂಡಿ(?) ಪೂರ್ವತ್ರವಾಗಿ ವ್ಯಾಜ್ಯ ಬಂದದ್ದರಿಂದಾ ರಾಜೇಶ್ರೀಗಳ ಮುಂದೆ ನಿರ್ಣಯವಾಗಿ ಗೊತ್ತು ಮಾಡಿಸಿದ್ದು ವಿವರಾ.

8 (ಎ) ಚಿನ್ಮೂಲಗಿರಿ ದುರ್ಗದ ಪ್ರಧಾನಿ ಅಪ ಸ್ತಂಬ ಸೂತ್ರದ ಕಾಶ್ಯಪಗೋತ್ರದ ಪರಶುರಾಮಪ್ಪ ವಿರೂಪಾಕ್ಷ ಜೋಯಿಸರ ಮಗ ಪರಶುರಾಮಪ್ಪನ ಶ್ಯಾನುಭಾಗತನದ ಸ್ವಾಸ್ತಿಗಳು (ಕ್ರಿ.ಶ.1655ನೇ ಪ್ರಮಾಧೀಚ ಸಂವತ್ಸರದ ಮಾಗ ಬಹುಳ 10ರಲ್ಲಿ)

(ಬಿ) ಮತ್ತಿ ತಿಮ್ಮಣ್ಣಾಯ್ಕರು ಕೊಟ್ಟ ಗ್ರಾಮಗಳು[4]

9. ಚಿತ್ರದುರ್ಗದ ಶಾನುಭಾಗ ಕಾಮರಸಯ್ಯನ ತಿಮ್ಮಪ್ಪನ ಸ್ಥಳಾ.[5]

10. ಭೀಮಣ್ಣನ ಸ್ವಾಸ್ತಿ ನಿರ್ಣಯ (ಶಾ.ಶ.1680) ನೇ ಕಾಳಯುಕ್ತಿ ನಾಮ ಸಂವತ್ಸರದ ಕಾರ್ತಿಕ ಶುದ್ಧ. 11)[5]

11. (ಎ) ಚಿತ್ರದುರ್ಗದ ಪ್ರಧಾನ ತಿಪ್ಪರಸಯ್ಯನ ರಾಮಪ್ಪನ ಸ್ಥಲ ಗ್ರಾಮಗಳು (ಸಾಮುಂದ್ರಾ) ಭರ ಮಸಾಗರದದ ಸ್ಥಳದ ಗ್ರಾಮಗಳ ವಿವರಾ.

(ಬಿ) ಈತನ ದೌಹಿತ್ರನಾದ ಹಳಿಯೂರ ಮಲ್ಲ ಪ್ಪನ ಮಗ ತಿಮ್ಮಣ್ಣಗೆ ಧಾರಾಪೂರ್ವಕವಾಗಿ 1771ನೇ ಸೌಮ್ಯ ಸಂವತ್ಸರದಲ್ಲಿ ದಾನಪತ್ರ ಬರೆಸಿ ಕೊಟ್ಟ ಗ್ರಾಮಗಳು....ಗೌಡಿಕೆ ಸಹಾ ವುಭಯತ್ರ ಮನೆ ತನದವರುಸಹ ಸಮನಾಗಿ ಅನುಭವಿಸಿಕೊಂಡು ಹೋಗಬೇಕೆಂಬುದಾಗಿ 1771ನೇ ಸೌಮ್ಯ ಸಂವತ್ಸರ ದಲ್ಲಿ ಬರೆಸಿಕೊಟ್ಟಿದೆ.

12. ಹಿರೆಮಲ್ಲನ ಹೊಳೆ ಸಕ್ರಪ್ಪನು ತೀರಿಹೋದ ಮೇಲೆ ರಾಯದುರ್ಗದ ಸೀಮೆಯಿಂದಾ ಇವರ ವಕ್ಕಲು ಹನುಮಂತ ಯೆಂಬಾತನು ಜಕ್ಕಮಲ್ಲನ ಹೊಳೆಯಲ್ಲಿ ನಿಂತು ಸಕ್ರಪ್ಪನ ಮಗ ತಿಮ್ಮಪ್ಪನ ಕೇಳಿ ಕೊಂಡು ಶ್ಯಾನುಭಾಗತನ ಮಾಡಿಕೊಂಡಿದ್ದ ಗ್ರಾಮ ಗಳೂ.....

13. (ಎ) ಭರಮಣ್ಣನಾಯಕನ ದಿವಸಕ್ಕೆ ಕೊಟ್ಟ ಗ್ರಾಮಗಳು, ವಾತಿರಾಮಣ್ಣನ ಸ್ಥಳ, ಭಾರದ್ವಾಜ ಗೋತ್ರದ ಪುಟ್ಟಯ್ಯನ ಸ್ಥಳ, ಗೊಡಚಿ ಹಾಳುಪಟಡಿ ಕಾಶ್ಯಪಗೋತ್ರದ ತಾಳ್ಯದ ಶಾನುಭೋಗ ಚಿಕ್ಕಪ್ಪನ ಸ್ಥಳ ಪಟ್ಟಡಿಕೆ, ಗ್ರಾಮ 18 ತಾಳ್ಯದ ಪಟ್ಟಡಿಕೆ, ಹೊರಿಕೆರೆದೇವರ ಪುರದ ಪಟಡಿ, ಕ್ಕೆ ಗ್ರಾಮ 32, ಬಾದರಾಯಣಗೋತ್ರದ ರಘುಪ್ಪಯ್ಯ ಹಳ್ಳಿ, ತಿಮ್ಮ ಪ್ಪನ ಸ್ಥಳ, ಹೊಳಲಕೆರೆ ಪಟಡಿ, ಶಾನುಭಾಗ ಸಂಕಪ್ಪ ಕರಿಯಪ್ಪನ ಸ್ಥಳ ಜಾನಕಲ್ಲು ದೇವಪುರ ಸಹಾ ಗ್ರಾಮ 30 – ಹಡದೆ ಶಾನುಭಾಗ ಪುಟ್ಟಣ್ಣನ ಸ್ಥಳ ಅಸಗೋಡು ಶಾನುಭಾಗ ಚನ್ನಪ್ಪನ ಸ್ಥಳ – ಪ್ರಥಮ ಶಾಖೆ.[6] ರಂಗಪ್ಪನ ಸ್ಥಳಾ – ಮಾಯಕೊಂಡ ಯೆಮಾ ಗನೂರು ಸಹಾ ಪಟಡಿ ಗ್ರಾಮ ಮಾಯಕೊಂಡ ಪಟಡಿ–27, ಯೆಮಿಗನೂರು ಪಟಡಿ-9.

(ಬಿ) ಯಾ ಸ್ಥಳವನ್ನು ಬಿಟ್ಟು ಪರಶುರಾಂಪುರದ ನದಿದಂಡೆಗೆ ಸೇರಿದ್ದರಿಂದಾ ಆ ಗ್ರಾಮದ ಗವುಡ ಶಾನುಭಾಗರು ಬಹಳ ಪ್ರೀತಿಯಿಂದಾ ಮಠವನ್ನು ಕಟ್ಟಿಸಿಕೊಟ್ಟು ಇಟ್ಟುಕೊಂಡ ತರುವಾಯ ಈ ಚೆನ್ನಮ ಲ್ಲಪ್ಪಗೆ ವೃದ್ಧಾಪ್ಯವಾಗಿ ಶಾನುಭಾಗತನ ನೋಡುವವರು ಗತಿಯಿಲ್ಲದ್ದರಿಂದಾ ಮಾದಿಹಳ್ಳಿ ಲಕ್ಷ್ಮಪ್ಪನು ಕಣಕುಪ್ಪೆ ಯಲ್ಲೂ, ಕಂದಾಚಾರದ ಸಬ್‌ನೇಸಿಕೆ ಮಾಡಿಕೊಂಡಿ ದ್ದಲ್ಲಿ ಲಕ್ಷ್ಮಮಪ್ಪ ಈತನ ಮಗತಿಮ್ಮಣ್ಣಗೆ ಹೇಳಿದ್ದು ನನಗೆ ವೃದ್ಧಾಪ್ಯಕಾಲ ನನ್ನ ಮಗನಿಗೆ ದೇವರ ಹುಚ್ಚು ಆದ್ದರಿಂದಾ ಶಾನುಭಾಗನಕ್ಕೆ ಯಾರೂ ಇಲ್ಲಿ ಮುಂದೆ ನಮ್ಮವರು ಬಂದು ಕೆಲಸ ಮಾಡಿಕೊಂಡೆವು ಎಂದು ಕೇಳುವರಿಗೆ ನೀನು ಅನುಭವಿಸಿಕೊಂಡು ಹೋಗು ಎಂದು ಯಿಾ ನಲವತ್ತಮೂರು ಗ್ರಾಮದ ಲೆಕ್ಕಪತ್ರ ವನ್ನು ಕೊಟ್ಟು ಯಿಾ ಚೆನ್ನಮಲ್ಲಪ್ಪನು ಕುಟುಂಬ ಸಹಿ ತವಾಗಿ ಪರಶುರಾಂಪುರಕ್ಕೆ ಮಗನ ಬಳಿಗೆ ಹೋದನು. ಈ ತಿಮ್ಮಪ್ಪನು ದೇವತಾ ಮಹತ್ತಿನಿಂದಾ ಕೆಲವು ದಿವಸಯಿದ್ದು ಸ್ವರ್ಗಸ್ಥರಾದರು. ಇವರ ಮಹತ್ತು ತಿಳಿದು ಶಿವಭಕ್ತರೆಲ್ಲ ಕೂಡಿ ಸಮಾಧಾನ ಮಾಡಿದರು. ಇವರ ಹೆಂಡತಿ ಕೆಂಚಮ್ಮನು ಹರತಿ ಗ್ರಾಮದಲ್ಲಿ ಯಿದ್ದು ಸ್ವರ್ಗಸ್ಥಳಾದ್ದರಿಂದ ಹರತಿಯಲ್ಲಿ ಅವಳ ಸಮಾಧಿಯಾಯಿತು. ಈತನ ಮಗ ಕೃಷ್ಣಪ್ಪಯನು ದೇವರ ಆವೇಶದಿಂದಾ ಮಹತ್ತು ನಡಿಯುತ್ತಾ ಬಂತು, ಈತನು ಪ್ರಾಣಯಿದ್ದಾಗಲೇ ಸಮಾಧಿ ಮಾಡಿಸಿ ಅದ ರಲ್ಲಿ ಐಕ್ಯವಾದರು. ಇವರ ಮಗ ಚೆನ್ನಮಲ್ಲಪ್ಪ ದೇವ ರಿಗೆ (ದೇವತಾಪುರಂಸ್ತ?) ವುಂಟಾಗಿ ನಡಿಯುತ್ತಾ ಇದ್ದುದರಿಂದ ಚಿತ್ರದುರ್ಗದ ದೊರೆ ಮದಕರಿ ನಾಯಕರು ಚೆನ್ನಮಲ್ಲಪ್ಪನ ವಾಸಕ್ಕೆ ಕಣು ಕುಪ್ಪೆಯಲ್ಲಿ ಮಠಕಟ್ಟಿಸಿಕೊಟ್ಟು ಅಮೃತಪಡಿ ನಂದಾದೀಪಕ್ಕೆ 1678ನೇ ಧಾತು ಸಂದಲ್ಲೆ ಕ್ರಿಷ್ಣಾಪುರದ ಗ್ರಾಮವನ್ನು ಅಗ್ರಹಾರಕ್ಕೆ ನಿರೂಪ ಬರೆಸಿಕೊಟ್ಟುಯಿದ್ದಾರೆ.[7]

(ಸಿ) ಈಚೆಗೆ ಇವರ ಮಹತ್ತು ಕೇಳಿ ನಿಡಗಲ್ಲು ದೊರೆಗಳು ಮುಮ್ಮಡಿ ವೀರ ತಿಮ್ಮಣ್ಣ ನಾಯಕರು ಕರೆಸಿ ಪರಶುರಾಂಪುರದಲ್ಲಿಟ್ಟ 1684ನೆ ಚಿತ್ರಭಾನು ಸಂವತ್ಸರದಲ್ಲು ದೊಡ್ಡೇರಿಪಟಡಿ ಬೊಂಮನಕುಂಟೆ ಗ್ರಾಮವನ್ನು ಅಗ್ರಹಾರ ಪೂರ್ವಕವಾಗಿ ನಿರೂಪ ಬರ್ಸಿಕೊಟ್ಟುಯಿಟ್ಟಿರು. ಕಣುಕುಪ್ಪೆಗೆ ದೊರೆಗಳು, ದೇವ ರಿಗೆ ಬಂದಾಗ ಮಠದಲ್ಲೆ ಸಮಾರಾಧನೆ ಮಾಡಿ ಸೇವೆ ನಡೆಸುತ್ತಾ ಬಂದರು.

14(12) ಈ ಶಾನುಭಾಗತನವನ್ನು ಚೆನ್ನಮಲ್ಲ ಪ್ಪನು ಮಾಡಿಕೊಂಡಿದ್ದಲ್ಲಿ ಈತಗೆ ತಿಮ್ಮಪ್ಪಯ್ಯ ಎಂಬ ಮಗ ಹುಟ್ಟಿದ ತರುವಾಯ ಈ ತಿಮ್ಮಪ್ಪ ಯ್ಯಗೆ 1517ನೆ ಜಯ ಸಂವತ್ಸರದಲ್ಲಿ ಚಿತ್ರದುರ್ಗ ಪ್ರಧಾನ ಅಪ್ಪರಸಯ್ಯನವರ ಮಗಳು ಕೆಂಚವ್ವ ಎಂಬ

ಲ್ಲಿ ತಂದು ಲಗ್ನವಾಗಿ ಈ ತಿಮ್ಮಪ್ಪಯ್ಯನು ತಮ್ಮ ನೆ ದೇವರು ತಿರುಪತಿ ವೆಂಕಟರಮಣದೇವರಿಗೆ ಟುಂಬ ಸಹಿತವಾಗಿ ಯಾತ್ರೆ ಹೋದ್ದರಿಂದಾ ಈತನ ಗೆ ದೇವರು ಮೆಚ್ಚಿ ಸ್ವಪ್ನದಲ್ಲಿ ಬಂದು ಹೊತ್ತು ಮರ ್ಲ ತಾನೆ ನೀನಾಗಿರುತ್ತೆನೆ ಎಂದು ಮಲಗಿದ್ದ ಬಳಿ ಮಗ್ಗ ್ಲ ಚಿತ್ತ ಬನವಾಗಿ ಸಹಾ ಇದ್ದದ್ದರಿಂದಾ ಈ ಬಿರುದನು ದೆಕೊಂಡು ಸ್ಥಳಕ್ಕೆ ಬಂದು ಆಪತ್ತಿನಾರಭ್ಯ ಈ ತಿಮ್ಮ ನು ಲೌಕಿಕ ವ್ಯಾಪಾರದವ ಬಿಟ್ಟು ದೇವತಾಸೇವೆಯಲ್ಲೇ ನಸಿಟ್ಟು ತಿರುಗುತ್ತಾ ಕೇಳಿಕೊಂಡವರಿಗೆ ಮನಸಾಭೇಷ್ಟ ಸ್ವಾರ್ಥಗಳ ಹೇಳುತ್ತಿದ್ದನು.[8]

15. ಮುದ್ದಾಪುರ ಗ್ರಾಮದ ಗವುಡಿಕೆ ನಿರ್ಣಯ. ಚುವರಶೆಟ್ಟಿ ಊರವಾಲೆ ಹನುವಯ್ಯ ಶಾಲೆವಾಹ ಲ್ಲೆ ಈ ಮುದ್ದಾಪುರ ಗ್ರಾಮ ತರಿಕೆರೆ ದೊರೆಗಳ ರಾಂತ್ರ ಮೂಲಕ ಪಾಳು ಬಿದ್ದು, ಬೊಮ್ಮಂತ ಜ ಎಂಬುವನು ಸ್ಥಳ ಬಿಡದೆ ರೊಪ್ಪ ಹಾಕಿಕೊಂಡು ಟುಂಬ ಇಟ್ಟು ಇದರಲ್ಲಿದ್ದ ಪಂಚಮರಶೆಟ್ಟಿ ಊರ ಕಮ್ಮೆಯನು ದೊರೆಗಳ ಬಳಿಗೆ ಹೋಗಿ ಅರಿಕೆ ಡಿ ಮುದ್ದಾಪುರಗ್ರಾಮ ಅಬಾದು ಮಾಡಿಕೊಂಡು ಸಾದ ಕುದುರೆಗೆ ಹುರುಳಿ ದುಡಕೊಂಡು (ಡಿಕೆ ಂದ?) ಯಿ ಕರ್ತರು ಕೂಡಿ ಆ ಬಾದು ಮಾಡಿ ಂಡು ಹನುಮಂತದೇವರ ಮದ್ದಕಟ್ಟೆ ದೊಡ್ಡದಾಗಿ ಸಿಯಿದ್ದಲ್ಲೆ ಕಾಮಗಾತಿಯವರ ಸಂಸ್ಥಾನವಾದ ರೆಗಳಲ್ಲಿ ಹಾಲು(ಹಾಕುವಂಥಿ ಚೌಕರಿ ಗೊತ್ತಾದ್ದ ದಾ ಸ್ಥಳದಲ್ಲಿ ಬನುಮಯ್ಯ ಎಂಬಾತನೆ ಹೇಳಿದ್ದು ನು ನಮ್ಮವರು ಬಂದು ಬಿಡುಯೆಂದು ಕೇಳುವವ ಗ್ರಾಮದ ಗವುಡಿಗೆ ಕೆಲಸ ನೋಡಿಕೊಂಡಿದೆಂದು ಸಿದ್ದ ಈತಗೆ ಹಾಲಿನ ಹನವಯೆಂದು ಹೆಸರು.[9]

ಜಮ್ಮಾಪುರದ ಪಟಡಿ ಗ್ರಾಮ, ಲಿಂಗದಹಳ್ಳಿ ಡಿ 1ಕ್ಕೆ ಗ್ರಾಮ 13, ಮಲ್ಲನಹೊಳೆ ಪಟಡಿ 1ಕ್ಕೆ ಮ 21, ಜಮ್ಮಾಪುರದ ವೇಂಡೆಗೆ ಸಲುವ ಪಟಡಿ ಗ್ರಾಮವಾರು ವಿವರಾ. ಕಸಬೆ ಜಗಲೂರು ಪಟಡಿ 19, ಉಪಗ್ರಾಮಗಳು ಉಂಬಳಿ ಬೊಮ್ಮನಪಳ್ಳಿ ಕಾಮಗೇತಿಹಳ್ಳಿ 1ರಂಗಾಪುರ ವಶಿಷ್ಠ ಗೋತ್ರದ ದನೂರು ಮುತ್ತಕದೂರು 5. ಹೊನ್ನಪ್ಪನ ಸ್ಥಳ. ತ್ಯ: ದೇವರಹಳ್ಳಿ 1 -12.[10]

3000 ಮಠದ ಓಲೆಗರಿ ಉಲ್ಲೇಖನದ ಸಮೀಕ್ಷೆ.

ಹುಬ್ಬಳ್ಳಿ 3000 ಮಠದ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಗ್ರಂಥದಲ್ಲಿ[11] ಪ್ರಸ್ತಾಪಿಸಿದ 130ನೆ ಚಿತ್ರಶೇಖರನ ಕಥೆ ಓಲೆಗರಿ (ತಾಳಿಯೋಲೆ ಹಸ್ತಪ್ರತಿಕೆ) ಯಲ್ಲಿ ರಾಕ್ಷಸ ನಾಮ ಸಂವತ್ಸರದ ವೈಶಾಖ ಬಹುಳ 14 ಸ್ಥಿರವಾರದಲ್ಲೂ ಬಿಳಿಚೌಡ, ಸ್ಥಳದ ಶಾನುಭೋಗರಾದದ ಗಿರಿಯಪ್ಪನವರ ಮರ್ರಿಮಗನಾದ ಮಲ್ಲಣ್ಣನು ಬರದ ಚಿತ್ರಶೇಖರ ಸೋಮಶೇಖರನ ಕಥೆ ಶುಬಮಸ್ತು ಎಂದಿದೆ. ಆಯಗಾರರ ನಿರ್ಣಯ ಕೃತಿಯಲ್ಲಿ ತಿಮ್ಮಪ್ಪನು ಹೇಳಿ ಬರೆಸಿದ್ದು ಎಂದು ಉಲ್ಲೇಖದ್ದಲ್ಲಿ.....

ಪತ್ರ 5: (ಸಾಲು 35 ಪುಟ 248)[12]

1. ಈ ತಿಮ್ಮಪ್ಪನು ಹೇಳಿ ಬರೆಸಿದ್ದು ನಮ್ಮ ಪೂರ್ವದ ಸ್ಥಲ ನಮ್ಮ ಹೀರೇರು ಚಿತ್ರಹಳ್ಳಿ.

2. ಯಲ್ಲೂ ಇದ್ದರು ಮೇಲೆ ಬರದಿರುವ ಮೇರೆಗೆ 13 ಪಟ್ಟಡಿಗೆ ಸೇರಿದ ಗ್ರಾಮಕ್ಕೆ ಸರ ದೇಶಾಯಿ.

3. ತನದ ಸ್ವಾಸ್ತಿ ಗ್ರಾಮಾಂತ್ರಸ್ಥಳದ ಸ್ವಾಸ್ತಿ ಉಭಯ ಅನುಭವಿಸಿಕೊಂದು ರಾಯರ್ರ ದಿವ್ವದಲ್ಲು.

4. ಚಿತ್ರಹಳ್ಳಿ ರಾಜ್ಯ ದೇಶಾಯಿತನ ಮಾಡಿ ಕೊಂಡು ಯಿದ್ದ ಇದ್ದಲ್ಲಿ ನಮ್ಮ ಹಿರೇರು ಗಿರಿಯ.

5. ಪ್ಪಯ್ಯನವರು ಹುಲ್ಲೂರು ಕೆಂಚಪ್ಪಾ ಯೆಂಬಾತಗೆ ತಮ್ಮ ಮಗಳು ಕೊಟ್ಟು ಹುಲ್ಲೂರು.

6. ಪಟ್ಟಡಿಗೆ ಸೇರಿದ ಗ್ರಾಮ 7. ಈ ಗ್ರಾಮದ ಶಾನುಭಾಗತನದ ಸ್ವಸ್ತಿಯನ್ನು ಧಾರಾಪೂರ್ವಕ.

7. ವಾಗಿ ಕೊಟ್ಟರು ಪುಟ್ಟಪ್ಪ ಎಂಬಾತನಿಗೆ ಒಬ್ಬ ಮಗಳ ಕೊಟ್ಟು ಗೊಡಬನಹಾಳು ಪಟಡಿ ಗ್ರಾಮ.

ಪತ್ರ 6: (ಸಾಲು 1, ಪು 249)[13]

1. ಗ್ರಾಮ 12 ಈ ಶಾನುಭಾಗತನದ ಸ್ವಸ್ತಿಯನ್ನು ಧಾರಾಪೂರ್ವಕವಾಗಿ ಕೊಟ್ಟರು.

2. ನಮ್ಮ ಕೃಷ್ಣಪ್ಪಯ್ಯನು ಅತ್ರೇನ ಗೋತ್ರದ ಗುಂಟನೂರ ನರಸಪ್ಪಯ್ಯಗೆ ಕಂಮಾಜಮಾ.

3. ಎಂಬ ಮಗಳ ಕೊಟ್ಟು ಗುಂಟನೂರು ಪಟ್ಟಡಿಗೆ ಸೇರಿದ ವಂಭತ್ತು ಗ್ರಾಮವನ್ನು

4. ಗುಂಟನೂರು ಕಸಬಾ ಶ್ಯಾ.ಸ್ವಾಸ್ತಿಯನ್ನು ಸಹಾ ಧಾರಾಪೂರ್ವಕವಾಗಿ ಕೊಟ್ಟರು.

5. ನಾನು ಕೊಟ್ಟದ್ದು ನಮ್ಮ ಗೋತ್ರದ ಕೇಸಾಪುರದ ತಿಮ್ಮಪ್ಪನು ನಮ್ಮ ಹೊಂದಿಕೊಂಡು.

6. ಬಹಳ ದಿವಸದಿಂದಾಯಿರ್‍ತ ಇರುವಲ್ಲಿ ಕೇಸಾಪುರದ ಪಟ್ಟಡಿ ಗ್ರಾಮವನ್ನು

7. ಧಾರಾಪೂರ್ವಕವಾಗಿ ಕೊಟ್ಟುಯಿದ್ದೇನೆ. ಇದು ಪೊರ್ತರ್ಜ ಸಮ್ಮ ತಂದೆ ಗಿರಿ

8. ಯಪ್ಪನವರು ಹದಿಮೂರು ಪಟ್ಟನಾಡ ಶಾನುಭೋಗತನ ಸ್ವಸ್ತಿಯೆಂದು ಪಟ್ಟಡಿ.

9. ಸ್ಥಳದ ಶಾನುಭೋಗತನದ ಸ್ವಸ್ತಿ ಉಳಿದರಾಜ್ಯದಲ್ಲಿ ನಾಡಶ್ಯಾನುಭಾಗತನದ

10. ವೃತ್ತಿಪತ್ತಿಯನ್ನು ಅನುಭವಿಸಿಕೊಂಡಿದ್ದಲ್ಲಿ ಅವರು ಸ್ವರ್ಗಸ್ಥರಾದರು.

11. ನಾನು ಸಣ್ಣ ಹುಡುಗ ದಳವಾಯಿ ಮುದ್ದಂಣ್ಣನ ದಿವಸದಲ್ಲಿ ನಮಗೆ ಪಾಲಕರು

12. ಯಿಲ್ಲ, ನಮ್ಮ ಬುದ್ದಿ ಆದೆವು. ದಳವಾಯಿಗಳು ನಮ್ಮ ಮೇಲೆ ಬೇಸರ ಮಾಡಿ.

13. ಪಟ್ಟಡಿ ಕೆಲಸಗಳು ಕಂಡವರಿಗೆ ಕೊಟ್ಟ ಅತಂತ್ರವಾಗಿದ್ದಲ್ಲಿ ಹಿರಿಭರ

14. ಮಪ್ಪನಾಯ್ಕರಿಗೆ ಪಟ್ಟವಾದ್ರಿಂದ ಗುಂಟನೂರು ಮಲ್ಲಪ್ಪನವರಿಗೆ ಪ್ರಧಾನಿ

15. ತನವಾದ್ದರಿಂದ ಈತನು ನಮ್ಮ ಹಿರಿಯರಿಗೆ ದೌತ್ರನಾದ್ದರಿಂದ ನನಗೆ[14]

16. ಹೆಣ್ಣು ಕೊಟ್ಟು ಇರುವುದರಿಂದ ಈಚೆಗೆ ಸ್ವಾಸ್ತಿ ಅಗ್ರಹಾರ ಮಾಡಲಾಗಿ

17. ನನ್ನ ಕಡಿಗೆ ನೇಮಕ ಮಾಡ್ಸಿವುದ್ದಾರ ಮಾಡಿದ್ದರಿಂದ ಈ ಮಲ್ಲಪ್ಪಯ್ಯನರ

18. ಸಪ್ಪಗೆ ಸಹಾ ನಮ್ಮ ಹಿರೇರು ಗುಂಟನೂರಲ್ಲು ಅರ್ಧ ಶಾನಭವಿಕೆ

19. ಕೊಟ್ಟಿದ್ದರು. ಈಗ ನಮ್ಮ ಸ್ವಾಸ್ತಿ ಅಗ್ರಹಾರ ಆಯವರ್ತನೆ ದುರ್ಗದ

20. ಕಸಬಿಗೆ ಸೇರಿದ ಗ್ರಾಮಗಳು ಮುಂತಾಗಿ ಅರ್ಧಪಾಲು ಮಾಡಿ ಕಾಗದ ಬರ್‍ಸಿ

21. ಕೊಟ್ಟು ಯೇಕಗ್ರಹಕೃತ್ಯದಿಂದ ಅನುಭವಿಸಿಕೊಂಡು ಬಂದೆವು. ಮಲ್ಲಪ್ಪ

22. ಯ್ಯನು ಸ್ವರ್ಗಸ್ಥನಾದ ಮೇಲೆ ಮುಂದೆ ಹೇಗೆ ಬಂದೀತೋ ಯೆಂದು

23. ಆದ ಮನೆಗೆ ವಪ್ಪಿಸಿದ್ದೇವೆ. ಮಲ್ಲಪ್ಪ ನರಸಪ್ಪಯ್ಯನ ಪಾಲಿಗೆ ರೊಟ್ಟಿಹಳ್ಳಿ, ಕುಟುಂಬದಹಳ್ಳಿ,

24. ಹಳಿಯೂರು ಈ ಮೂರು ಗ್ರಾಮ ಹೊರತಾಗಿ ಅರಮನೆಗೆ ವಪ್ಪಿದ್ದೇವೆ. ಈ ಪ್ರಕಾರ

25. ಸರ್ವರ ಮುಂದೆ ತಿಮ್ಮಪ್ಪನು ಬರಸಿದ್ದು, ತಮ್ಮ ಅಳಿಯ ನಿಂಗಪ್ಪ ನಮಗೆ

26. ದೌತ್ರನಾದ್ದರಿಂದ ನಾನು ಸಾಗಿ ಮುಂಜಿ ಮಾಡಿ ಮಗಳ ಕೊಟ್ಟು ಮದುವೆ ಮಾಡಿದ್ದ

27. ರಿಂದಲೂ ಈ ಲಿಂಗಪ್ಪ ತಮ್ಮ ಅಣ್ಣಗಳ ಬಿಟ್ಟು ಬಂದು ನಮ್ಮನ್ನೇ ಹೊಂದಿಕೊಂಡ ನಮ್ಮ ಮನ

28. ತನದ ಹೆಸರು ಹೇಳುವುದಕ್ಕೆ ಯಾರು ಇಲ್ಲದ್ದರಿಂದಾ ತನ್ನ ಕಡಿಯ ಮನೆಗೆ ನಮಗೆ

29. ಸಾಕು ಕೊಟ್ಟು ಹೆಸರು ಹೇಳುವುದರಿಂದಾಯಿ ಈ ಲಿಂಗಪ್ಪಗೆ ನಮ್ಮ

30. ಮನೆವಳಗೆ ಇದ್ದ ಬದುಕು ನಮ್ಮ ಸ್ವಸ್ತಿ ನಮ್ಮ ಉತ್ಪತ್ತಿ ಹೊಲ ಮನೆ ಅಗ್ರಹಾರ ಮುಂತಾಗಿ ಯರಡು,

31. ಪಾಲಿನ ಮೇರೆ ಈ ಲಿಂಗಪ್ಪನ ಸಂತಾನವು ನಮ್ಮ ಸಾಕು ಮಗನ ಸಂತಾನವು ಅನುಭವಿ

32. ಸಿಕೊಂಡು ಹೋಗಬೇಕು ಯಂದು ಸರ್ವರ
ುಂದೆ ಬರೆದ ಕಾಗದ ನಕಲು.

ಮೇಲ್ಕಂಡ ಉಲ್ಲೇಖದಲ್ಲಿ ಕಂಡಂತೆ ಚಿತ್ರಶೇಖರನ
ನೆ ಓಲೆಗರಿ ಹಸ್ತಪತ್ರಿಕೆಯಲ್ಲಿ ಬಳಿಜೇಡ ಗಿರಿಯಪ್ಪನ
ರಿ ಮಗ ಮಲ್ಲಣ್ಣನೇ ಯಕ್ಷಗಾನ ಕೃತಿಯ ಮುಲ ಕೃತಿಕಾರ ಎಂಬುದನ್ನು ಸಮರ್ಥಿಸುವುದನ್ನು ಕಂಡುಕೊಳ್ಳ ಬಹುದು. ಈ ಲೇಖನ ತಯಾರು ಮಾಡುವಲ್ಲಿ ಪೂರ್ಣ ನೆರವು, ಮಾರ್ಗದರ್ಶನ ನೀಡಿದ ಪೂಜ್ಯ ತಂದೆ ಶ್ರೀ ಗುಂಡಾಜೋಸರವರಿಗೆ ಕೃತಜ್ಞನಿದ್ದೇನೆ.

## ಅನುಬಂಧ

## ಚಾರಿತ್ರಿಕ ದಾಖಲೆಯ ಕಾಲಮಾನ ತಖ್ತೆ

| | ಕಾಲಂ ನಂ ಶಾ.ಶ. | ಕ್ರಿ.ಶ. | ನಾಯಕರ ಕಾಲ ವಿ.ವಿ |
|---|---|---|---|
| 4. | 1516ನೇ ಜಯ ಸಂವತ್ಸರ | 1594 | ತಿಮ್ಮಣ್ಣನಾಯಕ, ಓಬಣ್ಣನಾಯಕ ಪ್ರಧಾನ ಅಪ್ಪರಸಯ್ಯನವರ ಮಗಳು ಕೆಂಚವ್ವನ ವಿವಾಹವಾದುದು. |
| | ಶಾ.ಶ.1627ನೇ ಬಹುಧಾನ್ಯ ಸಂ. ದ ಚೈತ್ರ ಮಾಸ. | 1705 | ದಳವಾಯಿ ಭರಮಪ್ಪನಾಯಕನ ಕಾಲ, ಏಕನಾತಮ್ಮನ ಗುಡಿ ನಿರ್ಮಾಣ ಹಾಗೂ ರಥೋತ್ಸವ ಮಾಡಿಸಿದ್ದು |
| (ಎ) | ಶಾ.ಶ. 1655ನೇ ಪ್ರಮಾಧೀತ ಸಂ. ಮಾಗ. ಬ. ೧೦ | 1733 | ಕಸ್ತೂರಿ ರಂಗಪ್ಪನಾಯಕನ ಕಾಲ. |
| ). | ಶಾ:ಶ: 1680ನೇ ಕಾಳಯುಕ್ತಿ ಸಂ. ಕಾರ್ತೀಕ ಶುದ್ಧ॥ | 1758 | ಮದಕರಿ ನಾಯಕನ ಕಾಲ |
| 3(ಬಿ) | ಶಾ.ಶ. 1678ನೇ ಧಾತು ಸಂವತ್ಸರ | 1756 | (ಅದೇ) ಮದಕರಿನಾಯಕರು ಚೆನ್ನಮಲ್ಲಪ್ಪನ ವಾಸಕ್ಕೆ ಕಣುಕುಪ್ಪೆಯಲ್ಲಿ ಮಠಕಟ್ಟಿಸಿದ್ದು. |
| 3(ಸಿ) | ಶಾ.ಶ. 1684ನೇ ಚಿತ್ರ ಭಾನು ಸಂ | 1762 | ನಿಡಗಲ್ಲು ದೊರೆ ಮುಮ್ಮಡಿ ವೀರ ತಿಮ್ಮಣ್ಣನಾಯಕರು ಬೊಮ್ಮಕುಂಟೆ ಗ್ರಾಮ ಅಗ್ರಹಾರಕ್ಕೆ ನೀಡಿದ ನಿರೂಪ. |

## ಅಡಿ ಟಿಪ್ಪಣಿಗಳು

1. Dr. H.D.Deshpande, Chetradurga State, unpublished Thesis, Poona University.
2. 30 ದೇವತಾ ಸ್ಥಳಗಳು, 18 ವೃತ್ತಿ ನಾಮಗಳು, 155 ವ್ಯಕ್ತಿ ನಾಮಗಳು, 885 ಸ್ಥಳನಾಮಗಳು ಹೆಸರಿಸಲ್ಪಟ್ಟಿದೆ.
3. ಆಯಗಾರರ ನಿರ್ಣಯ ಪು. 246
4. ಅದೇ ಪು. 247-48
5. ಅದೇ ಪು. 249
5. ಅದೇ ಪು. 250
6. ಅದೇ ಪು. 251, 2, 3,
7. ಅದೇ ಪು. 254, 5
8. ಅದೇ ಪು. 255
9. ಅದೇ ಪು. 255
10. ಅದೇ ಪು. 256
11. ಕೆಳದಿ ಗುಂಡಜೋಯಿಸ್ (ಸಂ) ಶ್ರೀ ಜಗದ್ಗುರು ಮೂರು ಸಾವಿರ ಮಠದ ವರ್ಣನಾತ್ಮಕ ಹಸ್ತಪ್ರತಿಸೂಚಿ ೧೯೮೯, ಪು.120
12. ಆಯಗಾರ ನಿರ್ಣಯ ಪು. 248 ಸಾಲು 35
13. ಅದೇ ಪುಟ 249 ಸಾಲು 1
14. ದೌಹಿತ್ರ = ಮಗಳಮಗ

ಿ. ರಾಜಣ್ಣ,

# ...ದಿ ನಾಯಕರ ಕಾಲದ ಗ್ರಾಮಜೀವನ – ಒಂದು ವಿವೇಚನೆ

ಕೆಳದಿ ರಾಜ್ಯದ ಗ್ರಾಮಗಳು ಅಂದಿನ ಅರ್ಥ ...ಸ್ಥೆಯ ಬೆನ್ನೆಲಬಾಗಿದ್ದವು. ಆದುದರಿಂದಲೇ ಈ ...ದ ಅರಸರು ಗ್ರಾಮಜೀವನದ ಬಗೆಗೆ ಹೆಚ್ಚಿನ ...ತ್ತಿಯನ್ನು ವಹಿಸಿದರು. ಕೃಷಿ, ಗ್ರಾಮಗಳ ಆರ್ಥಿಕ ...ವನವನ್ನು ರೂಪಿಸುವುದರಲ್ಲಿ ಪ್ರಮುಖ ಪಾತ್ರ ...ಸಿತು. ಆದುದರಿಂದಲೇ ಶಿವಪ್ಪನಾಯಕ ...ಂತಾದ ಅರಸರು ಕೃಷಿಯ ಅಭಿವೃದ್ಧಿಗೆ ಅತ್ಯಂತ ...ನ ಗಮನವನ್ನು ಕೊಟ್ಟಿದ್ದರು. 'ಕೆಳದಿ ನೃಪವಿ ...' ದಲ್ಲಿ[1] ಇದಕ್ಕೆ ಸಾಕಷ್ಟು ಪುರಾವೆ ದೊರಕು ... ಇವರ ಕಾಲದ ದಾನಶಾಸನಗಳು ಅಂದಿನ ...ಮಜೀವನವನ್ನು ಪುನರ್‌ರಚಿಸಲು ಸಹಾಯಕವಾ ...ವೆ. ಇಂತಹ ದಾನಶಾಸನಗಳನ್ನು ಆಧರಿಸಿ ...ತ್ತ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ. ಈ ...ಂಧದಲ್ಲಿ ಸಂಕ್ಷಿಪ್ತವಾಗಿ ಗ್ರಾಮಜೀವನಕ್ಕೆ ಸಂಬಂಧಿ ... ಒಂದೆರಡು ವಿಷಯಗಳನ್ನು ಪ್ರಸ್ತಾಪಿಸ ...ುವುದು.

ಗ್ರಾಮಜೀವನದಲ್ಲಿ ಧಾರ್ಮಿಕ ಪ್ರಭಾವ ಅತ್ಯಂತ ...ಲವಾಗಿತ್ತು ಎಂಬುದು ಈ ಕಾಲದ ಶಾಸನಗಳಿಂದ ...ವಾಗಿದೆ. ಗ್ರಾಮಗಳಲ್ಲಿ ಪ್ರಧಾನವಾಗಿ ಎರಡು ...ೇದಗಳಿದ್ದವು. ಒಂದು ಅಗ್ರಹಾರ, ಎರಡು ಕಂದಾ ...ದ ಗ್ರಾಮಗಳು. ಅಗ್ರಹಾರಗಳಲ್ಲಿ ಬ್ರಾಹ್ಮಣರೇ ...ಗಾಗಿ ವಾಸಿಸುತ್ತಿದ್ದರು. ಅವರುಗಳು ಯಾವ ತೆರಿಗೆ ...ನ್ನೂ ಸರ್ಕಾರಕ್ಕೆ ನೀಡುತ್ತಿರಲಿಲ್ಲ. ಸದಾಶಿವಪುರ ...ಹಾರ[2], ಕೆಂಚನಹಳ್ಳಿ ಅಗ್ರಹಾರ[3], ವಿಶ್ವನಾಥಪುರ ...ಹಾರ[4], ವೆಂಕಟಪುರ ಅಗ್ರಹಾರ[5], ಭದ್ರರಾಜಪುರ ...ಹಾರ[6], ಮೂಡುಗಲ್ಲುನರಸಿಪುರ ಅಗ್ರಹಾರ[7], ...ಗೋವಿಂದಪುರ ಅಗ್ರಹಾರ[8] ಮತ್ತು ಚಂದ್ರಶೇಖರ[9] ...ಹಾರಗಳನ್ನು ಹೆಸರಿಸಬಹುದು. ಅಗ್ರಹಾರಗಳು ...ರ್ಮಿಕ ಹಾಗೂ ವಿವಿಧ ಶಾಸ್ತ್ರಗಳ ಕೇಂದ್ರಗಳಾಗಿ ...ವು. ಬ್ರಾಹ್ಮಣರಲ್ಲದೆ ಅಗ್ರಹಾರಗಳಲ್ಲಿ ಗೇಣಿದಾರರು ...ತ್ತು ವಿವಿಧ ರೀತಿಯ ಕಸಬುದಾರರು ನೆಲಸಿದ್ದರು. ...ರೆ ಭೂ ಒಡೆತನವೆಲ್ಲ ಬ್ರಾಹ್ಮಣರ ಕೈವಶ ...ದ್ದಿತು.

ಕೆಲವು ಅಗ್ರಹಾರಗಳಲ್ಲಿ ಛತ್ರಗಳು ಇರುತ್ತಿದ್ದವು. ಉದಾಹರಣೆಗೆ ತಾಗರ್ತಿ ಅಗ್ರಹಾರದಲ್ಲಿ ಚಿಕ್ಕದಾನಯ್ಯ ಎಂಬುವರು ಪ್ರತಿದಿನ ಮೂವರು ಬ್ರಾಹ್ಮಣರಿಗೆ ಊಟದ ಬಗ್ಗೆ ಇಲ್ಲಿನ ಛತ್ರಕ್ಕೆ, ಸದಾಶಿವರಾಯರು ಆಳುತ್ತಿದ್ದ ಕಾಲದಲ್ಲಿ ನೀಡಿದ ಭೂದಾನವನ್ನು ಒಂದು ಶಾಸನದಲ್ಲಿ ಸೂಚಿಸಲಾಗಿದೆ.[10]

ಕಂದಾಯದ ಗ್ರಾಮಗಳಲ್ಲಿ ಎಲ್ಲ ವರ್ಗದ ಜನರು ಇರುತ್ತಿದ್ದರು. ಅವರಲ್ಲಿ ಜ್ಯೋತಿಷಿ, ಮತ್ತು ಅರ್ಚಕರು ಪ್ರಮುಖರಾಗಿದ್ದರು. ಇವರಿಗೆ ಹಳ್ಳಿಗಳಿಂದ ಬರುವ ವರಮಾನಗಳನ್ನು ಕೆಳದಿ ಅರಸು ನೀಡುತ್ತಿದ್ದರು.[11] ಗ್ರಾಮಜೀವನದಲ್ಲಿ ದೇವಾಲಯಗಳು ಪ್ರಮುಖ ಕೇಂದ್ರಗಳಾಗಿದ್ದವು. ದೇವರ ದೀಪಾರಾಧನೆ[12], ಅಭಿಷೇಕ, ಪೂಜೆ, ನೈವೇದ್ಯ ಮತ್ತು ನಂದಾದೀಪ[13] ಮುಂತಾದ ಸೇವೆಗಳು ಗ್ರಾಮದೇವಾಲಯಗಳಲ್ಲಿ ನಡೆಯುತ್ತಿದ್ದವು. ಗ್ರಾಮಾಂತರ ಪ್ರದೇಶಗಳಲ್ಲಿದ್ದ ಕೆಲವು ದೇವಸ್ಥಾನಗಳ ಹೆಸರು ಇಂತಿವೆ.

| ದೇವಸ್ಥಾನದ ಹೆಸರು | | ಗ್ರಾಮ |
|---|---|---|
| ಮಲ್ಲಿಕಾರ್ಜುನ ದೇವಸ್ಥಾನ[14] | – | ತೊಗರ್ಸಿ |
| ರಾಮೇಶ್ವರ ದೇವಸ್ಥಾನ[15] | – | ಕುರುವದಗದ್ದೆ |
| ಲಕ್ಷ್ಮಿನಾರಾಯಣ ದೇವಸ್ಥಾನ[16] | – | ಬಳಗೊಡು ಅಗ್ರಹಾರ |
| ಸುಬ್ರಹ್ಮಣ್ಯ[17] | – | ಕುಕ್ಕೆ |
| ಶಂಭುಲಿಂಗ[18] | – | ಉಡುಕುಂದ |
| ಸೋಮನಾಥ[19] | – | ಮಣಿಗಾರಕೇರಿ |
| ಸೋಮನಾಥ[20] | – | ಮಳಗಿ |
| ವಿಷ್ಣು ಮತ್ತು ಶಿವದೇವಾಲಯ[21] | – | ಸದಾಶಿವಪುರ ಅಗ್ರಹಾರ |
| ಮೂಕಾಂಬಿಕ[22] | | ಕೊಲ್ಲೂರು |

| | | |
|---|---|---|
| ರಾಮೇಶ್ವರ[23] | - | ವರದಾಮೂಲ |
| ಈಶ್ವರ[24] | – | ಚಟ್ಟನಹಳ್ಳಿ |
| ಜೈನ[25] | – | ಸಿಲುಗಾರ |
| ವೆಂಕಟೇಶ್ವರಸ್ವಾಮಿ[26] | – | ಪುಟ್ಟಗುಪ್ಪೆ |
| ಮಡುಲಿಂಗಸ್ವಾಮಿ[27] | – | ಬಂಕಸಾಣ |

ಇವಲ್ಲದೆ ಶೃಂಗೇರಿಯಲ್ಲಿದ್ದ ಚಂದ್ರಮೌಳೇಶ್ವರ, ವೇಣುಗೋಪಾಲ, ಮಲ್ಲಿಕಾರ್ಜುನಸ್ವಾಮಿ ಮತ್ತು ಶಾರದಾಂಬೆ ದೇವಸ್ಥಾನಗಳಿಗೆ ಕೆಳದಿ ನಾಯಕರು ದಾನದತ್ತಿ ಬಿಟ್ಟಿರುವ ವಿಷಯ ಶೃಂಗೇರಿ ಶಾಸನಗಳಿಂದ ತಿಳಿದುಬರುತ್ತದೆ.[28]

ಕೆಳದಿ ರಾಜ್ಯದ ಪ್ರಮುಖವಾದ ಗ್ರಾಮಗಳಲ್ಲೆಲ್ಲ ಮಹತ್ತಿನಮಠ, ವಿರಕ್ತಮಠ ಮಠ ಮತ್ತು ದೇವರಿನ ಹೆಸರಿನ ಮಠಗಳು ಇರುತ್ತಿದ್ದವು. ಇಂತಹ ಮಠಗಳು ಮತೀಯ ವಿದ್ಯಾಪ್ರಸಾರದ ಜೊತೆಗೆ ದಾಸೋಹ ಕಾರ್ಯಗಳನ್ನು ನೆರವೇರಿಸುತ್ತಿದ್ದವು. ವೀರಶೈವ ಮಠಗಳು ಸಂಖ್ಯೆಯಲ್ಲಿ ಹೆಚ್ಚಾಗಿದ್ದವು. ಈ ಕಾಲದ ಕೆಲವು ಮಠಗಳನ್ನು ಇಲ್ಲಿ ಉದಾಹರಿಸಬಹುದು :

| ಮಠ | | ಗ್ರಾಮ |
|---|---|---|
| ವಿರೂಪಾಕ್ಷ ದೇವರಮಠ[29] | - | ಶಂಕರನಾರಾಯಣ |
| ಮಹಾಮಹತ್ತಿನಮಠ[30] | – | ಆನಂದಪುರ |
| ಸೋಮನಾಥದೇವರಮಠ[31] | – | ಮೂಡುಕೇರಿ |
| ಮಹತ್ತಿನಮಠ[32] | – | ಚಟ್ಟನಹಳ್ಳಿ |
| ವಿರಕ್ತಮಠ[33] | – | ಚಿನ್ನಿಕಟ್ಟೆ |
| ಮಠ[34] | – | ಸಿದ್ದಾಪುರ |
| ಚೆನ್ನಬಸವೇಶ್ವರಮಠ[35] | – | ಉಡಗಣಿ |
| ಕಲ್ಲಿನಮಠ[36] | – | ಆನವಟ್ಟಿ ಗ್ರಾಮ |
| ಗದ್ದಿಗೆಮಠ[37] | – | ಚಟ್ಟನಹಳ್ಳಿ |

ಹೀಗೆ ದೇವಾಲಯಗಳು ಮತ್ತು ಮಠಗಳು ಗ್ರಾಮಜೀವನವನ್ನು ನಿರ್ದೇಶಿಸುವ ಮತ್ತು ನಿಯಂತ್ರಿಸುವ ಸಂಸ್ಥೆಗಳಾಗಿದ್ದವು. ಒಂದೇ ಗ್ರಾಮದಲ್ಲಿ ವಿವಿಧ ಧರ್ಮಗಳ ದೇವರುಗಳ ದೇವಾಲಯಗಳು ಇದ್ದವು. ಇದು ಅಂದಿನ ಪರಿಸರದಲ್ಲಿ ಇದ್ದ ಧಾರ್ಮಿಕ ಸಾಮರಸ್ಯವನ್ನು ತೋರಿಸುತ್ತದೆ. ಕೆಳದಿ ಅರಸರ ಕಾಲದಲ್ಲಿ ಗ್ರಾಮಜೀವನವು ಧರ್ಮಗಳ ವೈಮನಸ್ಸಿನಿಂದ ಕಲುಷಿತವಾಗಿರಲಿಲ್ಲ. ಕೆಳದಿ ನಾಯಕರು ಸಹ ಎಲ್ಲ ದೇವರುಗಳ ಆಲಯಕ್ಕೆ ಪಕ್ಷಪಾತವಿಲ್ಲದೆ ದಾನದತ್ತಿಗಳನ್ನು ನೀಡಿ ಧಾರ್ಮಿಕ ಸಮಾನತೆಯನ್ನು ಗ್ರಾಮಗಳಲ್ಲಿ ಎತ್ತಿ ಹಿಡಿದಿದ್ದರು.

ಮಠಗಳಿಗೆ ಭೂದಾನವನ್ನು ನೀಡುವಾಗ ಕೆಳದಿಯ ಅರಸರು ಕೆಲವು ಕ್ರಮಗಳನ್ನು ಅನುಸರಿಸುತ್ತಿದ್ದರು. ಮಠವಿರುವ ಗ್ರಾಮದಲ್ಲೇ ಅನೇಕ ವೇಳೆ ಭೂದಾನಗಳನ್ನು ನೀಡಿದರೂ ಸಹ, ಒಂದು ಗ್ರಾಮದ ಮಠಕ್ಕೆ ದೂರವಿರುವ ಮತ್ತೊಂದು ಗ್ರಾಮದ ಭೂಮಿಯನ್ನು ನೀಡುತ್ತಿದ್ದರು. ಇಂತಹ ಪರಿಸ್ಥಿತಿಯಲ್ಲಿ ಮಠದ ಅಧಿಕಾರಿವರ್ಗದವರು ತಮ್ಮ ಪಾಲಿನ ಆದಾಯವನ್ನು ವಸೂಲಿಮಾಡಲು ಭೂದಾನವಿದ್ದ ಗ್ರಾಮಕ್ಕೆ ಹೋಗಬೇಕಾಗಿದ್ದುದ್ದು ಅನಿವಾರ್ಯವಾಗಿತ್ತು. ಅಂತೆಯೇ ಅಗ್ರಹಾರದ ಭೂಮಿಗಳು ಬೇರೆ ಬೇರೆ ಕಡೆ ಚದುರಿಹೋಗಿರುತ್ತಿತ್ತು. ಇಂತಹ ಕ್ರಮದಿಂದ ಗ್ರಾಮಗ್ರಾಮಗಳ ನಡುವೆ ಪರಸ್ಪರ ಸಂಪರ್ಕ ಏರ್ಪಡುತ್ತಿತ್ತು.

ಗ್ರಾಮಗಳಲ್ಲಿ ಆಗ್ಗಾಗ್ಗೆ ಜನರಿಗೆ ತೊಂದರೆ ಕೊಡುತ್ತಿದ್ದ ಸಮಾಜ ಘಾತಕ ವ್ಯಕ್ತಿಗಳು ಇರುತ್ತಿದ್ದರು. ಅಂತ ಕ್ರೂರಿಗಳನ್ನು ಹತ್ತಿಕ್ಕಿದ ವೀರನಿಗೆ ಕೆಳದಿನಾಯಕರು ಆ ಗ್ರಾಮದ ಭೂಮಿಯನ್ನು ಉಂಬಳಿಯಾಗಿ ಕೊಡುತ್ತಿದ್ದ ಪದ್ಧತಿ ಜಾರಿಯಲ್ಲಿತ್ತು. ಉದಾಹರಣೆಗೆ, ತುಂಬ ತೊಂದರೆ ಕೊಡುತ್ತಿದ್ದ ಮಂಚಿಬ್ರಹ್ಮ ಎಂಬ ವ್ಯಕ್ತಿಯ ತಲೆಯನ್ನು ಕಡಿದುಹಾಕಿಗ ಕೋಡಿಹಳ್ಳಿ ಬಸವನಿಗೆ ಶಿವಲಿಂಗಪ್ಪನ ಕೋರಿಕೆಯ ಮೇಲೆ ಕೊಟ್ಟ ಉಂಬಳಿಯನ್ನು ಅಂದರೆ ಮಂಡಶಿವಪುರ ಸೀಮೆಯ ಕೋಡಿಹಳ್ಳಿ ಗ್ರಾಮದ ಕೆಲವು ಭೂಮಿಗೆ ಸೀಮೆಕಲ್ಲು ನೆಡೆಸಿ ಆ ದಾನವನ್ನು ಸೇನಬೋವ ಕಡತದಲ್ಲಿ ನಮೂದಿಸಿದನಂತರ ಬಸವನಿಗೆ ಮುಮ್ಮಡಿ ಸೋಮಶೇಖರ ನಾಯಕನು ಕೊಟ್ಟನೆಂದು ಶಿಕಾರಿಪುರದ ಶಾಸನವು ತಿಳಿಸುತ್ತದೆ.[38]

ಗ್ರಾಮದಲ್ಲಿದ್ದ ಮಠಗಳಿಗೆ ಎತ್ತಿನಮಾನ್ಯವನ್ನು ನೀಡುತ್ತಿದ್ದರು. ಉದಾಹರಣೆಗೆ ಮೂಡಗೊಪ್ಪ ಎಂಬ ಗ್ರಾಮದಲ್ಲಿ ಶಾಂತವೀರಪ್ಪನು ಕಟ್ಟಿಸಿದ ಮಹತ್ತಿನ ಮಠಕ್ಕೆ ಬಸವಪ್ಪನಾಯಕ ಕ್ರಿ.ಶ.1711ರಲ್ಲಿ, 25 ಎತ್ತಿನಮಾನ್ಯವನ್ನು ಬಿಟ್ಟನು.[39] ಅಂತೆಯೇ ಇದೇ ಬಸವಪ್ಪನಾಯಕನು ಕ್ರಿ.ಶ.1708ರಲ್ಲಿ ತೀರ್ಥರಾಜಪುರ ಗ್ರಾಮದಲ್ಲಿ ವೀರಮ್ಮಾಜಿ ಕಟ್ಟಿಸಿದ ಮಹತ್ತಿನಮಠದ ಧರ್ಮಕ್ಕೆ ಧರ್ಮಕಾರ್ಯಗಳಿಗಾಗಿ ಮಾನ್ಯವನ್ನು ಬಿಡ

ಕೆಂದು ಮರಿಯಪ್ಪನು ಕೇಳಿಕೊಂಡಿದ್ದರಿಂದ ಬಸವಪ್ಪ ಯಕನು ಹತ್ತು ಎತ್ತಿನ ಮಾನ್ಯವನ್ನು ಮಠಕ್ಕೆ ಬಿಟ್ಟನು.[40]

ಹೀಗೆ ಕೃಷಿಪ್ರಧಾನವಾಗಿದ್ದ ಕೆಳದಿಯ ಕಾಲದ ಮಗಳಲ್ಲಿ ಧರ್ಮದ ಪ್ರಭಾವ ದಟ್ಟವಾಗಿದ್ದುದು ತುಬರುತ್ತದೆ. ಧಾರ್ಮಿಕ ನಂಬಿಕೆಗಳನ್ನು ಎತ್ತಿಹಿಡಿ ವುದರ ಮೂಲಕ ಜನರನ್ನು ನಿಯಂತ್ರಿಸುತ್ತಿದ್ದರು. ತಹ ಸಂಸ್ಥೆಗಳನ್ನು ಪೋಷಿಸಿದ್ದರಿಂದ ವಿವಿಧ ರ್ಮದ ಮುಖಂಡರ ಬೆಂಬಲವು ನಾಯಕರಿಗೆ ರಕುತ್ತಿತ್ತು. ಗ್ರಾಮಗಳಲ್ಲಿ ವಾಸಿಸುತ್ತಿದ್ದ ರೈತರು, ಕಾರ್ಮಿಕರು ಮತ್ತು ಊಳಿಗದವರು ಇಂತಹ ಧಾರ್ಮಿಕ ಸಂಸ್ಥೆಗಳ ಒಡೆಯರ ಮೂಲಕ ಆಳರಸರಿಗೆ ವಿಧೇಯರಾಗಿ ನಡೆದುಕೊಳ್ಳುತ್ತಿದ್ದರು ಎಂದು ಹೇಳ ಬಹುದು. ಗ್ರಾಮಗಳಲ್ಲಿ ಸಮಾಜಘಾತುಕ ಶಕ್ತಿಗಳನ್ನು ಗ್ರಾಮಸ್ಥರೇ ಮುಂದಾಗಿ ಬಲಿಹಾಕುತ್ತಿದ್ದರು. ಅಂತಹ ಸಂದರ್ಭಗಳಲ್ಲಿ ಕೆಳದಿಯ ಅರಸರು ಧೈರ್ಯ, ಮತ್ತು ಸಾಹಸವನ್ನು ವ್ಯಕ್ತಪಡಿಸಿದ ಜನರಿಗೆ ಅವರ ಗ್ರಾಮಗಳಲ್ಲಿ ಉಂಬಳಿಯನ್ನು ನೀಡುವುದರ ಮೂಲಕ ಪ್ರೋತ್ಸಾಹಿಸುತ್ತಿ ದ್ದರು. ಅಂದಿನ ಗ್ರಾಮ ಜೀವನದಲ್ಲಿ ಇದ್ದ ಸ್ವಾವಲಂಬನೆ ಯನ್ನು ಇದು ತೋರಿಸುತ್ತದೆ.

---

## ಅಡಿಟಿಪ್ಪಣಿಗಳು

1. 'ಕೆಳದಿ ನೃಪವಿಜಯ', ಲಿಂಗಣ್ಣಕವಿ, ಮೈ.ವಿ.ವಿ. 1973
2. 'ಎ.ಕ.' VIII, ತೀರ್ಥಹಳ್ಳಿ, 5
3. ಅದೇ, VIII, ಸೊರಬ, 55
4. 'ಎಂ.ಎ.ಆರ್.' 1916, ಸಂಖ್ಯೆ 111
5. 'ಎ.ಕ , VIII, ತೀರ್ಥಹಳ್ಳಿ, 178
6. 'ಎ.ಆರ್.ಎಸ್.ಐ.ಇ.' 170-71; ಸಂಖ್ಯೆ 26 ಮತ್ತು 'ಎ.ಕ', VIII, 106,110,117,136,137 ಮತ್ತು 208
7. 'ಎ.ಕ .,VIII ತೀರ್ಥಹಳ್ಳಿ, 189
8. ಅದೇ, ತೀರ್ಥಹಳ್ಳಿ, 6
9. 'ಎಂ.ಎ.ಆರ್' 1937, ಸಂಖ್ಯೆ 30
10. 'ಎಪಿ.ಕ.' VII, ಶಿಕಾರಿಪುರ, 55
11. 'ಎಂ.ಎ.ಆರ್'.1928, ಸಂಖ್ಯೆ 65
12. 'ಎಂ.ಎ.ಆರ್'. 1928, ಸಂಖ್ಯೆ 65, ಕ್ರಿ.ಶ.1509
13. 'ಎ.ಕ'. VII, ಹೊನ್ನಾಳಿ, ಕ್ರಿ.ಶ.1557
14. ಅದೇ VII, ಶಿಕಾರಿಪುರ, 255
15. ಅದೆ, VII, ಹೊನ್ನಾಳಿ, 9
16. ಅದೇ VIII, ತೀರ್ಥಹಳ್ಳಿ, 103
17. 'ಎ.ಆರ್.ಎಸ್.ಐ.ಇ.' 1930, 1931, ಸಂಖ್ಯೆ 388
18. 'ಎ.ಕ., VIII, ನಗರ 1,3,4
19. 'ಎಸ್.ಐ.ಐ.', VII, ಸಂಖ್ಯೆ 389
20. ಅದೇ, VII ಸಂಖ್ಯೆ 375
21. 'ಎಪಿ.ಕ.', VIII, ತೀರ್ಥಹಳ್ಳಿ, 5
22. 'ಎಂ.ಎ.ಆರ್ 1944, ಸಂಖ್ಯೆ 52; ಅದೇ, ಸಂಖ್ಯೆ 48
23. ಅದೇ, 1938, ಸಂಖ್ಯೆ 86
24. 'ಎ.ಕ.' VIII, ಸಾಗರ, 123
25. ಅದೇ, ತೀರ್ಥಹಳ್ಳಿ, 126
26. 'ಎಂ.ಎ.ಆರ್ 133, ಸಂಖ್ಯೆ 28
27. 'ಎಪಿ.ಕ.', VIII, ಸೊರಬ 451
28. ಅದೇ, VI ಶೃಂಗೇರಿ, 5,11,13, 'ಮೈ.ಪು.ವ.' 1916 ಸಂಖ್ಯೆ 111, ಅದೇ ಸಂಖ್ಯೆ 118; ಅದೇ 1916 ಸಂಖ್ಯೆ 115
29. 'ಎಸ್.ಐ.ಐ.' ಸಂಪುಟ 9, (ಭಾಗ 11) ಸಂಖ್ಯೆ 674
30. 'ಎಂ.ಎ.ಆರ್' 1923, ಸಂಖ್ಯೆ 108
31. 'ಎಸ್.ಐ.ಐ.' ಸಂಪುಟ 7 ಸಂಖ್ಯೆ 321
32. 'ಎಂ.ಎ.ಆರ್.' 1923, ಸಂಖ್ಯೆ 98
33. 'ಎಪಿ.ಕ.' VII, ಹೊನ್ನಾಳಿ, 82
34. 'ಮೈ.ಪು.ವ.' 1923, ಸಂಖ್ಯೆ 104
35. ಅದೇ 1927, ಸಂಖ್ಯೆ 154
36. 'ಎ.ಕ.' VIII, ಸೊರಬ 354
37. ಅದೇ, VII, ಹೊನ್ನಾಳಿ 74
38. 'ಎ.ಕ.' VII, ಶಿಕಾರಿಪುರ 210, ಕ್ರಿ.ಶ.1756
39. ಅದೇ, VIII, ತೀರ್ಥಹಳ್ಳಿ 72
40. 'ಎಂ.ಎ.ಆರ್.', 1943, ಸಂಖ್ಯೆ 43

ಡಾ|| ಕೆ.ಜಿ. ವಸಂತಮಾಧವ

# ಹದಿನೇಳನೇ ಶತಮಾನದ ಗಂಗೊಳ್ಳಿಯ ಆರ್ಥಿಕ ಮತ್ತು ಧಾರ್ಮಿಕ ಚಟುವಟಿಕೆಗಳ ಆಕರಗಳು

ದಕ್ಷಿಣ ಕನ್ನಡ ಜಿಲ್ಲೆಯ ಪಂಚಗಂಗಾವಳಿಯ ನದಿಮುಖದಲ್ಲಿದೆ ಗಂಗೊಳ್ಳಿ (ಗಂಗಾವಳಿ ಅಥವಾ ಪೋರ್ತುಗೀಜರ ಕಂಬೋಲಿಯಮ್). ಈ ಸ್ಥಳದ ಆರ್ಥಿಕ ಮತ್ತು ಧಾರ್ಮಿಕ ಚಟುವಟಿಕೆಗಳನ್ನು ತಿಳಿಸುವ ಕೆಲವು ದಾಖಲೆಗಳಿವೆ. ಈ ದಾಖಲೆಗಳಲ್ಲಿ ಮುಖ್ಯವಾಗಿ ಗಮನಿಸವಂಥಾದ್ದು. ಪೋರ್ತುಗೀಜ ಭಾಷೆಯ ಆಕರಗಳು. ಪಣಜಿಯ ಪತ್ರಾಗಾರದಲ್ಲಿರುತ್ತವೆ. ಕನ್ನಡ ಭಾಷೆಯ ಪತ್ರಗಳು, ಇಲ್ಲಿಯೇ ಸಿಕ್ಕಿದ ಕಡತಗಳು ಮತ್ತು ಶಾಸನಗಳು. ಇವುಗಳಲ್ಲಿ ತಿಳಿಸಿದ ಗೊಂಗೊಳ್ಳಿಯ ಆರ್ಥಿಕ ಮತ್ತು ಧಾರ್ಮಿಕಚಟುವಟಿಕೆಗಳೂ 17ನೇಯ ಶತಮಾನಕ್ಕೆ ಸೀಮಿತವಾಗಿದೆ.

## ಪೋರ್ತುಗೀಜ ಆಕರಗಳು

ಪೋರ್ತುಗೀಜ ಆಕರಗಳಲ್ಲಿ ಮುಖ್ಯವಾದವುಗಳು ಯಾವುದೆಂದರೆ ಆ ಭಾಷೆಯ ಪತ್ರಗಳು, ಗೋವೆಯ ವೈಸರಾಯ ಕೊಂಡಿಲಿನ್‌ಹಾರೆನ್ ದಿನಚರಿ ಮತ್ತು ಇತಿಹಾಸಗ್ರಂಥಗಳಾದ 'ಏಷ್ಯಾದ ಪೋರ್ತುಗೀಜಾ' ಹಾಗೂ 'ಕೊನ್‌ಕ್ವಿಷ್ಟಾ ಸ್ಪಿರಿಚ್ಯುಯಲ್ ಡಿ ಒರಿಯಂಟ' ಮೇಲೆ ತಿಳಿಸಿದ ಇತಿಹಾಸ ಗ್ರಂಥಗಳನ್ನು ಬರೆದವರು ಫೆರಿಯಾ ಸೋಜಾ ಮತ್ತು ಪಾವುಲ್ ದಾ ತ್ರಿನಾದಾದಿ. ಈ ಆಕರಗಳಲ್ಲಿರುವ ಗಂಗೊಳ್ಳಿಯ ಕುರಿತಾಗಿ ತಿಳಿಸಿದ ವಿಷಯಗಳನ್ನು ಫಾದರ್ ಹೆರಾಸ್ ಮತ್ತು ಡಾ|| ಬಿ.ಎಸ್. ಶಾಸ್ತ್ರಿಯವರು ಬೆಳಕಿಗೆ ತಂದಿದ್ದಾರೆ.

ಗಂಗೊಳ್ಳಿಯ ಹೊನ್ನೆಕಂಬಳಿಯ ರಾಜ್ಯದಲ್ಲಿದಯ ಸಣ್ಣವ್ಯಾಪಾರ ಕೇಂದ್ರವೆಂದು ಪೋರ್ತುಗೀಜ ಇತಿಹಾಸಗಾರ ಫೆರಿಯಾ ಸೋಜಾ ತನ್ನ ಗ್ರಂಥದಲ್ಲಿ ತಿಳಿಸಿದ್ದಾನೆ. ಇಲ್ಲಿಯೇ ಹೊನ್ನೆ ಕಂಬಳಿಯವರು ಒಂದು ಸಣ್ಣ ಕೋಟೆಯನ್ನು ಕಟ್ಟಿದ್ದರು ಎಂದು ಇವನು ತಿಳಿಸಿದ್ದು ಗಮನಾರ್ಹ[1]. ಪೋರ್ತುಗೀಜ – ಸ್ಪೇನ್ ದೊರೆಗಳೂ ಗೋವೆಯಲ್ಲಿರುವ ವೈಸರಾಯರಿಗೆ ಬರೆದ ಪತ್ರಗಳಲ್ಲಿ ಪೋರ್ತುಗೀಜರ ಹಿತಾಸಕ್ತಿಗೆ ಕಾರಣವಾಗಿದೆ. ಬಸ್ರೂರಿನ ವ್ಯಾಪಾರಸ್ಥರಲ್ಲಿದ್ದ ಈ ಸ್ಥಳವನ್ನು ಪೋರ್ತುಗೀಜರು ರಾಜಕೀಯಲಾಭಗಳಿಸುವ ಉದ್ದೇಶದಿಂದ ಹೇಗೆ ಪಡೆದುಕೊಂಡರು, ಇತ್ಯಾದಿಗಳ ವಿವರಣೆಗಳಿವೆ. ಈ ದಾಖಲೆಯ ಪತ್ರಗಳು ರೆಮಿಟ್ಟಡೊಸ್ ಇಂಡಿಯ ಮತ್ತು ಪಿಸ್ಸುರ್ಲೆನ್ಕರ ಸಂಪಾದಿಸಿದ ಅಸೆಂಟೊದಲ್ಲಿವೆ. ಪೋರ್ತುಗೀಜ ನಾವಿಕ ಗಂಗೋಳ್ಳಿಗೆ ಬಂದು ಅಲ್ಲಿನ ಸ್ಥಿತಿಗತಿಗಳ ವಿಚಾರ ವೈಸ್ ರಾಯನಿಗೆ ತಿಳಿಸಿದ ಪತ್ರವು ಗಮನಾರ್ಹವಾಗಿದೆ. ಪರಿಸ್ಥಿತಿಯನ್ನು ಸರಿಯಾಗಿ ವೀಕ್ಷಿಸಿದ ಪೋರ್ತುಗೀಜ ನೌಕಾದಳಪತಿ ಮೆವೇಜಸ್ 16 ಜನವರಿ 1650ರಲ್ಲಿ ಬರೆದಪತ್ರದಂತೆ "ಸುಂದರ ಮನೋಹರವಾದ ಗಂಗೊಳ್ಳಿ ದ್ವೀಪವು (ಪರ್ಯಾಯ ದ್ವೀಪವು), ಭತ್ತ ಮತ್ತು ತೆಂಗು ತಾಳೆ ಮರಗಳಿಂದ ತುಂಬಿದೆ. ಈ ಸ್ಥಳದಲ್ಲಿ 20,000 ಚೀಲ ಅಕ್ಕಿ ಉತ್ಪನ್ನವಾಗುತ್ತದೆ. ಈ ಸ್ಥಳವು ನಮ್ಮ ವಶವಾದೊಡನೆ 1500 ಖಂಡಿಮೆಣಸು ಮತ್ತು ಇತರ ಹಣ ತರುವ ಬೆಳೆಗಳನ್ನು ಬೆಳೆಸಿ ಲಾಭ ಪಡೆಯಬಹುದು. ಕಬ್ಬಿಣ ಮತ್ತು ಇನ್ನಿತರಖನಿಜ ಸಂಪತ್ತು ಇಲ್ಲಿನ ಒಳನಾಡಿನಲ್ಲಿ ಸಿಗುತ್ತದೆ. ಗಂಗೊಳ್ಳಿಯಲ್ಲಿ ನುರಿತ ನಾವಿಕರಿದ್ದಾರೆ. ಇವರನ್ನು ಪೋರ್ತುಗೀಜ ನೌಕಾದಳದಲ್ಲಿ ಸೇರಿಸಿಕೊಂಡರೆ ಮುಲಬಾರು ಸಮುದ್ರಗಳ್ಳರಿಂದ ಗಂಗೊಳ್ಳಿಯಲ್ಲಿ ಪೋರ್ತುಗೀಸರ ಸ್ಥಾನವನ್ನು ಭದ್ರಗೊಳಿಸಬಹುದು. ಇಲ್ಲಿನ ವ್ಯಾಪಾರದ ಹಿಡಿತವನ್ನು ಮಾಡಿಕೊಂಡರೆ ಹತ್ತುಸಾವಿರ ಕುಸ್ರಾದಕ್ಕೂ ಮಿಕ್ಕಿದ ಲಾಭವನ್ನು ಪ್ರತಿವರ್ಷ ಪಡೆಯಬಹುದು. ಆದರಿಂದ ಪೋರ್ತುಗೀಜರು ಹೆಚ್ಚಿನ ಖರ್ಚು ಮಾಡದೆ ರಾಜಕೀಯ ನಿಪುಣತೆ ಉಪಯೋಗಿಸಿ ಈ ಪ್ರದೇಶ ಪಡೆಯ ಬೇಕು"[3].

ಗಂಗೊಳ್ಳಿಯನ್ನು ಪೋರ್ತುಗೀಜರು ಕರಾವಳಿ ಕರ್ನಾಟಕದ ರಾಜಕೀಯ ಅಭದ್ರತೆಯ ಲಾಭ ಪಡೆದು ಬಸ್ರೂರಿನ ವರ್ತಕರಿಂದ ಪಡೆದು ಕೊಂಡದ್ದು, ಇದನ್ನು ಇವರು ದ್ವೀಪಮಾಡಲು ಯತ್ನಿಸಿ, ಪ್ರಕೃತಿಯ ವಿಕೋಪದಿಂದ ವಿಫಲವಾದದ್ದು. ಕ್ರೈಸ್ತ ಜನರನ್ನು ಇಲ್ಲಿಗೆ ತರಿಸಿ, ಸ್ಥಳೀಯರ ಮತ್ತು ಕೆಳದಿವೀರಭದ್ರನ ವಿರೋಧ

್ನ ಕಟ್ಟಿಕೊಂಡದ್ದು[4]. ಶಿವಪ್ಪನಾಯಕನು ಗಂಗೊಳ್ಳಿ ಂದ ಪೋರ್ತುಗೀಜರನ್ನು ಓಡಿಸಿದ್ದು, ನಂತರ ಕೆಳದಿ ಯ ವೆಂಟಪ್ಪನಾಯಕನು ಪೋರ್ತುಗೀಜರಿಗೆ ಇಲ್ಲಿ ಪಾರಮಾಡಲು ಅವಕಾಶ ಮಾಡಿಕೊಟ್ಟು ಕೊನೆಗೆ ದಿ ಸೋಮಶೇಖರ ನಾಯಕನು ಗಂಗೊಳ್ಳಿಯನ್ನು ೇರ್ತುಗೀಜರಿಂದ ಕಸಿದು ಕೊಂಡದ್ದು ಇದನ್ನೆಲ್ಲ ವು ಪೋರ್ತುಗೀಜ ದಾಖಲೆಗಳು (1630-68) ತಿಳಿಸಿವೆ.[5]. ಇನ್ನೂ ಕೆಲವು ಪೋರ್ತುಗೀಜ ಖಲೆಗಳು (ಪಿಸ್ಸುರ್ಲೇನ್ಕರ್ ಸಂಪಾದಿಸಿ ವ್ಯಾಖ್ಯಾನಿ ಅಸ್ಸೆಂತೊಸ್) ಗಂಗೊಳ್ಳಿಯ ಆರ್ಥಿಕ ಸಾಧನೆಗ ್ನ ತಿಳಿಸಿವೆ. ಉದಾ: ಕ್ರಿ.ಶ. 1632ರ ದಾಖಲೆಯ ದಿಯಂತೆ ಗಂಗೊಳ್ಳಿಯವಾರ್ಷಿಕ ಉತ್ಪನ್ನ 5,000-714 ಸೆರಫಿಯನ್ ಇದುದ್ದನ್ನು 50,000 ದಿಂದ 140 ಸೆರಫಿಯನ್ ನಷ್ಟು ಹುಟ್ಟಿಸಬಹುದು. ಗೊಳ್ಳಿಯಲ್ಲಿ 20,000 ಚೀಲ ಜಿರಸಾಲ ಜಾತಿಯ ಬೆಳೆಯುತ್ತದೆ. ಇದನ್ನು ಇಲ್ಲಿಂದ ಪ್ರತಿ ವರ್ಷ ದು ಕೊಂಡರೆ ಪೋರ್ತುಗೀಜರಿಗೆ ಗೋವೆಯಲ್ಲಿ ಾರದ ಸಮಸ್ಯೆ ಇರುವುದಿಲ್ಲ[6]. ಇಷ್ಟಲ್ಲದೆ ಇನ್ನಿತರ ೇಟದ ಬೆಳೆಗಳಾದ ತೆಮೆಗು ಕಬ್ಬು, ಅನಾನಸು ಮಾಡಿಸಿ ಇನ್ನಷ್ಟು ಲಾಭ ಪಡೆಯುವ ಸಾಧ್ಯತೆ , ಎಂದು ಪೋರ್ತುಗೀಜರು ಮನಗಂಡಿದ್ದರು ಗೊಳ್ಳಿಯ ರೇವು ಆಗಲು ಕೆಲವು ಕುಂದುಕೊರೆಗ ್ನ ಮನಗಂಡು ಇದನ್ನು ನಿವಾರಿಸಲು ಕೆಲವು ಗಳನ್ನು ಪೋರ್ತುಗೀಜರು ಆಲೋಚಿಸಿದ್ದರೆಂದು ರ. ಕೆಲವು ದಾಖಲೆಗಳು ತಿಳಿಸಿವೆ. ಉದಾ: ್ರಲ್ 26 - 1636ರ ವೈಸ್‌ರಾಯರ ಸಲಹಾಸಮಿ ು ವರದಿಯಂತೆ ಗಂಗೊಳ್ಳಿ ನದಿ ಸುಮುದ್ರವನ್ನು ುವ ಭಾಗ ಪ್ರತೀವರ್ಷ (ಇಲ್ಲಿ ಈಗ ಕುಂದಾಪು ಕೋಟೆ ಇದೆ) ಹೊಯಿಗೆ ತುಂಬುತ್ತಾ ಪೋಗು ದೊಡ್ಡ ದೊಡ್ಡ ಹಡಗುಗಳು ಇಲ್ಲಿಗೆ ಬರಲಾಗು ಲ್ಲ. ಬಂದ ಹಡಗುಗಳಿಗೆ ರಕ್ಷಣೆ ಇಲ್ಲ, ಆದುದ ವ ರೇವು ಸ್ಥಳವನ್ನು 1 ಮೈಲು ಉತ್ತರದ ುದ್ರ ಕನಾರೆಯಲ್ಲಿ ಸ್ಥಾಪಿಸಬಹುದು ಇದನ್ನ ಿಸಲು ಸಮುದ್ರದಲ್ಲಿ ಕಾಪುಗೋಡೆಕಟ್ಟಬೇಕು. ಕೋಟೆ ಕಟ್ಟಿಸಿದರೆ ಪೋರ್ತುಗೀಜರಿಗೆ ಉತ್ತಮ ೆ ಸಿಗುತ್ತದೆ. ಆದರೆ ಇದನ್ನೆಲ್ಲಾ ನಡೆಸಲು ವಿಪ ಖರ್ಚು ಆಗುತ್ತದೆ. [7]ಗಂಗೊಳ್ಳಿಯನ್ನು ದ್ವೀಪ ಡಲು ಕಾಲುವೆ ತೋಡಿಸಿದ್ದು[8] ಅದು ಉಸುಕು ಬಿ ಹಾಳಾದದ್ದು, ಈಕೆಲಸ ಮುಂದುವರೆಸಿದರೆ ಳ ಕೆಡುಕು ಇದೆಯೆಂದು ಪೋರ್ತುಗೀಜರು ಮನ ಗಂಡದ್ದು ಈ ಎಲ್ಲ ವಿಚಾರಗಳನ್ನು ಇವರ ಕೆಲವು ದಾಖಲೆಗಳು ತಿಳಿಸಿವೆ. ಗಂಗೊಳ್ಳಿಯಲ್ಲಿ ರೇವಿನಲ್ಲಿ ಆಗಾಗ ನಡೆಯುತಿದ್ದ ಭೀಕರ ಬಿರುಗಾಳಿ ಮತ್ತು ಅವರಿಂದಾದ ನಷ್ಟದ ಬಗೆಗೂ ಕೆಲವು ಪೋರ್ತುಗೀಜ ದಾಖಲೆಗಳು ತಿಳಿಸಿವೆ ಉದಾ 1652 ಮೇ ತಿಂಗಳಲ್ಲಿ ಗಂಗೊಳ್ಳಿ ಬಂದರಿನಲ್ಲಿ ಬಿರುಗಾಳಿ ಎದ್ದು ಪೋರ್ತುಗೀಜರು ನೌಕೆಗಳನ್ನು ನಾಶಮಾಡಿತು. ಆಗಸ್ಟ್ ತಿಂಗಳಲ್ಲಿ ಎದ್ದ ಬಿರುಗಾಳಿಯಿಂದ ಪೋರ್ತುಗೀಜ ನೌಕೆಗೆ ಗಂಗೊಳ್ಳಿ ನದಿ ಮುಖವನ್ನು ದಾಟಿ ಬರಲಾಗಲಿಲ್ಲ[9]. ಆದರೂ 1651ರವರೆಗೆ ಗಂಗೊಳ್ಳಿಯಲ್ಲಿ ಕರಿಮೆಣಸು ಮತ್ತು ಅಕ್ಕಿ ವಿಪುಲವಾಗಿ ಪೋರ್ತುಗೀಜರಿಗೆ ದೊರಕುತಿದ್ದವು, ಎಂದು ಗೋವೆಯ ವೈಸರಾಯ ರಾಯಭಾರಿ ಅಂತೋನಿಯೊಕೊರೆಯಾನಿಗೆ ನೀಡಿದ ಸೂಚನೆಯಿಂದ ತಿಳಿದು ಬರುತ್ತದೆ.[10]

ಗಂಗೊಳ್ಳಿಯನ್ನು ಪೋರ್ತುಗೀಜರ ವಶ ಪಡಿಸಿಕೊಳ್ಳಲು ಪ್ರಮುಖ ಪಾತ್ರವಹಿಸಿದ ಗೋವೆಯ ವೈಸರಾಯ್ ಕೊಂಡಿಲಿನ್ ಹಾರೆಸ್, ತನ್ನ ದಿನಚರಿಯಲ್ಲಿ ಗಂಗೊಳ್ಳಿಯ ಆರ್ಥಿಕ ಸಾಧ್ಯತೆ ಮತ್ತು ಇಲ್ಲಿ ಧಾರ್ಮಿಕ ಚಟುವಟಿಕೆಗಳ ಕುರಿತಾಗಿ ಕೆಲವು ಘಟನೆಗಳನ್ನು ತಿಳಿಸಿದ್ದಾನೆ. ಗಂಗೊಳ್ಳಿಯನ್ನು ದ್ವೀಪವನ್ನಾಗಿ ಪರಿವರ್ತಿಸಿ ಅಲ್ಲಿ ಗೋವಾದಿಂದ ಕ್ರೈಸ್ತರನ್ನು ವಲಸೆ ತರುವ ಯೋಚನೆ ಇವನ ವರದಿಯಲ್ಲಿ ತಿಳಿಸಿದೆ. ಇಷ್ಟಲ್ಲದೆ ಇಲ್ಲಿನ ಕ್ರೈಸ್ತ ಮತ್ತು ಸ್ಥಳೀಯರೊಳಗಾದ ಧಾರ್ಮಿಕ ಘರ್ಷಣೆ ಮತ್ತು ಅವುಗಳ ನಿವಾರಣೆಯಾದದ್ದನ್ನು ತಿಳಿಸಿದ್ದೂ ಗಮನಾರ್ಹವಾಗಿದೆ. ಇವನ ವರದಿಯಂತೆ ಸ್ಥಳೀಯ ತಾಂಡೇಲರು ಕೋಟೆಯಸಮೀಪದ ಚರ್ಚಿನಲ್ಲಿರುವ ಪವಿತ್ರ ಕ್ರಾಸನ್ನು ತೆಗೆದು ವೀರಭದ್ರ ನಾಯಕ ನಲ್ಲಿಗೆ ಒಯ್ದರು. ಏತನ್ಮಧ್ಯೆ ಈ ಕ್ರಾಸನ್ನು ಸ್ಥಳಾಂತರಿಸಿದ ಜನರು ತಕ್ಷಣ ಸತ್ತುಹೋದರು. ಇದನ್ನು ತಿಳಿದ ವೀರಭದ್ರ ನಾಯಕನು ಕ್ರಾಸನ್ನು ಚರ್ಚಿನಲ್ಲಿ ಪುನಃ ಸ್ಥಾಪಿಸುವಂತೆ ಅಜ್ಞಾಪಿಸಿದೆ. ನಂತರ ಸ್ಥಳೀಯ ಹಿಂದುಗಳು ಕ್ರಾಸನ್ನು ಹೂವಿನಿಂದ ಅಲಂಕರಿಸಿ ಅತ್ಯಂತ ಭಕ್ತಿಯಿಂದ ಪೂಜೆ ಸಲ್ಲಿಸಿದರು[11].

ಪಾವುಲ್‌ದ ತ್ರಿನದಾದೆ ಗ್ರಂಥದಲ್ಲಿ ಗಂಗೊಳ್ಳಿಯ ಪರಿಸರದಲ್ಲಾಗುತ್ತಿರುವ. ಬದಲಾವಣೆ ಮತ್ತು ಇಲ್ಲಿ ಕ್ರೈಸ್ತ ಧರ್ಮದ ಮಿಶನರಿಗಳ ಚಟುವಟಿಕೆಗಳ ವಿವರಣೆ ಗಳಿವೆ. ಇವರ ಅಭಿಪ್ರಾಯಪ್ರಕಾರ ಗಂಗೊಳ್ಳಿಯ ಅಳಿವೆಭಾಗವು ವರ್ಷ ಉರುಳಿದಂತೆ ಹೊಯಿಗೆಯಿಂದ ತುಂಬುತ್ತಹೋಗುತ್ತದೆ. ಇಲ್ಲಿ

ನದಿಯ ಆಳ ಕಡಿಮೆಯಾಗುತ್ತಾಬಂದಂತೆ ಗಂಗೊಳ್ಳಿಯ ಇನ್ನೊಂ ದು ಬದಿ (ಉತ್ತರಕ್ಕೆ ಆಳ ಜಾಸ್ತಿಯಾಗುತ್ತದೆ. ದೊಡ್ಡ ಹಾಗೂ ಭಾರವಾದ ಹಡಗುಗಳು ಭರತದ ಕಾಲ ದಲ್ಲಿ ಮಾತ್ರ ಅಳಿವೆ ದಾಟಿ ಬಸ್ರೂರಿನ ಕೋಟೆ ಮುಟ್ಟಲು ಸಾಧ್ಯ ಇಷ್ಟಲ್ಲದೆ, ಮಲಬಾರು ಕಡಲುಗಳ್ಳರು ಗಂಗೊಳ್ಳಿ ಯ ಅಳಿವೆ ಪ್ರದೇಶವನ್ನು ಸುಲಭವಾಗಿ ಆಕ್ರಮಣ ಮಾಡಲು ಅಲ್ಲಿನ ಸನ್ನಿವೇಶ ಅನುಕೂಲವಾಗಿದೆ. ಈ ಸಂದಿಗ್ಧ ಸ್ಥಿತಿಯಲ್ಲಿ ಬಸ್ರೂರು ಕೋಟೆಯಿಂದ ಪೋರ್ತುಗೀ ಜರಿಗೆ ಯಾವಸಹಾಯವು ಮಾಡಲು ಆಗುವುದಿಲ್ಲ. ಇದ ರಿಂದಾಗಿ ಗಂಗೊಳ್ಳಿಯನ್ನು ವಶಪಡಿಸಿ ಕೋಟೆ ಕಟ್ಟಿಕೊಂ ಡರೆ ಪೋರ್ತುಗೀಜರಿಗೆ ಅನುಕೂಲ" ಇವನ ವರದಿ ಯಲ್ಲಿ ಗಂಗೊಳ್ಳಿಯಲ್ಲಿ ಕೋಟೆಯ ಸಮಿಪವಿದ್ದ 1000 ಪಗೋಡಾ ಉತ್ಪತ್ತಿ ಇರುವ ಶಿವ ದೇವಾಲ ಯವನ್ನು ಕೆಡವಿ ಫ್ರಾನ್ಸಿಸ್ಕನ್ ಮಿಶನರಿಗಳು ಇಗರ್ಜ ಕಟ್ಟಿದ್ದನ್ನು ತಿಳಿಸಿದೆ. ಇದರಿಂದಾಗಿ ಸ್ಥಳೀಯ ಜನರ ವಿರೋಧವನ್ನು ಕ್ರೈಸ್ತ ಮಿಶನರಿಗಳು ಎದುರಿಸಬೇಕಾಗಿ ಬಂತು[12].

## ಪಣಜಿಯ ಪತ್ರಗಾರದ ಕನ್ನಡಪತ್ರಗಳು

ಈ ಪತ್ರಗಾರದಲ್ಲಿ ಕನ್ನಡ ಭಾಷೆಯ ದಾಖಲೆ ಗಳು ಗಂಗೊಳ್ಳಿಗೆ ಸಂಬಂಧಿಸಿದ ಮೂರು ಇವೆ. ಒಂದನೇಯ ದಾಖಲೆ 1631 ಮಾರ್ಚ 7 ರಂದು ಕೆಳದಿಯ ಬಂಡಾಯಗಾರ ವೀರಪ್ಪ ನಾಯಕ ಮತ್ತು ಪೋರ್ತುಗೀಜ ವೈಸರಾಯ್ ಕೊಂಡಿ ಲಿನ್‌ಹಾರೊಸ್ ಮಾಡಿಕೊಂಡ ಒಪ್ಪಂದ. ಈ ಒಪ್ಪಂದದಲ್ಲಿ ಪೋರ್ತು ಗೀಜರಿಗೆ ವೀರಪ್ಪನು ಕೊಟ್ಟ ಗಂಗೊಳ್ಳಿ ಪರ್ಯಾಯ ದ್ವೀಪದ ಗಡಿಯನ್ನು ತಿಳಿಸಿದೆ. ಇದರಂತೆ ಗಂಗೊಳ್ಳಿ ಮುಗುವಿನ ಗ್ರಾಮದ ಗಡಿ ಉತ್ತರಕ್ಕೆ ಮಾರಸ್ವಾಮಿ[13] ದೇವಾಲಯದವರೆಗೆ. ಈ ಪ್ರದೇಶದಲ್ಲಿ ಗುಹೇಶ್ವರ[14] ಮತ್ತು ಮಾರಸ್ವಾಮಿ ದೇವಾಲಯಗಳಿದ್ದುವೆಂದೂ ಈ ದೇವಾಲಯದ ಉತ್ಪನ್ನವನ್ನು ಪೋರ್ತುಗೀಜರು ಮುಟ್ಟಬಾರದೆಂದು ಈ ದಾಖಲೆಯು ತಿಳಿಸಿದೆ. ಈ ದೇವಾಲಯಗಳಲ್ಲಿ ನಡೆದುಕೊಂಡು ಬರುತ್ತಿದ್ದ ಧಾರ್ಮಿಕ ಕಟ್ಟಳೆಗಳನ್ನು ಯಾವ ಆತಂಕವಿಲ್ಲದೆ ನಡೆಸಿ ಕೊಂಡುಬರಲು ಪೋರ್ತುಗೀಜರು ಅಡ್ಡಬರಬಾರದು ಇಲ್ಲಿನ ಜನರಿಗೆ ಅವರವರ ಜಾತಿ, ನೀತಿ, ನಿಯಮಗ ಳನ್ನು ನಡೆದುಕೊಂಡು ಬರಲು ಆಸ್ಪದವಿರಬೇಕು. ಈ ಶರ್ತಗಳ ಮೇಲೆ ಗಂಗೊಳ್ಳಿಯಲ್ಲಿ ಪೋರ್ತುಗೀಜರಿಗೆ ಕೋಟೆ ಕಟ್ಟುವ ಅನುಮತಿಯನ್ನು ಕೆಳದಿವೀರಪ್ಪ ನಾಯಕ ನು ನೀಡಿದ್ದನೆಂದು ಈ ದಾಖಲೆಗಳ ಅಧ್ಯ ಯನದಿಂದ ತಿಳಿ ದುಬರುತ್ತದೆ. ಗಂಗೊಳ್ಳಿಯಿಂದ ಆಹಾರ ಧಾನ್ಯಗಳನ್ನು ಮಳಯಾಳದವರಿಗೆ ಕಳುಹಿಸಬಾರದು. ಬಸ್ರೂರಿನಿಂದ ಪೋರ್ತುಗೀಜರಿಗೆ 100 ಮುಡಿ ಅಕ್ಕಿ ಪ್ರತಿ ವರ್ಷ ಸಲ್ಲಿಸಬೇಕು. ಕುಂದಾಪುರದಲ್ಲಿ ಕೋಟೆಯ ಸಮಿಪವಿದ್ದ ಪೋರ್ತುಗೀಜರಿಗಿದ್ದ ಭೂಮಿ ಮತ್ತು ತೆಂಗಿನ ತೋಟ ವೀರಪ್ಪನಿಗೆ ಬಿಟ್ಟು ಕೊಟ್ಟಿದ್ದರ ಪರಿ ಹಾರರ್ಥವಾಗಿ ಅವರಿಗೆ ಗಂಗೊಳ್ಳಿಯ ಪರ್ಯಾಯ ದ್ವೀಪದ ಬಳಿ ಇರುವ ಭೂಮಿಗಳ ಉತ್ಪತ್ತಿಕೊಡ ಬೇಕು. ಇಲ್ಲಿ ಬೆಳೆದ ಕರಿಮೆಣಸನ್ನು ಪೋರ್ತುಗೀಜರು ಕಾಲಕಾಲದಲ್ಲಿದ್ದ ಕ್ರಯದಂತೆ ತೆಗೆದುಕೊಳ್ಳಬೇಕು. ಆದರೆ ವೀರಪ್ಪನಿಂದ ಪೋರ್ತುಗೀಜರು ವರ್ಷಂಪ್ರತಿ ತೆಗೆದುಕೊಳ್ಳಬೇಕೆಂದು ಕಡ್ಡಾಯವಿರಬಾರದು. ಗಂಗೊ ಳ್ಳಿಯಲ್ಲಿ ತಡೆಹಿಡಿದು ನಿಲ್ಲಿಸಿದ ವೀರಭದ್ರನ ಎರಡು ಹಡಗುಗಳನ್ನು ವೀರ ಪ್ಪನಿಗೆ ಕೊಡಬೇಕು.

ಈ ಪತ್ರಗಾರದ ಇನ್ನೊಂದು ಪತ್ರವು ವೀರಪ್ಪ ಗಂಗೊಳ್ಳೀಯವರಿಗೆ ಇತ್ತ ಹೇಳಿಕೆ ಪತ್ರ. ಇದರ ಕಾಲ 18 ಏಪ್ರಿಲ್ 1631. ಈ ಹೇಳಿಕೆಯ ಪತ್ರ ಗಂಗೊ ಳ್ಳಿಯನ್ನು ಪೋರ್ತುಗೀಜರಿಗೆ ಕೊಡಲಾಗಿದೆ (ಗಡಿಗಳ ನ್ನು ನಿರ್ಧರಿಸಿಕೊಟ್ಟದ್ದು) ಅಲ್ಲಿಯಜನರು ಪೋರ್ತು ಗೀಜರಿಗೆ ವಿಧಯರಾಗಿ ವಾಡಿಕೆಯಲ್ಲಿರುವ ಕಂದಾಯ ವನ್ನು ಕೊಡಬೇಕು. ಪೋರ್ತುಗೀಜರಿಗೆ ಯಾರಾದರೂ ಅನ್ಯಾಯವೆಸಗಿದರೆ ಅದರ ಬಗ್ಗೆ ತನಗೆ ದೂರು ಹೇಳಬೇಕೆಂದೂ ಮುಂದೆ ಅಂತಹ ಅನ್ಯಾಯವಾಗ ದಂತೆ ನೋಡಿಕೊಳ್ಳುವನೆಂದು ಹೇಳಿದ ವೀರಪ್ಪನ ಭರವಸೆ ಈ ದಾಖಲೆಯಲ್ಲಿ ನಮೂದಿಸಲಾಗಿದೆ.

ಆಸ್ಥಾನವರ್ತಕ ನಾರಾಯಣಮಲ್ಯನು ಗೋವೆಯ ವೈಸರಾಯಗೆ ಬರೆದ ಪತ್ರದಲ್ಲಿ ಗಂಗೊಳ್ಳಿಯಿಂದ ಕರಿ ಮೆಣಸು ಮತ್ತು ಅಕ್ಕಿ ಗೋವೆಗೆ ಸಲ್ಲುತಿತ್ತೆಂದು ತಿಳಿ ಸಿದೆ. ಕರಿಮೆಣಸಿನ ವ್ಯಾಪಾರದಲ್ಲಿ ಕೆಳದಿ ನಾಯಕ ಯಾವ ನಿರ್ಬಂಧವನ್ನು ಪೋರ್ತುಗೀಜರಿಗೆ ಹೇರಲಿಲ್ಲ. ಆದರೆ ಗಂಗೊಳ್ಳಿ ಮತ್ತು ಕುಂದಾಪುರ ಕಡೆಗಳಲ್ಲಿ ಡಚ್ಚರು ಪ್ರಬಲರಾಗಿ ಪೋರ್ತುಗೀಜ ವ್ಯಾಪಾರವನ್ನು ಹಾಳುಗೆಡವಲು ಯತ್ನಿಸಿದರೆಂದು ಈ ಪತ್ರದಿಂದ ತಿಳಿದು ಬರುತ್ತದೆ. ಈ ಪತ್ರವು ಗೋವೆಯ ವೈಸ ರಾಯಿ ಅಂತೋನಿಯೊಡಿಮೆಲೊ ಡಿ ಕೆಸ್ಟ್ರೊಗೆ 26 ನವೆಂಬರ್ 1674ರಲ್ಲಿ ಸಿಕ್ಕಿತು.

## ಕಡಿತ

ಕೆಲವು ವ್ಯಕ್ತಿಗಳ ವಶವಿದ್ದ ಕಪ್ಪುವಸ್ತ್ರದಲ್ಲಿ ಸೀಸ ದಿಂದ ಬರೆದ ದಾಖಲೆ (ಕಡಿತ) ಗಳಲ್ಲಿ ಗಂಗೊಳ್ಳಿಯಲ್ಲಿ

ಗೆ (ವ್ಯಾಪಾರಕೊಠಡಿ) ಇದದ್ದನ್ನು ಅಲ್ಲಿ, ಅಕ್ಕಿ, ಸು, ಕಬ್ಬು, ಹೊಗೆಸೊಪ್ಪು, ತೆಂಗಿನಕಾಯಿಗಳು ದಿಂದ ಬರುತ್ತಿದ್ದುದ್ದನ್ನೂ, ಬರುತ್ತಿರುವ ಸರಕುಗ ಳಿಗೆ ದಾರಿ ಸುಂಕ ಹೇರುತ್ತಿರುವುದು ಉಲ್ಲೇಖವಾ ಗಿದೆ. ವಂತ ಕೊಂಕಣಿಗರು ವ್ಯಾಪಾರಸ್ಥರಾಗಿದ್ದ ನೆಂದು ಕೆಲವು ಕಡಿತಗಳು ತಿಳಿಸಿವೆ. ಇಲ್ಲಿನ ವ್ಯಾಪಾರ ಕಾತೆ ತದಿಂದ ಕೊಚ್ಚಿಯವರೆಗೂ, ಅರೇ ಬಿಯಾ ಮಸ್ಕತ್ ಲ್ಡೀವ್ ವರೆಗೆ ಹಬ್ಬಿತ್ತು, ಎಂದು ಕೆಲವು ಕಡಿತಳ ಅಧ್ಯ ನದಿಂದ ತಿಳಿದುಬರು ತ್ತದೆ. ಇಲ್ಲ ಬೆಳೆಯುವ ಬೆಳೆಗ ತಿಳಿಸಿದ ಕಡಿತ ದಿಂದ ಕೃಷಿಯು ಪ್ರಗತಿ ದಲ್ಲಿತ್ತೆಂದು ಅಭಿಪ್ರಾಯ ಪಡಬಹುದು

## ಸನಗಳು

ಇಲ್ಲಿರುವ ಶಾಸನಗಳಲ್ಲಿ ಗಮನಿಸಬೇಕಾದುದು ನ ಮಲ್ಲೇರಮಠದ ಎದುರು ಇರುವ ಶಿಲಾಶಾಸನ. ು ಪ್ರಕಟಿತವಾದಂತೆ ತೋರುವುದಿಲ್ಲ. ಇದು ಶಕ 84 ಪ್ಲವಸಂವತ್ಸರದ್ದು ಈಶಾಸನವು ಕೆಳದಿ ಪ್ಪ ನಾಯಕನು ಜಯವರ್ಣ ಗ್ರಾಮದ ಗಣಪತಿ ಯ್ಯರ ಪೌತ್ರ, ವಿಠಲ ಮಲ್ಯಯರ ಪುತ್ರ ನಾರಾ ಣ ಮಲ್ಯನಿಗೆ[15] ಗಂಗೊಳ್ಳಿಯಲ್ಲಿ ಭೂದಾನ ಟ್ಟಿದ್ದನ್ನು ತಿಳಿಸಿದೆ. ಬಿಟ್ಟಭೂಮಿಯ ಬೆಲೆ ವರಹಗ ಣ 120. ಈ ಶಾಸನದ ವೈಶಿಷ್ಟ್ಯವೇನೆಂದರ ನ ನೈಸರ್ಗಿಕ ಅನಾಹುತವಾದ ಹೊಯಿಗೆ ಹಾದ , ಬೆಟ್ಟು ಮಾಡಿದ ನಷ್ಟ, ಉಪ್ಪು ನೀರು ಹಾದು ಯುವ ನಷ್ಟಗಳ ವಿವರ ತಿಳಿಯುತ್ತದೆ. ಭೂಹಿಡು ಕ್ರಮದಲ್ಲಿ ಗೇಣಿ, ತೆಂಗಿನ ಮರಗೇಣಿ ಪದ್ಧತಿ ಕೆಯಲ್ಲಿ ಬಂದಿತ್ತೆಂದು ಈ ಶಾಸನದಿಂದು ತಿಳಿದು ಳಬಹುದು ನಷ್ಟ ಹೊಂದಿದ ಭೂ ಪ್ರದೇಶಗಳನ್ನು ಸಸಾಗುವಳಿ ಮಾಡಿ ಭೂಮಿ ಹೆಚ್ಚಿಸಿ ಫಲವನ್ನು ನ ತೆಗೆದುಕೊಂಡವ ಪಡೆಯಬೇಕೆಂದು ಆಗಿನ ಸರ ರದ ಅಪೇಕ್ಷೆಯಾಗಿದ್ದಿತ್ತೆಂದು ಶಾಸನವು ಚಿಸಿದೆ.[16]

ಇದೇ ಮಠದ ಗರ್ಭಗುಡಿಯ ದ್ವಾರದಲ್ಲಿರುವ ಸನದಲ್ಲಿ ವಿಠಲನ ಮಲ್ಯನ ಚಿರಂಜೀವಿ ನಾರಾ ಣ ಮಲ್ಯನು ಶಕ 1590ರಂದು (ಕ್ರಿ.ಶ. 1668) ಲ್ಲಿಯೇ ವೆಂಕಟರಮಣ ಮೂರ್ತಿ ಸ್ಥಾಪಿಸಿದ್ದು ದು ಬರುತ್ತದೆ.

ಈ ಮಠದಲ್ಲಿರುವ ತಾಮ್ರಶಾಸನವು (ಶಕ 96 ಕ್ರಿ.ಶ. 1671) ನಾರಾಯಣ ಮಲ್ಯನು ಗೊಳ್ಳಿಯಲ್ಲಿ ಕಟ್ಟಿಸಿದ ವೆಂಕಟೇಶ್ವರ ದೇವರ ವೆಚ್ಚಕ್ಕೆ ಸೇನಾಪುರ ಮತ್ತು ಕಟಕೆ ಗ್ರಾಮುಗಳಲ್ಲಿರುವ 90ವರಹ ಉತ್ಪತ್ತಿ ಬರುವ ಭೂಮಿಗಳನ್ನು ಕೆಳದಿ ಚೆನ್ನಮಾ ಮ್ಮಾಜಿ ನೀಡಿದ್ದು ತಿಳಿಸಿದೆ. ಇಲ್ಲಿ ಬಳಕೆಯಲ್ಲಿರುವ ತೆರಿಗೆಗಳಾದ, ಬಿಡಾರ, ಸಿದ್ದಾಯಗಳನ್ನು ಆಗಿಂದಾಗ್ಗೆ ಪರಿಷ್ಕರಿಸುತ್ತಿದ್ದರೆಂದೂ, ಭೂಮಿ ವರ್ಗಗಳನ್ನು ಸ್ತ್ರೀಯರು, ಸೆಟ್ಟರು, ಮಠ ಮತ್ತು ದೇವಸ್ಥಾನದವರು ಹೊಂದಿದ್ದರೆಂದೂ ಈ ಶಾಸನದಿಂದ ತಿಳಿದುಬರುತ್ತದೆ. ಈ ಶಾಸನದಲ್ಲಿ ತಿಳಿಸಿದ ಕಡಕೆ ಮಠ, ಕಲ್ಲು ಮಠ ಮತ್ತು ಹೆದ್ದಾರಿ ಮಠಗಳು ವೀರಶೈವ ಧಾರ್ಮಿಕಸಂಸ್ಥೆ ಗಳು ಕೊಟ್ಟ ಭೂದಾನ ಗ್ರಾಮದಲ್ಲಿರುವ ವಿಷ್ಣು ಮೂರ್ತಿ ದೇವಾಲಯ ಮತ್ತು ವೀರಶೈವ ಮಠಗಳ ಧಾರ್ಮಿಕ ಕಟ್ಟಳೆಗಳಿಗೆ ಯಾವರೀತಿಯ ಅಡ್ಡಿ ಆತಂಕ ಗಳನ್ನು ದಾನ ಪಡೆದವರು ಮಾಡ ಬಾರದು. ಗುತ್ತಿಗೆ ನಷ್ಟ, ಬೆಟ್ಟುಕೂಡಿದನಷ್ಟ, ಹೊಳೆಹರಿದ ನಷ್ಟಗಳ ಉಲ್ಲೇಖ ಈಶಾಸನದಲ್ಲೂ ಇವೆ. ಭೂಮಿ ಅಳತೆ ಮಾಡಲು 'ಕಾಟಿ' ಎಂಬ ಕೋಲು ಬಳಕೆಯಲ್ಲಿದ್ದಿರ ಬೇಕು ಎಂದು ಈ ಶಾಸನದ ಅಧ್ಯಯನದಿಮದ ತಿಳಿ ದುಬರುತ್ತದೆ. ಇಲ್ಲಿ ಕೋಟೆ ಇದದ್ದು ಈ ಶಾಸನ ತಿಳಿಸಿದೆ. ಕೊಡಲಾಡಿಯ ಶಕ 1603 ರೌದ್ರಿ ಸಂವತ್ಸ ರದ ಶಾಸನವು ಕೃಷ್ಣಯ್ಯನು ವೇಣುನದಿ ತೀರದಲ್ಲಿ ಕಟ್ಟಿದ ತ್ರಿಯಂಬಕೇಶ್ವರ ದೇವಾಲಯದ ವೆಚ್ಚಕ್ಕೆ ಕೆಳದಿ ಚೆನ್ನಮ್ಮಾಜಿಯು ಧರ್ಮ ಬಿಟ್ಟದ್ದನ್ನು ತಿಳಿಸಿದೆ. ಈ ಶಾಸನದಲ್ಲಿ ಗಂಗೊಳಿಯ ಬೇಲೇ ಸಮುದ್ರ ತೀರದಲ್ಲಿ ತೆಂಗಿನ ಸಸಿ ಹಾಕಿ ಫಲ ತೆಗೆದ್ದನ್ನು ಉಲ್ಲೇಖಿಸಿದ್ದು ಗಮನಾರ್ಹ[17].

ಇದೇ ಸಂವತ್ಸರದಲ್ಲಿ ರಾಮಪ್ಪೈ [18] ಎಡಹಾಡ ಗ್ರಾಮದಲ್ಲಿ (ಮೇಲ್ ಗಂಗೊಳ್ಳಿ) ವೆಂಕಟೇಶ್ವರ ದೇವ ರನ್ನು ಸ್ಥಾಪಿಸಿ ಕೆಳದಿ ಚೆನ್ನಮ್ಮಾಜಿಯಿಂದ ಸ್ವಾಸ್ತಿ ಪಡೆ ದನು, ಎಂದು ಒಂದು ಶಾಸನ ತಿಳಿಸಿದೆ. ಈ ಶಾಸನ ದಲ್ಲಿ ನಾಗತಿಮ್ಮ ಚಕ್ರಮಠ (ಲಿಂಗಾಯತರ ಮಠ) ಮತ್ತು ಇನ್ನಿತರ ಭೂ ಹಿಡುವಳಿ ಹೊಂದಿದ್ದರೆಂದು ತಿಳಿಸಿದೆ. ಸ್ವಾಸ್ತಿ ಬಿಟ್ಟ ಭೂಮಿಯನ್ನು ಸರಿಯಾಗಿ ವಿಂಗಡಿಸುತ್ತಿದ್ದರೆಂದು ಈ ಶಾಸನವು ತಿಳಿಸಿದ್ದು ಗಮನಿ ಸುವಂಥಾದ್ದು.

## ಉಪಸಂಹಾರ

ಪೋರ್ತುಗೀಜ ದಾಖಲೆಗಳ ಅಧ್ಯಯನದಿಂದ ಗಂಗೊಳ್ಳಿಯ ಭೌಗೋಲಿಕ ಸನ್ನಿವೇಶಗಳನ್ನು ಉಪ ಯೋಗಿಸಿ ಕೊಂಡು ಪೋರ್ತುಗೀಜರು ಇದನ್ನು ಕೃಷಿ ಉತ್ಪನ್ನಗಳ ವ್ಯಾಪಾರ ಕೇಂದ್ರವನ್ನಾಗಿ ಮಾಡಲು

ಪ್ರಯತ್ನಿಸಿ ಯಶಸ್ಸು ಪಡೆದರು ಇದನ್ನು ಸಾಧಿಸಲು ಇವರು ಹಣ ತರುವ ಬೆಳೆಗಳಾದ ಕರಿಮೆಣಸು, ತೆಂಗಿನ ಕಾಯಿ ಮತ್ತು ಇನ್ನಿತರ ಬೆಳೆಗಳ ಸಾಗುವಳಿಗ ಳನ್ನು ಪ್ರೋತ್ಸಾಹಿಸಿದರು ತಮ್ಮ ವ್ಯಾಪಾರ ಭದ್ರತೆ ಯನ್ನು ಸಾಧಿಸಲು ಪೋರ್ತುಗೀಜರು ಇಲ್ಲಿ ಕೋಟೆ ಯನ್ನು ಕಟ್ಟಿದರು. ಆದರೆ ಗಂಗೊಳ್ಳಿಯನ್ನು ದ್ವೀಪವ ನ್ನಾಗಿ ಮಾಡಲು ಅಯಶಸ್ವಿಯಾದರು. ಇಲ್ಲಿ ವ್ಯಾಪಾ ರವನ್ನು ವಿಸ್ತರಿಸಿದರು. ಧಾರ್ಮಿಕ ಜೀವನದಲ್ಲಿ ಪೋರ್ತುಗೀಜರು ರೋಮನ್ ಕೆಥೊಲಿಕ ಮತವ ಪ್ರಚಾರಕ್ಕೆ ಪ್ರೋತ್ಸಾಹಕೊಟ್ಟರು. ಆದರೆ ಇವರ ಕ್ರೈಸ್ತ ಧರ್ಮದ ಶ್ರದ್ಧೆ ಎಷ್ಟು ಉಗ್ರವಾಗಿತ್ತೆಂದರೆ ಸ್ಥಳಿಯ ರನ್ನು ಮತ್ತು ಇಲ್ಲಿ ಆಡಳಿತ ನಡೆಸುತ್ತದ್ದ ಕೆಳದಿ ನಾಯಕ ರನ್ನು ಅವರು ರೇಗಿಸಿದ್ದು ಇವರ ಹಿತಾಸಕ್ತಿಗೆ ಭಂಗವ ನ್ನುಂಟು ಮಾಡಿತು.

ಕಾಗದ ಪತ್ರಗಳ ಆಕರಗಳು ಗಂಗೊಳ್ಳಿಯನ್ನು ಪೋರ್ತುಗೀಜರು ಹೇಗೆ ವೀರಪ್ಪನಿಂದ ಪಡೆದರು ಮತ್ತು ಇಲ್ಲಿ ಕರಿಮೆಣಸಿನ ವ್ಯಾಪಾರ ವೃದ್ಧಿಯಾಯಿತು ಮತ್ತು ಇವರ ವ್ಯಾಪಾರ ಹಿತಾಸಕ್ತಿಗೆ ಡಚ್ಚರು ಭಂಗ ಪಡಿಸಿದರು ಎಂದು ತಿಳಿಸಿವೆ.

ಕಡತಗಳಲ್ಲಿ ಗಂಗೊಳ್ಳಿಯ ವ್ಯಾಪಾರ, ಕ್ರಮ ಮತ್ತು ವ್ಯಾಪಾರದಲ್ಲಿ ನಿರತರಾದವರು ಇತ್ಯಾದಿಗಳ ವಿವರಗಳಿವೆ. ಶಾಸನಗಳಲ್ಲಿ ಗಂಗೊಳ್ಳಿಯಲ್ಲಿ ಗೌಡಸಾರಸ್ವತ ರಿಂದ ವೈಷ್ಣವ ಪಂಥದ ಸಂಸ್ಥೆಗಳು ಬೆಳೆದು ಅರಸರಿಂದ ದಾನಪಡೆದು ಪ್ರಗತಿಹೊಂದಿದ್ದು ತಿಳಿಸಿವೆ. ಇಷ್ಟಲ್ಲದೆ ಇಲ್ಲಿನ ನೈಸರ್ಗಿತ ಅನಾಹುತಗಳು, ಭೂಹಿಡುವಳಿ ಕ್ರಮ ಮತ್ತು ತೆರಿಗೆ ಪದ್ಧತಿಗಳ ಮೇಲೆ ಶಾಸನಗಳು ಕ್ಷಕಿರಣ ಬೀರಿದ್ದು ಗಮನಾರ್ಹವಾಗಿವೆ. ಈ ಎಲ್ಲಾ ಆಕರಗಳಲ್ಲೂ ಇಲ್ಲಿನ ಜನರ ಧಾರ್ಮಿಕ ಸೌಹಾರ್ದತೆ ವ್ಯಕ್ತವಾಗಿದೆ.

---


ಈ ಲೇಖನ ರಚಿಸಲು ಸಹಕರಿಸಿದವರು

*1. ದಿ॥ ಡಾ॥ ಬಿ.ಎಸ್. ಶಾಸ್ತ್ರಿ, 2. ಡಾ॥ ಪಿ.ಪಿ. ಶಿರೋಡಕರ್, 3. ದಿ॥ ಸೇನಾಪುರ ನರಸಿಂಹ ಆಚಾರ್ಯ, 4. ಕೋಟಾ ಪದ್ಮನಾಭ ನಾಯಕ, ಇವರಿಗೆ ಲೇಖಕನ ತುಂಬು ಹೃದಯದ ಕೃತಜ್ಞತೆಗಳು*







1632ರಲ್ಲಿ ಪೊರ್ತುಗೀಜರು ರಚಿಸಿದ ಗಂಗೊಳ್ಳಿಯು ಬಂದರಿನ ಚಿತ್ರ

## ಅಡಿ ಟಿಪ್ಪಣಿಗಳು

1. ಹೆರಾಸ್, ಹೆನ್ರಿ, "ಅರವೀಡು ಡೈನಾಸ್ಟಿ" P. 190
2. ನೋಡಿ ಬಿ.ಎಸ್. ಶಾಸ್ತ್ರಿ ಕೆಳದಿ ಅರಸರು ಹಾಗೂ ಪೋರ್ತುಗೀಜರು ಪು. 49-50
3. ಹೆರಾಸ್ - "The expansion of wars of Venkatappa Nayaka of Ikkeri" Indian Historical Record Commission XI 1928 P-112
   ನೋಡಿ, ಕೆ.ಜಿ. ವಸಂತಮಾಧವ "ಗಂಗೊಳ್ಳಿಯ ಕೋಟೆ" 'ಅಮೃತ' ಬೆಂಗಳೂರು (1971ಠ ಪು. 41
4. ಶಾಸ್ತ್ರಿ - ಅದೇ ಗ್ರಂಥ
5. Assentos, I P. 513, Ibid II, P. 79-83, 202-204, ಬಿ.ಎಸ್. ಶಾಸ್ತ್ರಿ - ಅದೇ ಗ್ರಂಥ 52-74, 85, 87, 92, 98, 124
6. Assentos I 555-6; ಶಾಸ್ತ್ರಿ - The Portugese in Kanara 1478- 1763 ಬೊಂಬಾಯಿ ವಿಶ್ವವಿದ್ಯಾಲಯ 1969 ಪಿ.ಎಚ್.ಡಿ. ಪ್ರಬಂಧ, ಅಪ್ರಕಟಿತ, ಪು 179
7. ಶಾಸ್ತ್ರಿ - 'ಕೆಳದಿ ಅರಸರು' ಪ್ರ. 68-71
8. ಅದೇ, ಪು. 52 ಈ ಕಾಲುವೆಯ ಅವಶೇಷ ಕಿರಿ ಮಂಜೇಶ್ವರದ 1/2ಮೈಲು ದಕ್ಷಿಣದಲ್ಲಿ ನೋಡಬಹುದು

9. ಶಾಸ್ತ್ರ, ಪು 87-89
10. ಅದೇ ಪು 85
11. ಶಾಸ್ತ್ರಿ - The Portugese in Kanara - P. 179 ಇದೇ ಲೇಖಕರ - The Studies in Indo-Portugese History (Bangalore - 1981) P-230
12. ಶಾಸ್ತ್ರಿ - ಕೆಳದಿಯ ಅರಸರು ಹಾಗೂ ಪೋರ್ತುಗೀಜರು ಪು 489-49; Studies in Indo-Portugese History P. 224. ಆದರೆ ಈ ಘಟನೆಯನ್ನು ಪೋರ್ತುಗೀಜರು ದಾಖಲೆಗಳಲ್ಲಿ ತಿಳಿಸಿಲ್ಲ.
13. ಮಾರಸ್ವಾಮಿ ಎಂದರೆ ಮಹಾವರಾಹಸ್ವಾಮಿ ದೇವಸ್ಥಾನ ಕರಾವಳಿಯು ಕರ್ನಾಟಕದಲ್ಲಿರುವ ವರಾಹ ದೇವಾಲಯಗಳಲ್ಲಿ ಇದು ಪ್ರಮುಖ ಈ ದೇವಾಲಯದ ಇತಹಾಸ 12ನೇಯ ಶತಮಾನದಿಂದ ಆರಂಭವಾಗುತ್ತದೆ.
14. ಗುಹೇಶ್ವರ ದೇವಾಲಯ ಗುಜ್ಜಾ ಗ್ರಾಮದಲ್ಲಿದೆ. ಈ ದೇವಾಲಯದ ಧಾರ್ಮಿಕ ಕಟ್ಟಳೆಗಳಿಗೆ ವಿಜಯನಗರ ಅರಸರು ಭೂದಾನ ನೀಡಿ ಸಹಾಯ ಮಾಡಿದ್ದರೆಂದು ಇಲ್ಲಿಗೆ ಸಿಕ್ಕಿದ ಕೆಲವು ಶಾಸನಗಳು ತಿಳಿಸಿವೆ.
15. ನಾರಾಯಣಮಲ್ಯನು ಭದ್ರಪ್ಪನಾಯಕನ ರಾಯಭಾರ ಮಲ್ಲಪ್ಪ ಮಲ್ಯನ ಸಹೋದರನು ಮುಂದೆ ಕೆಳದಿ ರಾಜ್ಯದಲ್ಲಿ ಶಾಂತಿ ಸ್ಥಾಪಿಸಲು ನಾರಾಯಣ ಮಲ್ಯನು ಕೆಳದಿ ನಾಯಕನಿಗೆ ತುಂಬಾ ಸಹಕರಿಸಿದನು. ನೋಡಿ Foster, English, Factories in India 1661-64 P. 349
16. ಈ ಶಾಸನದ ಫೋಟೊವನ್ನು ಕೋಟಾ ಪದ್ಮನಾಭ ನಾಯಕರು ತೆಗೆದು ಕೊಟ್ಟು ಸಹಕರಿಸಿದ್ದಾರೆ ಶಾಸನದ ಪಾಠ ದಿ॥ ಸೇನಾಪುರ ನರಸಿಂಹ ಆಚಾರ್ಯರ ಮುಖಾಂತರ ಸಿಕ್ಕಿದೆ
17. ಈ ಶಾಸನವು ಶ್ರೀ ಅಚ್ಯುತಹೆಬ್ಬಾರರ ಕೃಪೆಯಿಂದ ಸಿಕ್ಕಿದೆ ಶಾಸನದ ಪಾಠವನ್ನು ವಸಂತಶೆಟ್ಟರು ಪ್ರಕಟಿಸಿದ್ದಾರೆ Quarterly Journal of the Mythic Society, July 1987, P. 162-3
18. ರಾಮು ಪೈ ಕೆಳದಿ ವೀರಭದ್ರ-ಶಿವಪ್ಪ ನಾಯಕರ ಕಾಲದಲ್ಲಿ ಗೋವೆಯಲ್ಲಿ ಈ ಅರಸುಗಳ ರಾಯಭಾರಿಯಾಗಿ ಸೇವೆಸಲ್ಲಿಸಿದ್ದನು ನೋಡಿ ಬಿ.ಎಸ್. ಶಾಸ್ತ್ರಿ - ಕೆಳದಿಯ ಅರಸರು ಹಾಗೂ ಪೋರ್ತುಗೀಜರು ಪು 74-97

ಚೆನ್ನಬಸಪ್ಪ ಬೆಟ್ಟದೂರ

# ಕೊಡಗಿನ ಕೊನೆಯ ಅರಸ – ಚಿಕ್ಕವೀರ ರಾಜೇಂದ್ರ ಒಂದು ಐತಿಹಾಸಿಕ ವಿವೇಚನೆ.

ಇಂದಿನವರೆಗೆ ಕೊಡಗಿನ ಚಿಕ್ಕವೀರ ರಾಜೇಂದ್ರನ ಬಗ್ಗೆ ಬರೆದ ಇತಿಹಾಸಕಾರರು, ಕಾದಂಬರಿಕಾರರೂ, ನಾಟಕಕಾರರೂ ಚಿಕ್ಕವೀರ ರಾಜೇಂದ್ರನು, – 1) ಕ್ರೂರಿಯಾಗಿದ್ದ, 2) ವಿಷಯಲಂಪಟನಾಗಿದ್ದ, 3)ಜೂಜುಕೋರನಾಗಿದ್ದ, 4) ಮದ್ಯ, ಮಾಂಸ ಸೇವನೆ ಮಾಡುತ್ತಿದ್ದ, 5) ಪ್ರಜೆಗಳು ಕೊಟ್ಟ ಕಂದಾಯವನ್ನು ಮರಳಿ ಕೇಳುತ್ತಿದ್ದ, 6) ಕುಂಟ ಬಸವನನ್ನು ಕೊಲ್ಲಿಸಿದ, 7) ಕಳೆದುಹೋದ ರಾಜ್ಯವನ್ನು ಮರಳಿ ಸಿಕ್ಕೀತೆಂಬ ಆಸೆಯಿಂದ ಮಗಳು–ಗೌರಮ್ಮನನ್ನು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಿಸಿದ, ಅದಕ್ಕಾಗಿ ಇಂಗ್ಲೆಂಡಿಗೆ ಹೋದ, 8) ತಂಗಿ ದೇವಮ್ಮಾಜಿಯ ಮಗನನ್ನು ಕೊಲೆ ಮಾಡಿದ, 9) ಒಟ್ಟಾರೆ ಹೇಳಬೇಕೆಂದರೆ ಚಿಕ್ಕ ವೀರ ರಾಜೇಂದ್ರನು ಅತಿ ದುಷ್ಟನಾಗಿದ್ದ, ಇದಕ್ಕಾಗಿ ರಾಜ್ಯವನ್ನು ಕಳೆದುಕೊಂಡ, – ಎಂದು ಮುಂತಾಗಿ ಬರೆದು ಕೆಟ್ಟ ರೀತಿಯಿಂದ ಕಂಡಿದ್ದಾರೆ.

ಅಭ್ಯಾಸ ಮಾಡಿದವರಿಗೆ, ಅಚ್ಚರಿಯಷ್ಟೇ ಅಲ್ಲ, – ಕಳವಳವನ್ನುಂಟು ಮಾಡುವುದಾಗಿದೆ. ಕೊಡಗಿನ ಕೊನೆಯ ಅರಸ ಚಿಕ್ಕವೀರ ರಾಜೇಂದ್ರನ ಬಗ್ಗೆ ಮೇಲೆ ಉಲ್ಲೇಖಿಸಲಾದ ಆರೋಪಗಳು ಒಂದರಿಂದ ಐದರ ಬಗ್ಗೆ ಯಾವ ಅಧಿಕೃತ ಐತಿಹಾಸಿಕ ದಾಖಲೆಗಳಲ್ಲಿ ಇಲ್ಲ. ಇಲ್ಲದುದನ್ನು ಇದೆ ಎಂದು ಸಾಧಿಸುವ ಈ (ಭಂಡ) ಧೈರ್ಯವನ್ನು ಮೆಚ್ಚಲೇ ಬೇಕು. ಊಹೆಗಳ ಆಧಾರದ ಮೇಲೆ ಐತಿಹಾಸಿಕ ವ್ಯಕ್ತಿಗಳ ತೇಜೋವಧೆ ಮಾಡುವುದು ಇತಿಹಾಸಕ್ಕೆ ಬಗೆವ ಅಪಚಾರ; ದೇಶ ದ್ರೋಹವೂ ಅಹುದು. ಇನ್ನು ಕುಂಟ ಬಸವನ ವಿಚಾರ: ಕುಂಟ ಬಸವನು ಚಿಕ್ಕವೀರ ರಾಜೇಂದ್ರನ ತಂದೆ ಲಿಂಗರಾಜನ ಕಾಲದಲ್ಲಿಯೇ ದಿವಾನ ಹುದ್ದೆಗೆ ಏರಿದವನು.[1] ಚಿಕ್ಕವೀರ ರಾಜೇಂದ್ರನ ಓರಿಗೆಯವನು. ಇವನಿಂದಲೇ ಚಿಕ್ಕವೀರ ರಾಜೇಂದ್ರ ಕೆಟ್ಟ ನಡಾವಳಿಗ ಳನ್ನು ಕಲಿತ – ಎಂದು ಪ್ರತಿಪಾದಿಸ ಲಾಗುತ್ತಿದೆ. ಕುಂಟ ಬಸವನು ಲಿಂಗರಾಜನ ಕಾಲದಲ್ಲಿಯೇದಿವಾನ ಹುದ್ದೆಯಲ್ಲಿರಬೇಕಾದರೆ ಚಿಕ್ಕವೀರ ರಾಜೇಂದ್ರನಿಗಿಂತ ವಯಸ್ಸಿನಲ್ಲಿ ಬಹಳ ಹಿರಿಯನಾಗಿರಬೇಕು.ಆದ್ದರಿಂದ ಓರಿ ಗೆಯವನಾಗುವುದು ಶಕ್ಯವಿಲ್ಲ. ಅಂದ ಮೇಲೆ ಈತ ನಿಂದ ಚಿಕ್ಕವೀರ ರಾಜೇಂದ್ರ ಕೆಟ್ಟತನವನ್ನು ಕಲಿಯುವ ಪ್ರಶ್ನೆಯಲ್ಲಿ ಬಂತು?

ಕುಂಟ ಬಸವನನ್ನು ಚಿಕ್ಕವೀರ ರಾಜೆಂದ್ರ ಕೊಲೆ ಮಾಡಿಸಿದನೆಂಬ ಆರೋಪದ ಬಗ್ಗೆ ರಾಯಿಸರು ಬಸ ವನು ಆತ್ಮಹತ್ಯೆ ಮಾಡಿಕೊಂಡನೆಂದು ಡಾಕ್ಟರರು ರಿಪೋರ್ಟ್ ಮಾಡಿದರು ಎಂದು ಹೇಳುತ್ತಾರೆ. ವಸ್ತು ಸ್ಥಿತಿ ಹೀಗಿರುವಾಗ ಚಿಕ್ಕವೀರ ರಾಜೇಂದ್ರನು ಮಾಡದ ಅಪರಾಧವನ್ನು ಆತನ ತಲೆಗೆ ಕಟ್ಟುವುದು ಎಂತಹ ಹೀನಕೃತ್ಯವೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

1834ರಲ್ಲಿ ಕೊಡಗು, ಚಿಕ್ಕವೀರ ರಾಜೇಂದ್ರನ ಕೈತಪ್ಪಿ ಹೋಯಿತು. ಆಗಿನ್ನೂ ಚಿಕ್ಕವೀರ ರಾಜೇಂದ್ರ ನಿಗೆ ಮಗಳು ಗೌರಮ್ಮ ಹುಟ್ಟಿರಲಿಲ್ಲ. 1852ರಲ್ಲಿ ಮಗಳಿಗೆ ಇಂಗ್ಲಿಷ್ ಶಿಕ್ಷಣ ಕೊಡಿಸುವ ಉದ್ದೇಶದಿಂದ ಇಂಗ್ಲೆಂಡಿಗೆ ತೆರಳುವಾಗ ಗೌರಮ್ಮ 10 ವರ್ಷದವಳಿ ದ್ದಳು. ಇಂಥವಳು ಕಾವಲುಗಾರ ಉತ್ತಯ್ಯನನ್ನುಪ್ರೇ ಮಿಸುತ್ತಿದ್ದಳು ಎಂದು ಹೇಳುವುದು ವಾಸ್ತವಕ್ಕೆ ದೂರ ವಾದ ಮಾತು. ರಾಜ್ಯ ಕಳೆದುಹೋದ ವರ್ಷಕ್ಕೆ ಗೌರಮ್ಮ ಹುಟ್ಟುತ್ತಾಳೆ. ಅಂದರೆ ಇಲ್ಲದ ಮಗಳು ಉತ್ತಯ್ಯನನ್ನು ಪ್ರೇಮಿಸುವುದು ಸಾಧ್ಯವೇ? ಎಂಬು ದನ್ನು ಮನಗಂಡಾಗ ಇದು ಕುಚೋದ್ಯತನದಿಂದ ಕೂಡಿದ ಮಾತೆಂಬುದು ಗೊತ್ತಾಗುತ್ತದೆ.

ಕಳೆದು ಹೋದ ರಾಜ್ಯವನ್ನು ಮರಳಿ ಪಡೆಯ ಬೇಕೆಂಬ ಚಿಕ್ಕವೀರ ರಾಜೇಂದ್ರನ ಆಸೆ ಸಹಜವಾ ದುದೇ. ಹಾಗಿರಬಾರದೆಂದು ಹೇಳುವುದಕ್ಕೆ ಯಾರಿಗೂ ಅಧಿಕಾರವಿಲ್ಲ. ಆದರೆ ಅದಕ್ಕಾಗಿ ಮಗಳನ್ನು ಮತಾಂ ತರಿಸಿ, ಆಮೂಲಕ ತನ್ನ ರಾಜ್ಯವನ್ನು ಮರಳಿ ಪಡೆ ಯಬೇಕೆಂದು ಆಶಿಸಿದ್ದನೆಂದು ಹೇಳುವುದು ಚಿಕ್ಕವೀರ ರಾಜೇಂದ್ರನ ವ್ಯಕ್ತಿತ್ವದ ಹನನ ಮಾಡಲು ಹೇಳುವ ಮಾತಾಗುತ್ತದೆ. ರಾಯಿಸರು ಮತ್ತು ಮುತ್ತಣ್ಣನವರು. ಚಿಕ್ಕವೀರ ರಾಜೇಂದ್ರನು ತಮ್ಮ ಮಗಳಿಗೆ ಇಂಗ್ಲಿಷ್ ಶಿಕ್ಷಣದ ಲಾಭ ಪಡೆಯಲೆಂದು ಡಾಲ್‌ಹೌಸಿಯಿಂದ

ಇಂಗ್ಲೆಂಡಿಗೆ ಹೋಗುವುದಕ್ಕಾಗಿ ನಿರೂಪವನ್ನು ತೆಗೆದು ಕೊಂಡನು. – ಎಂದು ಹೇಳುತ್ತಾರೆ. ಈ ಮಾತು ಸುಳ್ಳೆನ್ನುವುದಕ್ಕೆ ಕಾರಣವೇ ದೊರೆಯದಿರುವಾಗ ಸತ್ಯ ವೆಂದು ಸುಸ್ಪಷ್ಟ ವಾಗುತ್ತದೆ.

ಗೌರಮ್ಮನು ತಾನು ಪ್ರೌಢಳಾದ ಮೇಲೆ ಇಂಗ್ಲೀಷಿನವನನ್ನು ಪ್ರೀತಿಸಿ, ಅವನನ್ನು ಮದುವೆ ಯಾಗುವುದಕ್ಕಾಗಿ ಕ್ರಿಶ್ಚಿಯನ್ ಧರ್ಮವನ್ನು ಸ್ವೀಕಾರ ಮಾಡಿದಳು. ಆ ಮಾತು ಬೇರೆ. ಆದರೆ ಚಿಕ್ಕವೀರ ರಾಜೇಂದ್ರನೇ ತನ್ನ ರಾಜ್ಯವನ್ನು ಮರಳಿ ಪಡೆಯುವುದಕ್ಕಾಗಿ ಮಗಳನ್ನು ಮತಾಂತರಿಸಿದ ಎಂದು ಹೇಳುವುದಕ್ಕೂ ಮಗಳು ಗೌರಮ್ಮನೆ ತಾನು ಮದುವೆಯಾಗುವುದಕ್ಕಾಗಿ ಕ್ರಿಶ್ಚಿಯನ್ ಧರ್ಮವನ್ನು ಸ್ವೀಕರಿಸಿದಳು, ಎಂಬುದಕ್ಕೂ ಇರುವ ಅಂತರವನ್ನು ಅರಿಯಬೇಕಾದದ್ದು ಪ್ರಾಜ್ಞರ ಕರ್ತವ್ಯ. ಚಿಕ್ಕವೀರ ರಾಜೇಂದ್ರ ತನ್ನ ಅಂತಸ್ಥಿತಿಗೆ, ವ್ಯಕ್ತಿತ್ವಕ್ಕೆ ವಿರುದ್ಧವಾಗಿ ವರ್ತಿಸಿಲ್ಲವೆನ್ನುವುದು ಇಲ್ಲಿ ನಮಗೆ ಪ್ರಸ್ತುತ. ಚಿಕ್ಕವೀರ ರಾಜೇಂದ್ರ ತನ್ನನ್ನು ತಾನು ತಾನಾಗಿಯೇ ಕೀಳಾಗಿಸಿಕೊಂಡಿಲ್ಲವೆನ್ನುವ ಸಂಗತಿಯು ಎಲ್ಲರ ಮೆಚ್ಚುಗೆಯನ್ನುಪಡೆಯಬೇಕಾದ ಮಾತು ಆತನ ಔನ್ನತ್ಯದ ಅರಿವಾಗುವುದು ಇಲ್ಲಿಯೇ.

ಚಿಕ್ಕವೀರ ರಾಜೇಂದ್ರನು ಕ್ರೂರಿಯೆಂಬುದಕ್ಕೆ ಉದಾಹರಣೆಯಾಗಿ ತಂಗಿ ದೇವಮ್ಮಾಜಿಯ ಮಗನನ್ನು ಮಗುವಾಗಿರುವಾಗಲೇ ಕೊಂದನೆಂದು ಹೇಳುತ್ತಾರೆ. ಆದರೆ ನಿಜವಾಗಿ ಹೇಳಬೇಕೆಂದರೆ, ದೇವಮ್ಮಾಜಿ – ಚೆನ್ನಬಸವಯ್ಯನವರಿಗೆ ಮಕ್ಕಳೇ ಆಗಿಲ್ಲ[1]. ಅಲ್ಲದೆ ಆಗಿನ ಕಾಲದ ಯಾವ ಆಂಗ್ಲ ಅಧಿಕಾರಿಯು ಈ ಮಾತನ್ನು ಹೇಳುವುದಿಲ್ಲ; ಸಮರ್ಥಿಸುವುದಿಲ್ಲ. ಇಂಥ ಸುಳ್ಳು ಸೃಷ್ಟಿಸಲಿಕ್ಕೆ ಕಾರಣವೇನು? ನಮಗೆ ಗೊತ್ತಾಗುವುದಿಲ್ಲ. ಆದರೆ ಸುಳ್ಳು ಸೃಷ್ಟಿಸಿದವರಿಗೆ ಮಾತ್ರ ಅದರ ಕಾರಣ, ಗೊತ್ತು – ಗುರಿ ತಿಳಿದೇ ಮಾಡಿರುತ್ತಾರೆ.

ಚಿಕ್ಕವೀರ ರಾಜೇಂದ್ರನು ಕ್ರೂರಿ, ಪ್ರಜೆಗಳು ಕೊಟ್ಟ ಕಂದಾಯವನ್ನು ಮರಳಿ ಕೇಳುತ್ತಿದ್ದುದ್ದರಿಂದ ವಿಷಯಲಂಪಟನಾದುದರಿಂದ, ಮದ್ಯಪಾನ ಮಾಡುತ್ತಿದ್ದುದ್ದರಿಂದ ಜನರ ಬೆಂಬಲವನ್ನು ಕಳೆದುಕೊಂಡುದುದರಿಂದಾಗಿ ರಾಜ್ಯಕ್ಕೆ ಕುತ್ತು ಬಂತು. ಅದಕ್ಕಾಗಿ ರಾಜ್ಯವನ್ನು ಕಳೆದುಕೊಂಡನು, ಎಂದು ಹೇಳುತ್ತಾರೆ. ಇದು ಎಷ್ಟರಮಟ್ಟಿಗೆ ಸರಿ ಎಂದು ನೋಡುವ.

1824ರಲ್ಲಿ ಕರ್ನಾಟಕದ ಕಿತ್ತೂರು ರಾಣಿ ಚೆನ್ನಮ್ಮನ ರಾಜ್ಯವನ್ನು ಬ್ರಿಟಿಷರು ಕಬಳಿಸಿದರು. ರಾಣಿ ಚೆನ್ನಮ್ಮ ಕ್ರೂರಿಯಾಗಿದ್ದಳೆಂದು ಕಬಳಿಸಿದರೆ? ಜನಾನುರಾಗ ಕಳೆದುಕೊಂಡಿದ್ದಳೆ?ಚೆನ್ನಮ್ಮನ ಮೇಲಿನಅಭಿಮಾನದಿಂದ ಕಿತ್ತೂರು ನಾಡಿನ ಮೇಲಿನ ಪ್ರೀತಿಯಿಂದ ಜನಸಾಮಾನ್ಯರ ಮಧ್ಯದಿಂದ ಮೂಡಿಬಂದ ಅಸಾ ಮಾನ್ಯ ಸಂಗೊಳ್ಳಿ ರಾಯಣ್ಣನಂತಹ ಅಪ್ರತಿಮ ದೇಶ ಭಕ್ತ ಚೆನ್ನಮ್ಮನಿಗಾಗಿ, ಕಿತ್ತೂರಿಗಾಗಿ ಪ್ರಾಣಾರ್ಪಣೆ ಮಾಡಲು ಸಿದ್ಧನಾದುದು ಸುಳ್ಳೇ? ಆದರೂ ಕೆಲವರ ಕುಟಿಲ ಕಾರಾಸ್ಥಾನದಿಂದ ಕಿತ್ತೂರು ಕನ್ನಡಿಗರ ಕೈಬಿಟ್ಟು ಹೋಯಿತು. ಸ್ವಾತಂತ್ರ್ಯನಂತರ ನಮ್ಮ ಮೈಸೂರು ಮಹಾರಾಜರ ರಾಜ್ಯ ಹೋಯಿತಲ್ಲ? ಅದಕ್ಕೆ ಮಹಾರಾಜರು ಜನರ ಪ್ರೀತ್ಯಾದರಗಳನ್ನು ಕಳೆದುಕೊಂಡಿದ್ದರೆಂದೇ? ಹಾಗೆಂದು ಹೇಳಲು ಯಾರೂ ಧೈರ್ಯ ಮಾಡಲಾರರು.

ಅಂತೆಯೇ ಕೊಡಗು ರಾಜ್ಯ ಚಿಕ್ಕವೀರ ರಾಜೇಂದ್ರನ ಕೈತಪ್ಪಿ ಹೋದದು ಬ್ರಿಟಿಷರು ಕುಯುಕ್ತಿಯಿಂದ ಕೊಡಗಿನ ಹೊರಗಿನಿಂದ ಬಂದ ಪಿತೃಪ್ರಧಾನ ಕುಟುಂಬಗಳ ವ್ಯವಸ್ಥೆಯಿರುವ ಒಳಸಂಚಿನಿಂದ. ಚಿಕ್ಕವೀರರಾಜೇಂದ್ರನು ಮಾತೃಪ್ರಧಾನ ಕುಟುಂಬದ ಪದ್ಧತಿಯನ್ನು ಪ್ರತಿಪಾದಿಸುವವ ನಾದ್ದರಿಂದ, ತನಗೆ ಗಂಡು ಮಕ್ಕಳಿಲ್ಲದ್ದರಿಂದ ತನ್ನ ಮಗಳು ಗೌರಮ್ಮನಿಗೆ ರಾಜ್ಯ ದೊರೆಯಬೇಕೆಂದು ಆತನ ಹಂಬಲವಾಗಿತ್ತು. ಬ್ರಿಟಿಷರಿಗೆ ಇದೊಂದು, ರಾಜ್ಯ ಕಬಳಿಸಲು, ಪ್ರಬಲ ಕಾರಣವಾಗಿ ಪರಿಣಮಿಸಿತು. ಪಿತೃಪ್ರಧಾನ ಕುಟುಂಬದ (ಇವರೆಲ್ಲರೂ ಕೊಡಗಿನ ಹೊರಗಿನಿಂದ ಬಂದವರು) ಜನರೆಲ್ಲ ಬ್ರಿಟಿಷರ ಒಳಸಂಚಿಗೆ ನೆರವಾದರು. ಮೂಲ ಕೊಡಗಿನ ನಿವಾಸಿಗಳು ಇದಾವುದನ್ನು ಅರಿಯದೆ, ಪ್ರತಿಭಟಿಸುವ ಶಕ್ತಿ ಇಲ್ಲದ್ದರಿಂದ ಅರಸನ ಮೇಲೆ ಅಭಿಮಾನ, ಆದರವಿದ್ದರೂ ಮೂಕ ಪ್ರೇಕ್ಷಕರಾಗಿ ನೋಡಬೇಕಾಯಿತು.

ಚಿಕ್ಕವೀರ ರಾಜೇಂದ್ರನ ಬಗ್ಗೆ ಬರೆಯುವವರೆಲ್ಲರೂ ಕೊಡಗಿನ ರಾಜ್ಯವನ್ನು ಕಬಳಿಸಲು ಹವಣಿಸುವ ಬ್ರಿಟಿಷ್ ಅಧಿಕಾರಿಗಳು ಚಿಕ್ಕವೀರರಾಜೇಂದ್ರನ ಮಾತೃಪ್ರಧಾನ ಕುಟುಂಬ ಪದ್ಧತಿಗೆ ವಿರೋಧವಾಗಿರುವವರ ಮಾತುಗಳನ್ನು ಮಾತ್ರ ಆಧಾರವಾಗಿ ತೆಗೆದುಕೊಳ್ಳುತ್ತಾರೆ. ಇವುಗಳಲ್ಲಿ "ಪಳಮೆಯ ಪಟ್ಟೋಲೆ"ಯ ಕರ್ತೃ, ಮತ್ತು ಶ್ರೀ ಡಿ.ಎನ್. ಕೃಷ್ಣಯ್ಯನವರೂ ಸೇರುತ್ತಾರೆ. "ಪಳಮೆಯ ಪಟ್ಟೋಲೆ" ಎಂದರೆ ಕೊಡವ ಭಾಷೆಯಲ್ಲಿ ಸುಳ್ಳು ಸಮಾಚಾರ –ಸಂಗತಿ. ಇದು ಒಂದು ಜಾನಪದದ ಆಧಾರ ಗ್ರಂಥವೆಂದು ಬಹಳ ಜನರ ಭಾವನೆಯಾಗಿದೆ. ಇದು ತಪ್ಪು ಆದರೆ ಇದು ಇತ್ತೀಚಿಗೆ ಬರೆದುದಾಗಿದೆ. ಇದರ ಕರ್ತೃವಿನ ಹೆಸರು

ಮರೆತು ಹೋಗಿದೆ. ಇದರ ಸಂಪಾದಕರು; ನಡಿಕೇರಿಯಂಡ ಚಿಣ್ಣಪ್ಪ. ಅನಂತರ ಕೊಡಗಿನ ಇತಿಹಾಸವನ್ನು ಬರೆದ ಶ್ರೀಮಾನ್ ಡಿ.ಎನ್. ಕೃಷ್ಣಯ್ಯನವರೂ ಅಷ್ಟೇ. ಚಿಕ್ಕವೀರ ರಾಜೇಂದ್ರನು ತನ್ನ ಶಕ್ತಿವರ್ಧನೆಗಾಗಿ ಬಾಣಂತಿಯರ ಹಾಲು ಕುಡಿಯುತ್ತಿದ್ದನೆಂದು ಬರೆದು, ಚಿಕ್ಕವೀರರಾಜೇಂದ್ರನನ್ನು ನಿರ್ದಯ ವ್ಯಕ್ತಿಯನ್ನಾಗಿ ಚಿತ್ರಿಸಿದ್ದಾರೆ. ಇದೆಲ್ಲಕ್ಕೂ ಮೂಲ ಕಾರಣವೆಂದರೆ ಕೊಡವ ಭಾಷೆಯ ಪರಿಚಯವಿಲ್ಲದ ದ್ದರಿಂದ ಆಗುವ ಅನಾಹುತಗಳು. ಜಾನಪದ ಸಂಶೋಧಕರೊಬ್ಬರು ಚಿಕ್ಕವೀರ ರಾಜೇಂದ್ರನನ್ನು "ಸ್ತ್ರೀ ಕುಲೋಧ್ಧಾರಕನೆಂದು" ಕೊಡಗಿನ ಜಾನಪದದಲ್ಲಿ ವರ್ಣಿಸಿರುವುದನ್ನು ಬೆಳಕಿಗೆ ತಂದು, ಇತಿಹಾಸಕ್ಕೆ, ಚಿಕ್ಕವೀರ ರಾಜೇಂದ್ರನಿಗೆ ಮಹೋಪಕಾರ ಮಾಡಿದ್ದಾರೆ[2]. ಜನಪದರು ಯಾರ ಆಸೆ – ಆಮಿಷಗಳಿಗೆ ಒಳಗಾಗದೆ, ಹತ್ತಿರದಿಂದ ಕಂಡು, ಹೃದಯಕ್ಕೆ ತಟ್ಟಿದ ಮಾತುಗಳನ್ನು ಹೃತ್ಪೂರ್ವಕವಾಗಿ ನುಡಿದಿರುವುದರಿಂದ, ಆ ಮಾತುಗಳಿಗೆ ಶಿಲಾಶಾಸನಗಳಿಗಿಂತಲೂ ಹೆಚ್ಚು ಬೆಲೆಯಿದೆ. ಅವರಿಗೆ ಯಾರನ್ನು ಮೆಚ್ಚಿಸಬೇಕಾಗಿಲ್ಲ. ತಾವು ಪರಿಭಾವಿಸದುದನ್ನು ಮಾತ್ರ ಹೇಳ ಬಲ್ಲರು. ಈ ಮಾತುಗಳು ಚರಿತ್ರೆಗೆ ಮೂಲಾಧಾರ.

ಕೊಡಗಿನ ಇತಿಹಾಸದಲ್ಲಿ ಚಿಕ್ಕವೀರರಾಜೇಂದ್ರನನ್ನು ಕುರಿತು ಹೇಳಿಕೆ ಇಂತಿದೆ "ಮೊದೆ ಪಾಲಿಗೆ ಹೋದ ರಾಜನನ್ನು ಮೊಲೆಹಾಲಿಗೆ ಹೋದಾಂತೆ ಆಡಿಕೊಂಡಂತೆ" (ಮೊದೆ ಪಾಲಕ್ ಪೋನ ರಾಜನ ಮೊಲೆಪಾಲಕ್ ಪರಂದತ್ರ)

ತೀವ್ರ ಅಸ್ವಸ್ಥನಾದಾಗ ಚಿಕ್ಕವೀರ ರಾಜೇಂದ್ರನು "ಕೊಡಚಿಯ (ಕೊಡಗಿನ ಮಾತೃಪ್ರಧಾನ ಕುಟುಂಬದ ಮುಖ್ಯಸ್ಥೆಯ) ವೈದ್ಯಕೀಯ ಸಲಹೆಯಂತೆ "ಮೊದೆ ಪಾಲ"ನ್ನು (ವಿವಿಧ ಗಿಡಮೂಲಿಕೆಗಳಿಗೆ ಬೇಕಾದಡೆ ಜೇನು ಸವರಿದ ಹಲಸಿನೆಲೆಯ ದೊನ್ನೆ (ತೇಪರಟೆ) ಗಳನ್ನು ಮುಂಜಾವಿನಲ್ಲಿ ಕಟ್ಟಿ, ಸಂಗ್ರಹಿಸಿ ಮಂಜಿನ ಹನಿಗಳು) ಸತತವಾಗಿ ಸೇವಿಸಿ, ತನ್ನ ಆರೋಗ್ಯವನ್ನು ಸಂವರ್ಧಿಸಿಕೊಂಡಿದ್ದ.

ಈ ಚಿಕ್ಕವೀರ ರಾಜೇಂದ್ರನು ತನ್ನ ಆಡಳಿತ ಕಾಲದಲ್ಲಿ ತನ್ನ ಪೂರ್ವ ಜನರ ಕಾಲದಲ್ಲಿ ದಮನಕ್ಕೀಡಾದ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಪುನರುತ್ಥಾನ ಗೊಳಿಸಿದ. ಆದರೆ "ಕಷ್ಟವೆಂಬ (ಚಿಕ್ಕ ಎಂದರೆ ಕೊಡವ ಭಾಷೆಯಲ್ಲಿ ಕಷ್ಟವೆಂದು ಅರ್ಥ) ನಾಮಧರಿಸಿ, ಕಷ್ಟದ ಪರಂಪರೆ ಹೊತ್ತ ಹೆಣ್ಣಿನ ಏಳ್ಗೆಗಿದು ವಿಟನೆಂಬ ಬಿರುದು ಹೊತ್ತ (ಚಿಕ್ಕಲ್ ಪೆದತ್ ಚಿಕ್ಕಾಟ್ ಕೊಂಡ ಪೊಂಗ ಪೇರ್‌ಮೆಲ್ ಪುಲಿಯಾಟ್ ಕೊಂಡ)[3]

ಬ್ರಿಟಿಷರ ಆಡಳಿತವನ್ನು ಕೊಡಗಿನಲ್ಲಿ ತೀವ್ರ ವಿರೋಧಿಸಿದ್ದರಿಂದಾಗಿ ಬ್ರಿಟಿಷರ ಅವಕೃಪೆಗೊಳಗಾದ ಈ ಚಿಕ್ಕವೀರ ರಾಜೇಂದ್ರನು ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಯನ್ನು ಪುನುರುತ್ಥಾನಗೊಳಿಸಲೆತ್ನಿಸಿದ್ದರಿದ ಬಹು ಸಂಖ್ಯಾತ ಪಿತೃಪ್ರಧಾನ ಕುಟುಂಬಸ್ಥದ ಸಾಮೂಹಿಕ ತೀವ್ರ ವಿರೋಧಕ್ಕಿಡಾಗಬೇಕಾಯಿತು. ಹೀಗೆ ದ್ವಂದ್ವ ನಿತಿ ಪ್ರಧಾನ "ಆಂಗ್ಲ ಇತಿಹಾಸ"ದಲ್ಲಿ ದುಷ್ಟನಾದ ಚಿಕ್ಕವೀರ ರಾಜೇಂದ್ರನು ಕೊಡಗಿನ "ಜನಪದದ ಇತಿಹಾಸ"ದಲ್ಲಿ ಮಾತ್ರ "ಸ್ತ್ರೀ ಕುಲೋದ್ಧಾರಕ"ನೆಂದು ಚಿರಂಜೀವಿಯಾಗಿರುವನು.

ಇತಿಹಾಸಕಾರರು – ಮೊದಲಾದವರು ಇಂಗ್ಲಿಷರು ಹೇಳಿದ್ದೇ ಅಧಿಕೃತವೆನ್ನುವುದಾದರೆ 1855ರಲ್ಲಿ ಲಂಡನ್‌ನಲ್ಲಿ ಪ್ರಕಟವಾಗಿರುವ ಚಿಕ್ಕವೀರ ರಾಜೇಂದ್ರನೊಡನೆ ಬದುಕಿದ ವಿಲಿಯಂ ಜಫರ್‌ಸನ್‌ನ "ಕೂರ್ಗ ಅಂಡ್ ಇಟ್ಸ್ ರಾಜಾಸ್" ಎಂಬ ಕೃತಿಯನ್ನು ಮಾತ್ರ ಗಣನೆಗೆ ತೆಗೆದುಕೊಂಡಂತಿಲ್ಲ. "ಈ ರಾಜನು ಪ್ರಜೆಗಳ ಕಷ್ಟಕಾರ್ಪಣ್ಯಗಳನ್ನು ಕರುಣೆಯಿಂದ ಕೇಳಿ, ತಿಳಿದುಕೊಳ್ಳುತ್ತಿದ್ದ; ಅವುಗಳನ್ನು ನಿವಾರಿಸುವತ್ತ ಲಕ್ಷ್ಯ ಕೊಡುತ್ತಿದ್ದ. ಇದರಿಂದಾಗಿ ಆತ ಪ್ರವಾಸ ಮಾಡಿದಾಗಲೆಲ್ಲ ಜನರು ಆತನ ಸುತ್ತ ಮುಕುರುತ್ತಿದ್ದರು. ಈ ಬಗ್ಗೆ ತನ್ನ ದಿವಾನರು, ಸುಭೇದಾರರು ಮತ್ತು ಮುನ್ಷಿಗಳಿಗೆ ಆಜ್ಞೆಯನ್ನು ನೀಡುತ್ತಿದ್ದ. ನಾವು ರಾಜ್ಯದ ಒಳಭಾಗದಲ್ಲಿ ರಾಜನ ಸಂಗಡ ಪ್ರವಾಸ ಮಾಡಿದಾಗ ನೂರಾರು ಸಂಖ್ಯೆಯಲ್ಲಿ ಸ್ಥಳೀಯ ಗಂಡಸರು, ಹೆಣ್ಣು ಮಕ್ಕಳು ಮತ್ತು ಚಿಕ್ಕ ಮಕ್ಕಳು ಕುತೂಹಲದಿಂದ ಮುತ್ತಿ, ಗೌರವಾದರದೊಡನೆ ಆತ್ಮೀಯವಾಗಿ ಸ್ವಾಗತಿಸುತ್ತಿದ್ದರು. ಇದನ್ನು ಹೇಳಲು ನನಗೆ ಬಹಳ ಸಂತೃಪ್ತಿಯಾಗುತ್ತದೆ[4]. ಎಂದು ವಿಲಿಯಂ ಜಫರ್‌ಸನ್ ಚಿಕ್ಕವೀರ ರಾಜೇಂದ್ರನ ಬಗ್ಗೆ ಇನ್ನು ಮೆಚ್ಚುಗೆಯನ್ನು ಬಿಚ್ಚು ಮನಸ್ಸಿನಿಂದ ವ್ಯಕ್ತಗೊಳಿಸುತ್ತಾನೆ – ಎಂಬುದನ್ನು ನಾವು ಸೂಕ್ಷ್ಮವಾಗಿ ಗಮನಿಸಬೇಕು.

ಮೇಲಿನ ವಿವೇಚನೆಯಿಂದ ಚಿಕ್ಕವೀರ ರಾಜೇಂದ್ರನು "ಸ್ತ್ರೀ ಕುಲೋದ್ಧಾರಕ" ನೂ "ಪ್ರಜಾನುರಾಗಿ"ಯೂ ಆಗಿದ್ದನೆಂಬುದು ಸುವ್ಯಕ್ತವಾಗುತ್ತದೆ.

1-3. ಇವು ಶ್ರೀಮತಿ ಪಿ.ವಿ. ತುಳಸೀದೇವಿಯವರ ಅಭಿಪ್ರಾಯ

ಡಾ॥ ಎಚ್.ಎಸ್. ಗೋಪಾಲರಾವ್

# "ಕುಕ್ಕೆ ಸುಬ್ರಹ್ಮಣ್ಯ" – ಒಂದು ಅಧ್ಯಯನ

ಸುಬ್ರಹ್ಮಣ್ಯ ದಕ್ಷಿಣ ಕನ್ನಡ ಜಿಲ್ಲೆಯ ಒಂದು ಪ್ರಮುಖ ತೀರ್ಥಕ್ಷೇತ್ರ, ಯಾತ್ರಾಸ್ಥಳ. ತುಳುನಾಡಿನ ಚರಿತ್ರೆಯಲ್ಲಿ ಸುಬ್ರಹ್ಮಣ್ಯಕ್ಕೆ ಧಾರ್ಮಿಕವಾಗಿ ಮತ್ತು ಸಾಂಸ್ಕೃತಿಕವಾಗಿ ವಿಶೇಷ ಸ್ಥಾನ ಉಂಟು. ಕುಮಾರ ಪರ್ವತ ಮತ್ತು ಶೇಷ ಪರ್ವತಗಳ ನಡುವೆ ದಟ್ಟ ಅರಣ್ಯದ ತಪ್ಪಲಿನಲ್ಲಿ ಕುಮಾರಧಾರಾ ನದಿಯ ದಂಡೆಯ ಮೇಲಿರುವ ಒಂದು ಚಿಕ್ಕ ಹಳ್ಳಿ ಸುಬ್ರಹ್ಮಣ್ಯ. ಇಲ್ಲಿ ಪ್ರವಾಸಿಗಳ, ವಿಶೇಷವಾಗಿ ಯಾತ್ರಿಕರ ಸಂಖ್ಯೆಯೇ ಅಧಿಕ. ಸುಬ್ರಹ್ಮಣ್ಯದ ಕುಕ್ಕೆ ಶ್ರೀ ಸುಬ್ರಹ್ಮಣ್ಯೇಶ್ವರ ಸ್ವಾಮಿಯ ಸೇವೆಗೆ ಬರುವ ಭಕ್ತರ ಸಂಖ್ಯೆ ಅಪಾರ. ತುಳುನಾಡಿನವರಲ್ಲದೆ ಹಳೆಯ ಮೈಸೂರು ಪ್ರಾಂತ್ಯದ ಅನೇಕ ಜಿಲ್ಲೆಗಳ ಹಲವರಿಗೆ ಕುಕ್ಕೆಸುಬ್ರಹ್ಮಣ್ಯ ಮನೆದೇವರು.

## ಶಂಕರಾಚಾರ್ಯರು ಮತ್ತು ಸುಬ್ರಹ್ಮಣ್ಯ

ಯಾವುದೇ 'ಶಂಕರವಿಜಯ'ದ ರಚನೆಯ ಕಾಲದ ಬಗೆಗೆ ಏಕಾಭಿಪ್ರಾಯವಿಲ್ಲ. ಆನಂದಗಿರಿಯ ಶ್ರೀ ಶಂಕರವಿಜಯದ ರಚನೆಯ ಕಾಲ ಕ್ರಿ.ಶ. ಸುಮಾರು 10ನೇ ಶತಮಾನ ಎಂಬುದು ಡಾ॥ ಪಿ. ಗುರುರಾಜಭಟ್ಟರ ಅಭಿಪ್ರಾಯ. ಆನಂದಗಿರಿಯ ಶಂಕರವಿಜಯದಲ್ಲಿ ಶಂಕರಾಚಾರ್ಯರು ಕುಕ್ಕೆಯಲ್ಲಿಕೆಲವು ದಿನ ತಂಗಿದ್ದಂತೆ ತಿಳಿಸಲಾಗಿದೆ. ಶಂಕರಾಚಾರ್ಯರಿಂದ ರಚಿಸಲ್ಪಟ್ಟಿದೆ ಎಂದು ನಂಬಲಾಗಿರುವ'ಶ್ರೀ ಸುಬ್ರಹ್ಮಣ್ಯ ಭುಜಂಗ ಪ್ರಯಾತ ಸ್ತೋತ್ರ'ದಲ್ಲಿ ಕುಕ್ಕೇಪುರ ಮತ್ತು ಕುಕ್ಕೇಲಿಂಗ ಎರಡೂ ಉಲ್ಲೇಖಗೊಂಡಿವೆ. ಇದರಿಂದ ಕುಕ್ಕೇಪುರ ಮತ್ತು ಕುಕ್ಕೇಲಿಂಗದ ಇತಿಹಾಸವು ಕ್ರಿ.ಶ. 8ನೇಯ ಶತಮಾನಕ್ಕೆ ಮೊದಲಿನಿಂದ ಆರಂಭವಾಗುತ್ತದೆಂದು ತಿಳಿಯಲಾಗಿದೆ.

ಶಂಕರಾಚಾರ್ಯರು ಪಂಚಾಯತನದ ಆರಾಧನಾ ವಿಧಿಯನ್ನು ಬಳಕೆಗೆ ತಂದರು ಎಂಬ ಅಭಿಪ್ರಾಯವಿದೆ. ಈ ಹಿನ್ನೆಲೆಯಲ್ಲಿ ಸುಬ್ರಹ್ಮಣ್ಯದಲ್ಲಿರುವ ಪಂಚಾಯತನದ ಪಂಚಲೋಹದ ಆಕರ್ಷಕ ಮೂರ್ತಿಗಳು ಶ್ರೀ ಶಂಕರಾಚಾರ್ಯರ ಕಾಲದ್ದು ಎಂಬ ಮಾತಿದೆ. ಆದರೆ ಅದನ್ನೊಪ್ಪದ ಡಾ॥ ಪಿ. ಗುರುರಾಜಭಟ್ಟರ ಪ್ರಕಾರ ದಕ್ಷಿಣ ಕನ್ನಡದಲ್ಲಿ ಅಂತಹ ಬಿಂಬಗಳು ವಿರಳ.

ಪೌರಾಣಿಕವಾಗಿ ಸುಬ್ರಹ್ಮಣ್ಯದ ಹಿನ್ನಲೆಯನ್ನು ಸ್ಕಾಂದ ಪುರಾಣವು ತಿಳಿಸುತ್ತದೆ. ತಾರಕ, ಸಿಂಹವಕ್ತ್ರ, ಗಜಾಸ್ಯ ಮತ್ತು ಶೂರಪದ್ಮ ಎಂಬ ರಾಕ್ಷಸರ ಸಂಹಾರಕ್ಕಾಗಿ ಶಿವಪಾರ್ವತಿಯರ ಮಗನಾಗಿ ಹುಟ್ಟಿದ ಕುಮಾರಸ್ವಾಮಿಯು ಅಸುರರನ್ನು ಸಂಹರಿಸಿದ ನಂತರ ತನ್ನ ಖಡ್ಗವನ್ನು ತೊಳೆದುಕೊಂಡ ನದಿ ಕುಮಾರಧಾರೆ ಎಂಬ ಮಾತಿದೆ. ಆದರೆ ದುಷ್ಟ ರಾಕ್ಷಸರ ಸಂಹಾರಾನಂತರ ಕುಮಾರನು ತಪಸ್ಸು ಮಾಡಿದ ಪರ್ವತವು ಕುಮಾರಪರ್ವತವೆಂದೂ, ಆ ಸ್ಥಳದಲ್ಲಿ ಉಗಮಗೊಂಡ ನದಿಯನ್ನು ಕುಮಾರಧಾರೆ ಎಂದು ಕರೆಯುತ್ತಾರೆ ಎಂಬ ಅಭಿಪ್ರಾಯವೂ ಇದೆ. ಕುಮಾರಧಾರೆಯ ಉಗಮದ ಬಗೆಗೆ ಸ್ಕಾಂದ ಪುರಾಣದಲ್ಲೇ ಮತ್ತೂ ಒಂದು ಕತೆ ಇದೆ. ಋಷ್ಯಶೃಂಗ ಪರ್ವತದಲ್ಲಿ ಸಹಸ್ರಬಿಂದುವು ಪುತ್ರಪ್ರಾಪ್ತಿಗಾಗಿ ಸೂರ್ಯನನ್ನು ಕುರಿತು ತಪಸ್ಸು ಮಾಡಿದಾಗ, ಅವನ ಕುತ್ತಿಗೆಯ ಸರದಲಿ ಹಿಮವು ಮುತ್ತಿನ ಮಣಿಯಂತೆ ಜೋತಾಡುತ್ತಾ ಕೆಳಗೆ ಬಿದ್ದು ನದಿಯಾಗಿ ಹರಿಯಿತು. ಆ ನದಿಯೇ ಕುಮಾರಧಾರೆ ಎನಿಸಿತು. ಸೂರ್ಯನ ಮಾತಿನಂತೆ ಕುಮಾರಧಾರೆಯೇ ಸಹಸ್ರಬಿಂದುವಿನ ಮಗ ಶತಬಿಂದು. ಇಂತಹ ಕಥೆಗಳು ಕೇಳಲು ಆಕರ್ಷಕ. ಯಾವುದೇ ನದಿಯ ಉಗಮದ ಬಗೆಗೂ ಇಂತಹುದೇ ಒಂದಲ್ಲ ಒಂದು ಕಥೆ ಇರುತ್ತದೆ. ಅವುಗಳ ಕಾಲ್ಪನಿಕ ಎಂದು ಯಾರಿಗಾದರೂ ತಿಳಿಯುತ್ತದೆ.

ತಾರಕಾದಿ ರಾಕ್ಷಸರನ್ನು ಸಂಹಾರಮಾಡಿದ ನಂತರ ಕುಮಾರ ಪರ್ವತಕ್ಕೆ ಬಂದ ಕುಮಾರಸ್ವಾಮಿಯು ಇಂದ್ರನ ಕೋರಿಕೆಯಂತೆ ಅವನ ಮಗಳು ದೇವಸೇನೆಯನ್ನು ಮಾರ್ಗಶಿರ ಶುದ್ಧ ಷಷ್ಠಿಯ ದಿನ ಮದುವೆಯಾಗಿ, ಅಲ್ಲಿ ವಾಸಮಾಡುತ್ತಿದ್ದ ವಾಸುಕಿಯ ಪ್ರಾರ್ಥನೆಯಂತೆ ದೇವಸೇನಾ ಸಹಿತ ಒಂದು ಅಂಶದಿಂದ ಅಲ್ಲಿಯೇ ನೆಲೆಗೊಂಡನೆಂದೂ, ಪೌರಾಣಿಕ ಹಿನ್ನೆಲೆಯಿದೆ.

ಸುಬ್ರಹ್ಮಣ್ಯನು ಬ್ರಹ್ಮಚಾರಿ ರೂಪದಲ್ಲಿ ತಪಸ್ಸು ಮಾಡಿದ ಸ್ಥಳದಲ್ಲಿ ದೊಡ್ಡದಾಗಿ ಹುತ್ತ ಬೆಳೆದು, ಅದೇ ತನ್ನ ಮೂಲಸ್ಥಾನವೆಂದು ಸುಬ್ರಹ್ಮಣ್ಯನು ಅಲ್ಲಿಯೇ ಸರ್ಪರೂಪದಲ್ಲಿ ವಾಸಮಾಡುತ್ತಿದ್ದಾನೆಂಬ ಮಾತೂ ಇದೆ.ಶ್ರೀ ಸುಬ್ರಹ್ಮಣ್ಯಕ್ಷೇತ್ರ ಪುರಾಣದಲ್ಲಿ ಉಕ್ತ ವಾಗಿರುವಂತೆ ಸುಬ್ರಹ್ಮಣ್ಯನು ಸರ್ಪಾಕಾರದಲ್ಲಿ ರುವವನು ಮತ್ತು ಗುಹೆಯಲ್ಲಿ ವಾಸಿಸುವವನು. ಪೂರ್ವದಿಂದಲೂ ಇದ್ದ ಶೇಷದೇವನೂ ಸುಬ್ರಹ್ಮ ಣ್ಯನು ವಾಸಿಸುವ ಹುತ್ತದಲ್ಲೇವಾಸ ಮಾಡುತ್ತಿದ್ದಾ ನೆಂದೂ ತಿಳಿಯಲಾಗಿದೆ. ಈಗ ಸುಬ್ರಹ್ಮಣ್ಯದಲ್ಲಿ ಆದಿ ಸುಬ್ರಹ್ಮಣ್ಯ ಎಂದು ಪರಿಗಣಿತ ವಾಗಿರುವುದು ಇದೇ ದೇವರಿರಬೇಕು. ಅಲ್ಲಿ ಒಂದು ದೊಡ್ಡ ಹುತ್ತಕ್ಕೆ ಪ್ರತಿ ದಿನ ಪೂಜೆ ನಡೆಯುವುದು. ಸಾಮಾನ್ಯವಾಗಿ ಯಾವುದೇ ಒಂದು ಸ್ಥಳದಲ್ಲಿ ಮೊದಲಿನಿಂದಲೂ ಇರುವ ದೇವರ ಸ್ಥಾನಗಳಲ್ಲಿ ಮೂಲಸ್ಥಾನ ಎಂದು ತಿಳಿಯಬಹುದು. ಮೂಲ ಸ್ಥಾನಗಳಲ್ಲಿ ಹುತ್ತ, ವೃಕ್ಷ, ಶಿಲೆ ಇತ್ಯಾದಿಗಳನ್ನೇ ಪೂಜಿಸುತ್ತಾರೆ.

## ಸುಬ್ರಹ್ಮಣ್ಯ ಮತ್ತು ಪುರಾತತ್ವ, ಇತಿಹಾಸ.

ಸುಬ್ರಹ್ಮಣ್ಯ ಇರುವುದು ತುಳುನಾಡಿನಲ್ಲಿ. ತುಳು ನಾಡನ್ನು ಹಿಂದೆ ಆಳಿದವರು ಆಳುಪರು. ಆಳುಪ, ಅಳುಪ, ಆಲುಕ, ಅಳುವ, ಆಳ್ವ ಇವೆಲ್ಲವೂ ಒಂದೇ ಅರ್ಥದ ಶಬ್ದಗಳು. ಆಲುಕವು ಶೇಷ ಸೂಚನೆಯಶಬ್ದ. ಇದರಿಂದ ಆಳುಪರು ಶೇಷಸಂಬಂಧದವರೆಂದು ತಿಳಿ ಯುತ್ತದೆ. ಈ ನಿಟ್ಟಿನಲ್ಲಿ ಆಳುಪ ಖೇಡವು ಶೇಷಕ್ಷೇ ತ್ರವೆಂದು ಒಪ್ಪಬಹುದಾಗಿದೆ. ಇದೇ ನಾಗಕ್ಷೇತ್ರ, ನಾಗಮಂಡಲ. ನಾಗನಿಗೆ ಚೇರ ಎಂದೂ ಕರೆಯುವು ರಿಂದ ಇದೇ ಚೇರಮಂಡಲ; ಚೇರ ವಂಶದವರೊಡನೆ ಸಂಬಂಧ ಪಡೆದಿರುವುದು. ಚೇರರೇ ನಾಗರು. ನಾಗ ಜನ ಈ ಪರಿಸರದಲ್ಲಿದ್ದರು ಎಂಬುದು ಎಂ.ಗೋವಿಂದಪೈ ಅವರ ಅಭಿಪ್ರಾಯ. ಉತ್ತರ ಕನ್ನಡ ಜಿಲ್ಲೆಯಿಂದ ಕನ್ಯಾಕುಮಾರಿಯವರೆಗೆ ನಾಗಚಿನ್ಹೆಯನ್ನು ಹೊಂದಿದ್ದ ಜನ ವಾಸಿಸುತ್ತಿದ್ದರು ಎಂದುಪೈ ಅವರು ತಿಳಿಸುತ್ತಾರೆ. ಫ್ಲೀಟ್ ಅವರ ಪ್ರಕಾರ ಆಳುಪ ಎನ್ನು ವುದು ಶೇಷಸೂಚಕ. ಈ ಶೇಷ ನಾಗರೂಪಿ. ಡಾ. ಸಾಲೆತ್ತೊರೆ ಅವರು ಆಳುಪರು ನಾಗಮೂಲದವರು ಎಂದೇ ಸೂಚಿಸುತ್ತಾರೆ. ಆಳ್ವಖೇಡದ ಉತ್ತರಭಾಗವು ಚಾಲುಕ್ಯ ಸೀಮೆಗೆ ಸೇರಿದ್ದು. ಈ ಪ್ರಾಂತ್ಯದಲ್ಲಿ ನಾಗ ರೆಂಬ ಜನರಿದ್ದರು ಎಂಬುದು ಹಲವು ವಿದ್ವಾಂಸರ ಅಭಿಪ್ರಾಯ. ಆ ನಾಗರ ಒಂದು ಪಂಗಡವೇ ಆಳು ಪರು. ಇವರು ನೆಲೆ ನಿಂತ ಪ್ರದೇಶವೇ ಆಳ್ವಖೇಡ. ಅದೇ ತುಳುನಾಡು. ನಾಗಜನಾಂಗದವರಿದ್ದ ಕಾರಣದಿಂದಲೇ ತುಳುನಾಡಿನಲ್ಲಿ ನಾಗನಿಗೆ ವಿಶೇಷ ಪ್ರಾಶಸ್ತ್ಯ. ಹೀಗಾಗಿ ನಾಗಪೂಜೆ ಮಹತ್ವ ಪಡೆದ ತುಳುನಾಡಿನಲ್ಲಿ ನಾಗನ ಜೊತೆಗೆ ಸುಬ್ರಹ್ಮಣ್ಯನೂ ಒಂದೇ ಎಂಬಂತೆ ಪೂಜೆ ಪಡೆಯುತ್ತಾನೆ. ಪ್ರಸಿದ್ಧ ನಾಗಕ್ಷೇತ್ರಗಳ ಪೈಕಿ ಸುಬ್ರಹ್ಮ ಣ್ಯವೂ ವಿಶೇಷ ಮಹತ್ವ ಪಡೆದಿದೆ.

ಸುಬ್ರಹ್ಮಣ್ಯದ ಸುತ್ತ ಕಾಡುಗಳಲ್ಲಿ ಪ್ರಾಚೀನ ಜನವಸತಿಯ ನೆಲೆಗಳು ಕಂಡು ಬರುತ್ತವೆಂದು ತಿಳಿ ಯಲಾಗಿದೆ. ಹಳೆಯ ಕಟ್ಟಡದ ಅವಶೇಷಗಳು, ಕಂಬ ಗಳು ಇತ್ಯಾದಿಗಳು ಕಾಣುವ ಸ್ಥಳಗಳಲ್ಲಿ ಭೂಶೋಧನೆ ನಡೆದರೆ ಏನಾದರೂ ಹೊಸ ವಿಷಯಗಳು ತಿಳಿಯುವ ಸಾಧ್ಯತೆಗಳಿವೆ.

## ನಾಗಪೂಜೆ ಮತ್ತು ಸುಬ್ರಹ್ಮಣ್ಯ

ನಾಗಪೂಜೆಯು ಪ್ರಪಂಚದ ಎಲ್ಲಾ ಭಾಗಗಳಲ್ಲೂ ಬಹಳ ಪ್ರಾಚೀನಕಾಲದಿಂದಲೂ ಇದ್ದದ್ದು ಈಗಲೂ ಇದೆ. ವಿಶೇಷವಾಗಿ ಭಾರತದಲ್ಲಿ ನಾಗಪೂಜೆಯು ಅಧಿಕ. ಕೆಲವು ವಿಶೇಷ ದಿನಗಳಂದು ಹುತ್ತಕ್ಕೆ ಪೂಜೆ ಸಲ್ಲುತ್ತದೆ. ಹುತ್ತವು ಮೂಲಸ್ಥಾನವಾಗಿಯೂ ಪೂಜೆ ಗೊಳ್ಳುತ್ತದೆ. ಹುತ್ತಕ್ಕೆ ಪೂಜೆ ಎಂದರೆ ಅದರೊಳಗಿರುವ ಅಥವಾ ಇರಬಹುದಾದ ನಾಗರಹಾವಿಗೆ ಎಂದರ್ಥ. ವಿಶೇಷ ಸಂದರ್ಭಗಳಲ್ಲಿ ಜೀವಂತ ನಾಗಗಳ ಪೂಜೆಯೂ ನಡೆಯುತ್ತದೆ. ಜೀವಂತ ನಾಗನೇ ಪೂಜೆ ಗೊಳ್ಳುವ ಸಂದರ್ಭಗಳಲ್ಲಿ ನಾಗಬಿಂಬಗಳ ಪೂಜೆಯು ಆಶ್ಚರ್ಯಕರವಲ್ಲ. ಕರ್ನಾಟಕದಲ್ಲಿ ನಾಗಬಿಂಬಗಳ ಪೂಜೆಯನ್ನು ಶಾತವಾಹನರ ಕಾಲಕ್ಕೇ ಗುರುತಿಸಬ ಹುದು. ಬನವಾಸಿಯ ನಾಗಶಿಲ್ಪವು ನಮಗೆ ಈ ನಿಟ್ಟಿ ನಲ್ಲಿ ಬಹುಮುಖ್ಯ ದಾಖಲೆಯಾಗಿದೆ.

ಗ್ರೀಸ್, ರೋಮ್, ಜಪಾನ್, ಆಸ್ಟ್ರೇಲಿಯ, ಈಜಿಪ್ಟ್, ಚೀನಾ ಇತ್ಯಾದಿ ದೇಶಗಳಲ್ಲೂ ಸಹ ಬಹಳ ಪ್ರಾಚೀನ ಕಾಲದಿಂದಲೂ ಸರ್ಪಪೂಜೆ ಇದ್ದು ದನ್ನು ಆಯಾದೇಶಗಳ ಪ್ರಾಚೀನ ಮೂರ್ತಿಶಿಲ್ಪಗಳು ಸೂಚಿಸುತ್ತವೆ. ಸಿಂಧೂ ನದಿಯ ಬಯಲಿನ ನಾಗರೀಕ ತೆಯ ಸಂದರ್ಭದಲ್ಲೂ ಸರ್ಪಪೂಜೆ ಇದ್ದುದನ್ನು ಅಲ್ಲಿಯ ಹಲವು ಮುದ್ರೆಗಳ ಮೂಲಕ ತಿಳಿಯ ಬಹುದು. ವೇದಗಳ ಕಾಲದಲ್ಲೂ ಸರ್ಪಪೂಜೆ ಇತ್ತು. ಪುರಾಣಗಳ ಕಾಲದಲ್ಲಂತೂ ಸರ್ಪಗಳು ವಿಶೇಷ ಪ್ರಾಶಸ್ತ್ಯ ಪಡೆದಿವೆ. ಸಮುದ್ರಮಥನ ಸಂದರ್ಭದಲ್ಲಿ

ಕಡೆಗೋಲಾದದ್ದು ಮಂದರ ಪರ್ವತ. ಹಗ್ಗವಾದದ್ದು ಶೇಷ ಎಂಬ ನಾಗ. ಶ್ರೀ ವಿಷ್ಣುವು ವಾಸಿಸುವುದೇ ಆದಿಶೇಷನ ಮೇಲೆ; ಅವನ ಹೆಡೆಯ ನೆರಳಲ್ಲಿ. ಶಿವನ ಕೊರಳಿನಲ್ಲಿ ನಾಗಸರ್ಪ. ಅವನ ಮಕ್ಕಳಲ್ಲೊಬ್ಬನಾದ ಗಣೇಶನ ಹೊಟ್ಟೆಗೆ ನಾಗ ಸರ್ಪದ ಪಟ್ಟಿ. ಇನ್ನೊಬ್ಬ ಮಗ ಕುಮಾರಸ್ವಾಮಿಯ ಸಂಕೇತವೇ ನಾಗ. ಬೌದ್ಧ ಮತ್ತು ಜೈನಧರ್ಮಗಳಲ್ಲೂ ನಾಗನಿಗೆ ವಿಶೇಷ ಸ್ಥಾನ ಉಂಟು. ಆದ್ದರಿಂದ ನಾಗಪೂಜೆಯು ಪ್ರಪಂಚದ ಯಾವುದೇ ಭಾಗದಲ್ಲಿಯೂ ಪ್ರಾಚೀನವಾದುದು ಮತ್ತು ಎಲ್ಲಾ ಜನಾಂಗ ಮತ್ತು ಧರ್ಮಗಳಲ್ಲಿಯೂ ಇರುವಂಥಾದ್ದು.

ನಾಗನನ್ನು ಸ್ಥಳದೇವತೆ, ಕುಲದೇವತೆ ಮತ್ತು ಕೆಲವು ದೇವತೆಗಳ ಪ್ರತಿನಿಧಿಯಾಗಿಯೂ ಪೂಜಿಸಲಾಗುತ್ತದೆ. ಶಿವನ ಪ್ರತಿನಿಧಿಯಾಗಿ ಬಸವ, ವಿಷ್ಣುವಿನ ಪ್ರತಿನಿಧಿಯಾಗಿ ಗರುಡ, ರಾಮನ ಪ್ರತಿನಿಧಿಯಾಗಿ ಆಂಜನೇಯ, ಇತ್ಯಾದಿ ದೇವತೆಗಳ ಪೂಜೆ ನಡೆಯುತ್ತದೆ. ನಾಗನು ಹಲವಾರು ದೇವತೆಗಳನ್ನು ಪ್ರತಿನಿಧಿಸುತ್ತಾನೆ. ವಿಷ್ಣುವಿನ ಒಂದು ಸ್ವರೂಪವನ್ನು ಅನಂತನೆಂದು ಪ್ರತಿನಿಧಿಸುವವನು ನಾಗ. ಕುಮಾರಸ್ವಾಮಿ ಅಥವಾ ಸುಬ್ರಮಣ್ಯನನ್ನು ಪ್ರತಿನಿಧಿಸುವವನೂ ನಾಗ. ಈ ನಾಗನು ಭಕ್ತರ ಇಷ್ಟಾರ್ಥಗಳನ್ನು ಈಡೇರಿಸುವನು. ನಾಗನಿಗೂ ಕಾಮಕ್ಕೂ ಸಂಬಂಧವಿದೆಯೆಂದು ಮನೋವಿಜ್ಞಾನಿಗಳ ಅಭಿಪ್ರಾಯ. ಈ ಹಿನ್ನೆಲೆಯಲ್ಲೂ ನಾಗನನ್ನು ಸಂತಾನ ದೇವತೆ ಎಂದು ಪರಿಗಣಿಸಿದರೆ ತಪ್ಪಾಗಲಾರದು. ಅದಕ್ಕಾಗಿಯೇ ನಾಗಪ್ರತಿಷ್ಠೆ, ಸರ್ಪ ಸಂಹಾರ ದೋಷಕ್ಕಾಗಿ ಹಲವಾರು ಆಚರಣೆಗಳು ನಡೆಯುತ್ತವೆ. ಈ ನಂಬಿಕೆಯನ್ನು ಆಧರಿಸಿ ನಡೆಯುವ ಆಚರಣೆಗಳಲ್ಲಿ ಸುಬ್ರಹ್ಮಣ್ಯವೂ ವಿಶೇಷಸ್ಥಾನ ಪಡೆದಿದೆ.

## ನಾಗಕ್ಷೇತ್ರಗಳು ಮತ್ತು ಸುಬ್ರಹ್ಮಣ್ಯ

ಸುಬ್ರಹ್ಮಣ್ಯ ಕ್ಷೇತ್ರಗಳೆಲ್ಲ ಸಾಮಾನ್ಯವಾಗಿ ನಾಗ ಕ್ಷೇತ್ರಗಳು. ಈ ನಾಗ ಕ್ಷೇತ್ರಗಳೆಲ್ಲ, ನಿತ್ಯ ಹರದ್ವರ್ಣದ ಕಾಡುಗಳ ಘಟ್ಟ ಪ್ರದೇಶಗಳ ತಪ್ಪಲುಗಳಲ್ಲೇ ಇವೆ. ಇಲ್ಲಿ ಸರ್ಪಕಾವು, ನಾಗಬನಗಳೂ ಅಧಿಕ. ತಿರುಪ್ಪರ ನ್‌ಕುನ್ರಂ, ತಿರುವವನಿನ್‌ಕುಡಿ (ಪಳನಿ), ತಿರುವೆರಗಂ (ಸ್ವಾಮಿಮಲೆ), ತಿರುತ್ತಣಿ, ತಿರುಚ್ಚೆಂದೂರು, ಅಳಗರ್ ಕೋಯಿಲ್ ಇತ್ಯಾದಿ ಸುಬ್ರಹ್ಮಣ್ಯ ಕ್ಷೇತ್ರಗಳು ತಮಿಳುನಾಡಿನಲ್ಲಿ ಪ್ರಸಿದ್ಧವಾಗಿವೆ. ದಕ್ಷಿಣ ಕನ್ನಡ ಜಿಲ್ಲೆಯೊಂದರಲ್ಲೇ ಸುಬ್ರಹ್ಮಣ್ಯ, ಬಳ್ಳಮಂಜೆ, ಕಾಟುಕುಕ್ಕೆ, ಕುಡುಪು, ಮಂಜೇಶ್ವರ, ವಿಟ್ಲ, ಕಟ್ಟಿಂಗೇರಿ, ಕಡಂದಲೆ, ಮುಗ್ರೋಡು, ಕುಮಾರಮಂಗಲ, ಕಡವಾಸೆ ಇತ್ಯಾದಿ ಅನೇಕ ಸ್ಥಳಗಳು ನಾಗಕ್ಷೇತ್ರಗಳು. ಉಷ್ಣವಲಯದ ನಿತ್ಯಹರಿದ್ವರ್ಣದ ಕಾಡುಗಳಲ್ಲಿ ಸರ್ಪಗಳು ಹೆಚ್ಚಾಗಿ ವಾಸಿಸುತ್ತದೆ. ನಾಗಜನರೂ ಇಲ್ಲಿಯೇ ಹೆಚ್ಚಾಗಿ ನೆಲೆಸಿದ್ದರು ಎಂದೂ ಭಾವಿಸಿದರೆ ತಪ್ಪಾಗಲಾರದು. ಈ ಕಾರಣದಿಂದ ಈ ಪ್ರದೇಶಗಳಲ್ಲಿ ನಾಗಾರಾಧನೆ ಮನ್ನಣೆಗಳಿಸಿರುವ ಸಾಧ್ಯತೆಗಳಿವೆ. ಆದರೆ ನಾಗನೊಡನೆ ಸುಬ್ರಹ್ಮಣ್ಯನನ್ನು ಗುರುತಿಸುವ ಪದ್ಧತಿ ಆರಂಭವಾದದ್ದು ಎಂದಿನಿಂದ ಎಂಬುದು ಒಂದು ಪ್ರಶ್ನೆಯಾಗಿದೆ. ಸುಬ್ರಹ್ಮಣ್ಯನೇ ಕುಮಾರ, ಸ್ಕಂದ, ಕಾರ್ತಿಕೇಯ, ಮುರುಗ, ಷಣ್ಮುಖ ಇತ್ಯಾದಿ ಹೆಸರುಗಳಿಂದಲೂ ಪರಿಚಿತ ನಾಗಿದ್ದಾನೆ. ಸುಬ್ರಹ್ಮಣ್ಯ ಕ್ಷೇತ್ರಗಳಿಗೂ ಕುಮಾರನ ಕಥೆಗೂ ಒಂದಲ್ಲ ಒಂದು ರೀತಿ ಸಂಬಂಧ ಇದ್ದೇ ಇರುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸುಬ್ಬಾಯ ಎಂದರೆ ನಾಗ, ಸುಬ್ರಹ್ಮಣ್ಯದ ಅಪಭ್ರಂಶ ರೂಪವೂ ಸುಬ್ಬಾಯ ಎಂದಾಗಬಹುದು. ಈ ಕಾರಣದಿಂದ ಸುಬ್ರಹ್ಮಣ್ಯ ಮತ್ತು ನಾಗನನ್ನು ಒಂದೇ ಎಂದು ಪರಿಗಣಿಸಿರಬಹುದು ಎನ್ನಬಹುದೇ ಸುಬ್ರಹ್ಮಣ್ಯ ವಾಹನ ನವಿಲು; ಮಯೂರ ವಾಹನನಾದ ಸುಬ್ರಹ್ಮಣ್ಯನ ಜೊತೆಗೆ ನಾಗನೂ ಇರುತ್ತಾನೆ. ಆ ನಾಗ ಸುಬ್ರಹ್ಮಣ್ಯನ ವಾಹನವೇನಲ್ಲ. ನಾಗ ಮತ್ತು ನವಿಲು ಪರಸ್ಪರ ವೈರಿಗಳು. ಆದರೆ ಸುಬ್ರಹ್ಮಣ್ಯನಿಗೆ ಇವೆರಡರ ಸಂಬಂಧವೂ ಇದೆ. ಇದು ಹೇಗೆ? ಏಕೆ? ಈ ಪ್ರಶ್ನೆಗಳಿಗೂ ಉತ್ತರ ದೊರೆಯಬೇಕಾಗಿದೆ.

ಸ್ಕಾಂದ ಪುರಾಣಾಂತರ್ಗತ ಶ್ರೀ ಸುಬ್ರಹ್ಮಣ್ಯ ಕ್ಷೇತ್ರಪುರಾಣದಲ್ಲಿ ಸುಬ್ರಹ್ಮಣ್ಯನನ್ನು ಸರ್ಪಾಕಾರದಿಂದಿರುವ ದೇವರಂದೇ ಭಾವಿಸಲಾಗಿದೆ. ಪ್ರಾಣಿರೂಪ ಮತ್ತು ಮಾನವರೂಪಗಳೆರಡರಲ್ಲೂ ಪರಿಭಾವಿಸಿ ಪೂಜೆಗೊಳ್ಳುವ ದೇವರು ಸುಬ್ರಹ್ಮಣ್ಯನೊಬ್ಬನೆಂದೇ ಭಾವಿಸಬಹುದು. ಹಲವೆಡೆ ದೇವರ ಪ್ರತಿನಿಧಿತ್ವವನ್ನು ಸರ್ಪಗಳ ಮೇಲೆ ಆರೋಪಿಸಬಹುದಾದರೂ ಅವು ದೇವರುಗಳಲ್ಲ. ಇಲ್ಲಿ ನಾಗನೇ ಸುಬ್ರಹ್ಮಣ್ಯ; ಸುಬ್ರಹ್ಮಣ್ಯನೇ ನಾಗ.

## ಸುಬ್ರಹ್ಮಣ್ಯ ಮತ್ತು ಕುಕ್ಕೆ:

ಕುಕ್ಕೆ ಸುಬ್ರಹ್ಮಣ್ಯ ನೆಲೆಗೊಂಡಿರುವ ಸ್ಥಳದ ಹೆಸರು ಸುಬ್ರಹ್ಮಣ್ಯ. ಇದು ದೇವರಿಂದಾಗಿ ಊರಿಗೆ ದೊರಿತಿರುವ ಹೆಸರು. ದೇವರಿಗೆ ಊರಿನ ಹೆಸರೂ

ಜೊತೆಗೂಡಿದೆ. ಇಲ್ಲಿನ ದೇವರು ಕೇವಲ ಸುಬ್ರಹ್ಮಣ್ಯನಲ್ಲ: ಕುಕ್ಕೆ ಸುಬ್ರಹ್ಮಣ್ಯ. ಕುಕ್ಕೆ ಎಂಬುದು ಈ ಸ್ಥಳದ ಮೊದಲ ಹೆಸರುಗಳಲ್ಲೊಂದು. ಕುಕ್ಕೆಪುರ, ಕುಕ್ಕೆ ಪಟ್ಟಣ ಎಂಬ ಹೆಸರುಗಳೂ ಈ ಸ್ಥಳಕ್ಕೆ ಇದ್ದುದನ್ನು ಶಾಸನಗಳು ಸಮರ್ಥಿಸುತ್ತವೆ.

'ಕುಕ್ಕೆ' ಶಬ್ದದ ಬಳಕೆಯ ಸಂದರ್ಭದಲ್ಲಿ ಅರ್ಥದ ಬಗೆಗೆ ಒಮ್ಮತವಿಲ್ಲ. ಕುಕ್ಕೆಯು ಕುಕ್ಷಿಯ ಸಂವಾದಿ, ಸಂಸ್ಕೃತ ಜನ್ಯ ಎಂಬುದು ಒಂದು ಅಭಿಪ್ರಾಯವಾದರೆ, ಕುಕ್ಕೆಯ ಮೂಲಸ್ವರೂಪವನ್ನು ದ್ರಾವಿಡ ಭಾಷಾವರ್ಗದಲ್ಲಿ ಗುರುತಿಸಬಹುದು ಎಂಬುದು ಮತ್ತೊಂದು ಅಭಿಪ್ರಾಯ. ದ್ರಾವಿಡ ಭಾಷಾ ವರ್ಗಕ್ಕೆ ಸೇರಿದ 'ತುಳು' ವಿನಲ್ಲಿ 'ಕುಕ್ಕೆ' ಶಬ್ದದ ಬಳಕೆ ಈಗಲೂ ಇದೆ. 'ಕುಕ್ಕೆ' ಎಂದರೆ ಮಗು, ಕಂದ ಎಂಬ ಅರ್ಥಗಳಿವೆ ಎಂಬುದು ಒಂದು ಅಭಿಪ್ರಾಯ. ಆದ್ದರಿಂದ ಕುಕ್ಕೆ ಸುಬ್ರಹ್ಮಣ್ಯ ಎಂದರೆ ಬಾಲಸುಬ್ರಹ್ಮಣ್ಯ ಎಂದು ಅರ್ಥೈಸಲು ಅವಕಾಶಗಳಿವೆ. ಆದರೆ ಕುಕ್ಕೆ ಶಬ್ದವು ಈ ಅರ್ಥದಲ್ಲಿ ಬಳಕೆಯಲ್ಲಿರುವುದು 'ಕೊಂಕಣಿ' ಯಲ್ಲಿ ಮಾತ್ರ, ತುಳುವಿನಲ್ಲಲ್ಲ ಎಂಬುದು ಎರಡೂ ಭಾಷೆಗಳನ್ನು ಬಲ್ಲವರ ಅಭಿಪ್ರಾಯ. ಇಲ್ಲಿನ ಜನಪ್ರತೀತಿಯ ಪ್ರಕಾರ ಇಲ್ಲಿ ಶಿವಲಿಂಗವನ್ನು ಕುಕ್ಕೆಗಳಲ್ಲಿಟ್ಟು ಪೂಜಿಸುತ್ತಿದ್ದುದರಿಂದ ಈ ಊರಿಗೆ ಕುಕ್ಕೆ ಎಂಬ ಹೆಸರು ಬಂದಿದೆ. ಇಲ್ಲಿ ಶಿವಲಿಂಗವನ್ನು 'ಕುಕ್ಕೆ ಲಿಂಗ' ಎಂದು ತಮ್ಮ ಶ್ರೀ ಸುಬ್ರಹ್ಮಣ್ಯ ಭುಜಂಗ ಪ್ರಯಾತ ಸ್ತೋತ್ರದಲ್ಲಿ ಶ್ರೀ ಶಂಕರಾಚಾರ್ಯರು ಉಲ್ಲೇಖಿಸಿ ದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ಗ್ಯಾಸೆಟಿಯರ್‌ನಲ್ಲಿ ಉಲ್ಲೇಖಿಸಿರುವಂತೆ ಇಲ್ಲಿ ದಟ್ಟವಾದ ಅರಣ್ಯದ ನಡುವೆ ಇದ್ದ ಶಿವಲಿಂಗವನ್ನು ಪೂಜಿಸುತ್ತಿದ್ದ ಅರ್ಚಕನು, ಪ್ರತಿನಿತ್ಯದ ಪೂಜೆಯ ನಂತರ ಲಿಂಗದ ರಕ್ಷಣೆಗಾಗಿ ಅಥವಾ ಗುರುತಿಗಾಗಿ ಅದನ್ನು ಕುಕ್ಕೆಯೊಂದರಿಂದ ಮುಚ್ಚಿ ಬರುತ್ತಿದ್ದನು. ಆದ್ದರಿಂದ ಶಿವಲಿಂಗಕ್ಕೆ ಕುಕ್ಕೆಲಿಂಗ ಎಂಬ ಹೆಸರೂ, ಊರಿಗೆ ಕುಕ್ಕೆ ಎಂಬ ಹೆಸರೂ ಬಂದಿದೆ. ಕುಕ್ಕೆ ಎನ್ನುವ ಶಬ್ದವು ಕುಕ್ಷಿ ಸಂಸ್ಕೃತ ಶಬ್ದದ ತದ್ಭವ ರೂಪವೆಂದೂ, ಅದರ ಅರ್ಥ ಗುಹೆ ಎಂದೂ ತಿಳಿಸುತ್ತಾ, ಗುಹೆಯೊಳಗೆ ಪೂಜಿಸಲ್ಪಡುತ್ತಿದ್ದ ಲಿಂಗಕ್ಕೆ ಕುಕ್ಕೆಲಿಂಗ ಎಂಬ ಹೆಸರು ಬಂದಿರಬಹುದೆಂಬ ಅಭಿಪ್ರಾಯಕವನ್ನೂ ವ್ಯಕ್ತಪಡಿಸಲಾಗಿದೆ.

ಕುಕ್ಕೆ ಎಂದರೆ ಮರದ ಬುಟ್ಟಿ. ಇದು ಕರ್ನಾಟಕದ ಬಯಲುನಾಡಿನಲ್ಲಿ ಹೆಚ್ಚು ಬಳಕೆಯಲ್ಲಿರುವ ಪದ. ತುಳುವೇ ಹೆಚ್ಚು ಬಳಕೆಯಲ್ಲಿರುವ ಪ್ರದೇಶದಲ್ಲಿ ಕುಕ್ಕೆಯ ಅರ್ಥವು ಮಗು, ಕಂದ ಎಂದೇ ಹೆಚ್ಚು ಸ್ವೀಕಾರಯೋಗ್ಯ. ಕಂದ ಪದದೊಡನೆ ಸ್ಕಂದನ ನೆನಪಾದರೆ ಆಶ್ಚರ್ಯವಿಲ್ಲ. ಆದರೆ ಕಂದ ಶುದ್ಧ ದ್ರಾವಿಡ ಪದವಾದರೆ ಸ್ಕಂದ ಶುದ್ಧ ಸಂಸ್ಕೃತ ಪದ. ಆದ್ದರಿಂದ ಇವುಗಳ ಸಾರೂಪ್ಯವನ್ನು ಯಾವ ನೆಲೆಯಲ್ಲೂ ಸಮರ್ಥಿಸುವುದು ಕಷ್ಟ. 'ಕುಕ್ಕೆ' ಎಂಬುದು ಎತ್ತರದ ಪ್ರದೇಶವನ್ನು (ನೆಲೆಯನ್ನು) ಸೂಚಿಸುತ್ತದೆ ಎಂಬ ಅಭಿಪ್ರಾಯ ಹಲವು ವಿದ್ವಾಂಸರದು. ಸದ್ಯಕ್ಕೆ ಅದು ಸರಿ ಎನಿಸುತ್ತದೆ.

ಕುಮಾರ ಪರ್ವತದ ಮೇಲೆ ಆರು ಮುಖಗಳ ಸ್ತಂಭಾಕೃತಿಯ ಬಿಳಿಯ ಕಲ್ಲುಗಳು ದೊರೆಯುತ್ತವೆಂದು ಹೇಳಲಾಗುತ್ತದೆ. ಇವುಗಳನ್ನು ಕುಮಾರ ಲಿಂಗವೆಂದು ಕರೆಯಲಾಗುತ್ತದೆಂದೂ, ಸಾಲಿಗ್ರಾಮಗಳಂತೆ ಶಿವಲಿಂಗಗಳೆಂದು ಪೂಜೆಗೆ ಇಟ್ಟುಕೊಳ್ಳುವುದಾಗಿಯೂ ತಿಳಿದು ಬರುತ್ತದೆ. ಇವು ಉದ್ದ ಮತ್ತು ಗಾತ್ರಗಳಲ್ಲಿಯೂ ಚಿಕ್ಕದಾಗಿ ಇರುವುದರಿಂದ ಇವುಗಳನ್ನೇ ಕುಮಾರಲಿಂಗ, ಕುಕ್ಕೆಲಿಂಗ ಎಂದು ಪರಿಗಣಿಸಿರುವಂತೆ ತೋರುತ್ತದೆ. ಈ ಲಿಂಗಗಳು ಆರು ಮುಖಗಳನ್ನು ಹೊಂದಿರುವ ಕಾರಣದಿಂದ ಇವೇ ಷಣ್ಮುಖನನ್ನು ಸೂಚಿಸುವ ಕುಮಾರ ಲಿಂಗಗಳಾಗಿರಬೇಕು. ಎತ್ತರದ ಕುಕ್ಕೆ ಪ್ರದೇಶದಲ್ಲಿ ದೊರೆತದ್ದರಿಂದ ಇವು ಕುಕ್ಕೆಲಿಂಗವೂ ಹೌದು ಈ ತೆರನ ಲಿಂಗಗಳು ಇಲ್ಲಿ ಅಧಿಕವಾಗಿ ದೊರೆಯುವುದರಿಂದ ಈ ಊರಿಗೆ ಕುಕ್ಕೆಪಟ್ಟಣ, ಕುಕ್ಕೆಪುರ ಎಂಬ ಹೆಸರುಗಳು ಬಂದಿರಬೇಕು. ಕುಕ್ಕೆಯಲ್ಲದೆ ಕುಕ್ಕಿಕಟ್ಟೆ, ಕುಕ್ಕೆಪಳ್ಳಿ, ಕುಕ್ಕುಂದೂರು, ಕುಕ್ಕುತೆ ಇತ್ಯಾದಿ ಊರುಗಳೂ ಸಹ ಸುಬ್ರಹ್ಮಣ್ಯ ಆರಾಧನಾ ಕ್ಷೇತ್ರಗಳು. ಆದ್ದರಿಂದ ಕುಕ್ಕೆಯು ಸುಬ್ರಹ್ಮಣ್ಯ ಸಂಬಂಧಿಯಾದ ಶಬ್ದ ಎಂದೂ ತಿಳಿಯಬಹುದು.

### ಸುಬ್ರಹ್ಮಣ್ಯ ಮತ್ತು ಶಾಸನಗಳು:

ಕುಕ್ಕೆಯ ಉಲ್ಲೇಖವು ಕ್ರಿ.ಶ. ೯ನೆಯ ಶತಮಾನದ ಬಂಟ್ರ ಶಾಸನದಲ್ಲಿ ಮೊದಲಬಾರಿಗೆ ದೊರಕುತ್ತದೆ. ಆ ಪ್ರಾಂತ್ಯದಲ್ಲಿ ಆಳುತ್ತಿದ್ದ ನಾಲ್ವರು ಅರಸರ ನಡುವೆ ಯುದ್ಧವನ್ನು ತಪ್ಪಿಸಲು ಏರ್ಪಟ್ಟ ಒಪ್ಪಂದದ ದಾಖಲೆಯಾಗಿರುವ ಬಂಟ್ರ ಶಾಸನವು ಆ ಒಪ್ಪಂದದಿಂದ ಸಂತೋಷಪಟ್ಟ (ಅಥವಾ ಸಾಕ್ಷಿಯಾಗಿದ್ದ) ಹಲವು

ಊರುಗಳ ಮುಖ್ಯಸ್ಥರ ಪೈಕಿ ಕುಕ್ಕೆಯ ವಿಪ್ರರು ಮತ್ತು ಕಣಕರನ್ನು ಉಲ್ಲೇಖಿಸಿದೆ. ಆ ವೇಳೆಗಾಗಲೇ ಕುಕ್ಕೆಯು ಅಸ್ತಿತ್ವದಲ್ಲಿದ್ದು ಗಮನಾರ್ಹ ಸ್ಥಳವಾಗಿತ್ತು ಎಂಬುದು ಈ ದಾಖಲೆಯಿಂದ ದೃಢ ಪಡುತ್ತದೆ.

ಸುಬ್ರಹ್ಮಣ್ಯ ಕ್ಷೇತ್ರದ ಅಧ್ಯಯನಕ್ಕೆ ಬಂಟ್ರ ಶಾಸನವಲ್ಲದೆ ಬೇರೆ ಆರು ಶಾಸನಗಳು ಲಭ್ಯವಿವೆ. ಇವೆಲ್ಲವೂ ತಾಮ್ರ ಶಾಸನಗಳು. ಕುಕ್ಕೆ ಸುಬ್ರಹ್ಮಣ್ಯದ ದೇವಾಲಯದ ಆವರಣದಲ್ಲಿ ನಿಲ್ಲಿಸಿರುವ ಶಿಲಾಶಾಸನವೊಂದು ಅಧ್ಯಯನಕ್ಕೆ ಲಭ್ಯವಿಲ್ಲ. ಇವಲ್ಲದೆ ದೇವಾಲಯದ ಒಳ ಅಂಗಳದ ಮತ್ತು ಹೊರ ಅಂಗಳದ ಹಾಸುಗಲ್ಲುಗಳ ಮೇಲೆ ಹಲವಾರು ಲಘು ಶಾಸನಗಳಿದ್ದು ಸಧ್ಯಕ್ಕೆ ಅವುಗಳಾವುವೂ ಅಧ್ಯಯನಕ್ಕೆ ದೊರೆತಿಲ್ಲ. ಇವುಗಳ ಪ್ರತಿ ತೆಗೆಯಲು ದೇವಾಲಯದ ಆಡಳಿತವರ್ಗ ಅನುಮತಿಕೊಟ್ಟರೆ, ಈ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನವು ಸಾಧ್ಯವಾಗಬಹುದು.

ಉಲ್ಲೇಖಿಸಿದ ಆರು ತಾಮ್ರ ಶಾಸನಗಳ ಪೈಕಿ ಕಾಲದ ದೃಷ್ಟಿಯಿಂದ ಮೊದಲನೆಯದು ಕ್ರಿ.ಶ.1407ಕ್ಕೆ ಸೇರುವ 2ನೇ ಬುಕ್ಕರಾಯನ ಆಳ್ವಿಕೆಯ ಕಾಲದ ಶಾಸನ. ಕ್ರಿ.ಶ. 9ನೆಯ ಶತಮಾನದಿಂದ 15ನೇಯ ಶತಮಾನದ ಆರಂಭ ಕಾಲದವರೆಗಿನ ಯಾವ ಶಾಸನಗಳೂ ಸಧ್ಯಕ್ಕೆ ಕುಕ್ಕೆಯಲ್ಲಿ ದೊರೆತಿಲ್ಲ. ಈ ನಡುವಿನ ಆರು ಶತಮಾನಗಳ ಕಾಲವನ್ನು ಕುಕ್ಕೆಯ ದೃಷ್ಟಿಯಿಂದ ಕತ್ತಲೆಯ ಕಾಲ ಎನ್ನಬಹುದು. ಈವರೆಗೆ ಪ್ರಕಟವಾಗದಿರುವ ಉಲ್ಲೇಖಿತ ಶಾಸನಗಳೆಲ್ಲವೂ ಲಿಪಿ ಸ್ವರೂಪದ ದೃಷ್ಟಿಯಿಂದ ಸಾಮಾನ್ಯವಾಗಿ 17ನೆಯ ಶತಮಾನದ ನಂತರದ ಕಾಲಕ್ಕೆ ಸೇರಿದುವು. ದೇವಾಲಯದ ಆವರಣದಲ್ಲಿ ನಿಲ್ಲಿಸಿರುವ ಶಾಸನದ ಕಾಲವನ್ನು 15-16ನೆಯ ಶತಮಾನಕ್ಕೆ ಅನುಮಾನಿಸ ಬೇಕಾಗುತ್ತದೆ.

ಕ್ರಿ.ಶ. 1407ರ ಶಾಸನವು ಹರಿಹರರಾಯರ ಕುಮಾರ ಪ್ರತಾಪ ಬುಕ್ಕ ಮಹಾರಾಯರ ಆಳ್ವಿಕೆಯ ಕಾಲಕ್ಕೆ ಸೇರಿದೆ. ಇದು 2ನೇ ಬುಕ್ಕರಾಯನ ಕಾಲಾವಾದ್ದರಿಂದ ಉಲ್ಲೇಖಿತವಾಗಿರುವವನೂ ಅವನೇ ಆಗಿರಬೇಕು. ಕ್ರಿ.ಶ.1407ರ ವೇಳೆಯಲ್ಲಿ ಮಂಗಳೂರ ರಾಜ್ಯವು ಗೋವೆಯು ಬಾಚರಸ ವೊಡೆಯರ ಆಳ್ವಿಕೆಗೆ ಸೇರಿತ್ತು. ಎಂದು ಶಾಸನದಿಂದ ತಿಳಿಯುತ್ತದೆ. ಈತ ವಿಜಯನಗರದ ಪ್ರತಿನಿಧಿಯೆಂದು ಸ್ಪಷ್ಟವಾಗುತ್ತದೆ.

ಈ ಶಾಸನವು ಕುಕ್ಕೆಯ ದೇವರಿಗೆ ದೊರೆತ ದಾನದ ವಿಷಯವನ್ನು ಪ್ರಸ್ತಾಪಿಸಿದೆ. ಕುಕ್ಕೆಯ ದೇವರು ಎಂದಷ್ಟೇ ಇರುವುದರಿಂದ ಇದು ಯಾವ ದೇವರು ಎಂದು ಅನುಮಾನ ಬಂದರೂ ಮುಂದಿನ ಶಾಸನಗಳು ಇದರಬಗ್ಗೆ ಬೆಳಕು ಚೆಲ್ಲುತ್ತವೆ. ಕುಕ್ಕೆ ಎನ್ನವುದಂತೂ ಗ್ರಾಮದ ಹೆಸರು ಎಂದು ನಿರ್ಧಾರಿತವಾಗಿದೆ. ಇದು ಕಡಬದ ಸ್ಥಳಕ್ಕೆ ಸೇರಿದ ಗ್ರಾಮ. ಈ ಕುಕ್ಕೆಯ ದೇವರಿಗೆ ಹಲವು ಸ್ಥಳಗಳು ಅಥವಾ ಗ್ರಾಮಗಳು ಆಗಲೇ ದೊರೆತಿದ್ದುವು. ಈ ಶಾಸನವು ಅರಮನೆಗೆ ನಾಲ್ವರು ಪಾದಮೂಳಿಗಳು ತೆರುವ ವಸ್ತುವಿನ ವಿವರಗಳನ್ನು ನೀಡಿದೆ. 'ಪಾದಮೂಳಿ' ಎನ್ನುವುದು ಸೇವಕವರ್ಗವನ್ನು ಸೂಚಿಸುತ್ತದೆ. ಅನೇಕ ಕನ್ನಡ ಶಾಸನಗಳು ಪಾದಮೂಲ ಪರಿವಾರವರ್ಗವನ್ನು ಪ್ರಸ್ತಾಪಿಸಿವೆ. ಈ ವರ್ಗವು ದೇವಾಲಯಗಳ ಸ್ವಚ್ಚತೆಗೆ ಸಂಬಂಧಿಸಿದ ಕೆಲಸಗಳ ಜೊತೆಗೆ ಅರ್ಚಕವರ್ಗಕ್ಕೆ ನೆರವು ನೀಡುವ ಕೆಲಸಗಳನ್ನೂ ಮಾಡುತ್ತಿತ್ತು ಎಂದು ತಿಳಿಯಲಾಗಿದೆ. ಆದರೆ ಈ ಶಾಸನದಲ್ಲಿ 'ಪಾದಮೂಳಿ' ಎಂದು ಉಲ್ಲೇಖ ವಾಗಿರುವುದರಿಂದ, ಇದು ಸ್ತ್ರೀ ವಾಚಕವೆಂದೇ ಸ್ವೀಕೃತವಾದರೆ ಒಪ್ಪಿತವಾಗಿರುವ ಅರ್ಥಕ್ಕೊಂದು ತಿದ್ದುಪಡಿಯ ಸೇರ್ಪಡೆಯನ್ನು ಮಾಡಬೇಕಾಗಬಹುದು. 'ಪಾದಮೂಲಿ' ಎಂದರೆ ದೇವಾಲಯದ ಸ್ವಚ್ಚತೆಗೆ ಸಂಬಂಧಿಸಿದ ಕಾರ್ಯ ನಿರ್ವಹಿಸುವ ಸ್ತ್ರೀ ಸೇವಕವರ್ಗವೆಂದು ತಿಳಿಯಬೇಕಾಗಬಹುದು. ಇವರೇ 'ದೇವದಾಸಿ' ಯರಾಗಿದ್ದರು ಎಂದೂ ಭಾವಿಸಬಹುದು. ಇವರು ತೆರುವ ವಸ್ತುಗಳ ವಿವರಗಳು ಗಮನಾರ್ಹವಾಗಿದೆ. ಕುಲದ ಹಣ, ಕೀಲೊಕ್ಕಲು, ಜೋಡಿ, ನಟ್ಟಿನ ಭತ್ತ, ಕಂಠ ಕಾಣಿಕೆ ಇತ್ಯಾದಿ. ಕುಲದಹಣ ಎನ್ನುವುದು ಕುಲದ ಕಸಬಿನ ಮೇಲೆ ವಿಧಿಸುವ ತೆರಿಗೆ. ಈ ಹಣವನ್ನು ಇಲ್ಲಿ ಪಾದಮೂಳಿಗಳು ನೀಡುತ್ತಿರುವುದರಿಂದ ಇವರು ವೇಶ್ಯಾವೃತ್ತಿಗೂ ತೊಡಗಿಸಿಕೊಂಡಿದ್ದ ದೇವಾಲಯದ ಸೇವಕವರ್ಗದವರು ಎಂದೇ ಪರಿಗಣಿಸಬೇಕಾಗುತ್ತದೆ. ಕೀಲೊಕ್ಕಲು ಎನ್ನವುದು ಕೀಳು + ಒಕ್ಕಲು ಕೀಳೊಕ್ಕಲನ್ನು ಪ್ರತಿನಿಧಿಸುವುದಾದರೆ ಅದು ಕೃಷಿಕರನ್ನು ಅಥವಾ ಪಂಚಮರನ್ನು ಸೂಚಿಸಬಹುದು. ಆ ಬಗ್ಗೆ ಸ್ಪಷ್ಟವಾಗಿಹೇಳಲು ಸಾಧ್ಯವಿಲ್ಲ. ನಟ್ಟಿನ ಭತ್ತ, ಕಂಠಕಾಣಿಕೆಗಳಿಗೆ ವಿಶೇಷಾರ್ಥವನ್ನೇನೂ ಹುಡುಕ ಬೇಕಾಗಿಲ್ಲ. ಈ ತೆರುವ ಹಣವು ಕಾಟಿ.ಗ., ಕಾ.ಗ., ಲಿ.ಎ.ಶು.ಗ., ಗಳಲ್ಲಿ ಉಲ್ಲೇಖಗೊಂಡಿದೆ. ಕಾ.ಟಿ.ಗ., ಕಾ.ಗ., ಎರಡೂ ಪ್ರಚಲಿತದಲ್ಲಿದ್ದ ಕಾಟಿಗದ್ಯಾಣವನ್ನು ಸೂಚಿಸಬಹುದು. ಉಳಿದ ಲಿ.ಎ.ಶು.ಗ. ಎಂಬುದು ಸಧ್ಯಕ್ಕೆ ಅಸ್ಪಷ್ಟ. ಈ

ಶಾಸನದ ಪ್ರಕಾರ ಕುಕ್ಕೆಯ ಸ್ಥಳಕ್ಕೆ ಮೂವತ್ತೆರಡು ಗ್ರಾಮಗಳು ಸೇರಿದ್ದುವೆಂದೂ, ಅಲ್ಲಿ ಮಹಾಸಪಸ್ರ ಪ್ರಮುಖರಿದ್ದರೆಂದೂ ತಿಳಿಯುತ್ತದೆ. ಬಂದ ಒಟ್ಟು ಹಣದಲ್ಲಿ ಮಂಗಳೂರ ಮೂರು ಸಾವಿರ ಪರಿವಾರದ ಜನ ತಮ್ಮ ಕಂದಾಚಾರ ಜೀವಿತಕ್ಕೆ ಉಪಯೋಗಿಸಿಕೊಳ್ಳಲು ಸ್ವಲ್ಪ ಹಣವನ್ನು ಬರೆಸಿಕೊಂಡಿದ್ದರು.

ಕುಕ್ಕೆಯ ಸುಬ್ರಹ್ಮಣ್ಯ ದೇವರ ಪರಿವಾರದ ಜನ ಮಂಗಳೂರಿನಲ್ಲೂ ಇದ್ದರು. ಪರಿವಾರದವರು ಎಂದರೆ ಕುಟುಂಬ ವರ್ಗದವರು, ದೇವಾಲಯದ ಪರವಾಗಿ, ದೇವರ ಪರವಾಗಿ ಕಾರ್ಯ ನಿರ್ವಹಿಸುವವರು. ಮಂಗಳೂರಿನಲ್ಲೂ ಸುಬ್ರಹ್ಮಣ್ಯದೇವರ ಪರಿವಾರದ ಜನ ಇದ್ದರೆಂದರೆ ಅಲ್ಲಿ ಮತ್ತು ಅದರ ಸುತ್ತ ಮುತ್ತಲೂ ದೇವಾಲಯಕ್ಕೆ ಸಂಬಂಧಿಸಿದ ಭೂಮಿ ಇತ್ಯಾದಿಗಳು ಇದ್ದಿರಬೇಕು. ಈ ಪರಿವಾರದ ಜನರ ಕಂದಾಚಾರ ಎಂದರೆ ಯಾವುದು? ಕಂದಾಚಾರವು ಕಟ್ಟುಪಾಡು ಎಂಬ ಅರ್ಥವನ್ನೂ ಹೊಂದಿದೆ. ಇಲ್ಲಿ ಕಂದಾಚಾರವು ವಶ, ಅಧಿಕಾರ ಎಂಬ ಅರ್ಥವನ್ನೇ ಸೂಚಿಸುತ್ತದೆ.

ಈ ಶಾಸನವು ಆ ಕಾಲದಲ್ಲಿ ಸುಬ್ರಹ್ಮಣ್ಯ ದೇವಾಲಯವು ಬಂಗರ ಒಡೆತನದಲ್ಲಿದ್ದುದನ್ನೂ, ಸ್ಥಾನೀಕರು ದೇವಾಲಯದ ವ್ಯವಸ್ಥೆ ಮತ್ತು ನಿರ್ವಹಣೆಗಳ ಜವಾಬ್ದಾರಿ ಹೊತ್ತಿದ್ದುದನ್ನೂ ದಾಖಲಿಸಿದೆ. ದಕ್ಷಿಣ ಜಿಲ್ಲೆಯ ದೇವಾಲಯಗಳಲ್ಲಿ ಸ್ಥಾನೀಕರ ಪ್ರಭಾವ ಹೆಚ್ಚು. 11-12ನೆಯ ಶತಮಾನಗಳಲ್ಲಿ, ವಿಶೇಷವಾಗಿ ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಪ್ರಾಂತ್ಯಗಳಲ್ಲಿದ್ದ ದೇವಾಲಯಗಳಲ್ಲಿ ಸ್ಥಾನಪತಿಗಳು ಪ್ರಬಲರಾಗಿದ್ದರು.ಅದೇ ರೀತಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 17-18ನೆಯ ಶತಮಾನಗಳಲ್ಲಿ ಸ್ಥಾನೀಕರು ಪ್ರಬಲರಾಗಿದ್ದರು.

ಕ್ರಿ.ಶ.1665ರಲ್ಲಿ ಮೈಸೂರು ರಾಜ್ಯವನ್ನು ದೇವರಾಜ ಒಡೆಯರು ಆಳುತ್ತಿದ್ದಾಗ ನಾನಜಿಯ ಮೊಮ್ಮಗ ಅಂದರೆ ಶಿವುಜಿಯ ಪುತ್ರ ಧನೋಜಯ್ಯನವರು ಕುಕ್ಕೆಲಿಂಗವೆಂದು ಪ್ರಖ್ಯಾತರಾದ ಸುಬ್ರಹ್ಮಣ್ಯೇಶ್ವರ ಭಂಡಾರಕ್ಕೆ ನೀಡಿದ ದಾನವನ್ನು ಒಂದು ತಾಮ್ರ ಶಾಸನವು ಉಲ್ಲೇಖಿಸಿದೆ. ಕುಕ್ಕೇಲಿಂಗ ಎಂದು ಬಿರುದಾಂತ ಕುಕ್ಕೆಲಿಂಗಕ್ಕೇ ಸುಬ್ರಹ್ಮಣ್ಯೇಶ್ವರ ಎಂಬ ಹೆಸರಿರುವಂತಿದೆ. ಸಾಮಾನ್ಯವಾಗಿ ಶಿವದೇವಾಲಯಗಳಲ್ಲಿ ಲಿಂಗಕ್ಕೆ ಪ್ರತಿಷ್ಠಾಪಕನ ಅಥವಾ ಯಾರ ಹೆಸರಿನಲ್ಲಿ ಪ್ರತಿಷ್ಠೆಯಾಯಿತೋ ಅಂತಹವರ ಹೆಸರು ಆರೋಪವಾಗುತ್ತದೆ. ಶಾಂತಲೇಶ್ವರ, ಹೊಯ್ಸಳೇಶ್ವರ, ರಾಮೇಶ್ವರ, ಲಕ್ಷ್ಮಣೇಶ್ವರ....ಇತ್ಯಾದಿ ಹೆಸರುಗಳು ಇದಕ್ಕೆ ಒಳ್ಳೆಯ ಉದಾಹರಣೆಗಳು. ಹಾಗೆಯೇ ಇಲ್ಲಿನ ಕುಕ್ಕೆಲಿಂಗವು ಷಟ್ಪುಜಾಕಾರದಲ್ಲಿ ಇರುವುದರಿಂದ ಇದಕ್ಕೆ ಸುಬ್ರಹ್ಮಣ್ಯೇಶ್ವರ ಎಂಬ ಹೆಸರು ಬಂದಿರಬೇಕು ಅಥವಾ ಇಲ್ಲಿನ ಶಿವಲಿಂಗವನ್ನು ಸುಬ್ರಹ್ಮಣ್ಯ ಪ್ರತಿಷ್ಠಾಪಿಸಿರಬೇಕು ಅಥವಾ ಪೂಜಿಸಿರಬೇಕು: ಇಲ್ಲವೆ ಶಿವಲಿಂಗದೊಡನೆ ಸುಬ್ರಾಯ (ಸರ್ಪ) ನಿಕಟವಾಗಿದ್ದುದರಿಂದ ಸುಬ್ರಾಯ ಲಿಂಗವು ಕ್ರಮೇಣ ಸುಬ್ರಹ್ಮಣ್ಯೇಶ್ವರ ಆಗಿರಬಹುದು. ಆದರೆ ಈಗ ಇಲ್ಲಿನ ಪ್ರಧಾನ ದೇವತೆ ಲಿಂಗವಲ್ಲ. ವಾಸುಕಿ ಸಹಿತ ಷಣ್ಮುಖರೂಪಿ ಸುಬ್ರಹ್ಮಣ್ಯ. ಇಲ್ಲಿ ಕುಕ್ಕೆಲಿಂಗಕ್ಕೆ ಪೂಜೆ ಇದೆಯಾದರೂ ಅದಕ್ಕೆ ಈಗ ಪ್ರಧಾನ ದೇವತೆಯ ಸ್ಥಾನವಿಲ್ಲ. ಒಂದು ಕಾಲಕ್ಕೆ ಶೈವಕ್ಷೇತ್ರವಾಗಿದ್ದ ಕುಕ್ಕೆಯು ಕಾಲಕ್ರಮೇಣ ಸುಬ್ರಹ್ಮಣ್ಯ ಕ್ಷೇತ್ರವಾಗಿ ಪರಿವರ್ತಿತವಾಗಿದೆ ಎಂದು ಭಾವಿಸಬಹುದು. ಲಿಂಗದೊಡನೆ ಸರ್ಪ ಇಟ್ಟುಕೊಳ್ಳಬಹುದಾದ ನಿಕಟ ಸಂಪರ್ಕದ ಕಾರಣ ಇಲ್ಲಿನ ಆರು ಮುಖದ ಲಿಂಗಗಳು. ಸುಬ್ರಹ್ಮಣ್ಯ ಸ್ವರೂಪ ಮತ್ತು ನಾಗಸ್ವರೂಪದಲ್ಲಿ ಪೂಜಿಸಲ್ಪಟ್ಟಿರಬೇಕು. ಇದೇ ಕಾರಣದಿಂದ ಸುಬ್ರಹ್ಮಣ್ಯನನ್ನು ನಾಗರೂಪದಲ್ಲಿ ಪೂಜಿಸುವ ಪದ್ಧತಿಯೂ ಬಂದಿರಬೇಕು. ಇದು ಶೈವಧರ್ಮದ ಪ್ರಭಾವವಿರಬೇಕು.

ಸುಬ್ರಹ್ಮಣ್ಯನು ಬಾಲ್ಯ ಅಥವಾ ಯೌವನವನ್ನು ಪ್ರಧಾನ ಆಕರ್ಷಣೆಯಾಗಿ ಉಳ್ಳ ದೇವತೆ, ಆದ್ದರಿಂದಲೇ ಅವನು ಸಂತಾನಫಲ ನೀಡುವ ದೇವತೆ. ಯೌವನದ ಸಂಕೇತವಾಗಿ ವೀರನೂ ಹೌದು. ತುಂಟನೂ ಹೌದು. ಆದ್ದರಿಂದಲೇ ಇವನನ್ನು ಶೂದ್ರ ಕಳ್ಳರ ದೇವತೆ ಎಂದು ಕರೆದಿರಬಹುದು. ಸುಬ್ರಹ್ಮಣ್ಯನಿಗೆ ಪ್ರಾಣಿ ಪೂಜೆಯ ಹಿನ್ನೆಲೆಯಲ್ಲಿ ದೇವರೊಬ್ಬನೆ ಗುಣಗಳಿಗೆ ತಕ್ಕಂತೆ ಕಲಾತ್ಮಕ ಸ್ವರೂಪ ದೊರಕಿದೆ. ನಾಗ ಚಿಹ್ನೆಬಳಸುತ್ತಿದ್ದ ಜನಾಂಗ ಯಾರೋ ಒಬ್ಬ ಸುಂದರ ವೀರ ಯುವಕನ ಪ್ರತಿಯಾಗಿಯೂ ಸುಬ್ರಹ್ಮಣ್ಯ ಉಳಿದುಬಂದಿರಬಹುದೆಂದು ಊಹಿಸಲೂ ಅವಕಾಶಗಳಿವೆ. ಸ್ಕಂದನನ್ನು ಮ್ಯಾಸಿಡೋನಿಯಾದ ರಾಜಕುಮಾರ ಅಲೆಗ್ಸಾಂಡರ್ ಅಥವಾ ಸಿಕಂದರನ ಜೊತೆಗೂ ಹೋಲಿಸುವ ಪ್ರಯತ್ನಗಳು ನಡೆದಿವೆ. ಆದರೆ ಸ್ಕಂದ, ಕಾರ್ತಿಕೇಯ, ಸುಬ್ರಹ್ಮಣ್ಯ, ವಿಶಾಖ ಇವುಗಳೆಲ್ಲ ಒಬ್ಬನೇ ದೇವತೆಯ ಹೆಸರುಗಳಾದರೂ ಪ್ರತಿಮಾ ಸ್ವರೂಪಗಳು

ಬೇರೆ ಬೇರೆ. ಸುಬ್ರಹ್ಮಣ್ಯ ಮಾತ್ರ ನಾಗಸ್ವರೂಪಿಯಾಗಿ ಪೂಜಿಸಲ್ಪಡುತ್ತಾನೆ. ಸುಬ್ರಹ್ಮಣ್ಯ ಶುದ್ಧ ದ್ರಾವಿಡ ದೇವತೆ. ಇವರ ಪ್ರಭಾವ ದಕ್ಷಿಣ ಭಾರತದಲ್ಲೇ ಹೆಚ್ಚು. ಕ್ರಿ.ಪೂ.ದ ಕಾಲದಿಂದಲೂ ಇವರ ಉಲ್ಲೇಖವನ್ನು ಸಾಹಿತ್ಯ ಕೃತಿಗಳಲ್ಲಿ ಕಾಣಬಹುದು. ಸ್ಕಂದ, ವಿಶಾಖ, ಕಾರ್ತಿಕೇಯರ ಚಿತ್ರಗಳನ್ನುಳ್ಳ ಪ್ರಾಚೀನ ನಾಣ್ಯಗಳೂ ಸಹ ಇವರ ಪ್ರಾಚೀನತೆಯ ಬಗ್ಗೆ ಗಮನ ಸೆಳೆಯುತ್ತವೆ. ಕುಷಾಣರು ಯೌಧೇಯರು – ಸ್ಕಂಧ ಮತ್ತು ಸುಬ್ರಹ್ಮಣ್ಯನನ್ನು ತಮ್ಮ ನಾಣ್ಯಗಳಲ್ಲಿ ಬಳಸಿಕೊಂಡಿದ್ದಾರೆ.

ಕ್ರಿಶ.1665ರ ತಾಮ್ರ ಶಾಸನದಲ್ಲಿ ಹೋಬಳಿಯ ಉಲ್ಲೇಖವಿರುವುದು ಗಮನಾರ್ಹವಾಗಿದೆ.

ಕ್ರಿಶ.1666ರ ಎರಡು ಶಾಸನಗಳು ಬೇಲೂರು ಪಾಳೆಯಗಾರರಿಗೆ ಸಂಬಂಧಿಸಿವೆ. ಇವು ಬೇಲೂರು ಪಾಳೆಯಗಾರರಿಗೂ ವಿಜಯನಗರದ ಅರಸರಿಗೂ ಇದ್ದ ಸಂಬಂಧವನ್ನು ತಿಳಿಯಲು ಅವಕಾಶ ನೀಡುತ್ತವೆ. ಅರಿವಿಡಿಯು ಅರವೀಡು ವಂಶದ ಒಂದು ರೂಪವಾಗಿದ್ದು, ರಾಜರ ಹೆಸರುಗಳೂ ಸಹ ಆ ವಂಶದ ಅರಸರ ಹೆಸರುಗಳಂತೆಯೇ ಇವೆ. ಬೇಲೂರು ಪಾಳೆಯಗಾರರ ರಾಜಧಾನಿಯೂ ವೇಲಾಪುರಿಯೆ: ಆ ಪಾಳೆಯಗಾರರ ವಂಶದ ವೀರಶ್ರೀ ರಂಗರಾಯದೇವನು ಸುಬ್ರಹ್ಮಣ್ಯ ದೇವರಿಗೆ ಮಾನ್ಯವಾಗಿದ್ದ ದೊಡ್ಡವ ಶಾರದ ಹೊರತಾಗಿ ಕೊಡವಳ್ಳಿ ಗ್ರಾಮವನ್ನು ರಾಯಸದ ರಘುನಾಯಕನಿಗೆ ಅನ್ನದಾನದ ಸಲುವಾಗಿ ನೀಡಿದ್ದನ್ನು ಒಂದು ಶಾಸನ ದಾಖಲಿಸಿದೆ. ಕ್ರಿ.ಶ. 1663ರ ಒಂದು ಶಾಸನವು ಕೊಲ್ಲಿಮೊಗರ ಶಂಕರದೇವಿ ಬಲ್ಲಾಳತಿಯು ಕುಕ್ಕೆ ಸುಬ್ರಹ್ಮಣ್ಯ ಸ್ವಾಮಿಯ ಭಂಡಾರಕ್ಕೆ ನಂದಾದೀಪದ ಸೇವೆಗಾಗಿ ನೀಡಿದ ಹಣದ ವಿವರವನ್ನು ದಾಖಲಿಸಿದೆ. ನೀಡಿದ ಹಣದ ಮೇಲೆ ಬರುವ ಬಡ್ಡಿಯಿಂದ ಸೇವೆಯನ್ನು ನಡೆಸಿಕೊಂಡು ಹೋಗುವ ಸೂಚನೆ ನೀಡಲಾಗಿದೆ. ಕ್ರಿ.ಶ. 1681ರ ಶಾಸನವು ಬೇಲೂರು ಪಾಳೆಯಗಾರರಲ್ಲಿ ಒಬ್ಬರಾದ ವೆಂಕಟಾದ್ರಿ ನಾಯಕರು ಕುಕ್ಕೆಸುಬ್ರಹ್ಮಣ್ಯದೇವರಿಗೆ ನೀಡಿದ ದಾನವನ್ನು ದಾಖಲಿಸಿದೆ.

ಮೇಲೆ ಗಮನಿಸಲಾದ ಶಾಸನಗಳು ಮೂಲಕ ಕುಕ್ಕೆಯು ದೇವರು ಕುಕ್ಕೆಲಿಂಗ ಎಂಬ ಬಿರುದಾಂತ ಸುಬ್ರಹ್ಮಣ್ಯೇಶ್ವರ ಸ್ವಾಮಿಯಾಗಿ, ನಂತರ ಕುಕ್ಕೆ ಸುಬ್ರಹ್ಮಣ್ಯನಾಗಿದ್ದಾನೆ. ಇದರಿಂದ ಮೊದಲಿಗೆ ಶೈವಕ್ಷೇತ್ರವಾಗಿದ್ದು ಕುಕ್ಕೆಪುರವು ಕ್ರಮೇಣ ಸುಬ್ರಹ್ಮಣ್ಯ ಕ್ಷೇತ್ರವಾಗಿದೆ ಎಂದು ಭಾವಿಸಬಹುದು.

ಇಲ್ಲಿ ಆದಿ ಸುಬ್ರಹ್ಮಣ್ಯ ಎಂದು ಪೂಜಿಸುವುದು ಹುತ್ತವನ್ನು. ಹುತ್ತವು ಸರ್ಪಗಳ ವಾಸಸ್ಥಾನ. ತಪಸ್ಸು ಮಾಡುವ ಋಷಿ, ಮುನಿಗಳ ಮೇಲೂ ಹುತ್ತ ಕಟ್ಟುತ್ತದೆ. ಎನ್ನುವ ಕಲ್ಪನೆ ಇದೆ, ಅದೇ ಮುನಿಯಪ್ಪನ ಪೂಜೆಯ ಕಲ್ಪನೆಗೂ ಹಿನ್ನಲೆ ಇರಬೇಕು. ಸರ್ಪ–ಹುತ್ತ–ಋಷಿ (ಮುನಿ) – ಬ್ರಹ್ಮಜ್ಞಾನ ಈ ಕಾರಣದಿಂದ ಸುಬ್ರಹ್ಮಣ್ಯ ರೂಪುಗೊಂಡು, ನಾಗ ಮತ್ತು ಸುಬ್ರಹ್ಮಣ್ಯ ಅಭಿನ್ನರಾಗಿ ಬೆಳೆದಿದ್ದಾರೆ ಎಂದು ಊಹಿಸಬಹುದು. ಈ ಊಹೆಯ ಜೊತೆಗೆ ಮತ್ತೊಂದು ಆತಂಕಕಾರಿಯಾದರೂ ಸುಂದರ ಕಲ್ಪನೆ ಎಂದರೆ ಉಷ್ಣವಲಯದ ನಿತ್ಯಹರಿದ್ವರ್ಣದ ಕಾಡುಗಳ ನಡುವಿನ ಪಶ್ಚಿಮಘಟ್ಟ ಪ್ರದೇಶಗಳಲ್ಲಿ ವಾಸಿಸುತ್ತಿದ್ದರೆನ್ನಲಾದ, ನಾಗಚಿಹ್ನೆಗಳನ್ನು ಬಳಸುತ್ತಿದ್ದ ನಾಗ ಕುಲದವರಲ್ಲಿ ಯಾರೋ ಒಬ್ಬ ವೀರ, ಸುಂದರ ತರುಣ ಯೌವನಾವಸ್ಥೆಯಲ್ಲಿದ್ದಾಗಲೇ ಬ್ರಹ್ಮಜ್ಞಾನದ ಸಲುವಾಗಿ ತಪಸ್ಸು ಮಾಡಿ, ಅವನು ತಪಸ್ಸು ಮಾಡಿದ ಸ್ಥಳವೆಂದು ಸೂಚಿತವಾದ ಜಾಗದಲ್ಲಿ ಕಟ್ಟಿಕೊಂಡಿರಬಹುದಾದ ಹುತ್ತದಿಂದ ನಾಗಸರ್ಪವೊಂದು ಹೊರಬಂದಾಗ, ಅದನ್ನೇ ಬ್ರಹ್ಮಜ್ಞಾನ ಪಡೆದು ಬಂದ ವೀರ, ಚಿರಯೌವನದ ಬಾಲಕನ ಪ್ರತಿರೂಪ ಎಂದು ಪರಿಗಣಿಸಿರಬಹುದು. ಈ ಹಿನ್ನಲೆಯಲ್ಲೂ ನಾಗವೇ ಸುಬ್ರಾಯ, ಸುಬ್ರಾಯನೇ ಸುಬ್ರಹ್ಮಣ್ಯ.

ಕ್ರಿ.ಶ. ಸು. 9ನೆಯ ಶತಮಾನದಿಂದಲೂ ಪ್ರಸಿದ್ಧವಾಗಿರುವ ಕುಕ್ಕೆಯ ಸುಬ್ರಹ್ಮಣ್ಯಕ್ಷೇತ್ರ. ಶಾಸನಗಳು ಸುಬ್ರಹ್ಮಣ್ಯನನ್ನು ನಾಗನೊಡನೆ ಸಮೀಕರಿಸಲು ಸಹಾಯ ಮಾಡುವುದಿಲ್ಲವಾದರೂ, ಎತ್ತರದ ಕುಮಾರ ಪರ್ವತದಲ್ಲಿ ದೊರೆಯುವ ಕುಕ್ಕೆ ಲಿಂಗದ ಕಾರಣ ಮತ್ತು ಎತ್ತರದ ಪ್ರದೇಶದಲ್ಲಿರುವ ಕಾರಣ ಊರಿಗೆ ಕುಕ್ಕೆ, ಕುಕ್ಕೆಪುರವೆಂದೂ, ಅಲ್ಲಿನ ಕುಕ್ಕೆಲಿಂಗವೇ ಕ್ರಮೇಣ ಸುಬ್ರಹ್ಮಣ್ಯೇಶ್ವರನಾಗಿ – ಕ್ರಮೇಣ ಹುತ್ತ (ಸಂಕೇತ, ಪ್ರತಿಮೆ) ಮತ್ತು ಪ್ರಾಣಿ(ನಾಗ) ಪೂಜೆಯೊಡನೆ ಸಂಪರ್ಕ ಪಡೆದಿರ ಬೇಕೆಂದು ತಿಳಿಯಬಹುದು. ಕುಕ್ಕೆ ಸುಬ್ರಾಯನೇ ಬಾಲಸುಬ್ರಹ್ಮಣ್ಯ. ಅಂದರೆ (ಬಾಲಕ) ಎಳೆಯ ಹಾವೇ ಬಾಲಸುಬ್ರಹ್ಮಣ್ಯ. ಇದು ಪ್ರಾಣಿ ಪೂಜೆ. ಆರು ಮುಖದ ಕುಕ್ಕೆ ಲಿಂಗವು, ಲಿಂಗದ ಮಗ ಅಂದರೆ ಶಿವನ ಮಗ. ಅವನೇ ಷಣ್ಮುಖ,ಕಾ

ಕಾರ್ತಿಕೇಯ, ಸುಬ್ರಹ್ಮಣ್ಯ, ಸ್ಕಂದ, ಶರವಣಭವ, ಇತ್ಯಾದಿ. ಕುಕ್ಕೆಲಿಂಗ ಮತ್ತು ಪ್ರಾಣಿಪೂಜೆ ಎರಡರ ಸಂಪರ್ಕವೇ ಸುಬ್ರಹ್ಮಣ್ಯನು ಸರ್ವರೂಪಿಯಾಗಿಯೂ ಪೂಜೆಗೊಳ್ಳಲು ಕಾರಣವಾಗಿರಬೇಕು.

---

## ಆಧಾರ ಗ್ರಂಥಗಳು ಮತ್ತು ಲೇಖನಗಳು


1) 'ಶ್ರೀ ಸುಬ್ರಹ್ಮಣ್ಯ ಕ್ಷೇತ್ರ ವರ್ಣನೆ' ಕುಕ್ಕೆ ಸುಬ್ರಹ್ಮಣ್ಯ 1984
2) 'ಶ್ರೀ ಸುಬ್ರಹ್ಮಣ್ಯ ಕ್ಷೇತ್ರ ಪುರಾಣ' ಕುಕ್ಕೆ ಸುಬ್ರಹ್ಮಣ್ಯ 1984
3) 'ಶ್ರೀ ಸುಬ್ರಹ್ಮಣ್ಯ ಕ್ಷೇತ್ರ ಮಾಹಾತ್ಮೆ' ಕುಕ್ಕೆ ಸುಬ್ರಹ್ಮಣ್ಯ 1981
4) 'ತುಳುನಾಡಿನ ಶಾಸನಗಳು' ಡಾ॥ ಕೆ.ವಿ.ರಮೇಶ್. ಎಂ.ಜೆ.ಶರ್ಮ, ಮೈಸೂರು 1978
5) 'ತುಳುನಾಡಿನ ಇತಿಹಾಸ' ಡಾ॥ ಕೆ.ವಿ.ರಮೇಶ್, ಮೈಸೂರು 1969
6) 'ತುಳುನಾಡು : ಪಿ.ಗುರುರಾಜಭಟ್', ಉಡುಪಿ, 1963
7) 'ಮೂರ್ತಿಶಿಲ್ಪ: ನೆಲೆ – ಹಿನ್ನೆಲೆ' ಪ್ರೊ॥ ಎಸ್.ಕೆ.ರಾಮಚಂದ್ರರಾವ್, ಬೆಂಗಳೂರು, 1975
8) 'Serpent worship in Ancient India', B.C.Sinha, London, 1979
9) 'Tree and serpent worship', James Fergusson, London, 1868
10) 'Kartikeya in Indian Art and Literature', Kand an Sinha, Delhi, 1979
11) "Cobra cult in South India - R.Ponnu", 'Q.J.M.S.' Vol IXXIV - 1 PP 22-30.
12) "Subrahmanya Worship in Dakshina Kannada District", - Dr. K.G.Vasantha Madhava - 'Q.J.M.S' IXVII - 3-4 PP 42-45.
13) 'Studies in Tuluva History', P.Gururäja Bhatt
14) 'A.R.I.S.E.' 1928-29, 1929-30, 1930-31
15) 'M.A.R.' 1943.

ಕೆ.ಎಸ್.ಕುಮಾರಸ್ವಾಮಿ

# ಪ್ರಾಚೀನ ಕರ್ನಾಟಕದಲ್ಲಿ ನಾಣ್ಯಟಂಕನ

ನಾಣ್ಯಗಳನ್ನು ಮುದ್ರಿಸುವುದು ಪ್ರಾಚೀನ ಕಾಲದಲ್ಲಿ ಸರಕಾರದ ಹಿಡಿತದಲ್ಲಿ ಇರಲಿಲ್ಲ. ಸರಕಾರದಿಂದ ಪರವಾನಗಿಯನ್ನು ಪಡೆದ ಖಾಸಗೀ ಸಂಸ್ಥೆಗಳು ಈ ಕಾರ್ಯವನ್ನು ನಿರ್ವಹಿಸುತ್ತಿದ್ದವು. ಸರ್ಕಾರವು ಇವುಗಳ ಮೇಲೆ ಹತೋಟಿಯನ್ನು ಮಾತ್ರ ಇಟ್ಟುಕೊಂಡಿದ್ದಿತು. ನಾಣ್ಯಗಳನ್ನು ಟಂಕಿಸುತ್ತಿದ್ದ ಸ್ಥಳಗಳನ್ನು ಕಮ್ಮಟಗಳೆಂದೂ ಅಚ್ಚಿನ ಟಂಕಸಾಲೆಗಳೆಂದೂ ಕರೆಯುತ್ತಿದ್ದರು. ಸರ್ಕಾರದ ಅಧಿಕಾರಿಯು ಟಂಕಿಸಲ್ಪಟ್ಟ ನಾಣ್ಯಗಳನ್ನು ಪರೀಕ್ಷಿಸಿ ರುಜುಪಾತು ಪಡಿಸುತ್ತಿದ್ದನು.[1] ಅನಂತರ ಅವುಗಳನ್ನು ಚಲಾವಣೆಗೆ ಬಿಡುತ್ತಿದ್ದರು. ಚಿನ್ನದ, ಬೆಳ್ಳಿಯ, ತಾಮ್ರದ ನಾಣ್ಯಗಳನ್ನು ಕಮ್ಮಟದಲ್ಲಿ ಟಂಕಿಸುತ್ತಿದ್ದರು.

ಅತಿಹೆಚ್ಚು ಬೆಲೆಬಾಳುವ ಚಿನ್ನದ ನಾಣ್ಯಗಳನ್ನು ನಿಖರವಾಗಿಯೂ ನಿರ್ದಿಷ್ಟವಾಗಿಯೂ, ಟಂಕಿಸಬೇಕಾಗುತ್ತಿದ್ದುದರಿಂದಲೂ, ಅದು ಗುರುತರ ಜವಾಬ್ದಾರಿಯಾಗಿದ್ದುದರಿಂದಲೂ ಚಿನ್ನಬೆಳ್ಳಿಯ ತೂಕಾದಿಗಳಲ್ಲಿ ನಿಷ್ಣಾತರೂ, ಜಾಣರೂ, ವ್ಯವಹಾರಜ್ಞರೂ, ಜವಾಬ್ದಾರಿಯುತರೂ ನಂಬಿಕೆಗೆ ಅರ್ಹರೂ ಆದ ಪ್ರಾಮಾಣಿಕ ವ್ಯಕ್ತಿಗಳನ್ನು ಈ ಕೆಲಸಕ್ಕೆ ನೇಮಿಸ ಲಾಗುತ್ತಿತ್ತು. ಕೆಲವೊಮ್ಮೆ ಶೆಟ್ಟಿಗಳು (ವ್ಯಾಪಾರಿಗಳು) ಈ ಜವಾಬ್ದಾರಿ ನಿರ್ವಹಿಸುತ್ತಿದ್ದರೆಂದು ಶಾಸನಗಳಲ್ಲಿ ಹೇಳಿದ್ದರೂ ಅವರ ಕೆಳಗೆ ಪುನಃಅಕ್ಕಸಾಲಿಗರು ಗೇಣಿಯನ್ನು ತೆಗೆದುಕೊಂಡು ಕೆಲಸಮಾಡುತ್ತಿದ್ದ ರೆನಿಸುತ್ತದೆ.[2] ಇಲ್ಲಿ ಗೇಣಿ ಎಂದರೆ ಒಂದು ರೀತಿಯ ಗುತ್ತಿಗೆ ಒಪ್ಪಂದ (ಕಾಂಟ್ರಾಕ್ಟ್) ವು ಈ ಕಮ್ಮಟದ ಒಡೆಯರಾದ ಶೆಟ್ಟಿಗಳು ಮತ್ತು ನಿಜಕೆಲಸಗಾರರಾದ ಅಕ್ಕಸಾಲಿಗರ ನಡುವೆ ಇರುತ್ತಿತ್ತು. ಎಂದು ಭಾವಿಸಬಹುದು. ಆದರೆ ಕೆಲವು ಕಡೆ ಓಜುಗಳೇ (ಅಕ್ಕಸಾಲಿಗರು) ಕಮ್ಮಟದ ಒಡೆಯರಾಗಿರುತ್ತಿದ್ದರು.

ಡಾ॥ ಎಂ. ಚಿದಾನಂದಮೂರ್ತಿಯವರು ಹೇಳುವಂತೆ ವಿಶ್ವಕರ್ಮರೆಂದು ಕರೆದುಕೊಳ್ಳುವ ಅಕ್ಕಸಾಲಿಗರನ್ನು ರಾಜನು ಕಮ್ಮಟಗಳಲ್ಲಿ ನೇಮಿಸಿ ಕೊಳ್ಳುತ್ತಿದ್ದನು. ಅಕ್ಕಸಾಲಿಗಳು ಅಥವಾ ಕಮ್ಮಟದಓಜುಗಳು ತಾವೇ ಪ್ರತ್ಯೇಕವಾದ ಶ್ರೇಣಿಗಳನ್ನು ಸ್ಥಾಪಿಸಿಕೊಳ್ಳುತ್ತಿದ್ದರು.[3] ಒಂದು ಕಮ್ಮಟಕ್ಕೆ ಒಬ್ಬ ಒಡೆಯನಿರುತ್ತಿದ್ದು ಅವನ ಜೊತೆಯಲ್ಲಿ ಮತ್ತೂ ಕೆಲವು ಓಜುಗಳು ಅಥವಾ ಆಚಾರಿಗಳು ಸಾಂಘಿಕವಾಗಿ ದುಡಿಯುತ್ತಿದ್ದರು. ಕಮ್ಮಟವು ಚೆನ್ನಾಗಿ ಬೆಳೆದ ಒಂದು ಸಂಸ್ಥೆಯಾಗಿದ್ದಿತು. ಇಲ್ಲಿ ಮೂರು ರೀತಿಯ ಕೆಲಸ ಮಾಡುತ್ತಿದ್ದರು. ಚಿನ್ನಕ್ಕೆ ಗೊತ್ತಾದ ಆಕಾರವನ್ನು ಕೊಡುತ್ತಿದ್ದ – ಬಿಡಿಗಮ್ಮಟ, ಅದರ ಮೇಲೆ ಕೆಲವರು ಮುದ್ರೆಯನ್ನು ಒತ್ತುತ್ತಿದ್ದರು – ಇದು ಉಂಡಿಗೆಯ ಕಮ್ಮಟ, ಅನಂತರ ನಾಣ್ಯಗಳನ್ನು ಅಂಚನ್ನು ಕತ್ತರಿಸಿ, ಅರದಿಂದ ಉಜ್ಜಿ ಸಮನಾದ ಆಕಾರಗೊಡುತ್ತಿದ್ದ ಕೆಲಸಗಾರರಗುಂಪು– ಸೌಕಟ್ಟುಗಾರರು, ಈ ರೀತಿ ಡಾ॥ ಕುಪ್ಪುಸ್ವಾಮಿಯವರು ಕಮ್ಮಟಗಳಲ್ಲಿ ಮೂರು ರೀತಿಯ ಕೆಲಸವನ್ನು ಗುರುತಿಸಿದ್ದಾರೆ.[4] ಇಂಥ ಕಮ್ಮಟಗಳು ಕರ್ನಾಟಕದ ಲಕ್ಕುಂಡಿ, ಕೊಟ್ಟಿತೊಣೆ, ಬಳ್ಳಿಗಾವೆ, ಸವದಿ ಮೊದಲಾದ ಅನೇಕ ಭಾಗಗಳಲ್ಲಿ ಹರಡಿಕೊಂಡಿದ್ದವು.

ಇಂಥ ಕಮ್ಮಟಗಳಲ್ಲಿ ಹಲವಾರು ಓಜುಗಳು, ಆಚಾರಿಗಳು ದುಡಿದ ಉದಾಹರಣೆಗಳು ಶಾಸನಗಳಲ್ಲುಂಟು. ಹಳೇಬೀಡು ವುಜರೆ ಬಸ್ತಿಹಳ್ಳಿಯ[5] ಜಿನಾಲಯ ಮತ್ತು ಮಲ್ಲಿನಾಥಗುಡಿಗೆ "ಕಂಮಟದೋಜು ಗಳುದಾನವನ್ನು ಬಿಟ್ಟಿದ್ದಾರೆ. ಬೇಲೂರು ತಾ॥ ಮಾದೇನಹಳ್ಳಿಯ[6] ಆಚಾರಿಗಳು ದಾನ ಬಿಟ್ಟಿದ್ದಾರೆ. ಈ ಶಾಸನವನ್ನು ಸೂಕ್ಷ್ಮವಾಗಿ ಗಮನಿಸಿದರೆ ಇಲ್ಲಿ ಕಮ್ಮಟದ ಆಚಾರಿಗಳು ಬಹುಶಃ "ಸಮಕಟ್ಟುಕಾರರುಮಿರ್ದು" – ಎಂದರೆ ಮೇಲೆ ಹೇಳಿದ್ದನ್ನೇ ತಿಳಿಯಬಹುದು. ಅವರು ನಾಣ್ಯಗಳ ಅಂಚನ್ನು ಕತ್ತರಿಸುವವರು, ಎಂದು ಮೇಲೆ ಹೇಳಿದೆ. ಇದೇ ಶಾಸನದಲ್ಲಿ "ಸಾಸಿರಕ್ಕೆ ಹ ಮೊಳಿಗೆ ನಿಚ್ಚ ಹಾಗ.....ಕೊಡುವರ್" ಎಂದು ಬರುತ್ತದೆ. ಇಲ್ಲಿ 'ಸಾವಿರ ಹ ಮೊಳಿಗೆ' ಎಂದರೆ ಒಂದು ಸಾವಿರಅಚ್ಚಿನಮೊಳೆಗೆ ಪ್ರತೀದಿನವೂ ಒಂದು ಹಾಗದಂತೆ ದೇವರಿಗೆ ಲೆಕ್ಕಹಾಕಿ ದಾನಕೊಡುತ್ತಿದ್ದರು. ಅಂದರೆ, ಒಂದು ದಿನಕ್ಕೆ 1000 ಅಚ್ಚಿನ ಮೊಳೆಯಷ್ಟು ನಾಣ್ಯ ಕೆಲಸ ಮಾಡುತ್ತಿದ್ದರೆಂದು ತಿಳಿಯಬಹುದಾಗಿದೆ? ಅಥವಾ ಅದಕ್ಕಿಂತ ಹೆಚ್ಚು

ಉತ್ಪಾದನೆಯನ್ನು ಮಾಡಿದರೂ ಕೂಡ ಈ ಒಂದು ದರದಲ್ಲಿ ದಾನ ಮಾಡುತ್ತಿದ್ದರೆಂದು ತಿಳಿಯಬಹುದೆ? ಒಟ್ಟಿನಲ್ಲಿ ಇದಕ್ಕಿಂತ ಕಡಿಮೆ ಕೆಲಸವನ್ನಂತೂ ಮಾಡುತ್ತಿರಲಿಲ್ಲವೆನ್ನಿಸುತ್ತದೆ. ಮತ್ತು ಅವರ ಕೆಲಸದ ಪ್ರಮಾಣವನ್ನು ಅಥವಾ ಗಾತ್ರವನ್ನು ಮೊಳೆಯ ಸಂಖ್ಯೆಯ ಮೇಲೆ ನಿರ್ಧರಿಸುತ್ತಿದ್ದರೆನ್ನಿಸುತ್ತದೆ.

ನಾವಿಮೋಜನ ಎರಣಿಗ ಮಾದೋಜನ ಮಗ, ಚಿಕ್ಕ ಮಾದೋಜನು ಬೇಚೋಜನ ಮಗ. ಇವರ ಕಾಲ 1098.[7] ಇವರ ಕಾರ್ಯಕ್ಷೇತ್ರವು ಈಗಿನ ಬಳ್ಳಾರಿ ತಾ॥ನ ಕಂಡಿತಿನಿ (ಕೊಟ್ಟಿಕೊಣೆ) ಗ್ರಾಮದಲ್ಲಿರುವ ಕುಮಾರ ದೇವಸ್ಥಾನದ ಹಿಂದೆ ಇದ್ದ ಕುಮ್ಮಟ. ಇವರು ಕುಮ್ಮಟದ ಒಡೆಯರಾಗಿದ್ದರು. ಇವರು ಈ ಶಾಸನದಲ್ಲಿ ತಾವು ಲೊಕ್ಕಿಪೊನ್ನನ್ನು ಅದೇ ತೂಕದ "ನವಿಲುಪೊನ್ನಾಗಿ" ಬದಲಾಯಿಸ ಬೇಕೆಂದು ಯೋಚಿಸಿದರು. ಅನಂತರ ಬಂದ ಲಾಭದಲ್ಲಿ ಸ್ವಲ್ಪವನ್ನು ದೇವರಿಗೆ ದಾನ ಬಿಟ್ಟರು. ಅನೇಕ ಅಧಿಕಾರಿಗಳು ಮತ್ತು ಐದು ಜನರ ಸಮುಖದಲ್ಲಿ ಈ ಒಂದು ಒಪ್ಪಂದ ನಡೆಯಿತು. ಈ ಶಾಸನದಬಗ್ಗೆ ಪ್ರೊ॥ ಚಿದಾನಂದಮೂರ್ತಿಯವರು ಹೀಗೆ ಹೇಳುತ್ತಾರೆ. "ಈ ಶಾಸನದ ರೀತಿಯನ್ನು ನೋಡಿದರೆ ಕಮ್ಮಟದ ಅಕ್ಕಸಾಲಿಗಳಿಗೆ ನಾಣ್ಯಗಳನ್ನು ಟಂಕಿಸುವ ಅಧಿಕಾರವನ್ನು ದೇವಸ್ಥಾನವು ಬಿಟ್ಟುಕೊಟ್ಟು, ಅದಕ್ಕೆ ಪ್ರತಿಯಾಗಿ ಅವರಿಂದ ವರ್ಷಕ್ಕೆ ಹನ್ನೆರಡು ಗದ್ಯಾಣ (ಪೊನ್) ಗಳನ್ನು ಪಡೆಯುತ್ತಿದ್ದರೆಂದು ಕಾಣುತ್ತದೆ.[8]

ಉತ್ತಮೋಜ ಎಂಬ ಇದೇ ಉದ್ಯೋಗದ ಒಬ್ಬ ವ್ಯಕ್ತಿಯನ್ನು ಶಾಸನಗಳು ಉಲ್ಲೇಖಿಸುತ್ತದೆ. ಈತನನ್ನು "ತ್ರಿಭುವನಮಲ್ಲದೇವನಕ್ಕಸಾಲಿ ಉತ್ತಮೋಜ" ಎಂದು ಕರೆದಿದೆ. ಇವನ ಬಗ್ಗೆ ಡಾ॥ ಎ.ವಿ. ನರಸಿಂಹಮೂರ್ತಿಯವರು ಹೀಗೆ ಹೇಳುತ್ತಾರೆ. ಈ ಶಾಸನವು ತ್ರಿಭುವನಮಲ್ಲನ ಕಮ್ಮಟಾಧಿಕಾರಿಯಾದ ಅಕ್ಕಸಾಲಿ ಉತ್ತಮೋಜನು ಸೌದಿಗ್ರಾಮದಲ್ಲಿರುವ ಕಮ್ಮಟೇಶ್ವರ ದೇವರಿಗೆ ಬಿಟ್ಟ ದಾನದ ವಿಷಯವನ್ನು ಹೇಳುತ್ತದೆ. ಚಿನ್ನದ ನಾಣ್ಯಗಳು ಮಹಾರಾಜನ ಕಮ್ಮಟದೊಡೆಯನಾದ ಉತ್ತಮೋಜನ ಆದೇಶದ ಮೇರೆಗೆ ಟಂಕಿಸಲ್ಪಡುತ್ತಿದ್ದವು ಎಂಬುದು ಸ್ಪಷ್ಟವಾಗುತ್ತದೆ. ಈತನು ಚಿನ್ನದ ನಾಣ್ಯಗಳನ್ನು ಮುದ್ರಿಸಲು ಬೇಕಾದ ಮಹಾರಾಜನ ಮೊಹರನ್ನು ಒಳಗೊಂಡ ಕಮ್ಮಟದ ಅಣೆ (die) ಯನ್ನು ತನ್ನ ಬಳಿ ಇಟ್ಟುಕೊಳ್ಳುವ ವಿಶೇಷ ಸವಲತ್ತನ್ನು ಪಡೆದಿದ್ದನು. ಹಿಂದಿನ ಕಾಲದಲ್ಲಿ ಕೇಂದ್ರ ಮತ್ತು ಸ್ಥಳೀಯ ಅಧಿಕಾರಿಗಳಿಬ್ಬರೂ ನಾಣ್ಯಗಳನ್ನು ಬಿಡುಗಡೆ ಮಾಡುವ ಅಧಿಕಾರವನ್ನು ಹೊಂದಿರುತ್ತಿದ್ದರು. ಅಂತೆಯೇ ಚಾಲುಕ್ಯ ಆರನೆಯ ವಿಕ್ರಮಾದಿತ್ಯ ಮಹಾರಾಜನ ಅಕ್ಕಸಾಲಿಯಾಗಿದ್ದ ಉತ್ತಮೋಜನು ಮಹಾರಾಜನ ಮೊಹರಿನಿಂದ ಕೂಡಿದ ಅಚ್ಚಿನ ಜವಾಬ್ದಾರಿಯನ್ನು ಹೊಂದಿದ್ದನು.

---

## ಟಿಪ್ಪಣಿಗಳು


1. ಕುಪ್ಪುಸ್ವಾಮಿ ಜಿ.ಆರ್, 'ಇಕಾನಾಮಿಕ್ ಕಂಡಿಷನ್ಸ್ ಇನ್ ಕರ್ನಾಟಕ' ಧಾರವಾಡ 1975, ಪು.109.
2. 'ಸೌ.ಇ.ಇ.', XV, ಕ್ರ.62, 1148ರದು.
3. ಚಿದಾನಂದಮೂರ್ತಿ, ಎಂ., ಕನ್ನಡಶಾಸನಗಳ ಸಾಂಸ್ಕೃತಿಕ ಅಧ್ಯಯನ', ಪು.389.
4. ಕುಪ್ಪುಸ್ವಾಮಿ, ಮೇಲಿನದೇ, ಪು.109.
5. 'ಎ.ಕ.' XV, ಬಿ.ಎಲ್. 335, 1138ರದು.
6. 'ಎ.ಕ.'V ಬಿ.ಎಲ್. 188, 1191ರದು.
7. 'ಸೌ.ಇ.ಇ.' IX(1) ನಂ.164, 1098ರದು.
8. ಚಿದಾನಂದಮೂರ್ತಿ, ಮೇಲಿನದೇ, ಪು.389.
9. ನರಸಿಂಹಮೂರ್ತಿ, ಎ.ವಿ., 'ದಿ ಕಾಯಿನ್ಸ್ ಆಫ್ ಕರ್ನಾಟಕ' ಪು.78-79.

ಡಾ|| ಪ್ರತಿಭಾ ಚಿಣ್ಣಪ್ಪ

# ಕರ್ನಾಟಕದಲ್ಲಿ ಬಲಿ – ಆತ್ಮತ್ಯಾಗ

ಬಲಿ ಎನ್ನುವ ಪದ್ಧತಿ ನಮ್ಮ ದೇಶದಲ್ಲಿ ಬಹಳ ಹಿಂದಣ ಕಾಲದಿಂದ ನಡೆದುಬಂದದ್ದು. ಆರ್ಯರ ಪೂರ್ವಜರು, ಆರ್ಯರು, ಇದನ್ನು ಅನುಸರಿಸುತ್ತಿದ್ದರು. ಆರ್ಯ ಸಂಸ್ಕೃತಿಯು ಪ್ರಾಣಿ ಬಲಿಯನ್ನಷ್ಟೇ ಅಲ್ಲದೆ, ನರಮೇಧ ಯಾಗವನ್ನು ಸ್ವೀಕರಿಸಿತ್ತು. ಆದರೆ ಕಾಲಕ್ರಮೇಣ ಜೈನ, ಬೌದ್ಧ ಧರ್ಮಗಳ ಪ್ರಭಾವದಿಂದ ಬೆಳೆದು ಬಂದ ಹಿಂದೂಧರ್ಮದಲ್ಲಿ ಆ ಪದ್ಧತಿ ಮಾಯವಾಗುತ್ತಾ ಬಂದಿತು. ದೇವತೆಗೆ ರಕ್ತಲೇಪನಕ್ಕೆ ಬದಲಾಗಿ ಕುಂಕುಮ ಬಳಸಲಾಯಿತು. ಆದರೂ, ನೂರಾರು ವರ್ಷಗಳ ಇತಿಹಾಸದಲ್ಲಿ ಒಂದಲ್ಲ ಒಂದು ವಿಧದಲ್ಲಿ ಈ ಬಲಿಪದ್ಧತಿ ಕಂಡುಬರುತ್ತಲೇ ಇದೆ.

ಕರ್ನಾಟಕದಲ್ಲಿ ಈ ಸಂಪ್ರದಾಯ ಎರಡು ವಿಧದಲ್ಲಿ ಕಾಣುತ್ತದೆ. ಹಳ್ಳಿಯ ರಕ್ಷಣೆಗಾಗಿ ಪ್ರಾಣದ ಹಂಗು ತೊರೆದು ಹೋರಾಡುವ ವೀರಭದ್ರರು ದೊರೆಯ ರಕ್ಷಣೆಗಾಗಿ ತಮ್ಮ ಜೀವನವನ್ನು ಮುಡುಪಾಗಿಟ್ಟ ವಚನಬದ್ಧ ಗರುಡರು, ಪುರುಷರು. ಅನೇಕರು ಭಕ್ತಿಯ ಆವೇಶದಲ್ಲಿ ಎಳೆಯುತ್ತಿರುವ ದೇವರ ರಥದ ಚಕ್ರದಡಿಗೆ ಬೀಳುತ್ತಿದ್ದರು. ಇಂಥವರ ಕಥೆಗಳನ್ನು ಸಾರಿ ಹೇಳುತ್ತವೆ ವೀರಗಲ್ಲುಗಳು. ವೀರಭದ್ರರು, ಗರುಡರು ಈ ಒಂದು ಕೆಲಸಕ್ಕಾಗಿಯೇ ನಿಯೋಜಿತರಾದವರು, ಸ್ವಇಚ್ಛೆಯಿಂದ ಪ್ರೇರೇಪಿತರಾದವರು, ಪ್ರಮಾಣಬದ್ಧರು. ಆದರೆ ನಿಸ್ಸಹಾಯಕಳಾದ ಸ್ತ್ರೀ ಸಮಾಜದ ಕಟ್ಟಳೆಗಳಿಗೆ ಬಾಗಬೇಕಾಗಿತ್ತು. ಚಿಕ್ಕ ಮಗುವಿನಿಂದ ಸತಿಯಾಗುವುದಕ್ಕೆ ಮಾನಸಿಕವಾಗಿ ಸಿದ್ಧತೆ ನಡೆಸಲಾಗುತ್ತಿತ್ತು. ವಿಧವೆಯಾಗಿ ಬದುಕುವ ಆಸೆ ಇದ್ದರೆ ಮುಂದಿನ ಕಠೋರ, ದುಸ್ಸಹನೀಯ ಜೀವನದ ಅರಿವು ಎಂತಹ ಆಸೆಯನ್ನಾದರೂ ಚಿವುಟಿ ಬಿಡುತ್ತಿತ್ತು. ಆಕೆಯು ಸಂಘಂ ಕಾಲದ ಸ್ತ್ರೀ ಆದರೇನು, ಮಧ್ಯಕಾಲೀನಳಾದರೇನು? ಮುಂದಿನ ಬದುಕಿನ ಸ್ಪಷ್ಟ ರೂಪ ಆಕೆಯ ನೋವಿನ ಮಾತುಗಳಲ್ಲಿ ಕರ್ನಾಟಕದ ಜಾನಪದ ಗೀತೆಗಳಲ್ಲಿ ಕೇಳಿ ಬರುತ್ತದೆ.[1]

"ಗಂಡ ಸಾಯೋಕ್ಕಿಂತ ಮುಂಡೆಯಾಗೋಕ್ಕಿಂತ
ಕಂಡೋರ ಮನೆಯ ಕಸಪ್ಯಾಕೆ – ಸಾಯೋಕಿಂತ
ಕೊಂಡವನ್ನೇರೋದೆ ಕಡುಲೇಸು".

ಆಕಸ್ಮಿಕವಾಗಿ ಭವಿಷ್ಯವೇ ಕಮರಿ ಹೋದಾಗ ಸಹಧರ್ಮಿಣಿ ಸ್ತ್ರೀ ಸಹಗಮನ ಮಾಡಿ ಸತಿಯಾಗುತ್ತಿದ್ದಳು. ಇವರುಗಳ ಆತ್ಮಬಲಿದಾನವನ್ನು ಮುಂದೆ ಬಂದ ಪೀಳಿಗೆಗಳು ವೀರಗಲ್ಲು ಸತಿಗಲ್ಲುಗಳ ಮೂಲಕ ಆರಾಧಿಸುತ್ತಿದ್ದರು.

ಮಧ್ಯಕಾಲೀನ ಯುಗದಲ್ಲಿ ಕರ್ನಾಟಕದಲ್ಲಿ ಇನ್ನೊಂದು ತೆರನಾದ ಪದ್ಧತಿಯು ಕಂಡುಬರುತ್ತದೆ. ಒಂದು ಪರಿಸ್ಥಿತಿಯನ್ನು ಸುಧಾರಿಸಲು ಅಥವಾ ಸಂಘಟನೆಯನ್ನು ಎದುರಿಸಲು ಆತ್ಮ ಬಲಿದಾನವು ನಡೆಯುತ್ತಿತ್ತು. ಮೆಕೆಂಜಿ[2] (ಮ್ಯಾನುಸ್ಕ್ರಿಪ್ಟ್‌ನಲ್ಲಿ), ಸ್ಥಳೀಯ ದಾಖಲೆಗಳಲ್ಲಿ ಸ್ವೀಕರಿಸಿರುವ ಶಾಸನಗಳಲ್ಲಿ ಇಂಥ ಘಟನೆಗಳು ಕಂಡುಬರುತ್ತವೆ. ಹಳ್ಳಿಯ ಕೆರೆ ತುಂಬಿ ಕೋಡಿ ಹರಿಯುವ ಪರಿಸ್ಥಿತಿ ಬಂದಾಗ ಆವೂರ ರೆಡ್ಡಿಯ ಸ್ವಪ್ನದಲ್ಲಿ ದೇವತೆ ಕಂಡು ನರಬಲಿ ಕೋರಿದಳಂತೆ. ದೇವತೆಯತೃಪ್ತಿ ಗಾಗಿ ಇಬ್ಬರು ಸಾಲಂಕೃತ ಕನ್ಯೆಯರನ್ನು (ಅಕ್ಕ ತಂಗಿಯರನ್ನು) ದಡದ ಮೇಲೆ ಸಜೀವ ಸಮಾಧಿ ಮಾಡಿ ಪ್ರಮಾದದಿಂದ ತಪ್ಪಿಸಿಕೊಂಡರು. ಕೆಂಪೇಗೌಡನ ಸೊಸೆಯ ಕಥೆ ಎಲ್ಲರಿಗೂ ಗೊತ್ತಿರುವುದೇ. ಯಾರೂ ಆಕೆಯನ್ನು ಬಲವಂತಪಡಿಸಲಿಲ್ಲ. ಆದರೆ ಗರ್ಭಿಣಿಯ ಬಲಿಯೇ ಬೇಕೆಂದಾಗ ಆ ತುಂಬುಗರ್ಭಿಣಿ ಗೌಡನ ಸೊಸೆ ಇನ್ನೇನು ತಾನೆ ಮಾಡಿಯಾಳು? ಮಾನಸಿಕ ಒತ್ತಡ, ಪರಿಸ್ಥಿಯ ಒತ್ತಡ, ಆಕೆಯನ್ನು ಈ ಕೆಲಸಕ್ಕೆ ಪ್ರೇರೇಪಿಸಿತು. ಭ್ರೂಣಹತ್ಯೆ ಮಹಾಪಾಪವೆಂದು ಒಪ್ಪಿಕೊಂಡ ಸಮಾಜವೇ ಈ ವಿಧವಾದ ನಂಬಿಕೆ ಇಟ್ಟುಕೊಂಡಾಗ ಆ ಮೌಢ್ಯಕ್ಕೆ ಬಲಿಯಾದಳು ಗೌಡನ ಸೊಸೆ.

ಇಂತಹ ಕಷ್ಟದ ಪರಿಸ್ಥಿತಿಯನ್ನು ನಿವಾರಿಸಲು ಇನ್ನೊಬ್ಬರ ಪ್ರಾಣವನ್ನು ಬಲಿಕೊಡದೆ ತನ್ನನ್ನೇ ಅರ್ಪಿಸಿಕೊಳ್ಳಲು ಮುಂದಾದವನು ನೃಪತುಂಗನೊ

ಬ್ಬನೇ. ಆದರೆ, ಉಳಿದೆಲ್ಲ ಉದಾಹರಣೆಗಳಲ್ಲಿ ನಮಗೆ ಕಾಣಸಿಗುವುದು ಅಮಾಯಕ ಸ್ತ್ರೀಯ ಬಲಿದಾನವೇ. ಈ ಹುಡುಗಿಯರಿಗೆ ಶತ್ರುಗಳಿಂದ ಮಾನರಕ್ಷಣೆಗಾಗಿ ಜೊಹರ ಹೋಗುವ ಅವಶ್ಯಕತೆ ಇರಲಿಲ್ಲ. ಅವರು ಸತಿಗಳಾಗುವ ಪರಿಸ್ಥಿತಿಯೂ ಇರಲಿಲ್ಲ. ಕೆಲವೆಡೆ ಅವರಿನ್ನೂ ಕನ್ಯೆಯರು. ಈ ರೀತಿಯ ಬಲಿದಾನವು ಸಮಾಜದ ಕ್ಷೇಮಕ್ಕೋಸ್ಕರ ಎನ್ನವುದೇನೋ ಸರಿ. ಆದರೆ ಕೋಟೆ ಬಾಗಿಲು ನಿಲ್ಲದಿರುವುದಕ್ಕೆ ಯಾರು ಹೊಣೆ? ಸೋಜಿಗವೆಂದರೆ ಇಂತಹ ಬಲಿದಾನಕ್ಕೆ ಕನ್ಯೆಯರು ಅಥವ ಯುವತಿಯರನ್ನು ಮಾತ್ರವೇ ಕೊಡಲಾಗುತ್ತಿತ್ತು. ಜೀವನವು ವಿಕಸಿಸುವ ಮೊದಲೇ ಅಂಥವರನ್ನು ಚಿವುಟಿಹಾಕಲಾಗುತ್ತಿತ್ತು. ಬಲಿದಾನವಾಗಬೇಕಾದಾಗ ಊರ ಮುಖ್ಯಸ್ಥನೇಕೆ ಮುಂದಾಗುವುದಿಲ್ಲ? ಜೋಯಿಸನೇಕೆ ಹೋಗುವುದಿಲ್ಲ? ಊರವರ್ತಕನೋ, ಬೇಸಾಯಗಾರನೋ ಏಕೆ ಮುಂದಾಗುವುದಿಲ್ಲ? ಇವರೆಲ್ಲರು ಸಮಾಜಕ್ಕೆ ಬೇಕಾದವರು. ಬೇಡವಾದವಳು ಹೆಣ್ಣು ತಾನೆ? ಈ ಸಂದರ್ಭದಲ್ಲಿ ಕೆರೆಗೆ ಹಾರ'ವೆಂಬ ಜಾನಪದ ಗೀತೆ ನಮ್ಮ ಕಣ್ಣಮುಂದೆ ಎದ್ದು ನಿಲ್ಲುತ್ತದೆ. ಸಣ್ಣ ಸೊಸೆ ಭಾಗೀರಥಿಯನ್ನು ಕೆರೆಗೆಹಾರವಾಗಿ ಕೊಟ್ಟರು. ಭಾಗೀರಥಿಯ ಕಥೇ ಇತಿಹಾಸದ ಘಟನೆಯೇ ಅಲ್ಲವೋ ಅನ್ನುವುದು ಮುಖ್ಯವಲ್ಲ.[3] ಜಾನಪದ ಸಾಹಿತ್ಯ ವ್ಯಕ್ತಿಗತ ಐತಿಹಾಸಿಕ ಘಟನೆಗಳ ನಿರೂಪಣೆಗಿಂತ ಆಯಾ ಕಾಲದ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದ ಪಟಚಿತ್ರವಾಗಿರುತ್ತದೆ. ಕೆರೆಗೆ ಹಾರವನ್ನಾಗಿ ಕೊಡಲು ಭಾಗೀರಥಿಯನ್ನೇನು ಯಾರೂ ಕೇಳಲಿಲ್ಲಿ. ಹಿರಿಯರು ನಿಶ್ಚಯಿಸಿ ಬಿಟ್ಟರು. ಹಿರಿಯ ಸೊಸೆಯರನ್ನು ಕೇಳುವುದು ಒಂದುನೆಪವಷ್ಟೆ. ಜಳಕ ಮಾಡುವುದಕ್ಕೆ ನಿಂಗವ್ವ ನೀಲವ್ವ ನಾವೊಲ್ಲೆ ನಾವೊಲ್ಲೆ ಎಂದಾಗ, ಸಣ್ಣ ಸೊಸೆ ಭಾಗವ್ವ ನೀನಾದರೂ ಜಳಕ ಮಾಡು ಎಂದು ಅತ್ತೆಮಾವಂದಿರೆಂದಾಗ ಇನ್ನೇನು ತಾನೆ ಮಾಡಿಯಾಳು? ಇಲ್ಲಿ ಎಷ್ಟೊಂದು ಮುಚ್ಚು ಮರೆ. ಕಡೆಗೆ ಗಂಗೆಪೂಜೆ ಆಗಿ ಕೆರೆದಂಡೆ ಏರಿ ಬಂದ ಮೇಲೆ ಒಂದು ಬಂಗಾರದ ಬಟ್ಟಲು ಬಿಟ್ಟು ಬಂದ ನೆನಪು. ಆಗಲೂ ಗಂಗವ್ವ ಹೋಗಲಿಲ್ಲ, ಗವರವ್ವ ಹೋಗಲಿಲ್ಲ, ನಿಂಗವ್ವ ಹೋಗಲಿಲ್ಲ, ನೀಲವ್ವ ಹೋಗಲಿಲ್ಲ. ಸಣ್ಣಸೊಸೆ ಭಾಗೀರಥಿಯೇ ಕೆರೆಗೆ ಹಾರವಾಗುವುದಕ್ಕೆ ಹೋಗಬೇಕಾಗಿ ಬಂತು ಇಲ್ಲಿ (ಭಾಗೀರಥಿಯದು ಆತ್ಮತ್ಯಾಗವಲ್ಲ, ಬಲಿ). ಆ ಕಾಲದ ಸಮಾಜದ ಹಿರಿಮೆ ಏನೇ ಇದ್ದರೂ ಅದು ಇಂತಹ ಆಚರಣೆಗಳಿಂದ ಕಿರಿದಾಗಿ ಹೋಗುತ್ತವೆ. ಭಯದಿಂದ ಆ ಸಣ್ಣ ಹುಡುಗಿ ನಿಸ್ಸಹಾಯಳಕಾಗಿ ತವರಿಗೆ ಬಂದಾಗ ಗೆಳತಿಯ ಸಾಂತ್ವನ ಇಟ್ಟಾಂಗ ಇರಬೇಕುಹೌದು, ಸ್ತ್ರೀ ಇಟ್ಟಾಂಗ ಇರಬೇಕು. ಕೊಟ್ಟರೆ ಕೆರೆಗೆ ಹಾರಹೋಗಬೇಕು. ಬಲಿದಾನದ ಘಟನೆಗಳಲ್ಲಿ, ಈ ರೀತಿಯ ಪ್ರಾಣಾರ್ಪಣೆ ಮಾಡುವವರ ಮಾನಸಿಕ ಸ್ಥಿತಿಯು ಕೆರೆಗೆ ಹಾರ ಎನ್ನುವ ಜಾನಪದ ಗೀತೆಯ ಹೊರತು, ಬೇರೆಲ್ಲೂ ಗೋಚರವಾಗುವುದಿಲ್ಲ. ಜಾನಪದ ಕವಿ ಮನನೊಂದು ಬರೆದಿರುವುದು ಭಾಗೀರಥಿಯ ಆತ್ಮತ್ಯಾಗವನ್ನಲ್ಲ, ಆಕೆಯ ಕೊಲೆಯನ್ನು.

ನಮ್ಮ ಸಂಸ್ಕೃತಿಯನ್ನು ಹೊಗಳಿಕೊಳ್ಳುವಾಗ ಅದರ ಹಿಂದಣದ ಕಪ್ಪು ಛಾಯೆಯನ್ನು ಸುಲಭವಾಗಿ ಮರೆತು ಬಿಡುತ್ತೇವೆ. ಮುಳ್ಳು ಚುಚ್ಚಿದರೆ ತಡೆಯಲಾರದ ನಮಗೆ ಮೆಲ್ಲಮೆಲ್ಲನೆ ತಣ್ಣನೆ ನೀರು ಮೇಲೇರುತ್ತಿದ್ದರೆ, ಉರಿಯುವ ಬೆಂಕಿ ಹತ್ತಿರ ವಾಗುತ್ತಿದ್ದರೆ, ಆ ಬಲಿಗೀಡಾದವರ ಭಯೋದ್ವೇಗ ಗಳನ್ನು ಊಹಿಸಲು ಕಷ್ಟವೇ? ನಮ್ಮಲ್ಲಿದ್ದ, ನಮ್ಮ ಮನಸ್ಸನಲ್ಲಿ ಇನ್ನೂ ಇರುವ ಈ ಕಪ್ಪು ಕಲೆಯನ್ನು ಆತ್ಮ ತ್ಯಾಗವೆಂದುಕೊಳ್ಳುವುದು, ಅದನ್ನು ಹೊಗಳಿಕೊಳ್ಳುವುದು ಆತ್ಮ ವಂಚನೆ. ಇದು ಬಲಿ, ಸಾಮಾಜಿಕ ಆತ್ಮ ವಂಚನೆ (ಸೋಶಿಯಲ್ ವಿಕ್ಟಿಮೈಜೇಶನ್) ಮೂಕ ಪಶುಗಳನ್ನು ದೇವರಿಗೆ ಬಲಿಕೊಡುವುದು ಎಷ್ಟು ಶ್ಲಾಘನೀಯವೋ ಅದು ಅಷ್ಟೆ. ಯಾರು ಏತಕ್ಕಾಗಿ ಮಾಡಿದರೇನಂತೆ, ಅದು ಖಂಡನೀಯ, ಅಮಾನುಷ.

---

1. ಜಾನಪದ ಸಾಮಾಜಿಕ ಕಥನ ಗೀತೆಗಳಲ್ಲಿ ದುಃಖಾಂತ ನಿರೂಪಣೆ, ಡಾ॥ ದೇವೇಂದ್ರ ಕುಮಾರ ಹಕಾರಿ,ಪು. 242. ;
2. ಮೆಕೆಂಜೀ ಮ್ಯಾನ್ಯುಸ್ಕ್ರಿಪ್ಟ್ - ಸಂ.8, ಅನ್‌ಡೇಟೆಡ್ ಇನ್ಸ್‌ಕ್ರಿಪ್‌ಶನ್ಸ್ ಫ್ರಾಂ ವೇಲೂರು-ಬ್ರಹ್ಮರೆಡ್ಡಿ.
3. ಕೆರೆಗೆ ಹಾರ - ಜಾನಪದ ಸಾಮಾಜಿಕ ಕಥನಗೀತೆಗಳಲ್ಲಿ ದುಃಖಾಂತ ನಿರೂಪಣೆ - ಪು.254.

ಕೆ.ವಿ.ರಾಮಕೃಷ್ಣೇಗೌಡ

# ಹೊಸೂರಿನ ಬೆಟ್ಟದ ದೇವಾಲಯಗಳು: ಶಾಸನಗಳ ಹಿನ್ನೆಲೆಯಲ್ಲಿ

ಬೆಂಗಳೂರಿಗೆ ಕೇವಲ ೪೦ ಕಿ.ಮೀ. ಅಂತರದಲ್ಲಿರುವ ಹೊಸೂರು ಇಂದಿನ ತಮಿಳುನಾಡಿನ ಧರ್ಮಪುರಿ ಜಿಲ್ಲೆಗೆ ಸೇರಿದ್ದು ಬೆಂಗಳೂರು–ಸೇಲಂ ಹೆದ್ದಾರಿಯಲ್ಲಿದೆ. ಈ ಊರಿನ ಪೂರ್ವಕ್ಕೆ ತೇರುಪೇಟೆಗೆ ಹೊಂದಿಕೊಂಡಂತಿರುವ ಬೆಟ್ಟವು ಸಮುದ್ರ ಮಟ್ಟದಿಂದ ೩೧೨೬ ಅಡಿಗಳಷ್ಟು ಎತ್ತರದಲ್ಲಿದೆ. ಈ ಬೆಟ್ಟದ ಮೇಲೆ ಚಂದ್ರಚೂಡೇಶ್ವರ ದೇವಾಲಯವಿದೆ. ಅದಕ್ಕೆ ಹೊಂದಿಕೊಂಡಂತೆ ಮರಕತಾಂಬ ಗುಡಿಯೂ ಇದೆ. ದೇವಾಲಯದ ಆವರಣದಲ್ಲಿರುವ ಮಂಟಪಗಳಲ್ಲಿ ಮಹಾಗಣಪತಿ, ಸುಬ್ರಮಣ್ಯ, ದಕ್ಷಿಣಾಮೂರ್ತಿ, ಆಂಜನೇಯ ಮುಂತಾದ ದೇವತಾಮೂರ್ತಿಗಳು ಸ್ಥಾಪಿಸಲ್ಪಟ್ಟಿವೆ. ಪುರಾಣ ಕಥೆಯಲ್ಲಿ ಬರುವ ಮುದ್ಗಲ ಮತ್ತು ಉಕ್ಷಾಯಣ ಮುನಿಗಳೂ ಒಳ ಪ್ರಾಕಾರದಲ್ಲಿ ಸ್ಥಾನವನ್ನು ಪಡೆದಿದ್ದಾರೆ. ಇದೇ ಬೆಟ್ಟದ ಮೇಲೆ ವಾಯುವ್ಯ ಭಾಗದಲ್ಲಿ ಕಾಳಿಕಾದೇವಿಯದೆಂದು ಕರೆಯಲ್ಪಡುವ ಅಕ್ಕಸಾಲೀಶ್ವರ ಗುಡಿ ಇದೆ. ಈ ಬೆಟ್ಟದ ಉತ್ತರದಲ್ಲಿ ಬಸ್ತಿ ಎಂಬ ಊರಿಗೆ ಹೊಂದಿಕೊಂಡಂತೆ ಚಿಕ್ಕಬೆಟ್ಟವಿದ್ದು ಅಲ್ಲಿ ಹನ್ನೆರಡನೆಯ ಶತಮಾನದಲ್ಲಿ ಪಾರ್ಶ್ವನಾಥ ಬಸದಿ ಅಸ್ತಿತ್ವದಲ್ಲಿದ್ದ ಬಗ್ಗೆ ತಿಳಿಯುತ್ತದೆ. ಪ್ರಸ್ತುತ ಈ ದೇವಾಲಯಗಳಿಗೆ ಸಂಬಂಧಿಸಿದಂತೆ ಶಾಸನೋಕ್ತವಾಗಿರುವ ವಿವರಗಳನ್ನು ಅವಲೋಕಿಸಲು ಈ ಲೇಖನದಲ್ಲಿ ಪ್ರಯತ್ನಿಸಲಾಗಿದೆ.

ಹೊಸೂರು ಎಂಬುದು ಅಚ್ಚಕನ್ನಡ ಸ್ಥಳನಾಮ. ಹೊಸ + ಊರು ಹೊಸವೂರು > ಹೊಸೂರು ಆಗಿದೆ. ಈ ಹೆಸರಿನ ಬಳಕೆ ಯಾವಾಗ ಶುರುವಾಯಿತು ಎಂದು ಹೇಳುವುದು ಕಷ್ಟದ ವಿಷಯವೆ. ಕ್ರಿ.ಶ. ೧೩೧೪ರ ವರೆಗಿನ ಶಾಸನಗಳಲ್ಲಿ ಚೂಡವಾಡಿ ಅಥವಾ ಶಿವಿಡಪಾಡಿ ಎಂಬ ಊರೊಂದರ ಉಲ್ಲೇಖಗಳು ಕಂಡುಬರುತ್ತವೆ. ಈ ಹೆಸರು ಬಹುಮಟ್ಟಿಗೆ ಬೆಟ್ಟದ ತಪ್ಪಲಿನಲ್ಲಿರುವ ಇಂದಿನ ತೇರುಪೇಟೆಗೆ ಅನ್ವಯಿಸುತ್ತದೆ ಎಂದು ಹೇಳಬಹುದು. ಮೈಸೂರು ಅರಸರ ಕಾಲದಲ್ಲಿ ಅಂದರೆ ಕ್ರಿ.ಶ.೧೬೭೪ರ ಶಾಸನದಲ್ಲಿ ಮೊದಲ ಬಾರಿಗೆ ಹೊಸವೂರು ಸೀಮೆ[1] ಯ ಪ್ರಸ್ತಾಪ ಬರುತ್ತದೆ. ಬಾಗಲೂರು ಪಾಳೆಗಾರರಲ್ಲಿ ಮೊದಲಿಗನಾದ ಗೂತಲಗುರಪ್ಪ ಎಂಬುವವನು ಹೊಸೂರನ್ನು ಕಟ್ಟಿದನು ಎಂದು ಸೇಲಂ ಜಿಲ್ಲಾ ಗೆಜೆಟಿಯರ್‌ನಲ್ಲಿದೆ. ಆದರೆ ಈ ಹೇಳಿಕೆಯನ್ನು ಸುಲಭವಾಗಿ ಒಪ್ಪಿಕೊಳ್ಳಲು ಬರುವುದಿಲ್ಲ. ಕಾರಣ ಹತ್ತನೆಯ ಶತಮಾನದ ವೇಳೆಗಾಗಲೇ ಈಗಿನ ಹೊಸೂರು ಸ್ಥಳವಿರುವಲ್ಲಿ ಊರೊಂದು ಅಸ್ತಿತ್ವದಲ್ಲಿತ್ತು ಎಂಬುದು ಗಂಗ ಮಾರಸಿಂಹನ ಕನ್ನಡ ಶಾಸನದಿಂದ ತಿಳಿದುಬರುತ್ತದೆ.[2] ರಾಮನಾಯಕನ ಕೆರೆಯ ಗಂಗಮ್ಮ ಗುಡಿಯಲ್ಲಿರುವ ಈ ಶಾಸನ ಕ್ರಿ.ಶ ೯೬೯ಕ್ಕೆ ಸಲ್ಲಿತ್ತಿದ್ದು ಹೊಸೂರಿನಲ್ಲಿ ದೊರೆತಿರುವ ಅತ್ಯಂತ ಪ್ರಾಚೀನ ಶಾಸನವಾಗಿದೆ. ಸರಿಸುಮಾರು ಇದೇ ಕಾಲಕ್ಕೆ ಸೇರಿದ ಶಾಸನವೊಂದು ಅಲ್ಲಿನ ಗೊಲ್ಲರ ಪೇಟೆಯಲ್ಲಿ ದೊರೆತಿದೆ. ಮೇಲಿನ ಶಾಸನಾಧಾರಗಳನ್ನು ಗಮನಿಸಿದರೆ ಈಗಿನ ತೇರುಪೇಟೆ ಪ್ರದೇಶವೇ ಪ್ರಾಚೀನ ಚೂಡವಾಡಿ ಹಾಗೂ ಹೊಸೂರು ಬಹುಶಃ ಹೊಯ್ಸಳರ ಕಾಲದಲ್ಲಿ ಕಟ್ಟಲ್ಪಟ್ಟಿರಬೇಕು ಎಂದು ಹೇಳಬಹುದು.

ಹೊಸೂರಿನ ಪೇಟೆ ಬೀದಿಯನ್ನು ದಾಟಿ ದೇವರ ಕೆರೆ ಏರಿಯಮೇಲೆ ಹೋದರೆ ಅಲ್ಲಿ ಕ್ರಿ.ಶ. ೧೫ನೇಯ ಶತಮಾನಕ್ಕೆ ಸೇರಿದ ಶಾಸನವಿದೆ. ಅದೇ ದಾರಿಯಲ್ಲಿ ಸ್ವಲ್ಪದೂರ ನಡೆದರೆ ರಸ್ತೆಯ ಎಡಭಾಗದಲ್ಲಿ ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು ನಮಗೆ ಎದುರಾಗುತ್ತವೆ. ತೇರುಪೇಟೆಯ ಕಲ್ಯಾಣಿ ಸಮೀಪ ಇರುವ ನಾಗರಕಟ್ಟೆಯ ಮೇಲೆ ಒಕ್ಕಮಾಸ್ತಿಕಲ್ಲಿದೆ. ಬೆಟ್ಟದ ಬುಡದಲ್ಲಿ ಒಂದು ಪ್ರಕೃತಿ ನಿರ್ಮಿತ ಗುಹೆ ಇದೆ. ಅದರಲ್ಲಿ ಬಾಗಿಲಿಗೆ ಎದುರಾಗಿ ಒಂದು ಲಿಂಗವಿದೆ. ಅದರ ಪಕ್ಕದಲ್ಲಿ ಮೆಟ್ಟಿಲುಗಳಿದ್ದು ದಾರಿ ಮುಂದುವರಿಯುತ್ತದೆ.

ಚಂದ್ರಚೂಡೇಶ್ವರ ದೇವಾಲಯಕ್ಕೆ ತೇರುಪೇಟೆಯ ಕಡೆಯಿಂದ ಹೋಗಲು ಕಲ್ಲಿನ ಚಪ್ಪಡಿಗಳಿಂದ ನಿರ್ಮಿಸಿರುವ ಎರಡು ಕಾಲುದಾರಿಗಳಿವೆ. ಇತ್ತೀಚೆಗೆ ಬೆಟ್ಟದ

ಮೇಲಕ್ಕೆ ವಾಹನಗಳು ಹೋಗಲು ಅನುಕೂಲವಾಗುವಂತೆ ರಸ್ತೆಯನ್ನು ನಿರ್ಮಾಣ ಮಾಡಿರುತ್ತಾರೆ. ಕಾಳಿಕಾದೇವಿಯ ಗುಡಿಯ ಪಕ್ಕದಲ್ಲಿ ಹಾದು ಹೋಗುವ ದಾರಿಯ ಮೂಲಕ ಬೆಟ್ಟದ ಮೇಲಕ್ಕೆ ಹೋದರೆ ಮಹಾದ್ವಾರ ನಮಗೆದುರಾಗುತ್ತದೆ. ಪಶ್ಚಿಮಾಭಿಮುಖವಾಗಿರುವ ಇದು ಬಹುಶಃ ರಾಜಗೋಪುರ ನಿರ್ಮಾಣಮಾಡುವ ಉದ್ದೇಶದಿಂದ ಕಟ್ಟಲ್ಪಟ್ಟಿರಬಹುದು. ಚೋಳ/ವಿಜಯನಗರ ಅರಸರ ಕಾಲದಲ್ಲಿ ಈ ದ್ವಾರ ನಿರ್ಮಾಣವಾಗಿರಬಹುದು ಎಂದು ಹೇಳಬಹುದು. ಇದನ್ನು ದಾಟಿ ಮುಂದೆ ಹೋದರೆ ದೇಗುಲದ ದಕ್ಷಿಣದಲ್ಲಿರುವ ಪ್ರವೇಶದ್ವಾರದ ಮೂಲಕ ಒಳಕ್ಕೆ ಹೋಗುತ್ತೇವೆ. ದ್ವಾರದ ಬಳಿ ಎರಡು ಭಕ್ತರ ವಿಗ್ರಹಗಳಿವೆ. ಕಪ್ಪು ಗ್ರಾನೈಟ್ ಕಲ್ಲಿನಿಂದ ನಿರ್ಮಿಸಿರುವ ಭಕ್ತರು ಪ್ರಾರ್ಥನಾಭಂಗಿಯಲ್ಲಿದ್ದಾರೆ. ದೇವಾಲಯದ ಹೊರ ಆವರಣದಲ್ಲಿ ಕಾಶಿ ವಿಶ್ವನಾಥ ಗುಡಿ ಇದೆ. ಅದಕ್ಕೆ ಎದುರಾಗಿ ಸಿಮೆಂಟಿನಿಂದ ಮಾಡಿರುವ ನಂದಿಯಿದೆ. ಈ ಸ್ಥಳದಲ್ಲಿದ್ದ ಕಲ್ಲಿನ ನಂದಿ ಭಿನ್ನವಾದದ್ದರಿಂದ ಹೊಸ ನಂದಿಯನ್ನು ನಿರ್ಮಿಸಿರುತ್ತಾರೆ. ಹೊರಪ್ರಾಕಾರ ಗೋಡೆ ಹಾಗೂ ಒಳಪ್ರಾಕಾರ ಗೋಡೆಗಳ ನಡುವೆ ಗರ್ಭಗುಡಿಗೆ ಎದುರಾಗಿ ಅಷ್ಟ ಮೂಲೆಯಾಕಾರದ ದೀಪಸ್ತಂಭವಿದೆ. ಅದರ ಎತ್ತರ ಸುಮಾರು ೨೫ ಅಡಿಗಳು. ಒಳ ಆವರಣಕ್ಕೆ ಹೋಗಲು ಮತ್ತೊಂದು ಪ್ರವೇಶದ್ವಾರದ ಮೂಲಕ ಹೋಗಬೇಕು. ಈ ಪ್ರವೇಶದ್ವಾರವು ದಕ್ಷಿಣಾಭಿಮುಖವಾಗಿದೆ. ಮೇಲ್ಭಾಗ ದಲ್ಲಿ ಗಾರೆಯಿಂದ ರಚಿಸಲ್ಪಟ್ಟಿರುವ ಗೋಪುರವಿದೆ. ಒಳ ಆವರಣದ ಸುತ್ತಲೂ ಬೇರೆಬೇರೆ ದೇವತಾಮೂರ್ತಿಗಳ ವಿಗ್ರಹಗಳಿವೆ. ಮೂಲ ಗುಡಿಗೆ ದಕ್ಷಿಣದಲ್ಲಿ ಪ್ರವೇಶದ್ವಾರದ ಎಡಕ್ಕೆ ಯಮನ ವಿಗ್ರಹವಿದೆ. ಅದರ ಪಕ್ಕದಲ್ಲಿ ಆಸೀನ ಭಂಗಿಯ ಗಜಲಕ್ಷ್ಮಿಯ ಶಿಲ್ಪವಿದೆ. ಅದೇ ಸ್ಥಳದಲ್ಲಿ ಚಿಕ್ಕ ಮಂಟಪದಲ್ಲಿ ಸಪ್ತಮಾತೃಕೆಯರಿದ್ದಾರೆ. ಇವುಗಳ ಮಗ್ಗುಲಲ್ಲಿ ಬಿಡಿ ಮಾತೃಕೆಯರು ಹಾಗೂ ವೀರಭದ್ರರ ವಿಗ್ರಹಗಳನ್ನು ಪ್ರತಿಷ್ಠಾಪಿಸಿದ್ದಾರೆ. ಮೇಲೆ ತಿಳಿಸಿದ ಎಲ್ಲ ಶಿಲ್ಪಗಳು ಉತ್ತರಕ್ಕೆ ಮುಖಮಾಡಿಕೊಂಡಿವೆ. ಅಲ್ಲಿಂದ ಸ್ವಲ್ಪ ಮುಂದಕ್ಕೆ ಹೋದರೆ ಪೂರ್ವಾಭಿಮುಖವಾಗಿ ನಿಂತಿರುವ ಭಕ್ತನ ವಿಗ್ರಹವಿದೆ. ಅದರ ಪಕ್ಕದಲ್ಲಿ ಸುಮಾರು ಒಂದು ಅಡಿ ಎತ್ತರದ ಪ್ರಾಚೀನ ಬಲಮುರಿ ಗಣೇಶನ ಶಿಲ್ಪವಿದೆ. ಅಲ್ಲಿಯೇ ೬೩ ಜನ ಪುರಾತನರ ಸಾಲು ವಿಗ್ರಹಗಳಿವೆ. ಅದೇ ಜಾಗದಲ್ಲಿ ಒರಟುಕಲ್ಲಿನಲ್ಲಿ ನಿಋತಿಯನ್ನು ಕೆತ್ತಿದೆ. ಅದರ ಪಕ್ಕದಲ್ಲಿ ಅರುಣಾಚಲೇಶ್ವರ ಲಿಂಗವಿದೆ. ಹಾಗೆಯೇ ಮುಂದುವರಿದರೆ ಮರಕತಾಂಬ ದೇವಾಲಯವಿದೆ. ಅದರ ತಳಪಾಯದಲ್ಲಿ ಸುತ್ತಲೂ ಕನ್ನಡ ಮತ್ತು ತಮಿಳು ಶಾಸನಗಳನ್ನು ನೋಡಬಹುದು. ಅಮ್ಮನವರ ಗುಡಿಯ ಮುಂದೆ ಪ್ರಾಕಾರ ಗೋಡೆಗೆ ಹೊಂದಿಕೊಂಡಂತೆ ಇರುವ ಜಗತಿಯಲ್ಲಿ ಲಿಂಗಗಳ ಸಾಲು, ನಂತರ ಕಾಪಾಲ ಭೈರವನ ವಿಗ್ರಹವಿದೆ. ಭೈರವನ ಕೈಯಲ್ಲಿ ಡಮರುಗ, ತ್ರಿಶೂಲ, ಕಪಾಲವಿದ್ದು ನಾಯಿಗೆ ಆಹಾರವನ್ನು ನೀಡುತ್ತಿದ್ದಾನೆ. ಅದೇ ಗುಡಿಯ ಮುಂದೆ ಬಲಭಾಗದಲ್ಲಿ ಚಂಡಿಕೇಶ್ವರ ಗುಡಿ ಮತ್ತು ಗಣಪತಿ ವಿಗ್ರಹಗಳಿವೆ. ಇಲ್ಲಿರುವ ಗಣಪತಿ ವಿಗ್ರಹಗಳು ಶಿಲ್ಪದ ದೃಷ್ಟಿಯಿಂದ ಗಮನಾರ್ಹವಾಗಿವೆ. ಹಾಗೆಯೇ ಮುಂದುವರಿದರೆ ಈಶಾನಮೂರ್ತಿಯ ಶಿಲ್ಪವಿದೆ. ಮೂಲಗರ್ಭಗುಡಿಯ ಎದುರಿಗೆ ಪಶ್ಚಿಮಾಭಿಮುಖವಾಗಿರುವ ನಂದಿಯಿದೆ ಅದರ ಎದುರು ಬಲಿಪೀಠ ಹಾಗೂ ಧ್ವಜಸ್ತಂಭಗಳಿವೆ. ಪುರಾಣ ಕಥೆಯಲ್ಲಿ ಬರುವ ಮುದ್ಗಲ ಮತ್ತು ಉಕ್ಷಾಯಣರ ಮೂರ್ತಿಗಳಿರುವುದು ಇಲ್ಲಿಯೇ. ನಂದಿಯ ಪಕ್ಕದಲ್ಲಿ ವೈಷ್ಣವಿಯ ಶಿಲ್ಪವಿದ್ದು ಇದು ಪ್ರಾಚೀನವೆಂದು ಹೇಳಬಹುದು. ಮುಂದುವರಿದರೆ ಬಿಡಿ ಶಿಲ್ಪಗಳು, ಕೊಂತಮ್ಮ, ಲಿಂಗ, ಅಗ್ನಿ, ಉಗ್ರಾಣಗಳಿವೆ. ಉಗ್ರಾಣದ ಪಕ್ಕದಲ್ಲಿ ಷಣ್ಮುಖಮಂಟಪವಿದೆ. ಅದರ ಎಡಪಾರ್ಶ್ವದಲ್ಲಿ ದೇವಾಲಯದ ಛಾವಣಿಗೆ ಹೋಗಲು ಕಿರಿದಾದ ದಾರಿ ಇದೆ. ಈ ಮಂಟಪದ ಮುಂದೆ ತುಲಾಭಾರ ಕಂಬಗಳಿವೆ. ಈ ಕಂಬದಲ್ಲಿ ಪ್ರಾಚೀನ ಕನ್ನಡ ಶಾಸನವಿದೆ. ಗಂಗರ ದೇವಾಲಯದ ಕಂಬಗಳನ್ನು ಉಯ್ಯಾಲೆಕಂಬಗಳು ಹೋಲುತ್ತವೆ.

ಗರ್ಭಗುಡಿಯ ದಕ್ಷಿಣದಲ್ಲಿ ಸುಮಾರು ಹತ್ತು ಅಡಿ ಎತ್ತರದ ಗಣಪತಿ ಮಂಟಪವಿದೆ. ಈ ಮಂಟಪದ ರಚನಾ ವಿನ್ಯಾಸವು ಗಂಗರ ದೇವಾಲಯಗಳ ಮಾದರಿಯನ್ನು ಹೋಲುತ್ತದೆ. ಆವರಣದಲ್ಲಿರುವ ಗುಡಿಗಳಿಗೆಲ್ಲ ಈ ಮಂಟಪ ಪ್ರಾಚೀನವಾಗಿರ ಬೇಕು ಎಂದು ಹೇಳಬಹುದು. "ಈ ಗಣಪತಿ ದೇವಾಲಯ ಪ್ರಾಚೀನವೆನ್ನುವುದರಲ್ಲಿ ಸಂಶಯವಿಲ್ಲ. ಈಗ ಗರ್ಭಗೃಹ ಮಾತ್ರ ಉಳಿದಿದ್ದು ಉಳಿದ ಅವಶೇಷಗಳು ಇಲ್ಲ ಆದರೆ ಇದರಲ್ಲಿದ್ದಿರಬಹುದಾದ ಕುಬ್ಜವಾದ ರುದ್ರಕಾಂತ ಕಂಭಗಳನ್ನು ಅದರ ಪಕದಲ್ಲಿಯೇ ಇರುವ ಮಂಟಪಕ್ಕೆ ಬಳಸಿರುತ್ತಾರೆ. ಈಗ ಗಣಪತಿಯನ್ನು ಇಟ್ಟಿರುವರಾದರೂ ಹಿಂದೆ ಅಲ್ಲಿ ಶಿವಲಿಂಗ ವಿತ್ತೆಂಬುದರಲ್ಲಿ ಸಂಶಯವಿಲ್ಲ". ರಾಮನಾಥನ ಮರಣವನ್ನು ಉಲ್ಲೇಖಿಸುವ ಶಾಸನವಿರುವುದು ಈ ಮಂಟಪದಲ್ಲಿಯೇ. ಮಂಟಪದ ಬಲಕ್ಕೆ ವಿಷ್ಣು, ಎಡಭಾಗದಲ್ಲಿ

ದುರ್ಗೆ ಹಾಗೂ ಹಿಂದೆ ವಿಷ್ಣುವಿನ ಶಿಲ್ಪವಿದೆ. ಶಂಖ, ಚಕ್ರ, ಅಭಯ ಹಾಗೂ ಕಟಿ ಹಸ್ತವನ್ನು ಹೊಂದಿದ್ದು ಮೂರು ಅಡಿ ಎತ್ತರವಾಗಿದೆ. ಗರ್ಭಗೃಹದ ಹಿಂಬದಿಯಲ್ಲಿ ವಿಷ್ಣುವಿನ ವಿಗ್ರಹವಿದೆ. ಕೆತ್ತನೆ ಸುಂದರವಾಗಿದೆ ಹಾಗೂ ಹೆಚ್ಚು ಅಲಂಕಾರಗಳಿಂದ ಕೂಡಿದೆ. ದೇವಾಲಯದ ಎಡಭಾಗದಲ್ಲಿ ಬ್ರಹ್ಮನ ವಿಗ್ರಹವಿದೆ. ಮೂರು ಮುಖ, ಜಪಮಾಲೆ, ಕಟಿಹಸ್ತ, ಜಟಾಬಂಧ ಇತ್ಯಾದಿಗಳಿಂದ ಕೂಡಿದೆ. ಗಣಪತಿ ಮಂಟಪದ ಎಡಪಾರ್ಶ್ವದಲ್ಲಿ ದುರ್ಗೆಯ ಎದುರಾಗಿ ಆಸೀನ ಕಾಪಾಲ ಭೈರವನಿದ್ದಾನೆ. ಒಂದೂವರೆ ಅಡಿ ಎತ್ತರವಿರುವ ಈ ಶಿಲ್ಪದ ಕೈಯಲ್ಲಿ ಡಮರುಗ, ತ್ರಿಶೂಲ, ಕಪಾಲ, ಸರ್ಪಗಳಿದ್ದು ಚದುರಿದ ಜಟಾಬಂಧವಿದೆ. ಇದರ ಪಕ್ಕದಲ್ಲಿ ಕುಬ್ಜ ದಕ್ಷಿಣಾ ಮೂರ್ತಿಯ ವಿಗ್ರಹವಿದೆ. ಮುಂದೆ ವಿನಾಯಕನ ಮೂರು ವಿಗ್ರಹಗಳಿವೆ. ಮೊದಲನೆಯದು ಬಂಡೆಯಲ್ಲಿ ಬಿಡಿಸಿದ್ದಾಗಿದೆ. ಇದು ಪ್ರಾಚೀನ ಶಿಲ್ಪ. ಎರಡನೆಯದು ಸ್ಥಾನಕ ಮೂರ್ತಿ. ಅದರ ಪಕ್ಕದಲ್ಲಿರುವುದು ನೃತ್ಯಗಣಪತಿ ನಂತರ ರಾಜಗಣಪತಿಯ ಮಂಟಪವಿದೆ.

ಚಂದ್ರಚೂಡೇಶ್ವರ ದೇವಾಲಯದ ಪ್ರವೇಶದ್ವಾರ ದಕ್ಷಿಣದಿಕ್ಕಿಗಿದೆ. ಆದರೆ ಗರ್ಭಗುಡಿ ಇರುವುದು ಪೂರ್ವಾಭಿ ಮುಖವಾಗಿಯೇ. ಪ್ರವೇಶದ್ವಾರದ ಎರಡೂ ಕಡೆ ಶೈವ ದ್ವಾರಪಾಲಕರಿದ್ದಾರೆ. ಅಭಯ, ವರದ, ಚಿನ್ಮಯ ಮತ್ತು ವಿಸ್ಮಯ ಹಸ್ತಗಳ ಭಂಗಿಯಲ್ಲಿರುವ ಈ ಶಿಲ್ಪಗಳನ್ನು ಕಪ್ಪು ಗ್ರಾನೈಟ್ ಕಲ್ಲಿನಿಂದ ನಿರ್ಮಿಸಿದ್ದಾರೆ. ಸುಮಾರು ಐದು ಅಡಿ ಎತ್ತರವಿರುವ ಈ ಶಿಲ್ಪಗಳು ಹೊಯ್ಸಳರ ಶಿಲ್ಪಗಳನ್ನು ನೆನಪಿಗೆ ತರುತ್ತವೆ. ವಿಶಾಲವಾದ ಪ್ರವೇಶದ್ವಾರವನ್ನು ಹೊಂದಿರುವ ಈ ದೇವಾಲಯ ಗರ್ಭಗುಡಿ, ಸುಖನಾಸಿ, ಎರಡು ನವರಂಗಗಳನ್ನು ಒಳಗೊಂಡಿದೆ. ಗರ್ಭಗುಡಿಯ ಪ್ರವೇಶದ್ವಾರ ಕಿರಿದಾಗಿದೆ, ಅಲ್ಲಿರುವುದು ಉದ್ಭವಲಿಂಗ. ಒಳನವರಂಗದಲ್ಲಿರುವ ಕಂಬಗಳು ಗಂಗರ ಕಂಬಗಳನ್ನು ಹೋಲುತ್ತವೆಯಾದರೂ ಆಲಂಕಾರಿಕವಾಗಿವೆ. ಎರಡನೆಯ ನವರಂಗದಲ್ಲಿ ಕಾಪಾಲ ಭೈರವಿ ಹಾಗೂ ಕಾಪಾಲ ಭೈರವನ ವಿಗ್ರಹಗಳಿವೆ. ಎರಡೂ ಆಸೀನ ಶಿಲ್ಪಗಳು. ಕಾಪಾಲ ಭೈರವಿ ಚತುರ್ಭುಜವನ್ನು ಹೊಂದಿದ್ದು ಕಿವಿಯಲ್ಲಿ ಓಲೆಯನ್ನು ಧರಿಸಿದ್ದಾಳೆ. ಡಮರುಗ, ತ್ರಿಶೂಲ, ಕಪಾಲ, ಸರ್ಪಗಳು ಕಾಪಾಲ ಭೈರವನ ಕೈಯಲ್ಲಿವೆ. ಅಲ್ಲಿಯೇ ಮೂರು ಅಡಿ ಎತ್ತರದ ಸುಂದರ ಕೆತ್ತನೆಯ ಸೂರ್ಯನ ಶಿಲ್ಪವಿದೆ. ಎರಡನೆಯ ನವರಂಗದಲ್ಲಿರುವ ಆರು ಕಂಬಗಳು ಕಲಾತ್ಮಕ ಕೆತ್ತನೆಯಿಂದ ಕೂಡಿವೆ. ಕಪ್ಪುಗ್ರಾನೈಟ್ ಕಲ್ಲನ್ನು ಉಪಯೋಗಿಸಿದ್ದರೂ ಸೂಕ್ಷ್ಮ ಕೆತ್ತನೆಯು ಹೊಯ್ಸಳ ಶೈಲಿಯದಾಗಿದೆ.

ಪ್ರಸ್ತುತ ಚಂದ್ರಚೂಡೇಶ್ವರ ದೇವರಿಗೆ ಸಂಬಂಧಿಸಿದಂತೆ ಶ್ರೀ ವೇದವ್ಯಾಸ ವಿರಚಿತ ಅಷ್ಟಾದಶ ಪುರಾಣಗಳಲ್ಲಿ ಪ್ರಸಿದ್ಧವಾದ ಬ್ರಹ್ಮಾಂಡ ಪುರಾಣದಲ್ಲಿ ಬ್ರಹ್ಮ–ನಾರದರ ಸಂವಾದದ ರೂಪದಲ್ಲಿ ೧೨೩೬ ಶ್ಲೋಕಗಳನ್ನೊಳಗೊಂಡ ಹದಿನಾರು ಅಧ್ಯಾಯಗಲ್ಲಿ "ಭದ್ರಗಿರಿ ಮಹಾತ್ಮೆ" ಎಂಬ ಹೆಸರಿನಲ್ಲಿ ಸ್ಥಳಪುರಾಣವಿದ್ದು ಅದರ ಸಾರಾಂಶ ಹೀಗಿದೆ. ಒಮ್ಮೆ ಪರಮೇಶ್ವರನು ಪಾರ್ವತಿ ಸಮೇತನಾಗಿ ಕೈಲಾಸದಲ್ಲಿ, ವಿಹರಿಸುತ್ತಿದ್ದಾಗ, ಭದ್ರಗಿರಿಯಲ್ಲಿ ತನ್ನನ್ನು ಕುರಿತು ತಪಸ್ಸನ್ನಾಚರಿಸುತ್ತಿದ್ದ ಭಕ್ತನೊಬ್ಬನಿಗೆ ದರ್ಶನವನ್ನು ಕೊಡುವ ಸಲುವಾಗಿ ಶಿವ ಇದ್ದಕ್ಕಿದಂತೆ ಅದೃಶನಾಗಿ ಒಂದು ಉಡದ ರೂಪವನ್ನು ಧರಿಸುತ್ತಾನೆ. ಇದನ್ನರಿಯದ ಪಾರ್ವತಿ ಶಿವನನ್ನು ಕಾಣದೆ ಕಂಗಾಲಾಗಿ ಉಡವನ್ನು ನೋಡಿ ಆಕರ್ಷಿತಳಾಗಿ ಅದನ್ನು ಹಿಡಿಯಲು ಪ್ರಯತ್ನಿಸಿ ವಿಫಲಳಾಗುತ್ತಾಳೆ. ಕೊನೆಗೆ ಆ ಗೌಧೇಯ (ಉಡ) (ದಕ್ಷಿಣ) ವಿನಾಕಿನಿ ನದಿಯ ಸಮೀಪದ ಭದ್ರಗಿರಿಯ ಚಂಪಕ ವೃಕ್ಷವೊಂದರಲ್ಲಿ ಕಾಣಿಸಿಕೊಳ್ಳುತ್ತದೆ. ಗಿರಿಜೆ ತನ್ನ ಸಖಿಯರೊಡನೆ ಅಲ್ಲಿಗೂ ಬಂದು ಆ ಗೌಧೇಯುವನ್ನೇ ನೋಡುತ್ತ ನಿಲ್ಲುತ್ತಾಳೆ. ಚಂಪಕ ವೃಕ್ಷದ ಸಮೀಪದಲ್ಲಿ ತಪೋನಿರತನಾಗಿದ್ದ ಮುದ್ಗಲ ಮತ್ತು ಉಕ್ಷಾಯಣರೆಂಬ ಮುನಿಗಳು ಅದನ್ನು ನೋಡಿ ತಮ್ಮ-ತಮ್ಮಲ್ಲಿ ಮಾತನಾಡಿಕೊಳ್ಳುತ್ತಿದ್ದರು. ಆ ಶಬ್ದಕ್ಕೆ ಗೌಧೇಯ ಮಾಯವಾಯಿತು. ಆಗ ಗೌರಿ ಕೋಪಗೊಂಡು ಮುನಿಗಳಿಗೆ ಮೂಕ–ಕಿವುಡರಾಗಿ ಜೇಡರ ಜಾತಿಯಲ್ಲಿ ಹುಟ್ಟಿರೆಂದು ಶಾಪಕೊಟ್ಟಳು. ನಂತರ ಅವರ ಆಕ್ರಂದನವನ್ನು ಕೇಳಿ ತನ್ನ ತಪ್ಪಿನ ಅರಿವಾಗಿ, ಪಾರ್ವತಿ ಪಶ್ಚಾತ್ತಾಪಗೊಂಡು ತನ್ನ ದೋಷನಿವಾರಣೆಗಾಗಿ ಶಿವನನ್ನು ಕುರಿತು ತಪಸ್ಸನ್ನಾಚರಿಸತೊಡಗಿದಳು. ಇತ್ತ ಮುದ್ಗಲ– ಉಕ್ಷಾಯಣರೂ ಜೇಡರಾಗಿ ಹುಟ್ಟಿ ತಮ್ಮ ಪೂರ್ವಜನ್ಮ ಸ್ಮರಣೆಯಿಂದ ಶಾಪವಿಮೋಚನೆಗಾಗಿ ಶಿವನನ್ನು ಕುರಿತು ತಪೋನಿರತರಾದರು. ಕಾಲಾಂತರದಲ್ಲಿ ಶಿವನು ಪ್ರತ್ಯಕ್ಷನಾಗಿ ಪಾರ್ವತಿಯನ್ನು ಸಂತೈಸಿ ಶಾಪಗ್ರಸ್ಥರಾದ ಮುನಿಗಳಿಗೆ ಶಾಪ ವಿಮೋಚನೆಯನ್ನು ಸಂತೈಸಿ ಶಾಪಗ್ರಸ್ಥರಾದ ಮುನಿಗಳಿಗೆ ಶಾಪವಿಮೋಚನೆಯನ್ನು ಮಾಡಿದನು. ಧರ್ಮದೇವತೆಯ ಕೋರಿಕೆಯಂತೆ ಭಕ್ತಾನುಗ್ರಹ ಸಲು

ವಾಗಿ ಮರಕತಾಂಬ (ಪಾರ್ವತಿ) ಸಮೇತನಾದ ಶಿವ ಚಂದ್ರಚೂಡೇಶ್ವರನ ರೂಪದಲ್ಲಿ ಭದ್ರಗಿರಿಯಲ್ಲೇ ನೆಲೆಯಾದನು. ಈಗಲೂ ಶಿವ ಗೌಧೇಯದ ರೂಪದಲ್ಲಿ ಭಕ್ತರಿಗೆ ಕಾಣಿಸಿಕೊಳ್ಳುತ್ತಾನೆಂದು ಹೇಳುತ್ತಾರೆ. ಪಾಂಡವರು ವನವಾಸದ ಕಾಲದಲ್ಲಿ ಭದ್ರಗಿರಿಗೆ ಬಂದು ಚಂದ್ರಚೂಡೇಶ್ವರನಿಗೆ ಪೂಜೆಯನ್ನು ಸಲ್ಲಿಸಿದ್ದರೆಂಬ ಐತಿಹ್ಯವಿದೆ.

ಪುರಾಣ ಕಥೆಯಲ್ಲಿ ಈ ಬೆಟ್ಟವನ್ನು ವೃಷಭಾಚಲ, ಭದ್ರಗಿರಿ, ಭದ್ರಾಚಲ, ಬಧಿರಾದ್ರಿ, ಚಂಪಕಾದ್ರಿ, ಚಂಪಕಾಚಲ, ಚಂಪಕವನ ಮುಂತಾದ ಹೆಸರುಗಳಿಂದ ಕರೆದಿರುವುದು ಕಂಡುಬರುತ್ತದೆ. ದಳವಾಯಿ ಕಳಲೆ ನಂಜರಾಜಯ್ಯ ಭದ್ರಗಿರಿ ಬೆಟ್ಟದ ಪೂರ್ವಕ್ಕಿರುವ ತಿರುವಿಚ್ಚಿಪಳ್ಳಿ ಎಂಬಲ್ಲಿ ನಂಜರಾಜಸಮುದ್ರ ಎಂಬ ಅಣೆಕಟ್ಟನ್ನು ಕಟ್ಟಿಸಿದನೆಂದು ಕ್ರಿ.ಶ. ೧೭೭೪ರ ಶಾಸನದಿಂದ ತಿಳಿದುಬರುತ್ತದೆ[3] ಆತನು ಕನ್ನಡದಲ್ಲಿ ರಚಿಸಿರುವ 'ಭದ್ರಗಿರಿ ಮಹಾತ್ಮೆ' ಕೃತಿಯಲ್ಲಿ, ಭದ್ರಗಿರಿ ಪಿನಾಕಿನಿ–ವಹ್ನಿ ನದಿಯ ಸಂಗಮದ ನೈಋತ್ಯಕ್ಕಿದೆಯೆಂದು ಹೇಳುವುದರಿಂದ ಪ್ರಯಾಶಃ ಇದು ಕೂಡ ಈ ಬೆಟ್ಟವನ್ನು ಕುರಿತದ್ದೇ ಇದ್ದಿರಬೇಕು. ಅಂದರೆ ಕ್ರಿ.ಶ. ಹದಿನೇಳನೆಯ ಶತಮಾನಕ್ಕಾಗಲೇ ಈ ಸ್ಥಳಪುರಾಣ ಪ್ರಚಲಿತವಿದ್ದ ಅಂಶ ದೃಢಪಡುತ್ತದೆ.

ಗಂಗ, ಚೋಳ, ಹೊಯ್ಸಳ, ವಿಜಯನಗರ, ಮೈಸೂರು ಅರಸರೇ ಅಲ್ಲದೆ ಅವರ ಸಾಮಂತರು, ಮಾಂಡಲಿಕರು, ಅಧಿಕಾರಿಗಳಿಂದು ವಿವಿಧ ಸೇವಗಳು ಈ ಬೆಟ್ಟದ ದೇವರುಗಳಿಗೆ ಸಂದಿವೆ. ಇಲ್ಲಿನ ಮೂಲ ದೇವಾಲಯವು ಹತ್ತನೆಯ ಶತಮಾನಕ್ಕಾಗಲೇ ಪ್ರಸಿದ್ಧಿಯನ್ನು ಪಡೆದಿತ್ತು ಎಂಬುದು ನಿಶ್ಚಿತ. ಕ್ರಿ.ಶ. ಹನ್ನೊಂದನೆಯ ಶತಮಾನಕ್ಕೆ ಸೇರಿದ ಕುಲೋತ್ತುಂಗ ಚೋಳನ ಶಾಸನವೊಂದು ಬೆಟ್ಟಕ್ಕೆ ಹತ್ತುವ ಮೆಟ್ಟಲಿನ ಮೇಲಿದೆ[4]. ಅಂದರೆ ಶಾಸನವನ್ನು ಹಾಕಿಸುವುದಕ್ಕೆ ಮೊದಲೇ ಮೆಟ್ಟಿಲುಗಳ ರಚನೆ ಆಗಿರಬೇಕು. ಬೆಟ್ಟದ ಮೇಲೆ ದೇವಾಲಯಕ್ಕೆ ಸಂಬಂಧಿಸಿದಂತೆ ದೊರೆಯುವ ಪ್ರಾಚೀನ ಶಾಸನ ಚೋಳ ರಾಜೇಂದ್ರನದು. ಅವರ ಆಳ್ವಿಕೆಯ ಹದಿನಾಲ್ಕನೆಯ ವರ್ಷದಲ್ಲಿ (ಕ್ರಿ.ಶ. ೧೦೨೬) ಕೆತ್ತಿಸಿರುವ ಈ ಶಾಸನದಲ್ಲಿ ಸಾಲೆವೂರಿನ ಒಬ್ಬ ಗೌಡನ ಹೆಂಡತಿ 'ಗೌಡ ಕೊಡುಗೆ'ಯಾಗಿ ಒಂದು ಕೆರೆಯನ್ನು ಕಟ್ಟಿಸಿದಳು ಎಂದಿದೆ (ಇದು ಕನ್ನಡದಲ್ಲಿರುವುದು ಗಮನಾರ್ಹ) ಈ ಶಾಸನ ಸುಬ್ರಹ್ಮಣ್ಯ ಮಂಟಪದ ಮುಂದೆ ಇರುವ ತುಲಾಭಾರದ ಹೊತ್ತಿಗೆ ಕೊಟ್ಟಿರುವ ಉತ್ತರಕ್ಕೆ ಮುಖ ಮಾಡಿರುವ ತೊಲೆಯಲ್ಲಿದೆ. ಆ ವೇಳೆಗೆ ದೇವಾಲಯದಲ್ಲಿ ತುಲಾಭಾರವು ನಡೆಯುತ್ತಿತ್ತು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಮೂಲ ದೇವರನ್ನುಳಿದು ಇತರ ದೇವತಾಮೂರ್ತಿಗಳ ಸ್ಥಾಪನೆ, ಮಂಟಪರಚನೆ, ಪ್ರಾಕಾರ ಗೋಡೆಗಳ ನಿರ್ಮಾಣಗಳ ಬಗ್ಗೆ ಶಾಸನಗಳಲ್ಲಿ ಮಾಹಿತಿಗಳು ದೊರೆಯುತ್ತವೆ. ಮರಕತಾಂಬ ದೇವಿಯ ಪ್ರತಿಷ್ಠಾಪನೆಯನ್ನು ತ್ರಿಭುವನಮಲ್ಲ ಪೂರ್ವಾಧಿರಾಜ ಅತ್ತಿಅಳ್ವ ಕ್ರಿ.ಶ. ೧೨೯೧ರಲ್ಲಿ ಮಾಡಿಸಿದ[5] ಇವನ ಮಗ ಧರ್ಮತ್ತಾಳ್ವ ದೇವಿಯ ಪೂಜೆಗೆ ಕೊತ್ತ ಗಾಮುಂಡನ ಪಲ್ಲಿ ಎಂಬ ಗ್ರಾಮವನ್ನು ದತ್ತಿ ಬಿಟ್ಟಿದ್ದಾನೆ. ಇಲ್ಲಿ ಉಕ್ತವಾಗಿರುವ ಕೊತ್ತಗಾಮುಂಡನಪಲ್ಲಿ ಹೊಸೂರಿನ ಪಶ್ಚಿಮಕ್ಕೆ ಕರ್ನಾಟಕದ ಎಲ್ಲೆಗೆ ಹೊಂದಿಕೊಂಡಂತಿರುವ ಕೊತ್ತಗೊಂಡನಹಳ್ಳಿಯೇ ಆಗಿರಬೇಕು. ಹೊಯ್ಸಳರ ಸಾಮಂತರಾಗಿದ್ದ ಪೂರ್ವಾಧಿರಾಜರ ಶಾಸನಗಳು ಬೆಂಗಳೂರು ಹಾಗೂ ಕೋಲಾರ ಜಿಲ್ಲೆಗಳಲ್ಲಿ ದೊರೆಯುತ್ತವೆ. ಮರಕತಾಂಬ ಗುಡಿಯ ಮುಂದಿರುವ ಮಂಟಪ ರಚನೆಯನ್ನು ಧರ್ಮಾರ್ಥವಾಗಿ ಮಾಡಿಸಿದವನು ಕಾಮಿಂದರನ ಮಗ ಮಾದೇವ. ಈ ಶಾಸನದ ಕಾಲ ಕ್ರಿ.ಶ. ಹದಿಮೂರನೆಯ ಶತಮಾನ. ಅದೇ ಸ್ಥಳದಲ್ಲಿರುವ ಸೋಪಾನ ರಚನೆ ವರಂಗ (ಮಾಲಿಯ) ಪ್ಪನ ಮಗ ಕುನಿ ಪಟ್ಟನಿಂದ ಆಗಿದೆ. ಕಳನಿಯೂರಿನ ಚಟ್ಟದೇವನ ಕುಮಾರ (ಹೆಸರಿನ ಭಾಗ ತೃಟಿತ) ನಂದಿ ವಿಗ್ರಹದ ಬಲಗಡೆ ಇರುವ ಮಂಟಪವನ್ನು ಸುಮಾರು ಕ್ರಿ.ಶ. ೧೪ನೆಯ ಶತಮಾನದಲ್ಲಿ ಕಟ್ಟಿಸಿದನೆಂದು ತಿಳಿಯುತ್ತದೆ.

ಈ ದೇವಾಲಯಕ್ಕೆ ಎರಡು ಪ್ರಾಕಾರ ಗೋಡೆಗಳಿವೆ. ಮೂಲ ಗುಡಿಗೆ ಪ್ರದಕ್ಷಿಣಾ ಪಥದಂತೆ ಇರುವ ಪ್ರಕಾರ ಗೋಡೆ ಕ್ರಿ.ಶ. ಸುಮಾರು ಹದಿಮೂರನೆಯ ಶತಮಾನದಲ್ಲಿ ನಿರ್ಮಾಣಗೊಂಡಿದೆ ಇದನ್ನು ಮಾಡಿಸಿದವನು ತ್ರಿಭುವನಮಲ್ಲ ಪೂರ್ವಾಧಿರಾಜ ಧರ್ಮತ್ತಾಳ್ವನ ಕುಮಾರ ಅತ್ತಿಮಲ್ಲ[7] ಮತ್ತ ಇಡೀ ದೇವಾಲಯಕ್ಕೆ ರಚನೆಯಾಗಿರುವ ಪ್ರಾಕಾರ ಗೋಡೆ ಹದಿನಾರನೆಯ ಶತಮಾನದಲ್ಲಿ ಕೋಟಿನಾಯಕನ ಮಗ ಮಡಿಯನಿಂದ ನಿರ್ಮಾಣಗೊಂಡಂತೆ ತಿಳಿಯುತ್ತದೆ[8]. ಈ ಪ್ರಕಾರ ಗೋಡೆ ಎತ್ತರವಾಗಿದ್ದು ಇಂದಿಗೂ ಅಪೂರ್ಣ ಅವಸ್ಥೆಯಲ್ಲಿರುವ ಮಹಾದ್ವಾರವನ್ನು ಕೂಡಿಕೊಳ್ಳುತ್ತದೆ. ಒಂದೇ ದೇಗುಲಕ್ಕೆ ಎರಡು ಪ್ರಾಕಾರ ಗೋಡೆಗಳು ನಿರ್ಮಾಣಗೊಳ್ಳಲು ಕಾರಣವೇನು? ಎಂಬ ಪ್ರಶ್ನೆ ಉದಯಿಸುತ್ತದೆ. ಬೆಟ್ಟದ ತುದಿಯಲ್ಲಿ ನಿರ್ಮಾಣವಾಗಿದ್ದ ಗುಡಿಯ ಸುಮಾರು ವರ್ಷಗಳು ಮಳೆ, ಗಾಳಿ, ಬಿಸಿ

ಲುಗಳಿಗೆ ಸಿಕ್ಕಿ ಶಿಥಿಲಗೊಳ್ಳುವ ಲಕ್ಷಣಗಳು ಕಾಣಿಸಿಕೊಂಡಿರಬೇಕು. ಇದನ್ನು ಗಮನಿಸಿ ದೇವಾಲಯವನ್ನು ರಕ್ಷಿಸುವ ಸಲುವಾಗಿ ಮತ್ತೊಂದು ಪ್ರಾಕಾರ ಗೋಡೆ ನಿರ್ಮಾಣಗೊಂಡಿರಬೇಕು.

ಚೂಡನಾಥ ದೇವರ ಪೂಜೆ, ನೈವೇದ್ಯ, ಅಭಿಷೇಕಕ್ಕೆ ನೀರೊದಗಿಸಲು, ದೀಪಕ್ಕೆ ಎಣ್ಣೆ, ಖಂಡಸ್ಫುಟಿತ ಜೀರ್ಣೋದ್ಧಾರ ಇತ್ಯಾದಿಗಳಿಗೆ ದಾನ-ದತ್ತಿಗಳನ್ನು ಬಿಟ್ಟಿರುವ ವಿಷಯ ಶಾಸನಗಳಲ್ಲಿ ಬಂದಿವೆ. ಹದಿಮೂರನೆಯ ಶತಮಾನದ ಲಿಪಿಯ ಲಕ್ಷಣಗಳನ್ನು ಹೊಂದಿರುವ ಶಾಸನವೊಂದು ಮಹಾಗಣಪತಿ ದೇವರ ನೈವೇದ್ಯಕ್ಕೆ ದತ್ತಿ ಬಿಟ್ಟ ವಿಷಯವನ್ನು ತಿಳಿಸುತ್ತದೆ.[9] ದೇವಾಲಯಕ್ಕೆ ವಾರ್ಷಿಕ ೯೦ ನಾಲಿ ಎಣ್ಣೆಯನ್ನು ಒದಗಿಸುವ ಸಲುವಾಗಿ ಕುಲೋತ್ತುಂಗ ಚೋಳನ ಆಳ್ವಿಕೆಯಲ್ಲಿ ರಾಜರಾಜ ಪೆರಿಯನ್ ಎಂಬುವನಿಂದ ದೇವರ ಭಂಡಾರಕ್ಕೆ ಹೊನ್ನಿನ ದಾನ ಸಂದಿದೆ. ಶಾಸನದಲ್ಲಿ ಎಣ್ಣೆಯನ್ನು ಮಾಪನ ಮಾಡುವವನ ಹೆಸರು ಅರುಮಾಳಿದೇವ ಎಂದಿದೆ.[10] ಜೊತೆಗೆ ಹಗಲು ವೇಳೆ ೫೦ ದೀಪಗಳನ್ನು ಉರಿಸಲು, ೧೪ ದೀಪಗಳನ್ನು ರಾತ್ರಿವೇಳೆ ಉರಿಸಲು ಶ್ರೀ ಮಾಹೇಶ್ವರರು ಮತ್ತು ಪೂರ್ವಾಧಿರಾಜ ಶಿವಪಾದಶೇಖರ ಪೆರುಮಾಳರು ಕೂಡಿ ದಾನವನ್ನು ಕೊಟ್ಟಿದ್ದಾರೆ.[11]

ದ್ವಾರಪಾಲಕರಿಗೆ ಪೂಜೆ ಸಲ್ಲುತ್ತಿದ್ದುದ್ದು ಅತಿ ವಿರಳ ಎಂದು ಹೇಳಬಹುದು. ಪೂರ್ವಾಧಿರಾಜನ ಗುರು ಸಿರುಪಿಳ್ಳೈ ದ್ವಾರಪಾಲಕರನ್ನು ಪ್ರತಿಷ್ಠಾಪಿಸಿ ಅವರ ನೈವೇದ್ಯಕ್ಕೆ ಸಿರುನತ್ತ ಮಂಗಲದಿಂದ ಬರುವ 'ಕಡಿಮೈ' ಆದಾಯವನ್ನು ದತ್ತಿ ಬಿಟ್ಟಿದ್ದಾನೆ.[12]

ಹೊಯ್ಸಳ ವಿಶ್ವನಾಥ ತನ್ನ ಆಳ್ವಿಕೆಯ ಮೂರನೆಯ ವರ್ಷದಲ್ಲಿ (ಕ್ರಿ.ಶ. ೧೨೬೩) ಚೂಡನಾಥ ದೇವಾಲಯದ ಮಠಪತಿಗಳು, ಸ್ಥಾನತ್ತಾರರು, ಜೀಯರು ಮತ್ತು ವೀರಚೋಳ ವಣುಕ್ಕಾರರು ಇವರಿಗೆ ಒಂದು ರಾಜಾಜ್ಞೆಯನ್ನು ಹೊರಡಿಸಿ, ದೇವದಾನದ ಊರುಗಳು, ಹಾಗೂ ಚೂಡವಾಡಿಯ ವೀರಚೋಳ ವಣುಕ್ಕಾರರಿಂದ ವಸೂಲಾಗುತ್ತಿದ್ದ ತೆರಿಗೆಯಲ್ಲಿ ೧೨೩ ಹೊನ್ನುಗಳನ್ನು ದೇವಾಲಯದ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ಸರ್ವಮಾನ್ಯ ದತ್ತಿಯಾಗಿ ಬಿಟ್ಟಿದ್ದಾನೆ.[13] ದೇವದಾನದ ಊರುಗಳು ಹಾಗೂ ವೀರಚೋಳ ವಣುಕ್ಕಾರರೂ ತೆರಿಗೆಯನ್ನು ಕೊಡಬೇಕಾಗಿತ್ತು ಎಂಬುದನ್ನು ಗಮನಿಸಬಹುದು. ದೇವಾಲಯದಲ್ಲಿ ಪ್ರತಿನಿತ್ಯ ದೇವರಿಗೆ ಅಬಿಷೇಕ ನಡೆಯುತ್ತಿತ್ತು. ಅಭಿಷೇಕಕ್ಕೆ ಪಿನಾಕಿನಿ ನದಿಯಿಂದ ನಿತ್ಯ ೨೦ ಕೊಡ ನೀರನ್ನು ತರಲು ಹತ್ತು ಮಂದಿ ನಿಯುಕ್ತರಾಗಿದ್ದರು. ಅವರಿಗೆ ತಿಂಗಳಿಗೆ ತಲಾ ಹತ್ತು ಹೊನ್ನುಗಳನ್ನು 'ಜೀವಿತ'ವಾಗಿ ಕೊಡುವುದು ರೂಢಿಯಲ್ಲಿತ್ತು. ಹೊಯ್ಸಳ ವಿಶ್ವನಾಥ ತನ್ನ ಆಳ್ವಿಕೆಯ ಮೂರನೆಯ ವರ್ಷದಲ್ಲಿ ಚೂಡನಾಥ ದೇವರ ಅಭಿಷೇಕಕ್ಕೆ ಪಿನಾಕಿನಿ ನದಿಯಿಂದ ನೀರನ್ನು ತರಲು ನಿಯುಕ್ತರಾಗಿದ್ದ ಹತ್ತು ಮಂದಿಯ ಮಾಸಿಕ ಜೀವಿತ ೧೨೦ ಹೊನ್ನುಗಳನ್ನು ಪೂರೈಸುವ ಸಲುವಾಗಿ ಕುಪ್ಪದೇವನಪಲ್ಲಿ ಎಂಬ ಗ್ರಾಮವನ್ನು ದೇವದಾನವಾಗಿ ಬಿಟ್ಟಿದ್ದಾನೆ.[14] ತಿರುಮೈಲಾಪುರದ ಒಬ್ಬ ವರ್ತಕ ಕೂಡ ಇದೇ ಕಾರಣಕ್ಕಾಗಿ ೧೨೦ ಹೊನ್ನುಗಳನ್ನು ದತ್ತಿಕೊಟ್ಟ ವಿಷಯ ಶಾಸನವೊಂದರಲ್ಲಿದೆ. ದೇವಾಲಯಕ್ಕೆ ಬರುವ ಆದಾಯದಲ್ಲಿ ಒಂದು ಭಾಗವನ್ನು ರಾಜನ ಬೊಕ್ಕಸಕ್ಕೆ 'ಕಾಣಿಕೆ' ತೆರಿಗೆಯ ರೂಪದಲ್ಲಿ ಕೊಡುವ ಪದ್ಧತಿ ಹೊಯ್ಸಳರ ಕಾಲದಲ್ಲಿ ಜಾರಿಯಲ್ಲಿದ್ದಿರಬೇಕು. ಮುಮ್ಮಡಿ ವೀರಬಲ್ಲಾಳ (೧೨೯೨ – ೧೩೪೨) ದೇವಾಲಯದ ಅಧಿಕಾರಿಗಳಿಗೆ ಒಂದು ರಾಜಾಜ್ಞೆಯನ್ನು ಹೊರಡಿಸಿ, ದೇವಾಲಯವನ್ನು "ಕಾಣಿಕೈ" ತೆರಿಗೆಯಿಂದ ಮುಕ್ತಮಾಡಿ, ಹಾಗೆ ಉಳಿಯುವ ಹಣವನ್ನು ದೇವಾಲಯದಲ್ಲಿ ನಡೆಯುವ ತಿರುಪ್ಪಣಿ (ತೆಪ್ಪೋತ್ಸವ) ಪೂಜೆಗೆ ಬಳಸಬೇಕೆಂದು ಆದೇಶ ಕೊಟ್ಟಿದ್ದಾನೆ.[15] ಇಂದಿನ ತೇರುಪೇಟೆಯಲ್ಲಿರುವ ಕೊಳದಲ್ಲಿ ಬಹುಶಃ ತೆಪ್ಪೋತ್ಸವ ನಡೆಯುತ್ತಿದ್ದಿರಬೇಕು.

ಈ ಮೊದಲೇ ತಿಳಿಸಿರುವಂತೆ ಕ್ರಿ.ಶ. ಹತ್ತನೆಯ ಶತಮಾನದ ವೇಳೆಗೆ ಪ್ರಸಿದ್ಧಿಗೆ ಬಂದಿದ್ದ ಚೂಡನಾಥ ದೇವಾಲಯಕ್ಕೆ ಅಧಿಕ ಆದಾಯ ಬರತೊಡಗಿದಾಗ ಅದರ ನಿರ್ವಹಣೆಗೆ ಭಂಡಾರಿ ಅಥವಾ ಸ್ಥಾನಿಕನ ನೇಮಕ ಕ್ರಿ.ಶ. ೧೦೮೨ರ ಸುಮಾರಿಗೆ ಆಗಿತ್ತು ಎಂದು ಹೇಳಬಹುದು. ಆ ವೇಳೆಗೆ ದೇವಾಲಯಕ್ಕೆ ಸೇರಿದ ಶೈವಮಠವೊಂದು ಅಸ್ತಿತ್ವದಲ್ಲಿತ್ತು. ಬೆಟ್ಟಕ್ಕೆ ಹೊಂದಿಕೊಂಡಂತೆ ಇರುವ ಈಗಿನ ತೇರುಪೇಟೆ ಪ್ರದೇಶದಲ್ಲಿ ಈ ಮಠ ಇದ್ದಿರಬೇಕು. ಅಲ್ಲಿ ಪ್ರತಿದಿನ ಆಹಾರದಾನ ನಡೆಯುತ್ತಿದ್ದಿರಬೇಕು. ಕ್ರಿ.ಶ. ಹನ್ನೆರಡನೆಯ ಶತಮಾನದ ಲಿಪಿಯಲ್ಲಿರುವ ಶಾಸನವೊಂದರಲ್ಲಿ ೪೦೦ ಜನ ಮಾಹೇಶ್ವರರಿಗೆ ಆಹಾರದಾನಕ್ಕಾಗಿ ಅಪ್ಪುಡೈಯಾನ್ ಎಂಬುವವನು ಭೂಮಿದಾನ ನೀಡಿದ ವಿವರವಿದ್ದು ಅಲ್ಲಿನ ಮಠಪತಿ ಮೊದಲಿಯಾರ್ ಮುತ್ತಿಯ ಉಲ್ಲೇಖವಿದೆ.[16] ಕೋವನವರ ಪಲ್ಲಿಯ ಪೂರ್ವಾಧಿರಾಜನ

ಕಾಲದಲ್ಲಿ ಮಠಪುರವಾಗಿ ಕೊಟ್ಟಿದ್ದ ದಾನವನ್ನು ಹೊಯ್ಸಳ ರಾಮನಾಥ ಕ್ರಿ.ಶ. ೧೨೯೧ ರಲ್ಲಿ ದಾನ ನವೀಕರಣ ಮಾಡಿದನೆಂದು ಹೊಸೂರಿನ ಕೋದಂಡರಾಮ ದೇವಾಲಯದಲ್ಲಿರುವ ಶಾಸನವೊಂದರಲ್ಲಿ ಹೇಳಿದೆ.[17]

ಚೊಡನಾಥ ದೇವಾಲಯದಲ್ಲಿದ್ದ ಮಠಪತಿಗಳು, ಸ್ಥಾನ ಪತಿಗಳು, ಜೀಯರು ಮತ್ತು ವೀರಚೋಳವಣುಕ್ಕರರಿಗೆ ಹೊಯ್ಸಳ ವಿಶ್ವನಾಥ ರಾಜಾಜ್ಞೆಯನ್ನು ಹೊರಡಿಸಿರುವ ವಿಷಯ ಮೇಲೆ ಬಂದಿದೆ. ಇದರಿಂದ ಮಠವು ದೇವಾಲಯಕ್ಕೆ ಸೇರಿದ್ದಿತು ಎಂಬುದರಲ್ಲಿ ಸಂದೇಹವಿಲ್ಲ. ಮಠದ ಮೇಲ್ವಿಚಾರಣೆ ಮಠಪತಿಯ ಕರ್ತವ್ಯವಿದ್ದಿರಬೇಕು. ಸ್ಥಾನಪತಿ ದೇವಾಲಯದ ಮೇಲುಸ್ತುವಾರಿಯ ಹೊಣೆಯನ್ನು ಹೊತ್ತಿದನೆಂದು ಹೇಳಬಹುದು. ಜೀಯರು ಯಾವ ಕಾರ್ಯವನ್ನು ನಿರ್ವಹಿಸುತ್ತಿದ್ದರು ಎಂಬುದು ಸ್ಪಷ್ಟವಿಲ್ಲ. ಬಹುಶಃ ಪೂಜಾ ವಿಧಿಗಳನ್ನು ಮಾಡುತ್ತಿದ್ದಿರಬೇಕು. ವೀರಚೋಳವಣುಕ್ಕಾರರು ಗುಡಿಯ ರಕ್ಷಣೆಗೆಂದು ನಿಯುಕ್ತರಾಗಿದ್ದ ರಕ್ಷಣಾ ಸಿಬ್ಬಂದಿ. ಚೊಹಾವಾಡಿಯ ಮಠಪತಿಗಳಾದ ತನ್(ಮ) ವೆನ್‌ರಪೆರುಮಾಳ್ ಮತ್ತು ವಣ್ಣಕ್ಕಾ(ರ್) ರಿಗೆ ಮಠಪುರವಾಗಿ ಭೂಮಿದತ್ತಿ ಬಿಟ್ಟಿರುವುದು ಇದೇ ದೇವಾಲಯದ ಬಸವಮಂಟಪದ ಸಮೀಪದಲ್ಲಿರುವ ತುಟಿತ ಶಾಸನವೊಂದರಲ್ಲಿದೆ.

ಪ್ರಾರಂಭದಲ್ಲಿ ಅಪಾರ ದಾನವನ್ನು ಮೂಲ ಉದ್ದೇಶವಾಗಿ ಹೊಂದಿದ್ದಿರಬಹುದಾದ ಮಠದಲ್ಲಿ ಮೇಲೆ ತಿಳಿಸಿದ ಗುಡಿಗೆ ಸಂಬಂಧಿಸಿದ ಅಧಿಕಾರಿಗಳು ಒಟ್ಟಿಗೆ ಕೂಡಿ ಕಾರ್ಯ ನಿರ್ವಹಿಸುವ ಪದ್ಧತಿ ರೂಢಿಗೆ ಬಂದಿರಬೇಕು. ಅವರು ಯಾವುದೇ ನಿರ್ಣಯವನ್ನು ತೆಗೆದುಕೊಳ್ಳುವ ಮೊದಲು ಎಲ್ಲರೂ ಒಟ್ಟಿಗೆ ಕಲೆತು, ಚರ್ಚಿಸಿ ನಂತರ ತೀರ್ಮಾನವನ್ನು ತೆಗೆದು ಕೊಳ್ಳುತ್ತಿದ್ದರೆಂದು ಹೇಳಬಹುದು. ಕ್ರಿ.ಶ. ಹದಿನೈದನೆಯ ಶತಮಾನದ ಲಿಪಿಯ ಲಕ್ಷಣಗಳುಳ್ಳ ಶಾಸನವೊಂದು ದೇವಾಲಯದ ಅಧಿಕಾರಿಗಳಾದ ಮಠಪತಿಗಳು, ಮಹೇಶ್ವರರು, ಅರಿಯಪ್ಪಜೀಯರು, ನಂಬಿಮಾರರು, ವೀರಭದ್ರ್ರ, ಪಲವಾಚಾರಿಗಳು ಮತ್ತು ಶಿಲ್ಪಾಚಾರಿಗಳು ಕೂಡಿ ಇಪ್ಪತುನಾಲ್ಕು ಅಂಕಣ ಪ್ರಮಾಣದ ಮನೆ ನಿವೇಶನವನ್ನು ವೀರಚೋಳ ವಣುಕ್ಕಾರನಿಗೆ ಕೊಟ್ಟಿರುವ ಸಂಗತಿ ಇದೆ.[18] ಇವರೇ ಅರಿಯಪ್ಪ ಜೀಯರನಿಗೆ ಧರ್ಮತ್ತುಪುತ್ತೇರಿ ಎಂಬ ಗ್ರಾಮವನ್ನು 'ಕಾಣಿಯಾಚಿ' ಆಗಿ ನೀಡಿದ್ದಾರೆ. ಈ ದೇವಾಲಯದ ಅವಿಭಾಜ್ಯ ಅಂಗವಾಗಿದ್ದ ಮಠವು ಕ್ರಿ.ಶ. ೧೬ನೆಯ ಶತಮಾನದ ನಂತರ ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು.

ಹೊಯ್ಸಳ ರಾಮನಾಥನ ಮರಣವನ್ನು ತಿಳಿಸುವ ಶಾಸನ ಇದೇ ದೇವಾಲಯದ ವಿನಾಯಕ ಮಂಟಪದ ದಕ್ಷಿಣ ಗೋಡೆಯಲ್ಲಿದೆ.[19] ಕ್ರಿ.ಶ. ಸುಮಾರ ೧೨೯೬ಕ್ಕೆ ಸಲ್ಲುವ ಈ ಶಾಸನದಲ್ಲಿ ಮನ್ಮತ ಸಂವತ್ಸರದ ಪುಷ್ಯ ಮಾಸದ ದಶಮಿ ಸೋಮವಾರ ರೋಹಿಣಿ ನಕ್ಷತ್ರದಲ್ಲಿ ರಾಮನಾಥ ಮರಣವನ್ನಪ್ಪಿದ. ಅವನ ರಾಣಿಯರು ಅವನನ್ನು ಅನುಸರಿಸಿದರು (ಸಹಗಮನ ಮಾಡಿದರು) ರಾಜನ ಸಾವು ಸಂಭವಿಸಿದ ಹದಿಮೂರನೆಯ ದಿವಸ ತಪೋಧಿರಾಜ ಎಂಬ ರಾಜ ಗುರು ತೋಟವೊಂದರಲ್ಲಿ ಶಂಭುವನ್ನು ಪ್ರತಿಷ್ಠಾಪಿಸಿದ ಎಂದಿದೆ. ಶಾಸನದಲ್ಲಿ ರಾಜನ ಮರಣಕ್ಕೆ ಕಾರಣವೇನೆಂದು ತಿಳಿದು ಬರುವುದಿಲ್ಲ. ಆದರೆ ರಾಮನಾಥ ಗುಣಪಡಿಸಲಾಗದ ಯಾವುದೋ ಪ್ರಬಲ ಖಾಯಿಲೆ ಹಿಡಿದಿತ್ತೆಂದು ಹೇಳಬಹುದು. ಕ್ರಿ.ಶ. ಸುಮಾರು ೧೨೮೧ರ ಶಾಸನವು ತೇಕಲ್ಲು ಒಡೆಯ, ರಾಮನಾಥನ ಆರೋಗ್ಯ ಸುಧಾರಣೆ ಮತ್ತು ಉತ್ಕರ್ಷಕ್ಕಾಗಿ ಭೂಮಿ ದತ್ತಿ ಬಿಟ್ಟಿದ್ದಾನೆ.[20] ರಾಜನ ಆಳ್ವಿಕೆಯ ಮೂವತ್ತನೆಯ ವರ್ಷದಲ್ಲಿ (ಕ್ರಿ.ಶ. ೧೨೮೪) ಮೇಲೆ ತಿಳಿಸಿರುವ ಉದ್ದೇಶಕ್ಕಾಗಿಯೇ ಪೆರಿಯನಾಡಿನ ನಿವಾಸಿ ಹಾಗೂ ವಿರುವಿನಾಡಿನ ಅಧಿಕಾರಿ ಭೂಮಿ ದತ್ತಿ ಬಿಟ್ಟಿದ್ದಾನೆ[21]. ಅಂದರೆ ರಾಮನಾಥ ಅವನ ಆಳ್ವಿಕೆಯ ೨೩ನೆಯ ವರ್ಷದ ವೇಳೆಗಾಗಲೇ ರೋಗಪೀಡಿತನಾಗಿರಬೇಕು. ಮುಂದೆ ಕ್ರಿ.ಶ. ೧೨೯೩ರಲ್ಲಿ ಖಾಯಿಲೆ ಉಲ್ಬಣವಾಗಿ ಹಾಸಿಗೆ ಹಿಡಿದಿರಬೇಕು. ಕೋಲಾರ ಜಿಲ್ಲೆ ಬೌರಿಂಗ್ ಪೇಟೆ ತಾಲ್ಲೂಕು ಮಡಿವಾಳ ಗ್ರಾಮದ ಸ್ವಯಂಭವೇಶ್ವರ ದೇವಾಲಯದಲ್ಲಿರುವ ಮೂರು ಶಾಸನಗಳು ಈ ವಿಷಯದಲ್ಲಿ ಹೆಚ್ಚಿನ ಮಾಹಿತಿಯನ್ನು ಒದಗಿಸುತ್ತವೆ.[22] ಮೊದಲನೆಯ ಶಾಸನವನ್ನು ರಾಮನಾಥನ ಆಳ್ವಿಕೆಯ ೨೯ನೆಯ ವರ್ಷದಲ್ಲಿ, ಉಳಿದ ಎರಡು ಶಾಸನಗಳನ್ನು ಅವರ ಆಳ್ವಿಕೆಯ ೪೧ನೆಯ ವರ್ಷದಲ್ಲೂ ಹಾಕಿಸಲಾಗಿದೆ. ಮೇಲಿನ ಮೂರು ಶಾಸನಗಳನ್ನು ರಾಮನಾಥನ ಮಗ ಮಂಜಯ ಮಾಗುತ್ತ ರಾಮನಾಥನ ಪವಿತ್ರ ದೇಹದ ಆರೋಗ್ಯ ಸುಧಾರಣೆಗೆ ದೇವದಾನವಾಗಿ ಭೂಮಿದತ್ತಿ ಹಾಗೂ ದೇವರ ನಂದಾದೀಪಕ್ಕೆ ಎಣ್ಣೆಯನ್ನು ಒದಗಿಸಲು ಗಾಣವನ್ನು ನಿರ್ಮಾಣ ಮಾಡಿಸಿದನೆಂದು ಹೇಳಿದೆ ಶಾಸನದಲ್ಲಿ ಬಂದಿರುವ ಮಂಜಯ ಮಾಗುತ್ತ ರಾಜನ ನಿಜಸುತನಾಗಿರದೆ 'ಮನೆ ಮಗನೆಂದು ಹೇಳಬಹುದು. ಇವನು ರಾಜನ ಮಂತ್ರಿಯೂ

ಆಗಿದ್ದ. ಕ್ರಿ.ಶ. ೧೨೯೫ರ ಮೊದಲನೆಯ ಶಾಸನವು ಮನಾಥ ಹುಟ್ಟಿದ್ದು "ಪುರತ್ತಾದಿ ಮಾಸದ ಶಾಡ್ಡೈ ತಾಭಿಷಾ) ನಕ್ಷತ್ರದಲ್ಲಿ ಎಂದಿದೆ. ಅಂದರೆ ಂಜಯ ಮಾಗುತ್ತ ಮೊದಲನೆಯ ಶಾಸನವನ್ನು ಕಿಸುವ ವೇಳೆಗಾಗಲೇ ರಾಜ ಹಾಸಿಗೆಯನ್ನು ಹಿಡಿ ಬೇಕು. (ಕ್ರಿ.ಶ. ೧೨೯೫ನೆಯ ಇಷವಿ ಆಗಸ್ಟ್–ಪ್ಟಂಬರ್‌ನಲ್ಲಿ) ರಾಮನಾಥ ಪ್ರಾಯಶಃ ಹೊಸೂರಿನ ಯೇ ತನ್ನ ಕೊನೆಯುಸಿರೆಳೆದಿರಬೇಕು. ಶಾಸನದಲ್ಲಿ ಳಿರುವ ಶಂಭುವನ್ನು ಪ್ರತಿಷ್ಠಾಪಿಸಿದ ಸ್ಥಳ ಬೆಟ್ಟದ ೇಲೆ ದೇವಾಲಯಕ್ಕೆ ಹೊಂದಿಕೊಂಡಂತೆ ಪಶ್ಚಿಮಕ್ಕಿ ವ ಕೊಳದ ಪಕ್ಕದ ಗುಡಿ ಇರುವ ಜಾಗವೇ ಆಗಿ ೇಕು. ಈ ಗುಡಿಯಲ್ಲಿ ಲಿಂಗವಿದ್ದು ತಳಪಾಯ ್ರಚೀನವಾಗಿದೆ. ನೀರಿನ ಸೌಕರ್ಯವಿರುವ ಇಲ್ಲಿಯೇ ವರ ಹೂದೋಟ ಇದ್ದಿರಬೇಕು. ಹೊಯ್ಸಳರ ್ಷಿಕೆಯಲ್ಲಿ ಹೊಸೂರು ಉಪರಾಜಧಾನಿಯಾಗಿದ್ದಿರ ಬುದು. ರಾಮನಾಥ ತನ್ನ ಕೊನೆಯ ದಿನಗಳನ್ನು ್ಲಿಯೇ ಕಳೆದಿರಬೇಕು. ಬೆಟ್ಟದ ಮೇಲೆ ದೇವಾಲ ದ ಉತ್ತರಕ್ಕೆ ಸುಮಾರು ಒಂದು ಫರ್ಲಾಂಗು ರದಲ್ಲಿ ಕಟ್ಟಡದ ಅವಶೇಷಗಳು, ಇಟ್ಟಿಗೆಯಿಂದ ರ್ಸಿರುವ ತಳಪಾಯ, ಇತ್ಯಾದಿಗಳು ಕಂಡುಬಂ ೆ. ಈ ಸ್ಥಳ ಸಮತಟ್ಟಾಗಿದ್ದು ಸುತ್ತಲೂ ಕೋಟೆ ್ದಿರಬೇಕೆಂದು ಹೇಳಬಹುದು. ಇಲ್ಲಿಯೇ ಅರಮನೆ ್ದಿರಬೇಕು. ಕೋಲಾರ ಜಿಲ್ಲೆ ಸೀತಿಬೆಟ್ಟದ ಮೇಲಿ ನ ಶಾಸನವೊಂದರದಲ್ಲಿ ರಾಮನಾಥನನ್ನು 'ಚೂಡ ಡಿ ಒಡೆಯ' ಎಂದು ಕರೆದಿರುವುದು ಕಂಡುಬರು [23] ಹೊಯ್ಸಳರ ಕನ್ನಡ ಶಾಸನಗಳಲ್ಲಿ ಬರುವ ೊಸ ಬೆಟ್ಟದಲ್ಲಿ ಸುಖದಿಂ ಪ್ರಿತ್ವೀ ರಾಜ್ಯಂಗೇಯ ್" ಎಂಬ ಉಲ್ಲೇಖಗಳು ಈಗಿನ ಹೊಸೂರು ್ಟವನ್ನೇ ಕುರಿತವೇ ಆಗಿರಬೇಕು ಎಂದು ಹೇಳ ಬುದು.

ಇದೇ ಬೆಟ್ಟದ ಮೇಲೆ ವಾಯುವ್ಯ ಭಾಗದಲ್ಲಿ ವ ದೇವಾಲಯವು ವಾಸ್ತುದೃಷ್ಟಿಯಿಂದ ಸುಂದರ ಗಿದೆ. ಗರ್ಭಗುಡಿಯಲ್ಲಿ ಪ್ರಧಾನ ವಾಗಿರುವುದು ಗ. ಅದರ ಹಿಂದೆ ಕಾಳಿಕಾ ದೇವಿಯ ವಿಗ್ರಹವನ್ನು ೋಡೆಗೆ ಒರಗಿಸಿ ನಿಲ್ಲಿಸಿದ್ದಾರೆ. ಕ್ರಿ.ಶ. ಹದಿಮೂರ ು ಶತಮಾನದಲ್ಲಿ ನಿರ್ಮಾಣ ಗೊಂಡಿದ್ದಿರಬಹು ವ ಈ ಗುಡಿಯ ದೇವರನ್ನು ಅಕ್ಕಸಾಲೀಶ್ವರ ುದಾಗಿ ಅದೇ ಗುಡಿಯಲ್ಲಿ ದೊರೆತಿರುವ ಕ್ರಿ.ಶ. ೨೫ರ ಶಿಲಾಶಾಸನವೊಂದರಲ್ಲಿ ಹೇಳಿದೆ.[25] ಮ್ಮಡಿ ವೀರಬಲ್ಲಾಳ' (೧೨೯೨–೧೩೪೨) ಮಾಸಂಡಿ ನಾಡು, ಮುರಸುನಾಡು ಹಾಗೂ ಎರುಮರೆ ನಾಡುಗಳಲ್ಲಿ ಮಣಿಪ್ಪಣ, ಪುದುಕಾಣಿಕೆ ಇತ್ಯಾದಿ ತೆರಿಗೆಗ ಳನ್ನು ವಸೂಲಿ ಮಾಡಲು ಪಾಂಚಾಲಂ ಮತ್ತು ಸಿಂಗಾ ಚಾರಿ ಎಂಬಿಬ್ಬರಿಗೆ ಅಧಿಕಾರ ನೀಡಿರುತ್ತಾನೆ. ಹೀಗೆ ವಸೂ ಲಾದ ಹಣಕ್ಕೆ ಒಂದುವೇಳೆ ವಾರಸುದಾರರು ಯಾರೂ ಇಲ್ಲದಿದ್ದರೆ ಆ ಹಣ ಅಕ್ಕಸಾಲೀಶ್ವರ ದೇವರಿಗೆ ಸಲ್ಲುವುದು ಎಂದು ಶಾಸನ ತಿಳಿಸುತ್ತದೆ.

ಚಂದ್ರಚೂಡೇಶ್ವರ ಬೆಟ್ಟದ ಉತ್ತರದಲ್ಲಿರುವ ಚಿಕ್ಕ ಬೆಟ್ಟದ ಮೇಲೆ ಹನ್ನೆರಡನೆಯ ಶತಮಾನದಲ್ಲಿ ಒಂದು ಪಾರ್ಶ್ವನಾಥ ಬಸದಿ ಅಸ್ತಿತ್ವದಲ್ಲಿತ್ತು. ಬಸದಿಯಲ್ಲಿ ನಿತ್ಯವೂ ಆಹಾರದಾನ ನಡೆಯುತಿತ್ತು ಎಂಬುದು ಬೆಟ್ಟದ ಮೇಲೆ ಹುಟ್ಟುಗುಂಡಿನಲ್ಲಿರುವ ಕ್ರಿ.ಶ. ೧೧೨೮ರ ತಮಿಳು ಶಾನವೊಂದರಿಂದ ತಿಳಿದು ಬರುತ್ತದೆ.[26] ಹೊಯ್ಸಳ ವಿಷ್ಣುವರ್ಧನನ ಕಾಲಕ್ಕೆ ಸೇರಿದ ಈ ಶಾನದಲ್ಲಿ ಅವರ ಸೇನಾಧಿಕಾರಿಗಳಾದ ದಂಡನಾಯಕ ಗಂಗಪಯ್ಯ, ಇವನ ಮಗ ದಂಡನಾಯಕ ಏಚಿಮಯ್ಯ ಮತ್ತು ದಂಡನಾಯಕ ಕೆತ್ತಂದಿಯಾರರು ಮೊರಸುನಾಡಿಗೆ ಸೇರಿದ ಚೂಡವಾಡಿಯಲ್ಲಿದ್ದ ಪಾರ್ಶ್ವನಾಥ ಬಸದಿಯಲ್ಲಿ ನಡೆಯುವ ಆಹಾರದಾನ ಹಾಗೂ ಬಸದಿಯ ನಿರ್ವಹಣೆಗೆ ಭೂಮಿ ಕ್ರಯದಾನದ ಜೊತೆಗೆ ಚಿತ್ರಮೇಲಿನಲ್ಲೂರಿನ ತೆರಿಗೆ ಮೂಲದ ಆದಾಯವನ್ನು ದತ್ತಿ ಬಿಟ್ಟರೆಂದಿದೆ. ದಂಡನಾಯಕ ಗಂಗಿಪಯ ಬಸದಿಯನ್ನು ಕಟ್ಟಿಸಿ, ವಸುಪೂಜ್ಯ ಪಂಡಿತನನ್ನು ಬಸದಿಯ ಸ್ಥಾನಪತಿಯಾಗಿ ನೇಮಿಸಿದ ಮೇಲೆ ತಿಳಿಸಿದ ದತ್ತಿಯನ್ನು ವಾಸುಪೂಜ್ಯ ಪಂಡಿತನಿಗೆ ಒಪ್ಪಿಸಿದರೆಂದು ತಿಳಿದುಬರುತ್ತದೆ. ಪ್ರಸ್ತುತ ಈ ಬೆಟ್ಟದ ಮೇಲೆ ಅರ್ವಾಚೀನ ಕಾಲಕ್ಕೆ ಸೇರಿದ ವೆಂಕಟರಮಣ ಸ್ವಾಮಿ ದೇವಾಲಯವಿದೆ. ಸದ್ಯ ಆ ಸ್ಥಳದಲ್ಲಿ ಬಸದಿ ಇಲ್ಲ. ಆದರೆ ಜೈನ ಧರ್ಮದ ಕುರುಹುಗಳು ಈಗಲೂ ಕಂಡುಬರುತ್ತವೆ. ಬೆಟ್ಟಕ್ಕೆ ಹತ್ತುವ ಮೆಟ್ಟಲುಗಳ ಪಕ್ಕದಲ್ಲಿ ಹುಟ್ಟು ಬಂಡೆಯ ಮೇಲೆ ಆಸೀನ ಭಂಗಿಯ ಜಿನನ ಉಬ್ಬು ಶಿಲ್ಪವಿದೆ. ಬೆಟ್ಟದ ಮೇಲೆ ಹುಟ್ಟುಗುಂಡಿನ ಮೇಲಿರುವ ಶಾಸನದ ಆರಂಭದಲ್ಲಿ ಆಸೀನ ಭಂಗಿಯ ಜಿನನ ಉಬ್ಬುಶಿಲ್ಪ ಹಸು–ಕರು, ಸೂರ್ಯ ಚಂದ್ರರನ್ನು ಬಿಡಿಸಲಾಗಿದೆ. ಅದರ ಪಕ್ಕದಲ್ಲಿ ಸುಮಾರು ಹತ್ತು ಹದಿನೈದು ಅಡಿಗಳ ಆಳದ ಒಂದು ಪ್ರಕೃತಿ ನಿರ್ಮಿತ ನೀರಿನ ದೋಣಿ ಇದ್ದು ಈಗಲೂ ಅದರಲ್ಲಿ ನೀರು ಇದೆ. ಒಟ್ಟಿನಲ್ಲಿ ಈ ಬೆಟ್ಟದ ಪರಿಸರ ಜೈನ ಮುನಿಗಳ ವಾಸಕ್ಕೆ ಎಲ್ಲಾ ರೀತಿಯಿಂದಲೂ ಪ್ರಶಸ್ತವಾದ ಸ್ಥಳವಾಗಿತ್ತು ಎಂದು ಹೇಳಬಹುದು.

ಹೊಸೂರಿನ ಬೆಟ್ಟದ ದೇವಾಲಯಗಳಿಗೆ ಕನ್ನಡ ನಾಡಿನ ಅರಸರು ನಿರಂತರವಾಗಿ ದಾನ-ದತ್ತಿಗಳನ್ನು ಕೊಟ್ಟಿದ್ದಾರೆ. ಅವುಗಳ ಪ್ರಸಿದ್ಧಿಗೆ ಕಾರಣರಾಗಿದ್ದಾರೆ ಎನ್ನುವುದು ಹೆಮ್ಮೆಯ ವಿಷಯವೇ ಸರಿ. ನಮ್ಮ ರಾಜ್ಯದಲ್ಲಿ ಕುಂದಿದ್ದ ರಾಜಕೀಯ ಚತುರತೆಯ ಕಾರಣದಿಂದಾಗಿ, ಭಾಷಾವಾರು ರಾಜ್ಯಗಳ ಮರುವಿಂಗಡಣೆಯ ಕಾಲದಲ್ಲಿ ಅಚ್ಚಗನ್ನಡ ಪ್ರದೇಶಗಳು ನೆರೆಹೊರೆಯ ರಾಜ್ಯಗಳಲ್ಲಿ ವಿಲೀನವಾದವು. ಭೌಗೋಳಿಕವಾಗಿ ಅನ್ಯ ರಾಜ್ಯದಲ್ಲಿ ಸೇರಿದ ಭಾಗಗಳ ಸ್ಥಳನಾಮಗಳು, ವ್ಯಕ್ತಿನಾಮಗಳು, ಹಬ್ಬ-ಹರಿದಿನಗಳು ಆಚರಣೆ ಇತ್ಯಾದಿ ಸಂಸ್ಕೃತಿಕ ಅಂಶಗಳ ದೃಷ್ಟಿಯಿಂದ ನೋಡಿದಾಗ ಅವು ಇಂದಿಗೂ ಕನ್ನಡ ನಾಡಿನ ಅವಿಭಾಜ್ಯ ಅಂಗಗಳೇ ಎಂದು ಭಾಸವಾಗುತ್ತದೆ.*

## ಟಿಪ್ಪಣಿಗಳು

1. Annual Report on Indian Epigraphy (ಆ.ರಿ.ಇ.ಎ.) 1971-72/ಬಿ-207
2. ಆ.ರಿ.ಇ.ಎ. 1969-70/ಬಿ-307
3. ಆ.ರಿ.ಇ.ಎ. 1971-72/ಬಿ-207
4. ಆ.ರಿ.ಇ.ಎ. 1969-70/ಬಿ-303
5. ಆ.ರಿ.ಇ.ಎ. ಬಿ-261
6. ಆ.ರಿ.ಇ.ಎ. ಬಿ-267
7. ಆ.ರಿ.ಇ.ಎ. ಬಿ-297
8. ಆ.ರಿ.ಇ.ಎ. ಬಿ-264
9. ಆ.ರಿ.ಇ.ಎ. ಬಿ-277
10. ಆ.ರಿ.ಇ.ಎ. ಬಿ-303
11. ಆ.ರಿ.ಇ.ಎ. ಬಿ-262
12. ಆ.ರಿ.ಇ.ಎ. ಬಿ-258
13. ಆ.ರಿ.ಇ.ಎ. ಬಿ-274
14. ಆ.ರಿ.ಇ.ಎ. ಬಿ-256
15. ಆ.ರಿ.ಇ.ಎ. ಬಿ-292
16. ಆ.ರಿ.ಇ.ಎ. ಬಿ-300
17. ಆ.ರಿ.ಇ.ಎ.1970-71/ಬಿ-261
18. ಆ.ರಿ.ಇ.ಎ. ಬಿ-489
19. ಆ.ರಿ.ಇ.ಎ. 1969-70/ಬಿ-261
20. ಎ.ಕX ಮಾಲೂರು 37
21. ಎ.ಕX ಮಾಲೂರು 38
22. ಎ.ಕX ಬೌರಿಂಗ್‌ಪೇಟೆ 23, 25(a) ಮತ್ತು 25(b)
23. ಎ.ಕX ಕೋಲಾರ 328
24. ಎ.ಕX ನೆಲಮಂಗಲ 9
25. ಆ.ರಿ.ಇ.ಎ.1969-70/ಬಿ-306
26. ಆ.ರಿ.ಇ.ಎ.1970-71/ಬಿ-486

* *ಈ ಲೇಖನವನ್ನು ಸಿದ್ಧಪಡಿಸಲು ನನಗೆ ಪ್ರೇರಣೆ ನೀಡಿ, ಪ್ರತಿ ಹಂತದಲ್ಲೂ ಸೂಕ್ತ ಸಲಹೆಗಳನ್ನಿತ್ತ, ಮಾರ್ಗದರ್ಶನವಿತ್ತ ಪೂಜ್ಯ ಗುರುಗಳಾದ ಶ್ರೀ ಪಿ.ಪಿ. ಕೃಷ್ಣಮೂರ್ತಿ ಹಾಗೂ ಶ್ರೀ ದೇವರ ಕೊಂಡಾರೆಡ್ಡಿ ಅವರಿಗೆ ನಾನು ಆಭಾರಿಯಾಗಿದ್ದೇನೆ. ಹೊಸೂರಿನ ಚಂದ್ರಚೂಡೇಶ್ವರ ದೇವಾಲಯದ ಮ್ಯಾನೇಜಿಂಗ್ ಟ್ರಸ್ಟೀ ಶ್ರೀಮಾನ್ ಅರುಣಗಿರಿಶೆಟ್ಟಿ ಅವರಿಗೂ ಕೃತಜ್ಞತೆಗಳು.*





ಚಂದ್ರಚೂಡೇಶ್ವರ ದೇವಾಲಯದ ಆವರಣ.

1. ಚೂಡೇಶ್ವರ
2. ಮರಕತಾಂಬ
3-9. ದಿಕ್ಪಾಲಕರು
10-16 ಪರಿವಾರ ದೇವತೆಗಳು
17. ರಾಜಗಣಪತಿ
18. ನೃತ್ಯಗಣಪತಿ ಮಂಟಪ
19. ವಳ್ಳಿ ಷಣ್ಮುಖ.
20. ಕಾಶಿ ವಿಶ್ವನಾಥ
21. ದೊಡ್ಡನಂದಿ
22. ದ್ವಾರಪಾಲಕರು
23. ನಂದಿ
24. ಧ್ವಜಸ್ತಂಭ
25. ಬಲಿಪೀಠ
26. ಜಾಲಂದರ
27. ಉಗ್ರಾಣ.
28. ಗಣೇಶ
29. ಯತಿ
30. ಭೈರವ
31. ಕಾಲಭೈರವ
32. ಸಪ್ತ ಮಾತೃಕೆಯರು
33. ವೀರಭದ್ರ.
34. ತುಲಾಭಾರ




ಅಳತೆ= ಪ್ರಮಾಣಬದ್ಧವಲ್ಲ.

ವಿ.ವಿ.ಕೆ.

ಪಿ.ವಿ. ಕೃಷ್ಣಮೂರ್ತಿ

# ಕುಕ್ಕಲನಾಡು–ಒಂದು ಪ್ರಾಚೀನ ಪ್ರಾದೇಶಿಕ ವಿಭಾಗ

ಬೆಂಗಳೂರು ನಗರಕ್ಕೆ ಸುಮಾರು ೨೦ – ೨೫ ಕಿ.ಮೀ. ವಾಯುವ್ಯ ಹಾಗೂ ಪಶ್ಚಿಮಕ್ಕೆ, ಹೆಸರುಘಟ್ಟದ ಕೆರೆ ಮತ್ತು ಮಂಚನಬೆಲೆ ಕಣಿವೆಯ ನಡುವೆ ಹರಿಯುವ ಅರ್ಕಾವತಿ ನದಿಯ ಇಕ್ಕೆಲಗಳ ಪ್ರದೇಶವು 'ಕುಕ್ಕಲನಾಡು' ಎನಿಸಿಕೊಂಡಿದ್ದಿತು. ಈ ನಾಡಿನ ಪ್ರಾಚೀನತೆ, ಭೌಗೋಳಿಕವ್ಯಾಪ್ತಿ, ನಾಮನಿಷ್ಪತ್ತಿ ಹಾಗೂ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸವನ್ನು ಅವಲೋಕಿಸುವುದು ಪ್ರಸ್ತುತ ಪ್ರಬಂಧದ ಉದ್ದೇಶ.

ಕ್ರಿಸ್ತಶಕ ಸುಮಾರು 750ರ ಗಂಗ ಶ್ರೀಪುರುಷನ ಶಾಸನಗಳಲ್ಲಿ 'ಕುಕ್ಕನರೆನಾಡು', 'ಕುಕ್ಕರ ಪಾಳಿಕ್ಕಾರೆನಾಡು' ಎಂದು ಉಲ್ಲೇಖಿತವಾಗಿದ್ದ ಈ ನಾಡು ಕ್ರಿ.ಶ. 11ನೇ ಶತಮಾನದ ಆದಿಭಾಗದಲ್ಲಿ ಚೋಳರ ಧಾಳಿಗಳಿಗೆ ಗುರಿಯಾಗಿ 'ಕುಕ್ಕನೂರು ನಾಡು' ಎಂದು ಕರೆಯಿಸಿಕೊಂಡಿದ್ದಿತು. ಹೊಯ್ಸಳರು ಕ್ರಿ.ಶ. 1116ರ ನಂತರ ಈ ಪ್ರದೇಶದ ಮೇಲೆ ತಮ್ಮ ಆಳ್ವಿಕೆಯನ್ನು ಆರಂಭಿಸಿದರು. ಆಗ ಈ ನಾಡಿಗೆ 'ಕುಕ್ಕಲನಾಡು' ಎಂಬ ಹೆಸರು ಹೆಚ್ಚು ಪ್ರಚಲಿತವಾಗಿ, ಮುಂದೆ ವಿಜಯನಗರದ ಆಳ್ವಿಕೆಯ ಕಾಲದ ವರೆವಿಗೂ ಉಳಿದಿತ್ತು.[1] ಪ್ರಾಯಶಃ ಈ ಹೆಸರೇ ಚೋಳರ ಆಳ್ವಿಕೆಗೆ ಪೂರ್ವದಿಂದಲೂ ಜನಬಳಕೆಯಲ್ಲಿದ್ದು ದೆಂದು ತೋರುತ್ತದೆ. ಒಟ್ಟಾರೆ, ಕುಕ್ಕನರೆನಾಡು > ಕುಕ್ಕನೂರುನಾಡು > ಕುಕ್ಕಲನಾಡು ಎಂಬ ಅಂಕಿತಗಳಿಂದ ಕ್ರಿ.ಶ. 8ನೇ ಶತಮಾನದಿಂದ 16ನೇ ಶತಮಾನದವರೆಗೂ ಈ ನಾಡು ಅಸ್ತಿತ್ವವನ್ನು ಪಡೆದಿದ್ದಿತು.

ಈ ನಾಡನ್ನು ಪ್ರಸ್ತಾಪಿಸುವ ಶಾಸನಗಳು ದೊರೆತ ಸ್ಥಳಗಳು ಮತ್ತು ಶಾಸನೋಕ್ತ ಸ್ಥಳಗಳನ್ನು ನಕ್ಷೆಯ ಮೇಲೆ ಗುರಿತಿಸಿದರೆ, ಬೆಂಗಳೂರು ಉತ್ತರ ತಾಲೂಕಿನ ಪಶ್ಚಿಮ ಭಾಗ, ನೆಲಮಂಗಲ ಮತ್ತು ಮಾಗಡಿ ತಾಲೂಕುಗಳ ಪೂರ್ವಭಾಗ, ರಾಮನಗರ ಮತ್ತು ಬೆಂಗಳೂರು ದಕ್ಷಿಣ ತಾಲೂಕುಗಳ ಉತ್ತರ ದಿಸೆಯ ಭಾಗಗಳನ್ನೊಳಗೊಂಡಂಥ ಪ್ರದೇಶ ಕುಕ್ಕಲ ನಾಡಾಗಿದ್ದಿತೆಂದು ತಿಳಿಯು

ತ್ತದೆ. ಪ್ರಾಚೀನ ಕಾಲದ ಸಣ್ಣೆನಾಡು ಅಥವಾ ಮಧ್ಯಕಾಲಿನ ಅವಧಿಯ ಎಲಪಕ್ಕನಾಡು ಕುಕ್ಕಲನಾಡಿನ ಪೂರ್ವ ಎಲ್ಲೆಯಾಗಿದ್ದಿತು. ಪಶ್ಚಿಮಕ್ಕೆ 'ಕಿಳಲೆ' ಮತ್ತು ಮಣ್ಣೆನಾಡುಗಳು, ಉತ್ತರಕ್ಕೆ ಹುಲುಕಡಿನಾಡು, ಕಾಡನೂರು 70, ಪುನ್ನಾಡ 70, ಪ್ರದೇಶಗಳು, ದಕ್ಷಿಣಕ್ಕೆ ಕರಿಕನಾಡು, ಬೊಮ್ಮಳಿಗೆ ನಾಡುಗಳು ಮೇರೆಗಳಾಗಿದ್ದವು.

ಯಾವುದೇ ಒಂದು ಪ್ರಾಚೀನ ಪ್ರಾದೇಶಿಕ ವಿಭಾಗಕ್ಕೆ ಹೆಸರು ಬರಲು ಪ್ರಧಾನವಾಗಿ ಆ ಪ್ರದೇಶದ ನೈಸರ್ಗಿಕ ವೈಶಿಷ್ಟ್ಯ ಕಾರಣವಾಗಿರುತ್ತದೆ. ಪ್ರಸ್ತುತ ಕುಕ್ಕಲ ಎಂಬುದು ಕುಕ್+ಆಲ ಎಂಬ ಎರಡು ಪದಗಳನ್ನೊಳಗೊಂಡಿದೆ. ಕುಕ್ಕ್ ಎಂಬುದಕ್ಕೆ ಕೋಶಗಳಲ್ಲಿ ಅರ್ಥ ದೊರೆಯುವುದಿಲ್ಲ. ಇದರ ಮೂಲವನ್ನು ತಿಳಿಯಲು ಇತರ ದ್ರಾವಿಡಭಾಷೆಗಳ ಅಥವಾ ದ್ರಾವಿಡ ಭಾಷಾ ಲಕ್ಷಣಗಳನ್ನು ಈಗಲೂ ಗಣನೀಯ ಪ್ರಮಾಣದಲ್ಲಿ ಪಡೆದಿರುವ ಭಾಸ್ಕ್ ಮತ್ತಿತರ ದಕ್ಷಿಣ ಐರೋಪ್ಯ ಭಾಷಾ ಪ್ರದೇಶಗಳಲ್ಲಿನ ಸ್ಥಳನಾಮಗಳ ಹಿನ್ನೆಲೆಯಲ್ಲಿ ಗಮನಿಸಬೇಕಾಗುತ್ತದೆ. ಈ ನಿಟ್ಟಿನಲ್ಲಿ ಕೆಲಸ ಮಾಡಿರುವ ವಿದ್ವಾಂಸರು ಕುಕ್ಕ್ ಎಂಬುದು ಪರ್ವತದ ತುದಿ-ಶಿಖರ ಎಂಬುದನ್ನು ಸೂಚಿಸುತ್ತದೆ ಎಂದು ಅಭಿಪ್ರಾಯ ಪಟ್ಟಿರುವುದಲ್ಲದೆ, ಅದರ ಕೆಲವು ಜ್ಞಾತಿ ಪದಗಳು ಅಥವಾ ಸಾಧಿತ ಪದಗಳು ಕೊಂಕಾಗಿರುವ ಗುಣವನ್ನು ಸೂಚಿಸುತ್ತವೆಯೆಂದೂ ಹೇಳಿರುತ್ತಾರೆ. ಅಂತಹ ಒಂದು ಜ್ಞಾತಿಪದ 'ಕುರ್ಕ್ಕು' ಎಂಬುದು ಕನ್ನಡದಲ್ಲಿದೆ. ಕುರ್ಕ್ಕು ಎಂಬುದಕ್ಕೆ ಕೋಶಗಳಲ್ಲಿ 'ಕೊಕ್ಕು' ಎಂಬ ಅರ್ಥ ದೊರೆಯುತ್ತದೆ. ಕೊಕ್ಕು ಎಂಬುದು ಡೊಂಕಾಗಿರುವಿಕೆಯನ್ನು ಸೂಚಿಸುವುದು ಸರಿಯಷ್ಟೆ. ಇನ್ನು 'ಆಲ' ಎಂಬುದು ತಗ್ಗಾದ ಸ್ಥಳದಲ್ಲಿ ನೀರು ನಿಂತಿರುವ ಜಾಗ, ನದಿಯ ಮುಖಜ ಭೂಮಿ ಎಂದು ಮುಂತಾಗಿ ಅರ್ಥವಿರುವ ಜಲಸೂಚಿಪದವಾಗಿದೆ. ಅಂದ ಮೇಲೆ ಅರ್ಕಾವತಿ ನದಿಗೆ ನೀರೊದಗಿಸುವ ಅಂಕುಡೊಂಕಾದ ಹಳ್ಳಕೊಳ್ಳಗಳ ಸಮೂಹವನ್ನು ಇದು ನಿರ್ದೇಶಿಸುತ್ತದೆ ಎಂಬುದು ಖಚಿತ ಪಡುತ್ತದೆ. ಮಳೆಯ ನೀರಿನಿಂದ ಉಂಟಾಗುವ ಹಳ್ಳಕೊಳ್ಳಗಳನ್ನು ಇಂದಿಗೂ ನಾವು 'ಕೊರಕಲು'ಗಳೆಂದು ಕರೆಯುತ್ತಿರುವುದು ಗಮನಾರ್ಹ ಅಂಶವಾಗಿದೆ. ಅಂತೆಯೇ ಕುಕ್ಕಲನಾಡು ತನ್ನ ನೈಜ ಭೌಗೋಳಿಕ ವೈಲಕ್ಷಣಗಳನ್ನು ಅನುಸರಿಸಿಯೇ ಹೆಸರನ್ನು ಪಡೆದಿರುವುದು ಮನನವಾಗುತ್ತದೆ. ಕುರ್ಕ್ಯಾಲ, ಕುಕ್ಕೆ, ಕುಕ್ಕನಹಳ್ಳಿ, ಕುಕ್ಕಲಹಳ್ಳಿ[2] ಮುಂತಾದವು ಇಂತಹ ಭೂಸ್ವರೂಪದ ಹಿನ್ನೆಲೆಯಲ್ಲೇ ಮೂಡಿದುದುವಾಗಿವೆ.

ರಾಜಕೀಯವಾಗಿ ಕುಕ್ಕಲನಾಡು ಮೊದಲು ಗಂಗರ ವಶದಲ್ಲಿದ್ದು ನಂತರ ಚೋಳರ ವಶವಾಗಿ ಹೋಗಿತ್ತು. ಆಗ ಸ್ಥಳೀಯ ಆಡಳಿತಗಾರರಾಗಿದ್ದ ನಾಡಗೌಡರೇ ಮುಂತಾದವರು ಅನಿವಾರ್ಯವಾಗಿ ಚೋಳರ ಅಧೀನರಾಗಿ ಅವರ ಬಿರುದಾವಳಿಗಳನ್ನು ಹೆಸರುಗಳನ್ನೂ ತಮ್ಮ ಹೆಸರುಗಳೊಂದಿಗೆ ಸೇರಿಸಿ ಕೊಂಡಿರುವುದು ಕಂಡುಬರುತ್ತದೆ. ಉದಾ:- ಕುಕ್ಕನೂರ ನಾಡ ಗಾವುಂಡನ ಮಗ ರಟ್ಟಕುಳ ಕಾಲ ಚೋಳಗಾವುಂಡ, ಬಾಣಾಪುರದ ವಿಕ್ರಮ ಚೋಳಗಾವುಂಡ, ಆಲೂರ ಚೋಳ-ಗಾವುಂಡ, ಪಟ್ಟಂದೂರ ಉತ್ತಮ ಚೋಳಗಾವುಂಡ, ಬಾಳೆಯವಾಡಿಯ ಮುಮ್ಮಡಿ ಚೋಳ-ಗಾವುಂಡ ಇತ್ಯಾದಿ. ಇದೇ ಸಂದರ್ಭದಲ್ಲಿ ಗಂಗರ ಸೇವೆಯಲ್ಲಿದ್ದ ಅನೇಕ ಅಧಿಕಾರಿಗಳು, ಮಲೆನಾಡಿನಲ್ಲಿ ತಲೆಯೆತ್ತತೊಡಗಿದ್ದ ಹೊಯ್ಸಳರೊಂದಿಗೆ ಕೂಡಿಕೊಂಡು ಚೋಳರನ್ನು ಗಂಗವಾಡಿ ಪ್ರದೇಶದಿಂದ ಹೊರ ಅಟ್ಟಲು ಪ್ರಯತ್ನಗಳನ್ನು ನಡೆಯಿಸುತ್ತಲೇ ಇದ್ದರು.

ಕ್ರಿ.ಶ. 1100ರ ನಂತರದಲ್ಲಿ ಹೆಚ್ಚು ಪ್ರಬಲರಾಗತೊಡಗಿದ ಹೊಯ್ಸಳರು ಕ್ರಿ.ಶ. 1116ರಲ್ಲಿ ಗಂಗರ ಪ್ರಾಚೀನ ರಾಜಧಾನಿ ತಲಕಾಡಿನಿಂದ ಚೋಳರನ್ನು ಓಡಿಸಿ ಗಂಗವಾಡಿ 96,000 ಪ್ರದೇಶವನ್ನು ಕ್ರಮವಾಗಿ ತಮ್ಮ ವಶಕ್ಕೆ ತೆಗೆದುಕೊಂಡರು. ಆಗ ಕುಕ್ಕಲನಾಡು ಹೊಯ್ಸಳರ ಆಳ್ವಿಕೆಗೆ ಒಳಪಟ್ಟಿತು. ಕ್ರಿ.ಶ. 1325ರ ಸುಮಾರಿನಲ್ಲಿ ಶ್ರೀ ಮನ್ಮಹಾ ನಾಯಕಚಾರ್ಯ ಮೇದಿನಿಮನ್ನೆಯರ ಗಂಡ ಉಪ್ಪೂರ ಬೊಮ್ಮಯನಾಯಕನು ಕುಕ್ಕಲ ನಾಡನ್ನು ಆಳುತ್ತಿದ್ದ ವಿವರ ಕಿತ್ತನೆಲ್ಲಿ ಮತ್ತು ಬೈಲಕೋನೆನಹಳ್ಳಿ ಶಾಸನಗಳಿಂದ ತಿಳಿದು ಬರುತ್ತದೆ.[3] ಕ್ರಿ.ಶ. 1333ರಿಂದ1340ರ ಅವಧಿಯ ಹಲವು ಶಾಸನಗಳಲ್ಲಿ ಹೊಯ್ಸಳ ಮುಮ್ಮಡಿ ವೀರಬಲ್ಲಾಳನ ಮಹಾಸಾಮಂತಾಧಿ ಪತಿಗಳಾಗಿ ನರಲೋಕಗಂಡ ಮಯಿಲೆಯ ನಾಯಕ ಮತ್ತು ಆತನ ಸಹೋದರರು ಹೆಚ್ಚು ಮಾನ್ಯತೆಯನ್ನು ಪಡೆದಿದ್ದರು.

ಹಾಗೆಯೇ, ಕುಕ್ಕಲನಾಡಿನ ನಾಡಪ್ರಭುಗಳಾಗಿದ್ದ ಕಿತ್ತನೆಲ್ಲಿಯ ದೊಡ್ಡಗೌಡನ ವಂಶೀಯರು ಕ್ರಿ.ಶ. 1325 ರಿಂದಲೇ ಹೆಚ್ಚು ಪ್ರಸಿದ್ಧರಿದ್ದ ಅಂಶ ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ.ಶ.1340ರ ಸುಮಾರಿಗೆ ವಿಜಯ

ನಗರದ ಅರಸು ಹರಿಯಪ್ಪ ಒಡೆಯನ ಶಾಸನಗಳು ಈ ಪ್ರದೇಶದಲ್ಲಿ ಕಾಣಿಸಿಕೊಳ್ಳ ತೊಡಗುತ್ತವೆ. ಹೊಯ್ಸಳರ ಅಧೀನದಲ್ಲಿದ್ದ ಸಾಮಂತಾಧಿಪತಿಗಳು ಹಾಗೂ ನಾಡ ಪ್ರಭುಗಳೇ ಮುಂತಾದವರು, ಆಗ ವಿಜಯನಗರದ ಅರಸರ ಅಧೀನರಾಗಿ ಆಳ್ವಿಕೆ ನಡೆಯಿಸಿರುವುದು ಕಂಡುಬರುತ್ತದೆ. ಅಲ್ಲದೆ ಹಿಂದಿನಂತೆಯೇ ಸ್ಥಳೀಯ ಆಡಳಿತದಲ್ಲಿ ಹೆಚ್ಚಿನ ಸ್ವಾಯತ್ತತೆ ಉಳಿದು ಕೊಂಡಿದ್ದುದು ವೇದ್ಯವಾಗುತ್ತದೆ. ಆದರೆ ಕ್ರಿ.ಶ.1415ರ ಸುಮಾರಿನಲ್ಲಿ, ಅಂದರೆ ಮೊದ ಲನೆಯ ದೇವರಾಯನ ಆಳಿಕೆಯ ಕಾಲದಲ್ಲಿ ನಾಡು ಗಳ ಆಡಳಿತ ಹೆಚ್ಚು ಕೇಂದ್ರೀಕರಣವಾದಂತೆ ತೋರು ತ್ತದೆ. ಸ್ಥಳೀಯ ನಾಡಪ್ರಭುಗಳೇ ಮುಂತಾದವರ ಪ್ರಸ್ತಾಪ ಶಾಸನಗಳಲ್ಲಿ ಕಡಿಮೆಯಾಗಿರುವುದು ಕಂಡು ಬರುತ್ತದೆ. ಅಲ್ಲದೆ ರಾಜನಿಂದ ನೇರವಾಗಿ ನೇಮಿತ ಗೊಂಡ ಅಧಿಕಾರಿಗಳ ಪ್ರಭಾವ ಎದ್ದು ಕಾಣುತ್ತದೆ.

ಕ್ರಿ.ಶ.1459ರ ಕಾಲಕ್ಕಾಗಲೇ ಕುಕ್ಕಲನಾಡು ವಿಭ ಜಿಸಲ್ಪಟ್ಟು, ಸರಿಸುಮಾರು ಹಿಂದಿನ ಬೆಂಗಳೂರು ಉತ್ತರ ತಾಲೂಕಿನ ಪ್ರದೇಶವು ಎಲಹಕ್ಕನಾಡಿನ ಭಾಗ ವಾಗಿ ಪರಿಣಮಿಸಿತ್ತು. ನೆಲಮಂಗಲ ಮತ್ತು ಮಾಗಡಿ ತಾಲೂಕುಗಳಲ್ಲಿ ಸಮಾವೇಶಗೊಂಡಿದ್ದ ಪ್ರದೇಶ ಮಾತ್ರವೇ ಕುಕ್ಕಲನಾಡು ಎಂಬ ಹೆಸರಿನಿಂದ ಕರೆಯ ಲ್ಪಟ್ಟು ಭೌಗೋಳಿಕವಾಗಿ ಸಾಕಷ್ಟು ಸಂಕುಚಿತ ಗೊಂಡಿದ್ದಿತು. ಈ ನಾಡನ್ನು ಪ್ರಸ್ತಾಪಿಸುವ ಕೊನೆಯ ಉಲ್ಲೇಖ ಕ್ರಿ.ಶ.1581ರ ನಾಗಸಂದ್ರ ಗ್ರಾಮದ ತ್ರುಟಿತ ಶಾಸನವೊಂದರಲ್ಲಿ ಕಂಡುಬಂದಿದೆ. ಮುಂದೆ ಈ ಪ್ರದೇಶ ಪ್ರಸಿದ್ಧ ಎಲಹಂಕನಾಡ ಪ್ರಭುಗಳಾದ ಕೆಂಪೇಗೌಡನ ವಂಶೀಯರಆಳಿಕೆಗೆ ಒಳಪಟ್ಟಿತು.

ಕರ್ನಾಟಕದಲ್ಲಿ ಬಹುಪ್ರಾಚೀನ ಕಾಲದಿಂದಲೂ ಅನೇಕ ಮತಶ್ರದ್ಧೆಗಳು ತಲೆಯೆತ್ತುತ್ತಾ ಬಂದಿವೆ. ಅಂತಹ ಮತಾಚಾರಗಳಲ್ಲಿ ಶೈವಧರ್ಮದ ಅಂಶಗ ಳನ್ನು ಪ್ರಧಾನವಾಗಿ ಪಡೆದಿರುವ 'ನಾಥಸಿದ್ಧರ' ಪಂಥವೂ ಒಂದು. ಇದನ್ನು ಸಿದ್ಧಮತ, ಸಿದ್ಧಮಾರ್ಗ, ಯೋಗಮಾರ್ಗ, ಅವಧೂತಮಾರ್ಗ, ಅವಧೂತ ಸಂಪ್ರದಾಯ ಎಂದುಕೂಡ ಕರೆಯಲಾಗಿದೆ. ಇಂತಹ ನಾಥಪಂಥದ ಬಗ್ಗೆ ಬೆಳಕು ಬೀರುವ ಮೌನಿನಾಥ ಮುನಿಯ ಗುರುಪರಂಪರೆಯ ವಿವರಗಳುಳ್ಳ ಶಾಸನ ವೊಂದು ಕುಕ್ಕಲನಾಡಿನ ಪ್ರದೇಶದಲ್ಲಿ ಕಂಡುಬಂದಿದೆ. ಮೌನಿನಾಥ ಮುನಿಯನ್ನು 'ಪರವಾದ್ಯ ದೃಪ್ಯ: ನಿಜರು ದ್ರರೂಪ' ಎಂದು ವರ್ಣಿಸಲಾಗಿದೆ. ರಾಜೇಂದ್ರ ಚೋಳನ ಮಂತ್ರಿಮಾನ್ಯನಾಗಿದ್ದ ವಾಮನಯ್ಯನು ಆ ಮುನಿಯ ಪರಮಭಕ್ತನಾಗಿದ್ದನು. ಆ ಮುನಿಯು ಕಾಲಾ ತೀತನಾದಾಗ, ಪರೋಕ್ಷವಿನಯವಾಗಿ 'ಶಿಲಾ ಮಂಚ'ವನ್ನು, 'ಸಿದ್ದೇಶ್ವರ ಭವನ'ವನ್ನು ಪ್ರಾಕಾರ ಸಮ ನ್ವಿತವಾಗಿ ಕಟ್ಟಿಸಿ ಪೂಜಾಕೈಂಕರ್ಯಗಳಿಗೆ ದತ್ತಿ ಬಿಟ್ಟಿ ರುವ ವಿಷಯವನ್ನು ತಿಳಿಸುವ ಶಾಸನ ಕ್ರಿ.ಶ.1029ಕ್ಕೆ ಸೇರಿದ್ದು, ಸೋಲದೇವನ ಹಳ್ಳಿಯಲ್ಲಿ ದೊರೆತಿರುತ್ತದೆ. ಈ ಶಾಸನದಲ್ಲಿನ ವಿವರಗಳ ಹಿನ್ನೆಲೆ ಯಲ್ಲಿ ನಾಥಪಂ ಥದ ಮುನಿಯೊಬ್ಬ ಕಾಲಾತೀತನಾ ದರೆ 'ಶಿಲಾಮಂಚ' ಹಾಗೂ 'ಸಿದ್ದೇಶ್ವರ ಭವನ'ವೆಂಬ ಗುಡಿಯನ್ನು ಕಟ್ಟಿ ಸುತ್ತಿದ್ದರು ಎಂಬ ಅಂಶ ಸ್ಪಷ್ಟವಾ ಗುತ್ತದೆ. ಇಲ್ಲಿನ 'ಶಿಲಾಮಂಚ' ಎನ್ನುವುದು, ವೀರಶೈವ ಮುಂತಾದ ಧರ್ಮಾನುಯಾಯಿಗಳಲ್ಲಿ ಕಂಡುಬರುವ 'ಗದ್ದುಗೆ'ಯೇ ಆಗಿದೆಯೆಂದು ವೇದ್ಯವಾಗುತ್ತದೆ. ಬೌದ್ಧ ಸ್ತೂಪಗಳು, ಮುಸ್ಲಿಮರ ದರ್ಗಾ, ಹಿಂದೂಗಳ ಸಮಾಧಿ, ಬೃಂದಾವನ ಇತ್ಯಾದಿಗಳ ಆರಾಧನೆ ಒಂದು ರೀತಿಯಲ್ಲಿ ಇಂತಹದೇ ಆಚರಣೆಯ ರೀತಿಯದೆಂದು ಹೇಳಬಹುದಾಗಿದೆ. ಪ್ರಸ್ತುತ ಶಾಸನದಲ್ಲಿ ಉಕ್ತವಾಗಿ ರುವ ಮೌನಿನಾಥಮುನಿಯ ಗುರುಪರಂಪರೆ ಈ ರೀತಿ ಇದೆ: ಕೃತೋಧಿನಾಥ(ಆದಿನಾಥ)

ಛಾಯಾಧಿನಾಥ
|
ಸ್ತಂಭನಾಥ/ದಪಳಾದಿನಾಥ
|
ದ್ವೀಪನಾಥ
|
ಮೌನಿನಾಥ

ಇಂದು ಪ್ರಚಲಿತವಿರುವ ವೀರಶೈವಧರ್ಮ, ಹಿಂದೆ ಪ್ರಚಲಿತವಿದ್ದ ಅನೇಕ ರೀತಿಯ ಶೈವ ಪಂಥ ಗಳ, ಶ್ರದ್ಧೆಗಳ ಮತ್ತು ಪರಂಪರೆಗಳ ಸಮ್ಮಿಳನವಾ ಗಿದ್ದು, ಒಂದು ರೀತಿಯಲ್ಲಿ ಪರಿಷ್ಕೃತ ಶೈವಧರ್ಮವೆಂದೇ ಹೇಳಬೇಕಾಗಿದೆ.

ಕುಕ್ಕಲನಾಡಿನಲ್ಲಿ ಶಾಸನೋಕ್ತವಾಗಿರುವ ಶೈವದೇ ವಾಲಯಗಳಲ್ಲಿ ಐಗಂಡಪುರದ ಐವರ ಕಂಡೀಶ್ವರಗುಡಿ ಗಮನಾರ್ಹವಾದದುದಾಗಿದೆ. 'ಐವರಗಂಡ' ಎಂಬ ವ್ಯಕ್ತಿಯೋರ್ವನು ಕಟ್ಟಿಸಿರುವ ಅಥವಾ ಅಂತಹ ವ್ಯಕ್ತಿಯ ಸ್ಮಾರಕವಾಗಿ ಇತರರು ಕಟ್ಟಿಸಿರಬಹುದಾದ ದೇಗುಲ ಇದಾಗಿರಬೇಕು. ಈ ದೇಗುಲದ ಪ್ರಸಿದ್ಧಿ ಯಿಂದಾಗಿ ಈ ಊರಿಗಿದ್ದ 'ಹಿರಿಯ ಮತ್ತಕೂರು' ಎಂಬ ಪೂರ್ವನಾಮ ಮರೆಯಾಗಿ ಐವರಕಂಡಪುರ

ಅಥವಾ ಐಗಂಡಪುರ ಎಂಬ ಹೆಸರು ಪ್ರಚಲಿತವಾದಂತೆ ತೋರುತ್ತದೆ.

ಈ ನಾಡಿನ ಹಲವು ಶಾಸನಗಳಲ್ಲಿ ಒಪ್ಪವನ್ನು ಹಾಕುವ ಸಂದರ್ಭದಲ್ಲಿ ನಾಡಒಪ್ಪ 'ಶ್ರೀ ಮುಕ್ತನಾಥ' ಎಂಬ ಅಂಕಿತ ಕಂಡು ಬಂದಿದೆ. ಇದು ಬಹುಮಟ್ಟಿಗೆ ಈ ನಾಡದೇವರ ಕುರುಹು. ನೆಲಮಂಗಲ ತಾಲೂಕಿನ ಬಿನ್ನಮಂಗಲದ ಶ್ರೀ ಮುಕ್ತಿನಾಥ ದೇವರೇ ಇದೆಂದು ತೋರುತ್ತದೆ. ಕ್ರಿ.ಶ. 1110ರ ಕುಲತ್ತುಂಗ ಚೋಳನ ಶಾಸನವು ಈ ದೇವಾಲಯದಲ್ಲಿದ್ದು ಬಿನ್ನಮಂಗಲ ಮತ್ತು ನಕ್ಕೂರ್ ಎಂಬ ಗ್ರಾಮಗಳನ್ನು ಈ ದೇವರ ಪೂಜಾ ಕೈಂಕರ್ಯಗಳಿಗಾಗಿ ದತ್ತಿಬಿಟ್ಟಿರುವ ವಿವರ ಬಂದಿದೆ. ಹೆಸರುಘಟ್ಟದ ಚಂದ್ರಮೌಳೇಶ್ವರ ದೇವರ ಪ್ರಸ್ತಾಪ ಕ್ರಿ.ಶ. 1535ರ ಶಾಸನವೊಂದರಲ್ಲಿ ಬಂದಿದೆ.

ಕ್ರಿ.ಶ. 1033ಕ್ಕೆ ಸೇರಿದ ರಾಜೇಂದ್ರ ಚೋಳ ದೇವನ ಶಾಸನವೊಂದು ಐಗಂಡಪುರದ ಇಂದಿನ ಗೋಪಾಲಕೃಷ್ಣಸ್ವಾಮಿದೇವಾಲಯದ ತಳಪಾದಿಯ ಮೇಲೆ ಕಂಡು ಬಂದಿದೆ. ('ಕೋನೇರಿಯನ್ ಮೈಕೊಂ ಡಾನ್ ರಾಜಮಾಣಿಕ್ಕ ಮೂವೇನ್ದ ವೇಳಾನ್ಪ್ ದೇವ ರಿಗೆ) ದಂಡನಾಯಕ ವಾಮನಯ್ಯನು ಈ ದೇವಾಲ ಯವನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಿರುತ್ತಾನೆ.

ವಿಜಯನಗರದ ಮೊದಲನೇ ದೇವರಾಯನ ಕಾಲದ ಕ್ರಿ.ಶ. 1418ರ ಶಾಸನವೊಂದು ಕನ್ನೆಲ್ಲಿ ಗ್ರಾಮದಲ್ಲಿದ್ದು ಅಲ್ಲಿನ ತಿರುಮಲೆನಾಥದೇವರಿಗೆ ಆಲೂನಿನ ಎರಡು ಮಗ್ಗಗಳನ್ನು ಸುಂಕಮಾನ್ಯವಾಗಿ ದತ್ತಿಬಿಟ್ಟ ಸಂಗತಿಯನ್ನು ತಿಳಿಸುತ್ತದೆ. ಈಗ ಕನ್ನೆಲ್ಲಿ ಗ್ರಾಮದಲ್ಲಿರುವ ಚೆನ್ನಿಗರಾಯನದೆಂದು ಕರೆಯಲಾ ಗುತ್ತಿರುವ ದೇವಾಲಯವು 15ನೇ ಶತಮಾನದಲ್ಲಿ ತಿರುಮಲೆನಾಥದೇವರೆಂದು ಪ್ರಸಿದ್ಧವಿದ್ದಿತಲ್ಲದೆ, ಬಟ್ಟೆನೆ ಯ್ಯುವ ಕೈಗಾರಿಕೆ ಆ ಊರಿನಲ್ಲಿ ಊರ್ಜಿತಾವಸ್ಥೆಯಲ್ಲಿ ಇದ್ದಿತೆಂದು ಹೇಳಬಹುದಾಗಿದೆ.

ಪ್ರಾಚೀನ ಕರ್ನಾಟಕದ ಜನಜೀವನದಲ್ಲಿ ತ್ಯಾಗ, ಶೌರ್ಯ ಮತ್ತು ಶೀಲಗಳೇ ಹಾಸುಹೊಕ್ಕಾಗಿದ್ದವು. ಅಂತಹ ಪರಿಸರದಲ್ಲಿ ಹುಟ್ಟಿ ಬೆಳೆದ ರಾಜರು, ಸಾಮಂತರು ಮುಂತಾದವರಲ್ಲದೆ ನಾಡ ಪ್ರಭು ಗಳಂತಹ ಕೆಳಸ್ತರದ ಆಡಳಿತಗಾರರೂ ಕೂಡ ಅನೇಕ ಜನೋಪಯೋಗಿ ಕಾರ್ಯಗಳನ್ನು ಧರ್ಮಶ್ರದ್ಧೆಯಿಂದ ಕೈಗೊಂಡಿದ್ದರು ಎಂಬುದು ಶಾಸನಗಳಿಂದ ತಿಳಿಯು ತ್ತದೆ. ಕುಕ್ಕಲನಾಡಿನ ಮಹಾಸಾಮಂತಾಧಿಪತಿ ಮಯಿಲೆ ಯನಾಯಕ ಮತ್ತು ಆತನ ಸಹೋದರರು, ಭೂಮಿ ಮೇಲಿನ ದೇವ, ನರ, ಮೃಗ, ಪಕ್ಷಿ ಮೊದಲಾದ ಯೋನಿ ಜೀವರಾಶಿಗಳೆಲ್ಲವನ್ನೂ ಸರ್ವಕಾಲವೂ ರಕ್ಷಿಸಲೆಂದು ಅನ ವರತವೂ ಶ್ರೀ ಗಂಗಾದೇವಿಯನ್ನು ಪ್ರಾರ್ಥಿಸಿ ರಾಮ ಸಮುದ್ರವೆಂಬ ಕೆರೆಯನ್ನು 3000 ಹೊನ್ನನಿಕ್ಕಿಕಟ್ಟಿಸಿದ ಬಗ್ಗೆ ವಿವರಿಸುವ ಶಾಸನ ಬೆಂಗಳೂರು ದಕ್ಷಿಣ ತಾಲೂಕಿನ ರಾಮಸಂದ್ರ ಗ್ರಾಮದಲ್ಲಿದ್ದು ಕ್ರಿ.ಶ. 1340ಕ್ಕೆ ಸೇರಿದೆ.

ಕುಕ್ಕಲನಾಡಿನ ಇತಿಹಾಸದಲ್ಲಿ ಆ ನಾಡಿನ ನಾಡ ಪ್ರಭುಗಳಾದ ಕಿತ್ತನೆಲ್ಲಿಯ ದೊಡ್ಡಗೌಡನ ವಂಶೀಯರು ಗಮನಾರ್ಹರು. ಆ ವಂಶದಲ್ಲಿ ಹುಟ್ಟಿದ ಬಯಿಚವ್ವೆ ಎಂಬ ಹೆಣ್ಣುಮಗಳಿಗೆ 'ದಂಡಿಗೆಯ ಬೀಯ' ಕ್ಕೆಂದು ತಾನಜಿಕೆಜಿ ಹೊಲದೊಳಗಣ ಬಯಿರವ್ವೆಹಳ್ಳಿ ಅದಕ್ಕೆ ಸಲ್ಲುವ ಚಟ್ಟಣಕುಂಟೆ ಗ್ರಾಮವನ್ನು ಉಂಬಳಿಬಿಟ್ಟಿರುವ ಅಂಶ ಕ್ರಿ.ಶ. 1340ರ ಬೈಚಗುಪ್ಪೆ ಗ್ರಾಮದ ಶಾಸನ ದಿಂದ ತಿಳಿದುಬರುತ್ತದೆ. ಇಲ್ಲಿ ಆಕೆಗೆ ಸರ್ವಕೊಡಗಿ ಯಾಗಿ 'ಬಯಿರವ್ವೆಹಳ್ಳಿ' ಎಂಬ ಹೆಸರಿನಲ್ಲಿ ಗ್ರಾಮ ವೊಂದನ್ನು ನೀಡಿರುವುದು ಗಮನಾರ್ಹ. ಇಂದಿನ ಬೈಚಗುಪ್ಪೆ ಗ್ರಾಮವೇ ಶಾಸನೋಕ್ತ ಬಯಿರವ್ವೆಹಳ್ಳಿ ಆಗಿದೆ. 'ದಂಡಿಗೆಯ ಉಂಬಳೀ', 'ಪಲ್ಲಕ್ಕಿ ಉಂಬಳಿ' ಎಂದು ಕೂಡ ಇಂತಹ ದತ್ತಿಯಗಳನ್ನು ಕರೆದಿರು ವುದು; ಮಂಡ್ಯಜಿಲ್ಲೆಯ ಹಲವು ಶಾಸನಗಳಿಂದ ತಿಳಿದು ಬರುತ್ತದೆ. ಇದು ಒಂದು ರೀತಿಯ ಉಂಬಳಿ ಕೊಡಗೆ ಪ್ರಕಾರಕ್ಕೆ ಸೇರಿದ ದಾನವಾಗಿದ್ದು, ಈ ದಾನದ ಸ್ಪಷ್ಟ ಸ್ವರೂಪ ತಿಳಿಯುತ್ತಿಲ್ಲವಾದರೂ, ಗ್ರಾಮದಾನಕ್ಕೂ ಇದಕ್ಕೂ ಹೆಚ್ಚು ವ್ಯತ್ಯಾಸವೇನೂ ಕಂಡುಬರುತ್ತಿಲ್ಲ.

ಹೊಯ್ಸಳ ವೀರಬಲ್ಲಾಳನ ಕಾಲದ ಕ್ರಿ.ಶ.1330ರ ಕಿತ್ತನೆಲ್ಲಿ ಗ್ರಾಮದ ತ್ರುಟಿತ ಶಾಸನವೊಂದರಲ್ಲಿ 'ಹಲರು' ಗುಂಪಿಗೆ ಸೇರಿದ ವರ್ತಕರನ್ನು ಉಲ್ಲೇಖಿಸ ಲಾಗಿದೆ. ವಿದ್ವಾಂಸರು ಇವರನ್ನು ವಿನಿಮಯವೃತ್ತಿಯ ವರ್ತಕರೆಂದು ಗುರುತಿಸಿರುತ್ತಾರೆ. ಇವರು ದೇವಾಲ ಯಗಳ ಮಂಟಪ, ಭೋಗ ಮಂಟಪ, ಮುಖಶಾಲೆ ನಿರ್ಮಾಣದಂಥ ಬಿಡಿಯಾದ ಕೆಲಸಗಳನ್ನು ಮಾಡಿಸಿರು ವುದು ಕಂಡು ಬಂದಿದೆ. ಪ್ರಸ್ತುತ ಹಲರುಗುಂಪಿಗೆ ಸೇರಿದ ವರ್ತಕರು ಮಕ್ಕಳಿಲ್ಲದೆ ಮರಣ ಹೊಂದಿ ದಾಗ ಅವರ ಆಸ್ತಿ, ಒಡ ಹುಟ್ಟಿದ ತಮ್ಮಂದಿರಿಗೆ

ಸಲ್ಲಬೇಕೆಂತಲೂ ಅಣ್ಣತಂಮದಿರಿಲ್ಲದಿದ್ದರೆ ಅಳಿಯ ಮಗಳಿಗೆ ಸಲ್ಲುವುದೆಂದೂ, ಇವರ್‍ಯಾರು ಇಲ್ಲದಿದ್ದರೆ ಅವರ ಧರ್ಮಕ್ಕೆ ಸಲ್ಲಬೇಕೆಂತಲೂ 'ಜಾತಿಯ ಆಚಾರ್ಯಪಥಕ'ವನ್ನು ನಿರೂಪಿಸುವಂತಹ, ಕಿತ್ತನೆಲ್ಲಿ ಗ್ರಾಮದ ಶಾಸನ ಗಮನ ಸೆಳೆಯುತ್ತದೆ.

ಮಹಾಮಾತ್ರ ಜವಮ್ಮಯನ ಮಗ ಶಾಸನ ಚಕ್ರವರ್ತಿ ಪುಣ್ಯಸಮ್ಮ, ಕೇಶವದೇವ, ನಾಡಸೇನ ಬೋವ ಕೇಶವದೇವನ ಮಕ್ಕಳು ಅನಂತಂಣ್ಣ, ಸೇನ ಬೋವಲಿಂಗಣ್ಣ, ಸೇನಭೋವ ಚಿಕ್ಕಂಣ ಮುಂತಾದವರು ಈ ನಾಡಿನ ಶಾಸನಗಳ ಪಾಠರಚಕರಾಗಿದ್ದಾರೆ ಎಂಬ ಅಂಶ ಶಾಸನಗಳಿಂದ ವೇದ್ಯವಾಗುತ್ತದೆ.

ಅಮ್ಮಿಆಚಾರಿ ಮಗನ್ನಾಗನ್, ಚಿನೋಜ, ಮರೋಜ, ಸಿದ್ದೇಶ್ವರಾಚಾರಿ ಎಂಬುವವರು ಶಾಸನ ಬರಹ ಹಾಗೂ ಕಂಡರಣೆಕಾರರಾಗಿದ್ದರು.

ಹೀಗೆ, ಒಂದು ಸಣ್ಣ ಪ್ರದೇಶ, ಮೂಲತಃ ನೈಸರ್ಗಿಕ ಕಾರಣದಿಂದ ಪ್ರತ್ಯೇಕವಾಗಿ ಗುರುತಿಸಲ್ಪಟ್ಟಿದ್ದರೂ, ಕಾಲಾಂತರದಲ್ಲಿ ಒಂದು ಪ್ರಾದೇಶಿಕ ವಿಭಾಗವಾಗಿ, ಆಡಳಿತ ಘಟಕವಾಗಿ ತನ್ನತನವನ್ನು ಉಳಿಸಿಕೊಂಡಿದ್ದಿತು. ವಿಜಯನಗರದ ಅರಸರ ಆಳಿಕೆಯ ಪೂರ್ವಾರ್ಧದ ಅವಧಿಯವರೆವಿಗೂ ಸಾಕಷ್ಟು ಸ್ವಾಯತ್ತತೆಯನ್ನು ಪಡೆದಿದ್ದು, ದೇವಾಲಯ, ಕೆರೆ ಕಾಲುವೆಗಳ ರಚನೆ, ಇತ್ಯಾದಿ ಎಷ್ಟೋ ಜನೋಪಯೋಗಿ ಕಾರ್ಯಗಳು ಈ ಪ್ರದೇಶದಲ್ಲಿ ನಡೆದವು.

---

## ಗ್ರಂಥ ಋಣ


1. ಎಪಿಗ್ರಾಫಿಯ ಕರ್ನಾಟಿಕ, ಸಂಪುಟಗಳು ೯ ಮತ್ತು ೧೨. (ರೈಸ್ ಆವೃತ್ತಿಗಳು)
   ಎಪಿಗ್ರಾಫಿಯ ಕರ್ನಾಟಿಕ, ಸಂಪುಟಗಳು ೬ ಮತ್ತು ೭. (ಮೈಸೂರು ಆವೃತ್ತಿಗಳು)
2. ಕೆಮ್ಮೂರು ರಘುಪತಿಭಟ್ಟ - ತುಳುನಾಡಿನ ಸ್ಥಳನಾಮಗಳು, ಬೆಂಗಳೂರು 1979.
3. ಬಿ.ಆರ್. ಹಿರೇಮಠ, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಧಾರವಾಡ, 1986
4. ತಾಳ್ತಜೆವಸಂತಕುಮಾರ, - ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ, ಮುಂಬಯಿ 1988
5. ನಾಥಸಂದೇಶ (ಮಾಸ ಪತ್ರಿಕೆ) ಸಂ-ಡಾ॥ ನೀಲಕಂಠ ಸ್ವಾಮಿಜಿ, ಬೆಂಗಳೂರು
6. ಹೆಚ್.ಎಸ್. ಗೋಪಾಲರಾಯ - ಬೈಲಕೂನೇನಹಳ್ಳಿ ಶಿಲಾಶಾಸನ, ಇತಿಹಾಸದರ್ಶನ, ಸಂ. ೨-೧ (1987) ಬೆಂಗಳೂರು


## ಅಡಿ ಟಿಪ್ಪಣಿ

1. ತುಮಕೂರು ಜಿಲ್ಲೆಯ ತಿಪಟೂರು ತಾಲೂಕಿನಲ್ಲಿ 'ವೀರರಾಜೇಂದ್ರ ಚೋಳ ಕುಕ್ಕಲನಾಡು' ಎಂಬ ಉಲ್ಲೇಖವಿದೆ. ಬೆಂಗಳೂರು ಜಿಲ್ಲೆಯ 'ಕುಕ್ಕಲ ನಾಡಿಗೂ' ಇದಕ್ಕೂ ಸಂಬಂಧವಿಲ್ಲ.
2. ಈ ನಾಡಿನ ಉತ್ತರಕ್ಕಿರುವ ಕುಕ್ಕನ ಹಳ್ಳಿ ಮತ್ತು ಕುಕ್ಕಲ ಹಳ್ಳಿ ಗ್ರಾಮಗಳು ಈ ನಾಡ ಆಳಿಕೆಯಲ್ಲಿ ಪ್ರಧಾನ ಪಾತ್ರ ವಹಿಸಿದಂತೆ ತೋರುವುದಿಲ್ಲ. ಕಿತ್ತನೆಲ್ಲಿ ಗ್ರಾಮವನ್ನು ಕೇಂದ್ರವಾಗಿಟ್ಟುಕೊಂಡು ಆಡಳಿತ ನಡೆಸಿರುತ್ತಾರೆ.
3. ಈ ನಾಡನ್ನು ಆಳಿದ ಇತರರೆಂದರೆ ಪೆರ್ಗ್ಗಡೆ ಅಚಲಯ್ಯ (1156), ಅಧಿಕಾರಿ ಹರಿಯಾಕ್ಕರಸ (1418) ಬುಕ್ಕನಾಯ್ಕ (1430). ರಾಮಯ್ಯದೇವರ ಕುಮಾರ ಅನಂತಯ್ಯ ಮಹಾ ಅರಸು (1495).

---

* ಈ ಸಂಪ್ರಬಂಧವನ್ನು ಸಿದ್ಧಪಡಿಸುವಲ್ಲಿ ಸೂಕ್ತ ಸೂಚನೆ ಹಾಗೂ ಮಾಹಿತಿಗಳನ್ನು ಒದಗಿಸಿದ ಸನ್ಮಿತ್ರರಾದ ಶ್ರೀ ಬಿ. ತಾಯಪ್ಪ (ಜೌಗುಪಾಳ್ಯ, ಹಲಸೂರು) ಅವರಿಗೆ ಲೇಖಕ ಋಣಿ.

ಪ್ರೊ॥ ಬಿ.ರಾಮಸ್ವಾಮಿ

# ಕೃಷ್ಣದೇವರಾಯನ 'ಆಮುಕ್ತಮಾಲ್ಯದ'ದಲ್ಲಿ ರಾಜನೀತಿ.

'ಆಮುಕ್ತಮಾಲ್ಯದ'ವು ಶ್ರೀ ಕೃಷ್ಣದೇವರಾಯನು ರಚಿಸಿದ ತೆಲುಗು ಮಹಾಪ್ರಬಂಧ. ಹನ್ನೆರಡು ಮಂದಿ ಶ್ರೀವೈಷ್ಣವ ಆಳ್ವಾರುಗಳಲ್ಲಿ ಒಬ್ಬಳಾದ ಗೋದಾದೇವಿಯ ಕಥೆ ಈ ಪ್ರಬಂಧದ ವಸ್ತು. ಇದರಲ್ಲಿ ಪ್ರಾಸಂಗಿಕವಾಗಿ ಸೇರಿರುವ ಎರಡು ಕಥೆಗಳಲ್ಲೂ ಐದು ಮಂದಿ ರಾಜರ ಪ್ರಸಕ್ತಿಯಿದೆ. ಮೊದಲನೆಯ ಕಥೆಯಲ್ಲಿ ಸಂಗ್ರಹವಾಗಿಯೂ ಎರಡನೆಯ ಕಥೆಯಲ್ಲಿ ವಿಸ್ತಾರವಾಗಿಯೂ ರಾಜನೀತಿಯ ನಿರೂಪಣೆ ಇದೆ. ಈ ರಾಜನೀತಿಯನ್ನು ಸಂಗ್ರಹವಾಗಿ ಪರಿಚಯ ಮಾಡಿಕೊಡುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

ಮೊದಲನೆಯದು ಮಧುರೆಯ ಪಾಂಡ್ಯರಾಜ ಮತ್ಸ್ಯಧ್ವಜನ ಕಥೆ. ಮತ್ಸ್ಯಧ್ವಜನು ಸಂಧಿವಿಗ್ರಹಾದಿ ತಂತ್ರಗಳನ್ನು ಬಲ್ಲವನು. ಸಾಮದಾನಾದಿ ಚತುರುಪಾಯ ಪರಿಣತ, ಸಮರ್ಥ, ನೀತಿ ಮಾರ್ಗವನ್ನು ಬಿಡದವನು. ಪ್ರಜೆಗಳನ್ನು ಸಂಕಟಪಡಿಸದೆ ತೆರಿಗೆಗಳನ್ನು ಸೆಳೆಯುವವನು. ಚಾಡಿ ಮಾತುಗಳನ್ನು ಕೇಳಿ ವಿಚಾರ ನಡೆಸದೆ ಯಾರನ್ನೂ ಹಿಂಸಿಸನು. ಮುಖಸ್ತುತಿಯಿಂದ ಹಿಗ್ಗುವವನಲ್ಲ. ಪರಾಕ್ರಮಿಯಾದರೂ ಹೇಡಿಯನ್ನೂ ಕಡ ಹೀನಾಯವಾಗಿ ಕಾಣನು. ಮಿತಭಾಷಿ, ಆತ್ಮಶ್ಲಾಘಾ ವಿಮುಖ. ಪ್ರತಿಪಕ್ಷವನ್ನು ಪರಿಹಾಸಯುತವಾದ ಮಾತುಗಳಿಂದಲೆ ಭಂಗಿಸಬಲ್ಲವನು. ಮೃದು ಮಧುರವಾಗಿ ಮಾತಾಡುವವನು. ಕೀರ್ತಿಶಾಲಿ, ಶಿವಭಕ್ತ. ಈತಿಭಾಧೆಗಳಿಲ್ಲದೆ ರಾಜ್ಯ ಪರಿಪಾಲನೆ ಮಾಡುತ್ತಿದ್ದನು ಎಂಬುದು ಕೃಷ್ಣರಾಯನುಚಿತ್ರಿಸಿರುವ ಮತ್ಸ್ಯಧ್ವಜನ ವ್ಯಕ್ತಿಚಿತ್ರ. ಇದು ಆದರ್ಶಪ್ರಾಯನಾದ ರಾಜನೊಬ್ಬನ ಚಿತ್ರ.

ಶಿವಭಕ್ತನಾದ ಮತ್ಸ್ಯಧ್ವಜನು ಮೋಕ್ಷಪ್ರದನಾದ ದೇವನು ಯಾರು ಎಂಬುದನ್ನು ತಿಳಿಯುವ ಸಲುವಾಗಿ ಒಮ್ಮೆ ವಾದಗೋಷ್ಠಿಯೊಂದನ್ನು ಏರ್ಪಡಿಸಿದನು. ಗೋದಾದೇವಿಯ ಅರ್ಥಾತ್ ಆಮುಕ್ತಮಾಲ್ಯದಳ ಪೋಷಕ ಪಿತೃವಾದ ವಿಷ್ಣುಚಿತ್ತನು ತನ್ನ ಆರಾಧ್ಯದೈವನ, ಮನ್ನನಾರು ಸ್ವಾಮಿಯ ಪ್ರೇರಣೆಯಿಂದ ಮಧುರೆಗೆ ಬಂದು ವಾದಗೋಷ್ಠಿಯಲ್ಲಿ ಭಾಗವಹಿಸಿ ಶೈವರನ್ನು ಗೆದ್ದು ವಿಷ್ಣುಚಿತ್ತನು ಹೇಳಿದ ದೃಷ್ಟಾಂತ ಕಥೆ ವಿಷ್ಣುಪುರಾಣದ ಆರನೆಯ ಅಂಶದಲ್ಲಿರುವ ಖಾಂಡಿಕ್ಯ ಕೇಶಿಧ್ವಜರ ಕಥೆ.

ಖಾಂಡಿಕ್ಯ ಕೇಶಿಧ್ವಜರು ಮಿಥಿಲೆಯ ನಿಮಿವಂಶದ ಜನಕ ಮಹಾರಾಜನ ವಂಶಸ್ಥರು. ಅಣ್ಣತಮ್ಮಂದಿರ ಮಕ್ಕಳು. ಜ್ಞಾತಿಗಳು. ಖಾಂಡಿಕ್ಯನು ಕರ್ಮಮಾರ್ಗಾನುಯಾಯಿ. ಕೇಶಿಧ್ವಜನು ಜ್ಞಾನಮಾರ್ಗಾನುಯಾಯಿ, ವಿಷ್ಣುಭಕ್ತ. ಇವರೀರ್ವರಲ್ಲಿ ರಾಜ್ಯಕ್ಕಾಗಿ ಯುದ್ಧ ಸಂಭವಿಸಿತು. ಖಾಂಡಿಕ್ಯನು ಸೋತು ಪರಿವಾರ ಸಮೇತನಾಗಿ ಕಾಡು ಸೇರಿದನು. ಕೇಶಿಧ್ವಜನು ರಾಜ್ಯವನ್ನು ಆಕ್ರಮಿಸಿ ಕೊಂಡು ಬ್ರಹ್ಮಾರ್ಪಣ ಬುದ್ಧಿಯಿಂದ ಯಜ್ಞ ಮಾಡಿದನು. ಯಜ್ಞಕ್ಕೆ ವಿಘ್ನ ಬಂತು. ಅದಕ್ಕೆ ತಕ್ಕ ಪ್ರಾಯಶ್ಚಿತ್ತ ವಿಧಿ ಖಾಂಡಿಕ್ಯನಿಗೆ ಮಾತ್ರ ಗೊತ್ತು. ಅದನ್ನು ತಿಳಿಯುವುದಕ್ಕಾಗಿ ಕೇಶಿಧ್ವಜನು ಖಾಂಡಿಕ್ಯನಿದ್ದಲ್ಲಿಗೆ ಬಂದು ಕೇಳಿಕೊಂಡನು. ಖಾಂಡಿಕ್ಯನು ತನ್ನ ಮಂತ್ರಿಗಳ ಸಲಹೆಯನ್ನುಕೇಳಿದನು. ಮಂತ್ರಿಗಳು ಕೊಟ್ಟ ಸಲಹೆ ವಿಷ್ಣುಪುರಾಣದಲ್ಲಿ ಒಂದು ಶ್ಲೋಕದಲ್ಲಿ ಮಾತ್ರ ಇದೆ.

ತಮೂಚುರ್ಮಂತ್ರಿಣೋ ವಧ್ಯೋ ರಿಪುರೀಷವಶಂಗತಃ ।
ಹತೇಸ್ಮಿನ್ ಪ್ರಥಿವೀಸರ್ವಾತವ ವಶ್ಯಾಭವಿಷ್ಯತಿ ॥

(ವಿಷ್ಣು ಪುರಾಣ, ಆರನೆಯ ಅಂಶ, ಶ್ಲೋಕ ೨೩). ರಾಯನು ಮಂತ್ರಿಗಳ ಸಲಹೆಯನ್ನು ಹದಿನೈದು ಪದ್ಯಗಳಲ್ಲಿ ವಿಸ್ತಾರವಾಗಿ ಪ್ರತಿಪಾದಿಸಿದ್ದಾನೆ.

ಶತ್ರುವು ಶ್ರಮವಿಲ್ಲದೆ ಸಿಕ್ಕಿರುವಾಗ ಅವನನ್ನು ಕೊಲ್ಲಬೇಕು. ಶತ್ರುನಿಗ್ರಹ, ಧನಾರ್ಜನೆ, ಪ್ರಜಾರಕ್ಷಣೆ, ಇವು ರಾಜನಿಗೆ ವಿಹಿತವಾದ ಧರ್ಮಗಳು. ಶತ್ರುಗಳನ್ನು ಅನ್ಯಾಯವಾಗಿಯಾದರೂ ವಧಿಸಿದ ಪಾಪವು ಪ್ರಜೆಗಳನ್ನು ರಕ್ಷಿಸುವುದರಿಂದ ಪರಿಹಾರ ವಾಗುವುದು. ರಾಜ್ಯ ಸಪ್ತಾಂಗಗಳಲ್ಲಿ ಅಂಗಿಯಾದ ಸ್ವಾಮಿಯು ಕ್ಷೇಮದಿಂದಿದ್ದು ಉಳಿದ ಅಂಗಗಳನ್ನು ಪೋಷಿಸಬೇಕು. ಅನುಕೂಲ ಸಮಯವು ಒದಗಿ ಬಂದಾಗ ಶತ್ರುವನ್ನು ನಿಗ್ರಹಿಸದೆ ಬಿಟ್ಟರೆ ಪುನಃ ಅಂತಹ ಅವಕಾಶವು ಸಿಕ್ಕುವುದೆಂಬ ನಂಬಿಕೆಯೇನಿದೆ? ಶತ್ರುಬಾಧೆ ತಪ್ಪುವುದು ಸಾಧ್ಯವೆ? ಹಗೆಯಿಂದುಂಟಾದ ಸೋಲಿನ ಅವಮಾನ

ವನ್ನು ರಾಜನು ಸಹಿಸಿ ಕೊಂಡಿರಬಾರದು. ಶತ್ರುವನ್ನು ಸದೆಬಡಿದು ಹಗೆ ತೀರಿಸಿಕೊಳ್ಳಬೇಕು. ರಾಜನು ಕರ್ತವ್ಯ ವಿಮುಖನಾಗಿ ಸೋಮಾರಿಯಾಗಿರಕೂಡದು. ನಿರುದ್ಯೋಗಿ ಅತ್ಯಂತ ನಿಕೃಷ್ಟನು. ಕ್ರಿಯಾಶೀಲನಾದ ರಾಜನು ಶ್ರೇಷ್ಠನೆಂಬುದು ವೇದ ವಿಹಿತ. ಆದ್ದರಿಂದ ವೈರಿಯನ್ನು ನಿಗ್ರಹಿಸತಕ್ಕವನೂ, ರಾಷ್ಟ್ರಕ್ಕೆ ಸಂಭವಿಸಿದ ಉಪದ್ರವವನ್ನು ಪರಿಹರಿಸಬಲ್ಲವನೂ, ಸಮಯಸಾಧಕನೂ, ಆದ ರಾಜನು ಚಿರಕಾಲ ರಾಜ್ಯ ಸುಖವನ್ನು ಅನುಭವಿಸುವನು. ಆದ್ದರಿಂದ ಶತ್ರುವಾದ ಕೇಶಿ ಧ್ವಜನನ್ನು ಸಂಹರಿಸುವುದು ಸೂಕ್ತವೇ ಸರಿ ಎಂದು ಮಂತ್ರಿಗಳು ಸಲಹೆಯನ್ನಿತ್ತರು.

ಖಾಂಡಿಕ್ಯನು ಮಂತ್ರಿಗಳ ಸಲಹೆಯನ್ನು ಒಪ್ಪಲಿಲ್ಲ. ಯಜ್ಞವಿಘ್ನಕ್ಕೆ ತಕ್ಕ ಪ್ರಾಯಶ್ಚಿತ್ತ ವಿಧಿಯನ್ನು ತಿಳುಹಿದನು. ಆ ಪ್ರಕಾರವಾಗಿ ಕೇಶಿಧ್ವಜನು ಯಜ್ಞವನ್ನು ಪೂರ್ತಿಗೊಳಿಸಿ ಗುರುದಕ್ಷಿಣೆಯನ್ನು ಸಲ್ಲಿಸುವ ಉದ್ದೇಶದಿಂದ ಪುನಃ ಖಾಂಡಿಕ್ಯನಿದ್ದಲ್ಲಿ ಬಂದನು. ಸಮಸ್ತ ರಾಜ್ಯವನ್ನು ಗುರುದಕ್ಷಿಣೆಯಾಗಿ ಕೇಳಬೇಕೆಂಬುದು ಮಂತ್ರಿಗಳ ಈಗಿನ ಸಲಹೆ. ಈ ಸಲಹೆಯನ್ನೂ ಖಾಂಡಿಕ್ಯನು ಒಪ್ಪಲಿಲ್ಲ. ಮೋಕ್ಷಪ್ರದವಾದ ಜ್ಞಾನಮಾರ್ಗವನ್ನು ತಿಳಿಸಬೇಕೆಂದೂ, ಅದೇ ತಾನು ಬಯಸುವ ಗುರುದಕ್ಷಿಣೆಯೆಂದು ಕೇಶಿಧ್ವಜನನ್ನು ಕೇಳಿಕೊಂಡನು. ಆಶ್ಚರ್ಯ ಚಕಿತನಾದ ಕೇಶಿಧ್ವಜನು ಖಾಂಡಿಕ್ಯನ ನಿಲುವನ್ನು ಮೆಚ್ಚಿ ಜ್ಞಾನಪ್ರದವಾದ ವಿಷ್ಣುಭಕ್ತಿಯೋಗವನ್ನು ಉಪದೇಶಿಸಿದ್ದಲ್ಲದೆ ರಾಜ್ಯವನ್ನೂ ಹಿಂದಕ್ಕೆ ಕೊಟ್ಟನು. ಖಾಂಡಿಕ್ಯನು ರಾಜ್ಯಭಾರವನ್ನು ವಹಿಸಲೊಲ್ಲದೆ ತನ್ನ ಮಗನನ್ನು ರಾಜ್ಯದಲ್ಲಿ ಸ್ಥಾಪಿಸಿ ಅಪ್ರಾಪ್ತಯೌವನನಾದ ತನ್ನ ಮಗನನ್ನು ವಿದ್ಯಾ ವಿಚಕ್ಷಣೆಯುಳ್ಳವನನ್ನಾಗಿ ಮಾಡಿ ಕಾಪಾಡಿಕೊಂಡಿರಿ ಎಂದು ಪುರೋಹಿತ ಪ್ರಧಾನರನ್ನು ಒಪ್ಪಿಸಿದನು. ಇಲ್ಲಿ ಸೂಚಿತವಾಗಿರುವ ರಾಜನೀತಿ ಪರವಾದ ಸಲಹೆಯನ್ನು ಖಾಂಡಿಕ್ಯನು ಒಪ್ಪಲಿಲ್ಲವಾದರೂ ಅದು ಸಮಯೋಚಿತವಾದ ಸಲಹೆ ಎನ್ನಬಹುದಲ್ಲವೆ!

ಈ ಪ್ರಬಂಧದಲ್ಲಿರುವ ಎರಡನೆಯ ದೃಷ್ಟಾಂತ ಕಥೆಯು ಯಾಮುನಾಚಾರ್ಯನ ಕಥೆ. ಈ ಕಥೆಗೂ ಈ ಪ್ರಬಂದದ ಇತಿವೃತ್ತಕ್ಕೂ ಯಾವ ಸಂಬಂಧವೂ ಇಲ್ಲ. ವಿಷ್ಣುಪಾರಮ್ಯ ಸ್ಥಾಪನೆಯ ಸನ್ನಿವೇಶವೊಂದನ್ನು ಚಿತ್ರಿಸುವುದಕ್ಕೂ, ತನ್ನ ರಾಜ ನೀತಿಯನ್ನು ನಿರೂಪಿಸುವುದಕ್ಕೂ, ಪ್ರಬಂಧೋಚಿತವಾದ ವರ್ಣನಾವಕಾಶಕ್ಕೂ ಈ ಕಥೆಯನ್ನು ರಾಯನು ಇಲ್ಲಿ ಸೇರಿಸಿರುವಂತಿದೆ. ವಿಷ್ಣುಪಾರಮ್ಯವನ್ನು ಸ್ಥಾಪಿಸಿದ ವಿಷ್ಣುಚಿತ್ತನನ್ನು ಮೆಚ್ಚಿ ಅದೇ ರೀತಿ ವಿಷ್ಣುಪಾರಮ್ಯ ಸ್ಥಾಪನೆ ಮಾಡಿದ ಯಾಮುನನ ಕಥೆಯನ್ನು ಶ್ರೀಮಹಾವಿಷ್ಣುವು ಮಹಾಲಕ್ಷ್ಮಿಗೆ ಹೇಳಿದಂತೆ ಚಿತ್ರಿಸಲಾಗಿದೆ.

ವೇದಶಾಸ್ತ್ರಾಭ್ಯಾಸ ಮಾಡಿದ್ದ ಬ್ರಹ್ಮಚಾರಿ ಯಾಮುನನು ದೇಶ ಸಂಚಾರ ಮಾಡುತ್ತಾ ಪಾಂಡ್ಯ ರಾಜಧಾನಿಗೆ ಬಂದನು. ಅಲ್ಲಿನ ಶಿವಭಕ್ತನಾದ ಪಾಂಡ್ಯರಾಜನೊಬ್ಬನ ರಾಣಿ ಪತಿಪರಾಯಣೆಯಾದ ವಿಷ್ಣುಭಕ್ತೆ. ರಾಣಿಯ ನೆರವಿನಿಂದ ಯಾಮುನನು ರಾಜನ ಆಸ್ಥಾನವನ್ನು ಪ್ರವೇಶಿಸಿದನು. ಯಾಮುನನಿಂದ ಪ್ರೇರಿತಳಾದ ರಾಣಿಯ ಸಲಹೆಯನ್ನು ಒಪ್ಪಿದ ರಾಜನು ಪ್ರರಮಶ್ರೇಷ್ಠವಾದ ಮತವು ಶೈವವೇ ಅಥವಾ ವೈಷ್ಣವವೇ ಎಂಬುದನ್ನು ನಿರ್ಧರಿಸುವುದಕ್ಕಾಗಿ ವಾದಗೋಷ್ಠಿಯನ್ನು ಏರ್ಪಡಿಸಿದನು. ಯಾಮುನನು ಶೈವಮತವಾದಿಗಳನ್ನು ವಾದದಲ್ಲಿ ಸೋಲಿಸಿ ವಿಷ್ಣುಪಾರಮ್ಯವನ್ನು ಸ್ಥಾಪಿಸಿದನು. ಒಪ್ಪಂದವಾಗಿದ್ದ ಪ್ರಕಾರ ರಾಜನು ಶ್ರೀ ವೈಷ್ಣವದೀಕ್ಷೆಯನ್ನು ಸ್ವೀಕರಿಸಿದನು. ತನ್ನ ತಂಗಿಯನ್ನು ಯಾಮುನನಿಗೆ ಕೊಟ್ಟು ಮದುವೆಯನ್ನು ಮಾಡಿ ಅರ್ಧ ರಾಜ್ಯವನ್ನು ಕೊಟ್ಟನು. ಬ್ರಾಹ್ಮಣ ಯಾಮುನನು ರಾಜನಾಗಿ ತನ್ನ ಹಿನ್ನೆಲೆಯನ್ನು ಮರೆತು ಪ್ರಾಪಂಚಿಕ ವ್ಯವಹಾರಗಳಲ್ಲಿ ಮಗ್ನನಾದನು. ಕಾಲಕ್ರಮದಲ್ಲಿ ತಾತನಾಥ ಮುನಿಯ ಪ್ರಶಿಷ್ಯ ರಾಮಮಿಶ್ರನ ಸಮಯೋಚಿತ ಪ್ರಯತ್ನಗಳಿಂದ ಯಾಮುನನಿಗೆ ಜ್ಞಾನೋದಯವಾಯಿತು. ಸನ್ಯಾಸ ಸ್ವೀಕಾರವನ್ನು ನಿರ್ಧರಿಸಿಕೊಂಡು ಮಗನಿಗೆ ರಾಜ್ಯ ಭಾರವನ್ನು ವಹಿಸಿ ಕೊಟ್ಟು ರಾಜನೀತಿಯನ್ನು ಉಪದೇಶಿಸಿದನು. ಈ ರಾಜನೀತಿಯನ್ನು ಶ್ರೀ ಕೃಷ್ಣದೇವರಾಯನು ಎಂಬತ್ತೆರಡು ಪದ್ಯಗದ್ಯಗಳಲ್ಲಿ ವಿಸ್ತಾರವಾಗಿ ನಿರೂಪಿಸಿದ್ದಾನೆ. ಅದರ ಸಾರಾಂಶ ಹೀಗಿದೆ :-

ರಾಜ, ಯಾವ ಸಮಯದಲ್ಲಿಯೂ ಬೇಸರಪಡದೆ ಪ್ರಜಾ ರಕ್ಷಣೆಯಲ್ಲಿ ನಿರತನಾಗಿರಬೇಕು. ವಿಪತ್ತಿಗೆ ಗುರಿಯಾದವರು ಮೊರೆಯಿಟ್ಟರೆ ಆ ಕೂಡಲೆ ಕೇಳಿ ವಿಚಾರಿಸಿ ಪರಿಹಾರವನ್ನು ಕಲ್ಪಿಸಬೇಕು. ಈ ಕಾರ್ಯ ನಿರ್ವಹಣೆಗೆ ದುರ್ಜನರನ್ನು ನಿಯೋಜಿಸಬಾರದು.[1] ರಾಷ್ಟ್ರದ ಪ್ರಜೆಗಳ ಶ್ರೇಯಸ್ಸನ್ನು ಕೋರುವ ರಾಜನ ಶ್ರೇಯಸ್ಸನ್ನು ಪ್ರಜೆಗಳೂ ಬಯಸುವರು. ರಾಜನು ಪ್ರಜಾಭಿಪ್ರಾಯವನ್ನು ಮನ್ನಿಸಬೇಕು. ಪ್ರಜೆಗಳ ಹೃದಯಾಂತರಾಳದಲ್ಲಿರುವ ಪರಮಾತ್ಮನು ರಾಜನನ್ನು ರಕ್ಷಿ

ವನು. ಇದೇ ರಾಜನು ಅಪೇಕ್ಷಿಸಬಹುದಾದ ಪರಮ ಯೋಜನ[2]. ರಾಜನು ಆಜ್ಞೆಮಾಡಬೇಕು. ರಾಜಾ ಗೆ ಪ್ರಜೆಗಳುಬದ್ಧರಾಗಿರಬೇಕು.[3] ಲೋಕ ವ್ಯವಹಾ ಕ್ಕೆ ದಂಡನೆಯ ಭಯವು ಅತ್ಯವಶ್ಯ. ದಂಡ್ಯರನ್ನು ಂಡಿಸವೆ ಅದಂಡ್ಯರನ್ನು ದಂಡಿಸುವುದರಿಂದ ರಾಜನಿಗೆ ಹದಲ್ಲಿ ದುರ್ಯಶಸ್ಸು ಪರದಲ್ಲಿ ನರಕ ಪ್ರಾಪ್ತಿಯೂ ಲ.[4] ರಾಜನು ರಾಜ್ಯಾಡಳಿತದ ಬಗೆಗೆ ತಿಳಿಯ ೇಕಾದ ವಿವರಗಳಲ್ಲಿ ಮೂರು ಪಾಲಿನದಷ್ಟನ್ನು ಂತ ಪರಿಶ್ರಮದಿಂದಲೂ ಉಳಿದ ಒಂದು ಭಾಗದ ನ್ನು ಚಾರಾದಿ ಅಧಿಕಾರಿಗಳಿಂದಲೂ ಇಷ್ಟಮಿತ್ರ ಂದಲೂ ತಿಳಿಯ ಬೇಕು.[5]

ಒಂದು ಕಣ್ಣಿನಿಂದ ನಿದ್ರಿಸುತ್ತ ಇನ್ನೊಂದು ಕಣ್ಣಿ ಂದ ಎಚ್ಚರದಿಂದಿರುವ ಮರದ ಮೇಲಿನ ಕರಡಿ ಂತೆ ರಾಜನು ಭೋಗಗಳನ್ನು ಅನುಭವಿಸುತ್ತಿದ್ದರೂ ಂತರ್ಬಹಿಶ್ಶತ್ರುಗಳನ್ನು ದೃಷ್ಟಿ ಯಲ್ಲಿಟ್ಟಿರಬೇಕು.[6] ಾಜನು (ವಧ್ಯರನ್ನು) ಕೊಂದೂ ಧಾರ್ಮಿಕನ; ರ್ಜ್ಯಗಳಾದ ಕಾಲಗಳಲ್ಲಿ ಹೊರತು) ಭಾರ್ಯೆ ುನ್ನು ಹೊಂದಿಯೂ ಬ್ರಹ್ಮಚಾರಿ; (ಸತ್ಯರಕ್ಷಣೆಗಾಗಿ) ುಳ್ಳಾಡಿಯೂ ಸತ್ಯವಂತನು; (ಸಮಯವರಿತು ನಿಯ ವಾಗಿ) ಭೋಜನ ಮಾಡಿಯೂ ಉಪವಾಸಿ; ೊಡ್ಡವರ ವಿರುದ್ಧ ಎದುರು ಬೀಳುದೆ) ತೋಲ ಯೂ ಶೂರನು; (ಸತ್ಕಾರ್ಯಗಳಿಗಾಗಿ ಸರ್ವವನ್ನೂ) ಯಿಸಿಯೂ ಧನವಂತನು; ಇದು ರಾಜನ ವೈಶಿಷ್ಟ್ಯ.[7] ಾಜನು ತನ್ನ ದೇಹವನ್ನು ಸರಿಯಾದ ಆಹಾರ, ಹಾರ, ಭೈಷಜ್ಯಗಳಿಂದ ಸುಸ್ಥಿತಿಯಲ್ಲಿಟ್ಟುಕೊಂಡಿರು ಷ್ಟೇ ಶ್ರದ್ಧೆಯಿಂದ ರಾಷ್ಟ್ರವನ್ನು ರಕ್ಷಿಸಬೇಕು.[8]

ರಾಜನು ಅನುಸರಿಸಬೇಕಾದ ದಿನಚರಿಯಲ್ಲಿ ಒತ್ತುಮಾಡಿರುವ ಕಾಲಗಳಲ್ಲಿ ಇತರ ವಿಷಯ ೊಂದಿಗೆ ಜ್ಯೋತಿಷಿಗಳು, ವೈದ್ಯರು, ಮಲ್ಲರು, ಕರು, ಸೂಪಕಾರರೊಡನೆ ವಿಚಾರ ವಿನಿಮಯ; ೇವತಾರ್ಚನೆ; ಗುರುಹಿರಿಯರು; ಯತಿಗಳು, ರ್ಮವೇತ್ತರೊಂದಿಗೆ ಗೋಷ್ಠಿಯೇ ಅಲ್ಲದೆ ಸುಖಿಸ ಾಪಗಳನ್ನೂ, ಪ್ರೇಯಸೀ ಸಹವಾಸವನ್ನೂ, ರಾಯನು ಿರಿಸಿರುವುದು ಗಮನಾರ್ಹ.[9] ರಾಜನು ಅನಾಪ್ತರ ಷಯದಲ್ಲಿ ಎಚ್ಚರಿಕೆಯಿಂದ ಇರಬೇಕು.[10] ರಾಜನಿಗೆ ಥಾಯೋಗ್ಯವಾದ ವೇಷ ಭೂಷಣಗಳೂ ಅತ್ಯ ್ಯ.[11] ದಂಡಪಾರುಷ್ಯ ಚಾಡಿಯ ಮಾತುಗಳನ್ನು ಮರ್ಶಿಸದೆ ನಂಬುವುದು, ಸಂಧಿಯನ್ನು ಕೋರುವ ಶತ್ರುವಿನ ಕೋರಿಕೆಯನ್ನು ವಿನಾಕಾರಣ ನಿರಾಕರಿಸುವುದು, ಅವಿಶ್ವಸನೀಯನನ್ನು ನಂಬುವುದು, ಮಂತ್ರಾಲೋಚನೆಗಳ ಸಂದರ್ಭದಲ್ಲಿ ಸ್ಪಷ್ಟವಾದ ನಿಲುವನ್ನು ಹೊಂದದಿರುವುದು ಇವುಗಳಿಗೆ ರಾಜನೆಂದಿಗೂ ಅವಕಾಶವನ್ನು ಕೊಡ ಬಾರದು.[12]

ಅಮಾತ್ಯನು ವಿದ್ಯಾವಂತನಾಗಿ, ಧರ್ಮಾಧರ್ಮ ಸೂಕ್ಷ್ಮಗಳನ್ನೂ ರಾಜನೀತಿ ವಿಧಾನಗಳನ್ನೂ ತಿಳಿದವ ನಾಗಿ, ವಯಸ್ಸು ಐವತ್ತಕ್ಕಿಂತ ಹೆಚ್ಚಿದ್ದೂ ಎಪ್ಪತ್ತಕ್ಕಿಂತ ಕಡಮೆ ಇರುವವನಾಗಿ, ನಿರೋಗಿಯಾಗಿ, ನಿರೋಗಿಗ ಳಾದ ಪೂರ್ವಜರುಳ್ಳವನಾಗಿ, ಮದ ಮಾತ್ಸರ್ಯ ಗಳಿಲ್ಲದೆ ಕೇವಲ ಅಧಿಕಾರಕ್ಕಾಗಿಯೂ, ಸಂಪಾದನೆಗಾ ಗಿಯೂ ಅಲ್ಲದೆ ರಾಜನ ಪ್ರಾರ್ಥನೆ ಯನ್ನು ಅಂಗೀಕ ರಿಸಿ ಅಮಾತ್ಯ ಪದವಿಯನ್ನು ಕೈಕೊಂಡು ಕರ್ತವ್ಯಗ ಳನ್ನು ನಿರ್ವಹಿಸುವವನಾದರೆ ಉಳಿದ ರಾಜ್ಯಾಂಗಗಳು ಬಹುಬೇಗ ಅಭಿವೃದ್ಧಿಗೊಳ್ಳುತ್ತವೆ.[13] ಅಂತಹ ಮಂತ್ರಿ ದೊರಕದಿದ್ದರೆ ರಾಜನು ತಾನೇ ನೀತಿ ಶಾಸ್ತ್ರಾನುಸಾರ ವಾಗಿ ರಾಜಕಾರ್ಯಗಳನ್ನು ನಿರ್ವಹಿಸುವುದು ಒಳ್ಳೆ ಯದು. ಮಂತ್ರಿಯೊಬ್ಬನಿರಲೇಬೇಕೆಂದು ಗುಣಹೀನ ನನ್ನು ಮಂತ್ರಿ ಯಾಗಿಟ್ಟುಕೊಂಡರೆ ಕುಂಬಳ ಕಾಯಿ ಗಾತ್ರದ ಮುತ್ತನ್ನು ತಂದಿಟ್ಟುಕೊಂಡಂತಾಗುತ್ತದೆ. ದುರ್ಮಂತ್ರಿಯು ರಾಜಾಜ್ಞೆಗೆ ಒಳಪಡದೆ ಸ್ವತಂತ್ರನಂತೆ ವರ್ತಿಸುತ್ತಾನೆ. ರಾಜನೇ ಅವನನ್ನು ಆಶ್ರಯಿಸಿ ಬದುಕ ಬೇಕಾಗುತ್ತದೆ.[14] ದುರ್ಮಂತ್ರಿಗಳ ದುರ್ವರ್ತನೆಗಳನ್ನು ರಾಜನು ತನ್ನ ಚಾರರಿಂದ ತಿಳಿದುಕೊಳ್ಳುತ್ತಾ ಜಾಗ ರೂಕತೆಯಿಂದ ವರ್ತಿಸಬೇಕು.[15] ಜಠರಾಗ್ನಿ ಮಂದವಾ ದರೆ ಔಷಧಿಗಳನ್ನು ಬಳಸಿ ಶರೀರ ಸ್ಥಿತಿಯನ್ನು ಸರಿಪ ಡಿಸಿಕೊಳ್ಳುವ ರೀತಿಯಲ್ಲಿ ರಾಜನು ಭಂಡಾರವನ್ನೂ ಚತುರಂಗ ಬಲವನ್ನೂ ಸುವ್ಯವಸ್ಥಿತ ರೀತಿಯಲ್ಲಿಟ್ಟು ಕೊಂಡು ಅವುಗಳ ಸಹಾಯದಿಂದ ದುಷ್ಟಸಚಿವರನ್ನು ನಿಗ್ರಹಿಸಬೇಕು.[16]

ರಾಜನಿಗೆ ಹೇರಳವಾದ ಧನವೂ ಸೈನ್ಯವೂ ಇದ್ದರೆ ಸಾಲದು, ತನ್ನ ಆಜ್ಞೆಗಳನ್ನು ಕಾರ್ಯಗತಗೊಳಿಸುವ ಅಮಾತ್ಯಾದಿಗಳಿಲ್ಲದಿದ್ದರೆ ಅವುಗಳ ಸದುಪಯೋಗ ವಾಗದು. ಆದ್ದರಿಂದ ರಾಜನು ಯೋಗ್ಯರಾದ ಅಧಿಕಾ ರಿಗಳನ್ನು ಸಂಗ್ರಹಿಸಿಕೊಳ್ಳಬೇಕು.[17] ಅದಕ್ಕಾಗಿ ಗುಣಶೀ ಲಗಳನ್ನು ಪರೀಕ್ಷಿಸಿ ಅರ್ಹರಾದ ಅಧಿಕಾರಿಗಳನ್ನು ಗೊತ್ತುಮಾಡಿಕೊಳ್ಳಬೇಕು.[18] ಯಾವ ಅಧಿಕಾರಿಯನ್ನು ಮೊದಲೇ ಉನ್ನತ ಸ್ಥಿತಿಯಲ್ಲಿಟ್ಟು ತರುವಾಯ ತಗ್ಗಿಸು

ವುದು ಸರಿಯಲ್ಲ. ಅಧಿಕಾರಿಯ ಸ್ಥಿತಿಯನ್ನು ಕ್ರಮಕ್ರಮವಾಗಿ ಉತ್ತಮಪಡಿಸುತ್ತ ಅವನಿಂದ ಕೆಲಸಗಳು ಸರಿಯಾಗಿ ನಡೆಯುವಂತೆ ನೋಡಿಕೊಳ್ಳಬೇಕು. ಒಂದು ಕೆಲಸಕ್ಕೆಹೆಚ್ಚು ಮಂದಿಯನ್ನು ನೇಮಿಸಬೇಕಾದರೆ ಅಧಿಕಾರಿಗಳ ಸಂಖ್ಯೆಯನ್ನು ಕ್ರಮಕ್ರಮವಾಗಿ ಹೆಚ್ಚಿಸಬೇಕು.[20] ಅಧಿಕಾರಿಗಳು ಜೀವನೋಪಾಯಕ್ಕಾಗಿ ರಾಜನನ್ನು ಆಶ್ರಯಿಸುವುದರಿಂದ ಅವರ ವರಮಾನವನ್ನೂ ಕ್ರಮೇಣ ಹೆಚ್ಚಿಸಬೇಕು.[21] ದುಸ್ಥಿತಿಗೀಡಾಗಿ ತಮ್ಮ ಕೆಲಸಗಳನ್ನು ಬಿಟ್ಟು ಹೊರಟುಹೋದ ಕೃಷಿಕರನ್ನು ಹಿಂದಕ್ಕೆ ಬರುವಂತೆ ಮಾಡದೆ, ಅವರು ಬಿಟ್ಟುಹೋದ ಮನೆ ಮಾರುಗಳನ್ನು ತಾವೇ ಉಪಯೋಗಿಸಿಕೊಳ್ಳಬಹುದೆಂಬ ದುರಾಲೋಚನೆಯಿಂದ ಕೂಡಿದ ನರಿಗಳಂತಹ ದುಷ್ಟರಾದ ಅಧಿಕಾರಿಗಳನ್ನು ಅಡಗಿಸಿ ಪ್ರಜೆಗಳಿಗೆ ಸೌಕರ್ಯವನ್ನು ಕಲಿಸಿಕೊಡಬೇಕು.[22]

ರಾಜನು ತನ್ನ ಹಿರಿಯ ಅಧಿಕಾರಿಗಳಲ್ಲಿಯೂ ಯೋಧರಲ್ಲಿಯೂ ಪರಸ್ಪರ ಸ್ಪರ್ಧೆ ಇರುವಂತೆ ನೋಡಿಕೊಳ್ಳಬೇಕು.[23] ಅರ್ಹನಾದವನಿಗೆ ಮೆಚ್ಚಿಗೆಯ ಬಹುಮಾನವನ್ನು ಕೊಡುವಲ್ಲಿ, ವಿಚಕ್ಷಣೆಯಿಂದ ಪರೀಕ್ಷಿಸಿ, ಚುನಾಯಿಸಿ, ಮುಂದಾಗಿ ತಿಳಿಯಗೊಡದೆ, ಹಲಸಿನ ಮರದಲ್ಲಿ ಏಕಾಏಕಿ ಹಣ್ಣು ಕಾಣಿಸಿಕೊಳ್ಳುವಂತೆ, ಸ್ವಪ್ನದಲ್ಲಿ ಕಂಡೆನೋ ಎಂಬ ಭ್ರಮೆ ಬರುವಂತೆ, ಕೊಟ್ಟು ಆಶ್ಚರ್ಯಪಡಿಸಬೇಕು.[24] ಹೊಸದಾಗಿ ಸೇರಿಸಿಕೊಂಡ ಅಧಿಕಾರಿಯನ್ನು ಆ ಕೂಡಲೇ ಮಂತ್ರಾಲೋಚನೆಗೆ ಸೇರಿಸಿಕೊಳ್ಳಬಾರದು.[25] ಹೊಗಳಿಕೆಯ ಮಾತುಗಳಿಂದ ರಂಜಿಸಿ ಕಾರ್ಯಸಾಧನೆ ಮಾಡಿಕೊಳ್ಳುವ ಪ್ರವೃತ್ತಿಯುಳ್ಳ ಸೇವಕರ ಪ್ರಲೋಭನೆಗಳಿಗೆ ಗುರಿಯಾಗದೆ ರಾಜನು ಎಚ್ಚರಿಕೆ ಯಿಂದಿರಬೇಕು.[26] ತಪ್ಪಿತಸ್ಥನು ಕ್ಷಮಾಯಾಚನೆ ಮಾಡಬಹುದಾದರೂ, ಕೇಡುಂಟುಮಾಡಿದ ಅಪರಾಧಿಗಳನ್ನು ಸಮಯವರಿತು ದಂಡಿಸಬೇಕು.[27]

ನೆರೆಯ ರಾಜನು ತಾನಾಗಿಯೇ ಹೀನಸ್ಥಿತಿಗೆ ಬರುವಂತಿದ್ದರೆ ಅವನನ್ನು ಹಾಗೆಯೇ ಬಿಡಬೇಕು; ಹಾಗಲ್ಲದೆ ಊರ್ಜಿತ ಸ್ಥಿತಿಗೆ ಬರುವಂತಿದ್ದರೆ ತನ್ನ ರಾಜ್ಯದ ಗಡಿಯ ರಕ್ಷಣೆಯ ದೃಷ್ಟಿಯಿಂದ ಅವನೊಂದಿಗೆ ಸ್ನೇಹವೇ ಸರಿ. ಅವನ ಅನಂತರದವನನ್ನು ಅವನೇ ನಿಗ್ರಹಿಸುವುದುಂಟು.[28] ವೈರಿ ರಾಜರ ದುರ್ಗಗಳನ್ನು ಆಕ್ರಮಿಸಿಕೊಂಡಾಗ ಸೆರೆಸಿಕ್ಕಿದ ರಾಣಿವಾಸದವರನ್ನು ಅವರು ತವರ ಮನೆಯಲ್ಲಿರುವವೋ ಎನ್ನುವ ಭಾವನೆ ಬರುವಂತೆ ರಕ್ಷಿಸಬೇಕು. ಅವರ ರಾಯಭಾರಿಗಳ ಎದುರಿಗೆ ಕಠಿಣವಾದ ಮಾತುಗಳನ್ನಾಡಬಾರದು. ಮುಂದೆ ಒಂದುವೇಳೆ ಆ ರಾಜರೊಂದಿಗೆ ಸಂಧಿಯನ್ನು ಏರ್ಪಡಿಸಿಕೊಳ್ಳಬೇಕಾಗಬಹುದು.[29] ರಾಜನು ಕಾರ್ಯಾರ್ಥಿಯಾಗಿರಬೇಕೇ ಎನಾ ಕಲಹಪ್ರಿಯನಾಗಿರಬಾರದು.[30] ರಾಯಭಾರಿಗಳೊಡನೆ ಸರಸವಾಗಿ ಮಾತಾಡುತ್ತಾ, ತನ್ನ ನಿಯೋಗಿಗಳು ಅವರೊಡನೆ ಕಾರ್ಯಾರ್ಥಿಗಳಾಗಿ ವ್ಯವಹರಿಸುತ್ತಿರುವಲ್ಲಿ, ತೀಕ್ಷ್ಣತೆಯನ್ನು ತೋರಗೊಡದೆ ಮೈತ್ರಿಯನ್ನೇ ತೋರಿಸುತ್ತಾ ತೇಲಿಸಿ ಮಾತಾಡುತ್ತಿರಬೇಕು.[31] ರಾಜನು ಸ್ವ, ಪರ ರಾಜ್ಯಗಳಲ್ಲಿ ಚಾರರನ್ನು ಕಳುಹಿಸಿ ರಹಸ್ಯಗಳನ್ನು ತಿಳಿಯುತ್ತಿರಬೇಕು. ಇದು ರಾಜನೀತಿಗೆ ಸಂಬಂಧಿಸಿದ ಬಹು ಮುಖ್ಯ ವಿಷಯ.[32]

ರಾಜನು ತನ್ನ ಹಿತವನ್ನು ಬಯಸುವ ವಿದ್ವಾಂಸರಾದ, ಮೇಧಾವಿಗಳಾದ ಶೂರರನ್ನು ದುರ್ಗಾಧಿಪತ್ಯಕ್ಕೆ ನೇಮಿಸಬೇಕು. ಅಲ್ಲಿ ಬಹುಕಾಲಕ್ಕೆ ಸಾಕಾಗುವಷ್ಟು ಎಲ್ಲ ಸಾಮಗ್ರಿಗಳನ್ನೂ ಶೇಖರಿಸಬೇಕು. ಬೊಕ್ಕಸಕ್ಕೆ ಬರುವ ಧನವು ಹೆಚ್ಚಾಗಿರಬೇಕಾದರೂ ಅದಕ್ಕಾಗಿ ಪ್ರಜೆಗಳನ್ನು ಪೀಡಿಸಕೂಡದು.[33] ರಾಜನು ಆದಾಯದ ನಾಲ್ಕು ಭಾಗಗಳಲ್ಲಿ ಅರ್ಧದಷ್ಟನ್ನು ಚತುರಂಗ ಬಲ ಸಂವರ್ಧನೆಗೂ, ಒಂದು ಭಾಗವನ್ನು ಪ್ರಜಾಹಿತ ಕಾರ್ಯಗಳಿಗೂ ತನ್ನ ಸ್ವಾಸ್ಥ್ಯಕ್ಕೂ ವಿನಿಯೋಗಿಸಿ, ಉಳಿದ ಒಂದು ಭಾಗವನ್ನು ಕೋಶಾಗಾರದಲ್ಲಿಡಬೇಕು.[34] ಹೊರದೇಶಗಳಿಂದ ಆನೆಗಳು, ಕುದುರೆಗಳು, ರತ್ನ ಚಂದನ ಮೌಕ್ತಿಕಾದಿಗಳನ್ನು ತರುವ ವರ್ತಕರಿಗೆ ರೇವುಗಳಲ್ಲಿ ತಕ್ಕ ಸೌಕರ್ಯಗಳನ್ನು ಕಲ್ಪಿಸಿಕೊಟ್ಟು ವರ್ತಕವ್ಯಾಪಾರವನ್ನು ಹೆಚ್ಚಿಸಬೇಕು. ಅನಾವೃಷ್ಟಿಯಿಂದಲೂ, ಉಪದ್ರವಗಳಿಂದಲೂ ಹೊರ ದೇಶಗಳಿಂದ ವಲಸೆ ಬರುವ ಜನರನ್ನು ಅವರವರ ಜಾತಿ ಪದ್ಧತಿಗಳಿಗೆ ತಕ್ಕಂತೆ ರಕ್ಷಿಸಬೇಕು.[35]

ದೇಶದ ವಿಸ್ತೀರ್ಣಕ್ಕೆ ತಕ್ಕಂತೆ ಯಾವ ಸಣ್ಣ ಭಾಗವನ್ನು ಬಿಡದೆ ಅಭಿವೃದ್ಧಿಗೊಳಿಸಿ, ನೀರಾವರಿಯನ್ನು ಹೆಚ್ಚಿಸಿ, ಬಡರೈತರ ಮೇಲೆ ಧನ ಧಾನ್ಯ ರೂಪವಾದ ತೆರಿಗೆಯ ಹೊರೆಯನ್ನು ಹೆಚ್ಚಿಸದೆ, ದೇಶವನ್ನು ಅಭಿವೃದ್ಧಿಗೆ ತಂದರೆ ರಾಜನ ಧರ್ಮ ಅರ್ಥಗಳೆರಡೂ ಸಿದ್ಧಸುವುವು.[36]

ರಾಜನಿಗೆ ಹೊರಗಿನ ಶತ್ರುಗಳಿಂದಾಗಬಹುದಾದ ಕೇಡಿಗಿಂತ ತನ್ನ ಪಕ್ಷದವರೇ ಆದ ಅಂತಶ್ಶತ್ರುಗಳಿಂದಾ

ಹುದಾದ ಕೇಡೇ ಹೆಚ್ಚು. ಅದು ಸರ್ಪಭಯಕ್ಕಿಂತ ಚ್ಚು ಭಯಂಕರ. ಆದ್ದರಿಂದ ಗುಪ್ತಶತ್ರುಗಳನ್ನು ಅಡಗಿಸಿ, ಸುವರ್ಜಿತನಾಗಿ ರಾಜ್ಯಾಡಳಿತವನ್ನು ನಡೆಸಬೇಕು.[37] ನುಗಾರನು, ಗಾಳಕ್ಕೆ ಸಿಕ್ಕಿಬಿದ್ದ ಮೀನು ಹಿಂದಕ್ಕೆ ಎಳೆದರೆ ಅದನ್ನು ಹಾಗೆಯೇ ಬಿಟ್ಟು, ಅದು ದುರಿಕೊಂಡು ಮುಂದೆ ಬಂದಾಗ ಅದನ್ನು ಎಳೆದು ಡದ ಮೇಲೆ ಹಾಕಿಕೊಳ್ಳುವಂತೆ ಬಲವಂತನೊಬ್ಬನು ಸಕರಿಸದೆ ಹಿಂದೆ ಬಿದ್ದರೆ ರಾಜನು ಅವನನ್ನು ಗೆಯೇ ಬಿಟ್ಟಿದ್ದು, ಅವನು ತಾನಾಗಿಯೇ ತನ್ನ ಗೆ ಬರುವಂತೆ ಮಾಡಿ, ಹಾಗೆ ಬಂದಾಗ ಅವನನ್ನು ರಿಸಿಕೊಳ್ಳುವುದು ವಿಹಿತ.[38] ದೇಶಾದ್ಯಂತ ಅಡವಿಗ ನ್ನು ಅಭಿವೃದ್ಧಿಪಡಿಸಬೇಕು. ಅಡವಿಗಳಲ್ಲಿ ದಾರಿಗಳ್ಳರು, ಡೋಡೆಕಾರರು ಸೇರಿಕೊಂಡು ಪ್ರಜೆಗಳಿಗೆ ಬಾಧೆಯ ಟು ಮಾಡದಂತೆ ನೋಡಿಕೊಳ್ಳಬೇಕು.[39] ಅಡವಿ ನಗಳೊಂದಿಗೆ ಎಚ್ಚರಿಕೆಯಿಂದ ವ್ಯವಹರಿಸಬೇಕು. ವರಲ್ಲಿ ಸ್ವಲ್ಪ ಕಾರಣದಿಂದಲೇ ಸ್ನೇಹವಾಗಲಿ ದ್ವೇಷ ಗಲಿ ಉಂಟಾಗಬಹುದು.[40] ಮಣ್ಣು ಗೋಡೆಯನ್ನು ಳೆದು ಶುಭ್ರಪಡಿಸಲಾಗದಿರುವಂತೆ ಆಟವಿಕರ ರ್ವತೇಯರ. ಲೋಪದೋಷಗಳನ್ನು ನಿಶ್ಶೇಷವಾಗಿ ಗಲಾಡಿಸುವುದು ದುಸ್ಸಾಧ್ಯ. ಆದ್ದರಿಂದ ಅವರಿಗೆ ಸ್ತುವಾಹನಾದಿಗಳನ್ನು ಬಹುಮತಿಯಾಗಿ ಕೊಟ್ಟು ವರೊಂದಿಗೆ ಸ್ನೇಹಭಾವವನ್ನು ಹೆಚ್ಚಿಸಿಕೊಳ್ಳುವುದು, ಾತುಕೊಟ್ಟಂತೆ ನಡೆದುಕೊಳ್ಳುವುದು ವಿಹಿತ.[41]

ದುರ್ಗಗಳನ್ನು ಆಪ್ತರಾದ ಸಮರ್ಥರಾದ ರ್ಗಾಧಿಪತಿಗಳ ವಶದಲ್ಲಿಡಬೇಕು. ಆ ದುರ್ಗಗಳ ಲೆ ಎಷ್ಟು ಬಲವಾದ ಶತ್ರುಗಳ ದಾಳಿಯಾದರೂ ದುರಿಸುವುದಕ್ಕೆ ಸಾಧ್ಯವಾಗುವಂತೆ ಸೇನೆಯನ್ನೂ ಮಗ್ರಿಗಳನ್ನು ಸಮೃದ್ಧಿಯಾಗಿ ಒದಗಿಸಬೇಕು.[42] ತ್ತಮವಾದ ಗಜಾಶ್ವಗಳನ್ನು ಆಪ್ತಯೋಧರ ವಶಕ್ಕೆ ಡಬೇಕು. ಅವರು ಅವುಗಳನ್ನು ಸರಿಯಾದ ಸ್ಥಿತಿ ಲ್ಲಿಟ್ಟುಕೊಂಡು ಸಮಯ ಬಂದಾಗ ಸರಿಯಾದ ತಿಯಲ್ಲಿ ರಾಜನ ಸೇವೆಗೆ ಸಿದ್ಧರಾಗಿರುವರು.[43]

ಪ್ರಜಾರಕ್ಷಣೆಯ ಭಾರವನ್ನು ವಹಿಸಿಕೊಂಡ ಜನು ಪ್ರಜೆಗಳಿಗೆ ಸಂಭವಿಸಬಹುದಾದ ಉಪದ್ರವ ನ್ನು ಪರಿಹರಿಸದಿದ್ದರೆ ಜನ್ಮಸಾಫಲ್ಯವನ್ನು ಹೊಂದ ರನು.[44] ಆದ್ದರಿಂದ ಕಂಡುಕೇಳಿದ್ದನ್ನು ಉಪೇಕ್ಷಿಸದೆ ಗ್ಯರೀತಿಯಲ್ಲಿ ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸುತ್ತ ಶಕ್ಯವಲ್ಲದ್ದಕ್ಕೆ ಆರ್ತಶರಣಾಗತ ರಕ್ಷಕನಾದ ಪರಮಾತ್ಮನನ್ನು ನಂಬಿ ನಿರಹಂಕಾರಿಯಾಗಿ ಪ್ರವರ್ತಿಸಿದರೆ ಎಲ್ಲ ಸಂಸಿದ್ಧಿಗಳೂ ಹಸ್ತಗತವಾಗುತ್ತವೆ.[45]

ಈ ಪ್ರಕಾರವಾಗಿ ಶ್ರೀ ಕೃಷ್ಣದೇವರಾಯನು ರಾಜ್ಯ ಸಪ್ತಾಂಗಗಳಿಗೆ ಸಂಬಂಧಪಟ್ಟ ರಾಜನೀತಿಯ ವಿವಿಧ ವಿಷಯಗಳನ್ನು ಯಾಮುನನು ತನ್ನ ಮಗನಿಗೆ ಹೇಳಿದಂತೆ ಶ್ರೀ ಮಹಾ ವಿಷ್ಣುವು ಮಹಾಲಕ್ಷ್ಮಿಗೆ ತಿಳಿಸುದುದಾಗಿ ವಿವರಿಸಿದ್ದಾನೆ. ಶ್ರೀ ಕೃಷ್ಣದೇವರಾಯನ ರಚನೆ ಸೂತ್ರಪ್ರಾಯವಾಗಿದೆ. ಕಿರಿದರಲ್ಲಿ ಹಿರಿಯ ಅರ್ಥವನ್ನು ಹುದುಗಿಸಿ ರಚಿಸಿರುವುದು ರಾಯನ ವೈಶಿಷ್ಟ್ಯ. ರಾಯನಿಗೆ ತೆಲುಗು ಭಾಷೆಯ ನುಡಿಕಟ್ಟಿನ ಮೇಲಿರುವ ಪ್ರಭುತ್ವ ಆಶ್ಚರ್ಯಕರವಾಗಿದೆ.

ಕೃಷ್ಣರಾಯನು, ತಾನು ಅಭ್ಯಸಿಸಿದ್ದ ರಾಜ್ಯಶಾಸ್ತ್ರ (ಅರ್ಥಶಾಸ್ತ್ರ, ನೀತಿಶಾಸ್ತ್ರ) ಸೂತ್ರಗಳಿಗೆ ಸ್ವಾನುಭವದಿಂದಟಿಪ್ಪಣಿಗಳನ್ನು ಬರೆದಂತಿದೆ ಇಲ್ಲಿನ ನಿರೂಪಣೆ. ಇದರಲ್ಲಿ ರಾಯನ ಆಳವಾದ ಶಾಸ್ತ್ರಪಾಂಡಿತ್ಯ, ವಿಶಾಲಹೃದಯ, ದೂರದೃಷ್ಟಿ ಬಹುಮುಖಪ್ರಜ್ಞೆಗಳನ್ನೂ ಕವಿತಾ ಸಾಮರ್ಥ್ಯವನ್ನೂ ಕಾಣಬಹುದು. ರಾಯನು ತಾನೇ ರೂಪಿಸಿಕೊಂಡಿದ್ದ ರಾಜನೀತಿಯನ್ನು ಅನುಸರಿಸಿ, ರಾಜ್ಯವನ್ನು ವಿಸ್ತರಿಸಿ ಸುವ್ಯವಸ್ಥಿತಗೊಳಿಸಿ ರಾಜ್ಯಾಡಳಿತವನ್ನು ನಿರ್ವಹಿಸಿದನು. ಕೃತಿಯಲ್ಲಿ ರಾಯನೇ ಸೇರಿಸಿರುವ ಎರಡು ದೃಷ್ಟಾಂತ ಕಥೆಗಳಲ್ಲಿ ಖಾಂಡಿಕ್ಯನೂ ಯಾಮುನನೂ ತಮ್ಮ ಮಕ್ಕಳಿಗೆ ರಾಜ್ಯಭಾರವನ್ನು ವಹಿಸಿಕೊಟ್ಟಂತೆ ಶ್ರೀ ಕೃಷ್ಣದೇವರಾಯನೂ ತನ್ನ ಮಗನಿಗೆ ಯುವರಾಜ ಪಟ್ಟಾಭಿಷೇಕ ಮಾಡಿದ್ದನೆಂಬ ಚಾರಿತ್ರಿಕ ವಿಷಯವನ್ನು ಇಲ್ಲಿ ಸ್ಮರಿಸಬಹುದು.

ರಾಯನು ಪ್ರತಿಪಾದಿಸಿರುವ ರಾಜನೀತಿಯು ಮಧ್ಯಯುಗೀನ ರೀತಿನೀತಿಗಳಿಗೆ ಹೊಂದಿಕೊಂಡಿರುವುದಾದರೂ ಆಧುನಿಕ ಪರಿಸ್ಥಿತಿಗಳಿಗೂ ಅನ್ವಯಿಸಬಹುದಾದ ಹಲವು ವಿಷಯಗಳನ್ನು ಒಳಗೊಂಡಿರುವುದರಿಂದ ಇತಿಹಾಸ ಮತ್ತು ರಾಜ್ಯ ಶಾಸ್ತ್ರಗಳ ಅನ್ವೇಷಣೆಯಲ್ಲಿ ತೊಡಗಿರುವವರು ಈ ಮಹಾ ಪ್ರಬಂಧದಲ್ಲಿರುವ ಸಾಮಗ್ರಿಯನ್ನು ವಿಮರ್ಶಾತ್ಮಕವಾಗಿ ಅಭ್ಯಾಸ ಮಾಡಬಹುದಾಗಿದೆ.

## ಉಪಯೋಗಿಸಿದ ಗ್ರಂಥಗಳು:-

1. ಶ್ರೀ ಕೃಷ್ಣದೇವರಾಯ ವಿರಚಿತ
ಆಮುಕ್ತಮಾಲ್ಯದ.
(ವೇದಂ ವೆಂಕಟರಾಯಶಾಸ್ತ್ರಿ ಕೃತವ್ಯಾಖ್ಯಾನ
ಸಹಿತ)
2. ವಿಷ್ಣು ಪುರಾಣ. ಸಂಪುಟ ೩.
ಶ್ರೀ ಜಯಚಾಮರಾಜೇಂದ್ರ ಗ್ರಂಥ ರತ್ನಮಾಲಾ.

ವಿಶೇಷಬಿನ್ನಹ :-
ಈ ಲೇಖನವನ್ನು ಪರಿಷ್ಕರಿಸುವಲ್ಲಿ ಸೂಕ್ತವಾದ
ಸೂಚನೆಗಳನ್ನು ಸಲಹೆಗಳನ್ನು ಕೊಟ್ಟು
ಉಪಕರಿಸಿರುವ ಮಾನ್ಯ ಮಿತ್ರ ಡಾ॥
ಜಿ.ಎಸ್.ದೀಕ್ಷಿತ್ ಅವರಿಗೆ ನಾನು
ಕೃತಜ್ಞನಾಗಿದ್ದೇನೆ.

1. ಆಮುಕ್ತ IV - 204 ಇಲ್ಲಿಂದ ಮುಂದಿನ
ಅಡಿಟಿಪ್ಪಣಿಗಳಲ್ಲಿರುವ ಅಂಕಿಗಳು
'ಆಮುಕ್ತಮಾಲ್ಯದ'ದ ನಾಲ್ಕನೆಯ ಆಶ್ವಾಸದ
ಪದ್ಯ, ಗದ್ಯ, ಸಂಖ್ಯೆಗಳು.

2 - 205
3 - 206
4 - 277
5 - 240
6 - 241
7 - 278
8 - 270
9 - 271
10 - 273
11 - 283
12 - 252
13 - 211
14 - 213
15 - 265
16 - 229 ರಿಂದ 232
17 - 216
18 - 209
19 - 208
20 - 214
21 - 233
22 - 237
23 - 254
24 - 274
25 - 260
26 - 269
27 - 243
28 - 266
29 - 267
30 - 263
31 - 259
32 - 279
33 - 260 ಮತ್ತು 261
34 - 238
35 - 245
36 - 236
37 - 249
38 - 251
39 - 256
40 - 222
41 - 257
42 - 207 ಮತ್ತು 255
43 - 226
44 - 284
45 - 285.

.ಭಾ. ಸದಾಶಿವಪ್ಪ

# ರಪನಹಳ್ಳಿ ಪಾಳೇಗಾರರು ಸ್ಥಾಪಿಸಿದ ಸಂಪ್ರದಾಯಗಳು

ಬಳ್ಳಾರಿ ಜಿಲ್ಲೆಯ ಒಂದು ತಾಲ್ಲೂಕಿನ ಮುಖ್ಯ ್ರಣವಾಗಿರುವ ಹರಪನಹಳ್ಳಿ ಪಟ್ಟಣದಲ್ಲಿ ಈಗಲೂ ೆಯ ಕಾಲದ ಕಟ್ಟೆಗಳು, ಅವುಗಳ ಮೇಲಿ ಕಲ್ಲಿನ ವ ಮೂರ್ತಿಗಳು ಕಂಡು ಬರುವುವು. ಈ ೂರ್ತಿಗಳು ಉತ್ತರಾಭಿಮುಖವಾಗಿರುವುವು. ಕೆಲವು ರ್ತಿಗಳಿಗೆ ಕೇವಲ ಸುಮಾರು ಅಡಿ ಎತ್ತರದ ್ಲ ಕಟ್ಟೆಗಳೇ ಆಧಾರವಾಗಿದ್ದರೆ, ಮತ್ತೆ ಕೆಲವು ೂರ್ತಿಗಳಿಗೆ ದೇವಾಲಯಗಳು ಕಂಡು ಬರುವುವು. ್ರಗಳಲ್ಲಿ ಒಂದು ದೇವಾಲಯ ಅತ್ಯಂತ ಸುಂದರ ತ್ತು ಪ್ರಾಚೀನವಾದದ್ದೆಂದು ಗೊತ್ತಾಗುವುದು. ಇದು ಪನಹಳ್ಳಿಯ ಕುರುಬರ ಓಣಿಯಲ್ಲಿರುವುದು. ಜನ ಮಾನ್ಯರು ಇದಕ್ಕೆ ಅರಸಿನ ಮಠವೆಂದು ಕರೆಯು ು. ಈ ಅರಸಿನ ಮಠದ ಮುಂದೆ ಪಾವಟಿಕೆಗಳುಳ್ಳ ದು ನೀರಿನ ಬಾವಿ ಇರುವುದು. ಬಾವಿಯನ್ನು ಗೊಂಡು ಮಠದ ಮುಂದೆ ಮತ್ತು ಅದರ ಭಾಗದಲ್ಲಿ ಕಾಣುವ ಮೈದಾನ ಸುಮಾರು ಎರಡು ರೆ ವಿಸ್ತೀರ್ಣವುಳ್ಳದ್ದಾಗಿದೆ. ಬಾವಿಯ ಮುಂದೆಯೇ ತಕ್ಕೆ ದಾರಿ ಇದೆ. ಮಠದ ಮುಂದೆ ಒಂದು ಓಕಳಿ ೆ ಇದ್ದಿತೆಂದೂ ಅದು ಈಗ ಮುಚ್ಚಿದೆ ಎಂದೂ ರು ಹೇಳುವರು. ಮಠ ಸಾಧಾರಣವಿರುವುದು. ರಲ್ಲಿ ಐದು ಭಾಗಗಳನ್ನು ಕಾಣಬಹುದು. ಮೊದ ನಮಗೆ ಕಾಣುವುದು ಎತ್ತರವಾದ ಬಸವ ೂರ್ತಿ. ಇದು ಗರ್ಭಗೃಹದಲ್ಲಿದೆ. ಆದರೆ ಇದರ ಗಿಲು ಕಾಣುವುದಿಲ್ಲ. ಇದರ ಮುಂದಿನ ಭಾಗದ ಾಂಗಣದ ಮೇಲ್ಭಾಗದಲ್ಲಿ ಕಲ್ಲಿನಲ್ಲಿ ಕೆತ್ತಿದ ಸುಂದ ಾದ ನಾಗಬಂಧವಿದೆ. ಬಸವನ ಗರ್ಭಗೃಹದ ಪಕ್ಕ ್ಲ ಎಡಭಾಗದಲ್ಲಿ ಒಂದು ಗರ್ಭಗೃಹವಿದೆ. ಅದರಲ್ಲಿ ಶ್ವರ ದೇವರ ಪೀಠ, ಅದರಲ್ಲಿ ಈಶ್ವರ ಲಿಂಗವಿರು ು. ಅದರ ಬಾಗಿಲು ಸೊಗಸಾದ ಚಿತ್ರಗಳನ್ನು ಗೊಂಡು ಪೂರ್ವ ಕಾಲದ ಚಾಲುಕ್ಯರ ಶಿಲ್ಪವಾ . ಬಾಗಿಲ ಮೇಲೆ ಗಜಲಕ್ಷ್ಮಿಯ ಚಿತ್ರವಿದೆ. ಬಸವ ುವ ಗರ್ಭಗೃಹದ ಬಲಭಾಗದಲ್ಲಿ ಒಂದು ಗರ್ಭ ಹವಿದೆ. ಅದರಲ್ಲಿ ದೇವರಿಲ್ಲ. ಅದರ ಬಾಗಿಲು ಡಾ ಪೂರ್ವಕಾಲದ ಶಿಲ್ಪಕಲೆಯಾಗಿದೆ. ಬಾಗಿಲ ಮೇಲೆ ಗಜಲಕ್ಷ್ಮಿ ಚಿತ್ರ ಇರುವುದು. ಇನ್ನೂ ಎತ್ತರದಲ್ಲಿ ಬಾಗಿಲ ಮೇಲೆ ಸಪ್ತಮಾತೃಕೆಗಳಿರುವುವು. ಈ ಮಠದ ಕಂಬಗಳ ಮೇಲೆ ಆಂಜನೇಯ, ಗಂಡಭೇರುಂಡ, ಬುದ್ಧ, ಶಂಖ ಹಿಡಿದ ಮೂರ್ತಿ, ಉಗ್ರನಾರಸಿಂಹ, ಈಶ್ವರ, ನಾಗಬಂಧ, ಯೋಗಿಗಳು, ಹೂವು ಮುಂತಾದ ಉಬ್ಬು ಚಿತ್ರಗಳು ಕಂಡು ಬರುವುವು. ಬಸವನ ಗರ್ಭಗೃಹಕ್ಕೆ ಬಾಗಿಲು ಇರುವುದಿಲ್ಲ. ಬಸವ ವಿಗ್ರಹದ ಪೀಠ ಕಲ್ಲುಕಟ್ಟೆಯಾದರೆ ಈಶ್ವರನ ಪೀಠ ಮಣ್ಣು ಗರಸಿನ ಕಟ್ಟೆಯಾಗಿದೆ. ಮಠವೆಂದು ಕರೆಯಿಸಿ ಕೊಳ್ಳುವ ಇನ್ನೂ ಕೆಲವು ಬಸವ ದೇವಾಲಯಗಳು ಇತರ ಕಡೆ ಕಂಡುಬಂದರೂ ವಾಸ್ತುಶಿಲ್ಪದ ದೃಷ್ಟಿಯಿಂದ ಕುರುಬರ ಓಣಿಯಲ್ಲಿರುವ ಈ ದೇವಾಲಯವೇ ಗಮನಾರ್ಹವಾದದ್ದು.

## ವಿಮರ್ಶೆ:

ಹರಪನಹಳ್ಳಿಯನ್ನು ಆಳಿದ 15 ಪಾಳೇಗಾರರಲ್ಲಿ ಬರುವ ಹೆಚ್ಚಿನ ಸಂಖ್ಯೆಯ ಹೆಸರುಗಳು ಹೀಗಿರುವುವು: (1) ಮೊದಲ ಬಸವಂತನಾಯಕ (ಕೊಟ್ಟೂರು ಬಸಪ್ಪನಾಯಕ) (2) ಮರಕೊಟ್ರಬಸಪ್ಪನಾಯಕ (3) ಎರಡನೇ ಬಸವಂತನಾಯಕ (4) ಮೊದಲ ವೀರಬಸಪ್ಪನಾಯಕ (5) ಎರಡನೇ ವೀರಬಸಪ್ಪನಾಯಕ (6) ಮುದುಬಸಪ್ಪನಾಯಕ ಮತ್ತು (7) ಬಸಪ್ಪನಾಯಕ

ಹಿಂದಿನ ಕಾಲದ ಅರಸರು ತಾವು ದೇವಾಲಯವನ್ನು ಕಟ್ಟಿಸಿ ಅದರಲ್ಲಿ ಮೂರ್ತಿಯನ್ನು ಸ್ಥಾಪಿಸಿ ಆ ದೇವರಿಗೆ ತಮ್ಮ ಹೆಸರು ಇಲ್ಲವೇ ಬಿರುದನ್ನೇ ಹೆಸರನ್ನಾಗಿ ಇಡುವುದು ಸಂಪ್ರದಾಯ ವಾಗಿದ್ದಿತು. ಅದನ್ನೇ ಈ ಪಾಳೇಗಾರರು ಮುಂದುವರೆಸಿರುವರು. ಉದಾಹರಣೆಗೆ 1) ಹಿರೇ ಕುರುವತ್ತಿ ಶ್ರೀ ಮಲ್ಲಿಕಾರ್ಜುನದೇವರಿಗೆ ಶಾಸನದಲ್ಲಿ ಆಹವ ಮಲ್ಲೇಶ್ವರನೆಂದೂ, 2) ಹಿರೇಹಡಗಲಿ ಗದ್ದೆ ಕಲ್ಲೇಶ್ವರನಿಗೆ ಭೀಮೇಶ್ವರ – ದೇಮೇಶ್ವರನೆಂದೂ, 3) ಬಳ್ಳಾರಿ ಕೋಟೆಯ ಈಶ್ವರ ದೇವರಿಗೆ ಬಲ್ಲಾಳೇಶ ಮಲ್ಲಾರ್ಯಲಿಂಗ ಎಂದೂ ಕರೆಯಲಾಗಿದೆ.

ಬೇಡನಾಯಕರಾದ ಹರಪನಹಳ್ಳಿ ಪಾಳೇಗಾರರ ಇಷ್ಟದೇವರು: 1) ಮೊದಲ ಘಟ್ಟಹನುಮಂತ ದೇವರು, 2) ಉಚ್ಚಂಗಿದುರ್ಗದ ಉಚ್ಚಂಗೆಮ್ಮ, ಹಾಗೂ ವೀರಶೈವರಾದ ಮೇಲೆ ಅವರ ಇಷ್ಟದೇವರು 1) ಕೊಟ್ಟೂರು ಶ್ರೀ. ಗುರುಬಸವೇಶ್ವರ. ಹರಪನ ಹಳ್ಳಿಯ ಪಾಳೇಗಾರರು ತಮ್ಮ ಸಮಕಾಲೀನ ಅರಸ ರಿಗೆ ಬರೆದ ಪತ್ರಗಳಲ್ಲಿ ಬಸವನಬಿಂಬದ ತಮ್ಮ ಮೊಹರನ್ನು ಉಪಯೋಗಿಸಿರುವರು. ಹರಪನಹಳ್ಳಿ ಮತ್ತು ಹೂವಿನಹಡಗಲಿ ತಾಲ್ಲೂಕುಗಳಲ್ಲಿ "ಬಸಾ ಪುರ" ಗ್ರಾಮಗಳು ಮತ್ತು ಬಸವ ದೇವಾಲಯಗಳು ಹೆಚ್ಚಾಗಿ ಕಂಡು ಬರುವುವು. ಇವೆಲ್ಲಾ ಹರಪನಹಳ್ಳಿ ಪಾಳೇಗಾರರ ಕಾಲದ ಲ್ಲುಂಟಾದವು. ಉದಾಹರಣೆ:-

(1) ನಿಟ್ಟೂರು ಬಸಾಪುರ (2) ಡಗ್ಗಿ ಬಸಾಪುರ (3) ತುರುಕರ ಬಸಾಪುರ (4) ಐಗಳ ಬಸಾಪುರ (5) ಹರಿವಿ ಬಸಾಪುರ, (6) ನಾಗತಿಬಸಾಪುರ. ಹರಪನಹ ಳ್ಳಿಯಲ್ಲಿ ಎರಡು ಬಸವ ಕಟ್ಟೆಗಳನ್ನು ಅಗೆದಾಗ ಅವು ಗಳ ತಳದಲ್ಲಿ ಮಾನವನ ಒಂದೊಂದು ಅಸ್ಥಿಪಂಜರ ದೊರಕಿದವು.

### ಕುರುಬರ ಓಣಿಯ ಅರಸು ಮಠ

ಪೂರ್ವ ಕಾಲದಲ್ಲಿ ಇದು ಒಂದು ಚಾಲುಕ್ಯರ ದೇವಾಲಯವಿರಬೇಕು. ಈ ಭಾಗದದಲ್ಲಿ ಕಂಡು ಬರುವ ಇತರ ಕಲ್ಲೇಶ್ವರ ದೇವಾಲಯಗಳಂತೆ ಇದೂ ಒಂದಾಗಿರಬೇಕು. ಈಶ್ವರ ದೇವರನ್ನು ತೆಗೆದು ಅದರ ತಳದಲ್ಲಿ ವೀರಬಸಪ್ಪನಾಯಕನ ಶವವನ್ನು ಹೂತು ಅದರ ಮೇಲೆ ದೊಡ್ಡದಾದ ಬಸವನ ಮೂರ್ತಿಯನ್ನು ಸ್ಥಾಪಿಸಿರುವರು. ಅಂದಿನಿಂದ ಈ ದೇವಾಲಯಕ್ಕೆ ಅರ ಸಿನ ಮಠವೆಂದು ಕರೆದಿರುವರು. ಈ ಮಠದ ಮುಂದೆ ಎತ್ತರದಲ್ಲಿ ಕಲ್ಲು ಮಣ್ಣುಗಳಿಂದ ಕೂಡಿದ ಗೋಸಾವಿ ಗುಡ್ಡಕ್ಕೆ ಹತ್ತಿಕೊಂಡ ಒಂದು ಕಣಿವೆ ಸಾಲು ಇದೆ. ಅಲ್ಲಿ ಒಂದು ಬಸವನ ದೇವಾಲಯವಿ ರುವುದು. ಅದು ದಕ್ಷಿಣಕ್ಕೆ ಮುಖವಾಗಿದೆ. ಅದಕ್ಕೆ ತೇರು ಬಸವಣ್ಣನೆಂದು ಈಗಲೂ ಕರೆಯುವರು. ತೇರು ಬಸವಣ್ಣನ ಸ್ಥಳದಿಂದ ಈ ಅರಸಿನ ಮಠದವರೆಗೂ ಪೂರ್ವಕಾಲದಲ್ಲಿ ತೇರು ಎಳೆದು ಜಾತ್ರೆ ಮಾಡುತ್ತಿದ್ದು ದಾಗಿ ಹಿರಿಯರು ಹೇಳುವರು. ಶಾಲಿವಾಹನ ಶಕ 1664 ರಲ್ಲಿ ಹರಪನಹಳ್ಳಿಯನ್ನು ಆಳಿದ ವೀರಬಸಪ್ಪನಾಯಕನ ಸಮಾಧಿಯೇ ಈ ಅರಸಿನ ಮಠ. ಪಾಳೇಗಾರರಲ್ಲಿ ಸಂಬಂಧಿಕರು, ಸಾಮಾನ್ಯರು, ಮಡಿದರೆ ಅವರ ಶವಗ ಳನ್ನು ಕೋಟೆಯಹೊರಗೆ ಹುಗಿದು ಅವುಗಳಿಗೆ ಕಲ್ಲಿನ ಕಟ್ಟೆಗಳನ್ನು ಕಟ್ಟಿಸಿ ಅವುಗಳ ಮೇಲೆ ಬಸವನ ಕಲ್ಲಿನ ಮೂರ್ತಿಯನ್ನು ಸ್ಥಾಪಿಸುತ್ತಿದ್ದರು. ಪಾಳೇಗಾರರಲ್ಲಿ ಪ್ರಮುಖ ಅರಸರು ಮಡಿದರೆ ಅವರ ಶವಗಳನ್ನು ಇದೇ ರೀತಿ ಕೋಟೆಯ ಹೊರಗಡೆ ಒಂದು ಸ್ಥಳದಲ್ಲಿ ಹೂತು ಮೇಲೆ ಕಲ್ಲಿನ ಕಟ್ಟೆಯನ್ನು ನಿರ್ಮಿಸಿ ಅದರಲ್ಲಿ ಕಲ್ಲಿನ ಬಸವನ ಮೂರ್ತಿಯನ್ನು ಸ್ಥಾಪಿಸಿ ಅದಕ್ಕೆ ದೇವಾಲಯವನ್ನು ನಿರ್ಮಿಸಿ ಪಕ್ಕದಲ್ಲಿ ಒಂದು ಪಾವ ಟಿಕೆ, ಬಾವಿ ಮತ್ತು ಹೂತೋಟಗಳನ್ನು ಸ್ಥಾಪಿಸುತ್ತಿ ದ್ದರು. ಜನರು ಇದಕ್ಕೆ ಅರಸರ ಮಠವೆಂದು ಕರೆಯು ತ್ತಿದ್ದರು. (ಈ ವಿಚಾರ ಅದರ ಬಳಿ ಇರುವ ಶಾಸನ ದಿಂದ ಗೊತ್ತಾಗುವುದು)

ಈ ಸಂಪ್ರದಾಯ ಯಾವಾಗ ಬಂದಿತು? ಇದನ್ನು ಆಚರಣೆಗೆ ತಂದವರಾರು? ಹರಪನಹಳ್ಳಿ ಪಾಳೇಗಾರ ರಲ್ಲಿ ಕಂಡು ಬರುವ ಬೇಡನಾಯಕ ಮೊದಲ ಬಸ ವಂತನಾಯಕನು ವೀರಶೈವ ಧರ್ಮವನ್ನು ಸ್ವೀಕರಿಸಿ ದನು. ಇವನ ಕಾಲ ಕ್ರಿ.ಶ. 1708 ಇವನೇ ಈ ಸಂಪ್ರದಾಯಕ್ಕೆ ಮೂಲ ಪುರುಷನಿರಬೇಕು. ಇವರ ಮೊದಲ ಹೆಸರು ಬಸವಂತನಾಯಕ. ವೀರಶೈವ ಧರ್ಮವನ್ನು ಸ್ವೀಕರಿಸಿದ ಮೇಲೆ ಕೊಟ್ರಬಸಪ್ಪ ನಾಯಕನೆಂದು ಹೆಸರಿಟ್ಟುಕೊಂಡನು. ಕೊಟ್ಟೂರು ಶ್ರೀ ಗುರುಬಸವೇಶ್ವರ ಭಕ್ತನಾದನು. ಈ ನಾಯಕನಿಂದ ಮುಂದೆ ಬಂದ ನಾಯಕರ ಹೆಸರುಗಳು ಹೆಚ್ಚಾಗಿ "ಬಸವ" ಎಂಬುದಾಗಿ ಕರೆಯಲ್ಪಟ್ಟುದ್ದಾಗಿ ಕಂಡು ಬರುವುದು.

ಎಂ.ಡಿ. ಶ್ರೀನಿವಾಸ

# ಮಧುಗಿರಿ ಇತಿಹಾಸದಲ್ಲಿ ಶಿವ ಶರಣೆಯರು

ಕನಕ – ಪುರಂದರು ತಮ್ಮ ಗೀತಾರಾಧನೆಯ ಮೂಲಕ ಭಗವಂತನ ಸಾಮಿಪ್ಯ ಸಾಧಿಸಿಲು ಯತ್ನಸಿಸಿದರೆ,ಬಸವಣ್ಣ – ಅಲ್ಲಮರು ಕಾಯಕದ ಮೂಲಕ ಕೈಲಾಸಕ್ಕೆ ಪ್ರಯತ್ನಿಸಿ ಉಳಿದವರಿಗೆ ಮಾರ್ಗದರ್ಶಿಗಳಾದರು. ಇದೇ ಹಾದಿ ತುಳಿದ ಕೆಲವರೆಂದರೆ ಮಧುಗಿರಿಯ ಬಿಜ್ಜವರ ಶಿವಶರಣೆ ಅಮ್ಮವ್ವೆ, ಗುರು ನಂಜಮ್ಮ, ಗುರಮ್ಮ, ಜಿರಲೆ ಮಲ್ಲಮ್ಮ, ಮುಂತಾದವರು. ಇವರೆಲ್ಲರ ಪರಿಚಯದ ಕಿರುಚಿತ್ರ.

## ಅಮ್ಮವ್ವೆ

ಮಧುಗಿರಿಯ ವಿಸ್ತರಣದಂತಿರುವ ಬಿಜ್ಜವರದಲ್ಲಿದ್ದ ಶಂಕರ ಮತ್ತು ಭಾಗೀರಥಿ ಎಂಬ ಶಿವಭಕ್ತರ ಕುವರಿ ಅಮ್ಮವ್ವೆ. ಸಹಜವಾಗಿಯೇ ಈ ಮಗುವೂ ಶಿವಭಕ್ತಳಾಗಿ ಬೆಳೆಯಿತು. ಕುಬ್ಜೆಯಾದ ಇವಳಿಗೆ ಪ್ರಾಪ್ತ ವಯಸ್ಸಿನಲ್ಲಿ ವಿವಾಹ ಮಾಡಲೆತ್ನಿಸಿದ ತಂದೆ–ತಾಯಿಗಳು ಈಗಿನ ಸಿದ್ಧಾಪುರ ಗಿಡ್ಡೇನಹಳ್ಳಿಯ ಮಧ್ಯೆ ವಾಸಿಸುತ್ತಿದ್ದ ವೀರಶೈವ ಮನೆತನದ ಅಮ್ಮವ್ವೆಯ ಸೋದರತ್ತೆಯ ಮಗ ಬಾಳಯ್ಯನಿಗೆ ಕೊಟ್ಟು ವಿವಾಹ ಪೂರೈಸಿದರು. ದುರ್ದೈವದಿಂದ ವಿವಾಹ ವಿಧಿ ಮುಗಿದ ತಿಂಗಳೊಳಗೆ ಪತಿ ವಿಧಿ ವಶನಾದ, ಇದರ ಹಿಂದೆ ತಾಯಿ–ತಂದೆಯರು. ಇನ್ನೇನು ಪ್ರಪಂಚವೇ ಶೂನ್ಯ ಎಂಬಂತಾದಾಗ ಕೈಹಿಡಿದು ನಡೆಸಿದ್ದು ಅಮ್ಮವ್ವೆ ಯಲ್ಲಿದ್ದ ಶಿವಭಕ್ತಿ. ಅಲ್ಲಿನ ಶಿವ ದೇವಾಲಯಗಳಲ್ಲಿ ಶಿವ ಪುರಾಣ ಕೇಳಲು ಹೋಗತೊಡಗಿದಳು. ಪುರಾಣಕಾರರು ಶಿವನ ಕಷ್ಟಗಳನ್ನು ಮನ ಕರಗುವಂತೆ ವರ್ಣಿಸುತ್ತಿದ್ದರೆ ಮುಗ್ಧೆ ಅಮ್ಮವ್ವೆ ಇದನ್ನು ಕೇಳಿ ಶಿವನನ್ನು ಮಗುವಿನಂತೆ ಕಾಪಾಡಬೇಕು ಎಂದು ಬಯಸುತ್ತಿದ್ದಳು. ಬಂದು ರಾತ್ರಿ ಶಿವನು ಸ್ವಪ್ನದಲ್ಲಿ ಬಂದು "ಅಮ್ಮವ್ವೆ ನಿನ್ನ ನಿಷ್ಕಲ್ಮಶ ಭಕ್ತಿಗೆ ಮೆಚ್ಚಿರುವೆ ನಿನಗೆ ಮಗುವಾಗಿನಾನು ದೊರೆಯುವೆ" ಎಂದಂತಾಯಿತು. ಹಾಗೆಯೇ ಆ ಸ್ವಪ್ನ ಸೂಚನೆಯನುಗುಣವಾಗಿ ಈಗಿನ ಸಿದ್ಧಾಪುರ ಮತ್ತು ಬಸವನ ಹಳ್ಳಿಯ ಮಧ್ಯೆ ಇದ್ದ ಹಳ್ಳದ ಪಕ್ಕದ ಕಾಡಿನಲ್ಲಿ ಅವಳ ಪೂರ್ವಜನ್ಮದ ಪುಣ್ಯದ ಸಾಕಾರ ರೂಪವಾಗಿ ಆ ಮಗು ಸಿಕ್ಕಿತು. ಅದನ್ನು ಸಂಭ್ರಮದಿಂದ ಮನೆಗೆ ತಂದು 'ನಾಗೇಶ' ಎಂಬ ಹೆಸರಿಟ್ಟು ಅಕ್ಕರೆಯಿಂದ ಲಾಲಿಸಿದಳು. ದಿನ ಕಳೆದಂತೆ ನಾಗೇಶ ಪೂರ್ಣಿಮೆಯ ಚಂದ್ರನಂತೆ ವೃದ್ಧಸುತ್ತಿದ್ದಾಗಲೇ ವ್ಯಾಧಿಗ್ರಸ್ತನಾದ. ವೈದ್ಯರೂ ಕೈ ಚೆಲ್ಲಿದರು. ಹತಾಶಳಾದ ಅಮ್ಮವ್ವೆ ಶಿವನಿಗೆ ಶಿರವನ್ನೇ ತಂದು ಅರ್ಪಿಸಲಣಿಯಾದಾಗ ಶಿವ ಪ್ರತ್ಯಕ್ಷನಾದ. ಗುರುವಿನ ಅಣತಿ ಇಲ್ಲದೆ ಶಿವನೊಡನೆ ಕೈಲಾಸಕ್ಕೆ ಬರಲು ಒಪ್ಪದ ಅಮ್ಮವ್ವೆ ಕೆಲವು ಕಾಲದ ನಂತರ ಇಷ್ಟಲಿಂಗದ ಮೂಲಕ ಶಿವಸಾನ್ನಿಧ್ಯ ಪಡೆದಳು. ಹೀಗೆ ಶಿವಭಕ್ತಳಾದ ಓರ್ವ ಸಾಧ್ವಿಯ ಜೀವನ ಮುಗಿಯಿತು.

ಅಮ್ಮವ್ವೆ ಶಿವನನ್ನು ಪ್ರತ್ಯಕ್ಷ ಮಾಡಿಕೊಂಡಳೆಂದು ಹೇಳಲಾದ ಸ್ಥಳ ಸಿದ್ಧಾಪುರ ಮತ್ತು ಬಸವನ ಹಳ್ಳಿಯ ಮಧ್ಯೆ ಇದೆ ಎಂದು ನಂಬುತ್ತಾರೆ. ಶಿವನು ಮಗುವಾಗಿ ಸಿಕ್ಕಿದ್ದನೆನ್ನಲಾದ ಸ್ಥಳದಲ್ಲಿ ಅಮ್ಮವ್ವೆಪೂಜಿಸುತ್ತಿದ್ದ ಲಿಂಗವಿದೆ. ಇದಕ್ಕೆ ಇಮ್ಮಡಿ ಚಿಕ್ಕಪ್ಪ ಗೌಡರು ಪುರವರದ ಸೋಣಬೇಶ್ವರ ದೇವಾಲಯದ ಮಾದರಿಯಲ್ಲಿ ಕಟ್ಟಿಸಿದ ದೇವಾಲಯವಿದೆ. ಎದುರಿಗೆ ಅಮ್ಮವ್ವೆಯ ವಿಗ್ರಹವಿದೆ. ಇಲ್ಲಿ ಹರಿಯುವ ಹಳ್ಳ " ಅಮ್ಮವ್ವೆ ಹಳ್ಳ " ಎಂದೇ ಹೆಸರಾಗಿದೆ.

## ಗುರಮ್ಮ

ಮಧುಗಿರಿಯ ಪುಣ್ಯಕ್ಷೇತ್ರಗಳಲ್ಲಿ ಗುರಮ್ಮನ ಮಠ ಒಂದು. ಮಧುಗಿರಿಯ ಮಹಾ ಪ್ರಭುಗಳಲ್ಲಿ ಸೈನ್ಯಾಧಿಕಾರಿ ಆಗಿದ್ದ ಗುರಪ್ಪ ಮತ್ತು ಆತನ ಮಡದಿ ಪಟಾಲದಮ್ಮನಿಗೆ ಗುರು ಸಿದ್ದೇಶ್ವರರ ಆಶೀರ್ವಾದದಿಂದ ಗುರಮ್ಮ ಎಂಬ ಮಗಳು ಜನಿಸಿದಳು. ಅವಳಿಗೆ ಏಳು ವರ್ಷ ಕಳೆದಾಗ ಶತ್ರುಗಳು ಅವಳ ತಂದೆಯನ್ನು ಯುದ್ಧದಲ್ಲಿ ಕೊಂದು ಹಾಕಿದರು. ಮುಂದೆ ಗುರಮ್ಮನು ಗುರುವಿನ ಅಣತಿಯಂತೆ ತಮ್ಮಲ್ಲಿದ್ದ ಹಣವನ್ನೆಲ್ಲಾ ಸತ್ಕಾರ್ಯಕ್ಕೆ ಬಳಸುತ್ತಾ, ಶಿವಧ್ಯಾನ ಮಾಡುತ್ತಾ, ಮಧುಗಿರಿ ಬೆಟ್ಟದ ಬಳಿಯಲ್ಲಿ ವಾಸಿಸಿದಳು. ಜೀವನದಲ್ಲಿ ಮದುವೆಯ ಯೋಗವನ್ನು ತೊರೆದು ಹಾಕಿ ಶಿವನಲ್ಲಿ ಭಕ್ತಿಯನ್ನಿಟ್ಟು ಬದುಕಲು ಗುರಮ್ಮನು ನಿಶ್ಚಯಿಸಿದಳು. ಒಂದು ಗೋವಿನ ಕಟ್ಟೆಯನ್ನು ಕಟ್ಟಿಸಿದಳು. ಒಂದು ಮಠವನ್ನು ಸಹ

ನಿರ್ಮಿಸಿ ಶಿವಲಿಂಗವನ್ನು ಪ್ರತಿಷ್ಠಾಪಿಸಿದಳು. ಕಾಲ ಚಕ್ರ ಉರುಳಿದಂತೆ ಗುರಮ್ಮನು ಒಂದು ದಿನ ಶಿವ ಪಾದವನ್ನು ಸೇರಿದಳು. ಇಂದು ಸಹ ಮಠವು ಶಿಥಿಲವಾಗದೆ ಉಳಿದಿದೆ.

## ಗುರು ನಂಜಮ್ಮ

ಮಧುಗಿರಿ ತಾಲ್ಲೂಕಿಗೆ ಸೇರಿದ ಪೂಜಾರ್ ಹಳ್ಳಿಯಲ್ಲಿ, ಶಿವಭಕ್ತರಾದ ದಂಪತಿಗಳಿದ್ದರು. ಶ್ರೀ ನಂಜುಂಡೇಶ್ವರನ ಕೃಪೆಯಿಂದ ಒಂದು ಹೆಣ್ಣು ಮಗು ಜನನವಾಯಿತು. ಅದಕ್ಕೆ ನಂಜಮ್ಮನೆಂದು ಹೆಸರಿಟ್ಟರು. ಬಾಲ್ಯದಿಂದಲೂ ಈ ತರಳೆ ಶಿವನ ಚಿಂತನೆಯಲ್ಲಿಯೇ ತಲ್ಲೀನಳಾಗಿರುತ್ತಿದ್ದಳು. ಮದುವೆಯ ಬಂಧನಕ್ಕೆ ಒಳಪಡದೆ ಮನೆಯನ್ನೇ ತೊರೆದು ಮಧುಗಿರಿ ಬೋಳಿ ಬೆಟ್ಟದ ಬುಡದಲ್ಲಿರುವ ಶ್ರೀ ಸಿದ್ಧೇಶ್ವರ ಸ್ವಾಮಿಗಳ ತಾಣದಲ್ಲಿ ಆಶ್ರಯ ಪಡೆದು ವೈರಾಗ್ಯ ಚಿಂತನೆಯನ್ನು ಇನ್ನಷ್ಟು ಬೆಳೆಸಿಕೊಂಡಳು. ಆಕೆಯ ಜೀವಿತಾವಧಿಯಲ್ಲಿ ಅನೇಕ ಪವಾಡಗಳೇ ನಡೆದವು. ಕಳ್ಳರನ್ನು ಓಡಿಸಿದ್ದು, ವಿವಾಹ ಭೋಜನವನ್ನೆಲ್ಲಾ ಅಗೋಚರವಾಗುವಂತೆ ಮಾಡಿದ್ದು, ಒಂದೇ ದಿನದಲ್ಲಿ ಬಾವಿ ತೋಡಿದ್ದು, ಇಷ್ಟಲ್ಲದೆ ಹರಿಜನೋದ್ಧಾರ ಇವೇ ಮೊದಲಾದ ಮಾನವೀಯ ಕೆಲಗಳನ್ನು ಮಾಡಿ ಮುಗಿಸಿದಳು. ಅಂತ್ಯ ಕಾಲದಲ್ಲಿಶ್ರೀ ಸಿದ್ಧೇಶ್ವರರ ಅಣತಿಯಂತೆ ದಾಸೋಹ ಕಾರ್ಯ ಕೈಗೊಂಡಳು. ಸಿದ್ಧೇಶ್ವರರು ಶಿವ ಸಾಯುಜ್ಯ ಸೇರಿದ ಮೇಲೆ ಅವರ ಸಮಾಧಿಯನ್ನು ಮಧುಗಿರಿಗೆ ಪೂರ್ವಕ್ಕಿರುವ ರಸ್ತೆ ಬದಿಯಲ್ಲಿ ಇರುವ ಸ್ಥಳದಲ್ಲಿಸಮಾಧಿ ಮಾಡಿದ್ದಾರೆ. ಈಕೆಯ ಸಮಾಧಿಯು ಗುರುಗಳ ಸಮಾಧಿ ಪಕ್ಕದಲ್ಲೇ ಇರುವುದು. ನಂಜಮ್ಮನ ಅಭೀಪ್ಸೆಯ ಮೇರೆಗೆ ಬಸವಣ್ಣನವರಂತೆ ಈಕೆಯು ಸಮಾಜ ಸುಧಾರಣೆಗೆ ಪ್ರಯತ್ನ ಪಟ್ಟವಳು. ವಿಶ್ವಮಾನವಳಾಗುವ ಗುಣಗಳನ್ನು ಅಂದೇ ಮೈಗೂಡಿಸಿಕೊಂಡಿದ್ದಳು. ಇಂದು ಸಹ ಗುರು–ಶಿಷ್ಯೆಯರ ಸಮಾಧಿಗಳಿರುವ ಮಠವನ್ನು ಕಾಣಬಹುದು.

## ಜಿರಲೆ ಮಲ್ಲಮ್ಮ

'ಎಲ್ಲರಲ್ಲೂ ಶಿವನಿರುವನು ಯಾರಿಗರ್ಪಿಸಿದರೂ ಶಿವನಿಗೆ ತಲುಪುತ್ತದೆ' ಎಂಬುದೇ ಶಿವಶರಣೆ ಮಲ್ಲಮ್ಮನ ನಂಬಿಕೆ. ಹರಿಹರರಲ್ಲಿ ಭೇದವ ಕಾಣದೆ ಹರಿಯಲ್ಲೂ ಹರನನ್ನೇ ಕಂಡವಳು. ಈಕೆ ಅತ್ಯಂತ ಮುಗ್ಧೆ, ಬೆಣ್ಣೆಯಂತಹ ಮೃದು ಸ್ವಭಾವ. ಬೆಣ್ಣೆ ಮಾತು ಶ್ರೀ ಕೃಷ್ಣನ ದೇವಾಲಯವನ್ನು ಕಟ್ಟಿಸಿದಳು. ಮಕ್ಕಳು ಬೆಣ್ಣೆ ಕೇಳಿದರೆ ಯಾವಾಗಲೂ ಅದಕ್ಕೆ ಜಿರಲೆ ಬಿದ್ದಿದೆ ಎಂದು ಹೇಳಿ ಮಕ್ಕಳಿಗೆ ಹಾಕುತ್ತಿರಲಿಲ್ಲ. ಸದಾ ಹೀಗೆ ಹೇಳುತ್ತಿದ್ದರಿಂದ ಮಲ್ಲಮ್ಮನನ್ನು 'ಜಿರಲೆ ಮಲ್ಲಮ್ಮ' ನೆಂದೇ ಕರೆಯುತ್ತಿದ್ದರು.

ವೀರಶೈವ ಧರ್ಮ ದೀಕ್ಷಕರಾದ ನೊಳಂಬ ರಾಜರು ಬಿಜವರವನ್ನು ರಾಜಧಾನಿಯನ್ನಾಗಿಸಿಕೊಂಡು ಪ್ರೋತ್ಸಾಹಿಸಿದ ಹಿನ್ನೆಲೆಯಲ್ಲಿ ಶಿವಶರಣೆಯರು ಮಾನವೀಯ ಸತ್ಕಾರ್ಯಗಳನ್ನು ಮಾಡಿ ಭಕ್ತಿಯ ಬೀಜವನ್ನು ಬಿತ್ತಲು ಕಾರಣೀ ಭೂತರಾದರು.

ಮಧುಗಿರಿ ಶಿವಶರಣೆಯರ ಬೀಡು. ನೊಳಂಬ ರಾಜರು ಆಳಿದ ಪ್ರಸಿದ್ಧ ಸ್ಥಳ. ವೀರಶೈವ ಸಂತರುಗಳಾದ ಕೋಲು ಶಾಂತಪ್ಪ ಸ್ವಾಮಿ, ಮುರಾಹರಿ ಸ್ವಾಮಿ, ಪುಟ್ಟಪ್ಪಯ್ಯ ಸ್ವಾಮಿ, ಯೋಗಿ ಬಾಳಾರಾದ್ಯರು ಮತ್ತು ಸಿದ್ಧೇಶ್ವರ ಗದ್ದುಗೆಗಳಿರುವ ಪುಣ್ಯಕ್ಷೇತ್ರ ಎಂಬ ಹೆಗ್ಗಳಿಕೆಗೆ ಪಾತ್ರವಾಗಿರುವುದು .ವಿಜಯನಗರದ ಸಾಮ್ರಾಜ್ಯದ ಉದಯದಿಂದ ಕನ್ನಡ ನಾಡಿಗೂ ವೀರಶೈವ ಧರ್ಮಕ್ಕೂ ಅಪಾರ ಪ್ರಯೋಜನವಾಗಿದೆ ಎಂಬುದು ಗಮನಾರ್ಹವಾದ ಸಂಗತಿ.

ಎಂ.ಜಿ. ನಾಗರಾಜ

# ಕೊಡಗು ಜಿಲ್ಲೆಯ ವೀರಶೈವ ಮಠಗಳು

ಕೊಡಗಿನಲ್ಲಿ ಹತ್ತನೆಯ ಶತಮಾನದವರೆಗೂ ಆಳಿದ ಗಂಗರ ಕಾಲದಲ್ಲಿ ಜೈನಧರ್ಮದ ಪ್ರಭಾವ ಕಾಣುತ್ತದೆ. ಗಂಗರ ಮಾಂಡಲಿಕರಾಗಿ ಕೊಡಗಿನ ಭಾಗ ಗಳನ್ನು ಆಳುತ್ತಿದ್ದ ಚಂಗಾಳ್ವರೂ ಆ ಶತಮಾನದಲ್ಲಿ ಜೈನರೇ ಆಗಿದ್ದರು. ಬಹುಶಃ ಚೋಳರ ಒಂದಿಗೆಯೆ ಕೊಡಗಿಗೆ ಕಾಲಿಟ್ಟ ಕೊಂಗಾಳ್ವರು ಜೈನರಾಗಿದ್ದರೂ. ಮುಂದಿನ ಅವರ ಕೆಲವು ಅರಸರು ವೀರಶೈವದ ಪ್ರಭಾವಕ್ಕೆ ಒಳಗಾದರು ಎಂದರೂ[1] ಆ ಪ್ರಭಾವದಲ್ಲಿ ಚಂಗಾಳ್ವರಂತೆ ಉಳಿದರು ಎನ್ನುವಂತಿಲ್ಲ. ಕ್ರಿ.ಶ. ೧೦೦೪ ರಲ್ಲಿ ಚಂಗಾಳ್ವರು ಕೊಡಗಿನ ಪೂರ್ವಭಾಗದಲ್ಲಿ ಆಳುತ್ತಿದ್ದ ಸಮಯದಲ್ಲಿ ರಾಜೇಂದ್ರ ಚೋಳನನಿಂದ ಪನಸೋಗೆಯುದ್ಧದಲ್ಲಿ ಪರಾಜಿತರಾದರು. ಈ ಹೊತ್ತಿಗೆ ಚೋಳರಲ್ಲಿ ವೀರಶೈವದ ಪ್ರಭಾವಕ್ಕೆ ಒಳಗಾದ ಕೆಲವರು ಇದ್ದು ತಮ್ಮ ದೀಕ್ಷಾ ಗುರುಗಳನ್ನು ಅನುಸರಿಸಿ ವೀರಭದ್ರನಗುಡಿಗಳನ್ನು, ಮಠಗಳನ್ನು ನಿರ್ಮಿಸಿದಂತೆ ತೋರುತ್ತದೆ.[2] ಕೊಡಗಿನ ಕಾವೇರಿಯ ಪೂರ್ವ ದಂಡೆಯಲ್ಲಿ 'ಚೋಳಪ್ರತಿಷ್ಠಾ ವೀರಭದ್ರ'ನ ಸ್ಥಾಪನೆಗೆ,[3] ಬಹುಶಃ ಕೊಡಗಿನ ಬಿಳುಗುಂದ ೧೧ನೇ ಶತಮಾನದ ಹೊಸಶಾಸನದಲ್ಲಿ ಉಲ್ಲೇಖಿತನಾದ ಗೋಪತಿ[4] ಅಂದರೆ ಶ್ರೀ ಶೈಲ ಜಗದ್ಗುರು ಚಂದ್ರಗುಂಡಸಿವಾಚಾರ್ಯರ ಪ್ರಭಾವವೆ ಕಾರಣ ವಾಗಿರುವಂತಿದೆ. ಅಲ್ಲದೆ ಕಂಚಿಯ ಈ ಹೈಪಯ ವಂಶದ ರಾಜೇಂದ್ರ ಚೋಳನು (ಕ್ರಿ.ಶ. ೧೦೦೪ -೪೨) ಶ್ರೀ ಶೈಲ ಜಗದ್ಗುರು ಚಂದ್ರಗುಂಡ ಶಿವಾಚಾರ್ಯರ ಅನುಗ್ರಹಕ್ಕೆ ಪಾತ್ರನಾದವ, ಗಂಗರನ್ನೂ ಸೋಲಿಸಿದವ ಹಾಗೂ ನಂದಿಬೆಟ್ಟದಲ್ಲಿನ ಜೈನ ಬಸದಿಗಳನ್ನು ನಂದೀಶ್ವರ ದೇಗುಲಗಳನ್ನಾಗಿ ಮಾರ್ಪಡಿಸಿದ್ದೂ ಈ ಸಮಯದಲ್ಲಿಯೇ ಎಂದು ತೋರುತ್ತದೆ[5]. ಈ ಹಿನ್ನೆಲೆಯಲ್ಲಿ ಕೊಡಗಿನಲ್ಲಿದ್ದ ಚಂಗಾಳ್ವರಸರ ಶಾಖೆ ವೀರಶೈವವನ್ನು ೧೧ನೆಯ ಶತಮಾದಲ್ಲಿ ಅಪ್ಪಿರುವ ಅಥವಾ ಅದರ ಪ್ರಭಾವಕ್ಕೆ ಒಳಗಾದ ಸಾಧ್ಯತೆಯನ್ನು ಕಾಣಬಹುದು. ಹಾಗಿದ್ದರೆ ಅರಸರಿಂದ ತಮ್ಮ ಧಾರ್ಮಿಕ ಆಚರಣೆಗಳಿಗಾಗಿ ವೀರಶೈವ ಧರ್ಮದ ಸಹಜ ಅಂಗವಾದ ಮಠಗಳ ಅಸ್ತಿತ್ವಕ್ಕೆ ಹನ್ನೊಂದನೆಯ ಶತಮಾನದಲ್ಲಿ ನಾಂದಿ ಬಿಟ್ಟಿತು ಎನ್ನಬೇಕು. ಕೊಡಗಿನ ಕಾವೇರಿಯ ಈ ಪೂರ್ವ ದಂಡೆಯಲ್ಲಿ (ಈಗಿನ ನಂಜರಾಯಪಟ್ಟಣ ಪ್ರದೇಶ) ಬಿದ್ದ ನಾಂದಿ ಕಾಲಾನಂತರದಲ್ಲಿ ಇಲ್ಲಿ ಗುರುಸ್ಥಲದ, ವಿರಕ್ತಸಂಪ್ರದಾಯದ ಹಾಗೂ ಸಂಸಾರಿ ಮಠಗಳಿಗೆ ಅವಕಾಶ ಮಾಡಿಕೊಟ್ಟಿರಬೇಕು. ಅಂದರೆ ಹಾಲೇರಿ ಅರಸರಿಗೆ ಮುನ್ನವೆ ಕೊಡಗಿನ ಕೆಲವರಸರು ಅನುಸರಿಸಿ ಧರ್ಮ, ರೂಪಿಸಿದ ಮಠಗಳ ಬಗ್ಗೆ ಈ ಅಂಶಗಳು ಪೂರಕವಾಗುತ್ತವೆ. ಕೊಡಗಿನ ಅನೇಕ ಶಾಸನಗಳು ಇದಕ್ಕೆ ಪೋಷಕ ಸಾಕ್ಷಿಗಳಾಗಿವೆ.

ಕ್ರಿ.ಶ. ೧೧೯೫ರ ಉತ್ತರ ಕೊಡಗಿನ ಯಡವೂರು ಶಾಸನವು ಹಾನುಗಲ್ಲು ಕದಂಬ ವಂಶದದುದ್ದರಸನ ಇಲ್ಲಿನ ಆಳ್ವಿಕೆಯನ್ನೂ ಸೂಚಿಸುತ್ತೆ. ಅವನು ಮಾಹೇಶ್ವರ ಸಂಪ್ರದಾಯಕ್ಕೆ ಸೇರಿದ್ದ ಶಿವಭಕ್ತನೆಂದು ಸೂಚಿಸುವಂತಿದೆ.[6] ಅಂದರೆ ವೀರಶೈವ ಪ್ರಭಾವಿತ ಅರಸು ಇಲ್ಲಿದ್ದ ಬಗ್ಗೆ ಅದು ಪುರಾವೆ ಇರಬಹುದು.

ಚೋಳರ ಅಧೀನರಾದ ಮೇಲೆ ಚಂಗಾಳ್ವರು ಕ್ರಮೇಣ ವೀರಶೈವದ ಪ್ರಭಾವಕ್ಕೆ ಒಳಗಾಗಿ ಬೆಟ್ಟದ ಪುರದ ಅನ್ನದಾನಿ ಮಲ್ಲಿಕಾರ್ಜುನ ದೇವರನ್ನು ತಮ್ಮ ಕುಲದೇವರನ್ನಾಗಿ ಅಂಗೀಕರಿಸಿದಂತಿದೆ. ಚಾರಿತ್ರಿಕವಾಗಿ ೧೦ನೇ ಶತಮಾನದಿಂದಲೇ ಪ್ರಸಿದ್ಧಿ ಪಡೆದ ಆ ಬೆಟ್ಟ, ಶ್ರೀಗಿರಿ ಎಂದು ಹೆಸರಾಗಿ ಕುಲೋತ್ತುಂಗ ಚೋಳನ ಶಾಸನದಲ್ಲಿ ಪ್ರಸ್ತಾಪನೆಗೊಂಡಿದೆ. ಚಂಗಾಳ್ವರು ಬೆಟ್ಟದ ಪುರದ ಮೂಲಮಠದ ಅಥವಾ ಶ್ರೀ ಶೈಲ ಸಂಪ್ರದಾಯದ ಪೀಠದ ಶಿಷ್ಯರಾಗಿ, ವೀರಶೈವ ದೀಕ್ಷೆ ಪಡೆದ ಬಗ್ಗೆ ಅವರ ರಾಜವಂಶಾವಳಿಯಲ್ಲಿ ಬರುವ ಹೆಸರುಗಳು ಸೂಚನೆ ನೀಡುವಂತಿದೆ. ಅವರು ಕೊಡಗಿನಲ್ಲಿ ಆಳುತ್ತಿದ್ದ ಭಾಗದಲ್ಲಿದ್ದ ಅಮ್ಮತ್ತಿ ನಾಡಿನಲ್ಲಿ, ಬೆಟ್ಟದಪುರದ ಮಠದ ಶಾಖಾ ಮಠಗಳ ಅಸ್ತಿತ್ವ ಇದನ್ನು ಪೋಷಿಸುವಂತಿದೆ. ಪೂರ್ವಚಂಗಾಳ್ವರ ಬದುಕಿನಲ್ಲಿ ನಡೆದ ಘಟನೆ, ನಂತರದ ಚಂಗಾಳ್ವರಲ್ಲಿ (೧೫ನೇ ಶತಮಾನದ) ಮತ್ತೂ ಘಟ್ಟಿಗೊಂಡು ವೀರಶೈವ ಮಠಗಳು ಸಾಕಷ್ಟು ಸಂಖ್ಯೆಯಲ್ಲಿ

ವೃದ್ಧಿಗೊಂಡಿರಬೇಕು. ಬಹುಶಃ ಈ ಹಿನ್ನೆಲೆಯಿಂದಾಗಿ ಅಬ್ಬಿಮಠದ ಬಳಿಯ ಮಲ್ಲಿಕಾರ್ಜುನಗುಡಿಯ ಅಸ್ತಿತ್ವ, ಮಲ್ಲಪ್ಪನಾಯಕನ ಆಳ್ವಿಕೆ ಕ್ರಿ.ಶ. ೧೫೬೬ರ ಅಲ್ಲಿನ ಶಾಸನದಿಂದ ತಿಳಿಯುತ್ತದೆ. ಅಂದರೆ ಅಬ್ಬಿ ಮಠದ ನೆಲೆಯಲ್ಲಿ ಮೊದಲಿಗೆ ಗುರುಸ್ಥಲದ ಮಠವೊಂದಿತ್ತು ಎಂಬ ಸೂಚನೆ ದೊರಕುತ್ತದೆ.

ಕ್ರಿ.ಶ. ೧೧೭೫ರ ನಂದಿಗುಂದ ಶಾಸದಲ್ಲಿ ಬರುವ 'ಗಣಪೂರು' (ಗ್ರಾಮ)[7], ವೀರಶೈವದ ಗಣಾಚಾರಕ್ಕೆ ಸಂಬಂಧಿಸಿದಂತೆ ಗಣಪೂರು > ಗಣಗೂರು ಆಗಿದ್ದರೆ, ತದನುಗುಣವಾಗಿ ಅಲ್ಲಿ ವೀರಶೈವ ಮಠವಿದ್ದ ಬಗ್ಗೆ ಪರೋಕ್ಷ ಸೂಚನೆ ದೊರಕುತ್ತದೆ. ಚೆಂಗಾಳ್ವರ ಪೆರಿಯರಾಜರುದ್ರಗಣ ತನ್ನ ತಂದೆತಾಯಿಗಳಿಗೆ ಕೈಲಾಸ ಪದವಿ ಒದಗಲೆಂದು ಗಣಗೂರಿನಲ್ಲಿ ಭೂದಾನ ಮಾಡಿದ ಬಗ್ಗೆ ಕ್ರಿ.ಶ. ೧೫೫೭ರ ಅಲ್ಲಿನ ಶಾಸನ ತಿಳಿಸುತ್ತದೆ[8]. ಚಂಗಾಳ್ವ ಶ್ರೀಕಂಠರಸು ಕ್ರಿ.ಶ. ೧೫೪೪ರಲ್ಲಿ 'ಲಿಂಗಣೊಡೇರು ದೇವರಿಗೆ' 'ಭಗುತನ ಕೋಟೆಗೆ'ಸಲ್ಲುವ ಭೂಮಿಯನ್ನು ಸರ್ವಮಾನ್ಯವಾಗಿ ಕೊಟ್ಟಿರುವ ಸಂದರ್ಭವು[9] ಅಲ್ಲಿದ್ದರಬಹುದಾದ ವೀರಶೈವ ಮಠವೊಂದರ ಅಸ್ತಿತ್ವವನ್ನು ಸೂಚಿಸು ವಂತಿದೆ.

ನಂಜರಾಯಪಟ್ಟಣದ ಬಳಿ ಲಭ್ಯವಾದ ಕ್ರಿ.ಶ. ೧೫೫೮ರ ಹೊಸ ಶಾಸನದ ರೀತ್ಯ ಅಲ್ಲಿ ವೀರಚೋಳ ಚೆಂಗಾಳ್ವ ಆಳುತ್ತಿದ್ದು ಆಗ ಅದು ಕೊಡಗು ಶ್ರೀರಂಗಪಟ್ಟಣವೆನಿಸಿ ಅವರ ರಾಜಧಾನಿಯೂ ಆಗಿತ್ತು. ಆವಾಗ ಅವರ ಶಿವಾಚಾರದ ಹವ್ಯ-ಕವ್ಯಾದಿ ಕರ್ಮಗಳಿಗೆ ಅಲ್ಲಿ ಮಠವೊಂದಿದ್ದು ಪಟ್ಟದ ಮಠ ವಾಗಿತ್ತು. ಅದಕ್ಕೆ ಶಿವಾನಂದ ಸ್ವಾಮಿ ಮಠ ವೆಂಬ ಹೆಸರು. ಅವರ ಕಾಲದಿಂದಲೋ ಅಥವಾ ನಂತರದ ಚೆಂಗಾಳ್ವರ ಕಾಲದಲ್ಲಿಯೂ ಒದಗಿರಬೇಕು. ಹಾಲೇರಿ ಅರಸರ ಅಂತ್ಯಕಾಲದಲ್ಲಿಯೂ ಆ ಮಠ ಪ್ರಸಿದ್ಧ ವಾಗಿಯೇ ಇದ್ದಿತು. ನಂತರದ ಚೆಂಗಾಳ್ವರು ಕೊಡಗು ಶ್ರೀರಂಗಪಟ್ಟಣವನ್ನು ನಂಜರಾಯ ಪಟ್ಟಣದ ಭಾಗವ ನ್ನಾಗಿ ಮಡಿಕೊಂಡು ಆಳತೊಡಗಿದ ಮೇಲೆ ಉತ್ತರ ಕೊಡಗಿನ ಭಾಗಗಳಲ್ಲಿ ವೀರಶೈವ ಮಠಗಳಿಗೆ ಹೆಚ್ಚು ರಾಜಪೋಷಣೆ ದೊರಕಿದಂತೆ ತೋರುತ್ತದೆ.

ಹಾಲೇರಿ ಅರಸು ವಂಶ ಸ್ಥಾಪನೆಯ ವೇಳೆಗೆ ಅಂದರೆ ಇಕ್ಕೇರಿಯಿಂದ ಬಂದ ರಾಮರಾಜ ನಾಯಕನ ಹಿರಿಯಮಗ ವೀರರಾಜ ಒಡೆಯ ಕ್ರಿ.ಶ. ೧೫೮೬ರ ಸುಮಾರಿಗೆ ಕೊಡಗಿನ ಹಾಲೇರಿಗೆ ಬಂದು ನಿಲ್ಲುವ ವೇಳೆಗೆ[10] ಚಂಗಾಳ್ವರಿಂದಾಗಿ ವೀರಶೈವ ಮಠಗಳ ಹರವು ಇದ್ದು ಅವು ಆತನಿಗೆ ನೈತಿಕ ಬೆಂಬಲ ನೀಡಿರಬೇಕು. ಈ ವೀರರಾಜ ಒಡೆಯ ಚಂಗಾಳ್ವಪೆರಿಯರಾಜದೇವ ರುದ್ರಗಣನ ಮಗಳನ್ನು ಮದುವೆ ಆಗಿರುವಂತಿದೆ. ಈತ ಹಾಲೇರಿಯಲ್ಲಿ ನಿಂತು ಜಂಗಮವೇಷಧಾರಿಯಾಗಿ ಬಂದದ್ದರಿಂದ 'ಕೈಮಠ' ವೊಂದನ್ನು ಸ್ಥಾಪಿಸಿ, ಮಠದ ಪ್ರಾಥಮಿಕ ಸ್ವರೂಪವನ್ನು ಅಲ್ಲಿ ಅನುವುಗೊಳಿಸಿದ ಬಹುಶಃ ಹಾಲೇರಿಯ ಶಾಸನೋಕ್ತ ಐಗಳ ಮಠ ಇವನು ಸ್ಥಾಪಿಸಿದ ಮೂಲ 'ಕೈಮಠ'ವಾಗಿರಬಹುದು. ಅಲ್ಲಿ ಆತ ಮಕ್ಕಳಿಗೆ ವಿದ್ಯಾದಾನ ಮಾಡುತ್ತಿದ್ದ. ಅಲ್ಲದೆ ಕೆಳದಿ ದೊರೆಗಳು ಕೊಡಗಿನಲ್ಲಿ ಜಂಗಮಮಠಗಳನ್ನು ಸ್ಥಾಪಿಸಿದರು[11]. ಬಹುಶಃ ಅವು ಬಹುತೇಕ ವಿರಕ್ತ ಸಂಪ್ರದಾಯದ ಮಠಗಳಾಗಿದ್ದುವು. ಹಾಲೇರಿ ಅರಸರಲ್ಲಿ ವೀರರಾಜೇಂದ್ರ ಒಡೆಯ ೬೩ ಪುರೋಹಿತ ರನ್ನು ನೇಮಿಸಿದರೆ ಲಿಂಗರಾಜ ಒಡೆಯ ೬೩ ಜಂಗಮ ಮತ್ತು ಪಟ್ಟದ ಮಠಗಳನ್ನು ರೂಪಿಸಿದ ಎಂಬ ಮಾತಿದೆ[12]. ಆದರೆ ಕೊಡಗಿನಲ್ಲಿ ೧೧೮ ಮಠಗಳಿದ್ದ ಸಂದರ್ಭಕ್ಕೆ ತಾಳೆ ಆಗಲು ಮೊದಲಿದ್ದ ೫೫ ಮಠಗಳ ಜೊತೆಗೆ ಬಹುಶಃ ವೀರಶೈವದಲ್ಲಿ ಮಾನ್ಯರಾದ ೬೩ ಜನಪುರಾತನರ ಸಂಕೇತವಾಗಿ ಹಾಲೇರಿ ಅರಸರು ಈ ಮಠಗಳನ್ನು ರೂಪಿಸಿರ ಬಹುದು, ಹಿಂದಿನವುಗಳನ್ನು ಜೀರ್ಣೋದ್ಧಾರ ಮಾಡಿರಬಹುದು. ಜೊತೆಗೆ ಒಂದು ಕೊಂಬು ಕೂಗುವ ಶಬ್ದ ಕೇಳಿಸುವಷ್ಟು ದೂರದಲ್ಲಿ ಒಂದೊಂದು ಮಠಸಿಗಬೇಕು ಎಂಬುದು ಹಾಲೇರಿ ಅರಸರ ಇಚ್ಛೆ ಆಗಿತ್ತು ಎಂಬುದು ಜನಪ್ರತೀತಿಯಲ್ಲಿದೆ. ಈ 'ಕೊಂಬು'ವಿನ ಲೆಖ್ಖದಲ್ಲಿ ಕೊಡಗಿನಲ್ಲಿ ೧೨ ಮಠಗಳು ಮಾತ್ರ ಇರಬೇಕಿತ್ತು. ಕಾರಣ 'ನಾಡ್‌ಕಟ್‌ಪಾಟ್'ರೀತ್ಯ ಕೊಡಗಿನಲ್ಲಿ ಇದ್ದದ್ದು ೧೨ ಕೊಂಬಿನಷ್ಟು ಪ್ರದೇಶ. ಇದು ದೊಡ್ಡವೀರಪ್ಪನ ಕಾಲದ (ಕ್ರಿ.ಶ. ೧೬೮೭-೧೭೩೬) ಸಂಗತಿ ಹಾಗು ೧೨ ಕೊಂಬುಗಳೇ ೨೮ ನಾಡುಗಳಾಗಿ ರೂಪಿತವಾದವು[13] ಈ ದೃಷ್ಟಿಯಿಂದ ಒಂದು ಕೊಂಬಿನ ಕೂಗಿನ ವಿಸ್ತಾರದ ಪ್ರದೇಶದಲ್ಲಿ ೯ ಮಠಗಳಿರಬೇಕು. ಇದು ಅವಾಸ್ತವ ವೆನಿಸುತ್ತದೆ. ಬದಲಿಗೆ ನಾಡಿಗೆ, ನಾಲ್ಕು ಕೇರಿಗಳಿದ್ದುವು. (ಶ್ರೀ ಮಂಗಲ ನಾಡು ಒಂದು ಉದಾಹರಣೆ, ಕೇರಿಗೆ ಕೋವು ಎನ್ನುತ್ತಿದ್ದುದುಂಟು), ನಾಲ್ದೆಸೆಯಲ್ಲಿ

ಒಂದೊಂದು ಮಠಗಳಿರುತ್ತಿದ್ದುವು (ಕೊಡ್ಲಿಪೇಟೆಯಲ್ಲಿ, ದ. ಕೊಡಗಿನ ಹತ್ತುಗಟ್ಟುನಾಡಿನಲ್ಲಿ ಇಂತಹ ಉದಾಹರಣೆ ಇದೆ). ಅದಾಗಿ ಒಂದೊಂದು ನಾಡಿಗೆ ನಾಲ್ಕು ಮಠಗಳು ನಾಲ್ದೆಸೆಯಲ್ಲಿ ಒಂದೊಂದು ಇದ್ದಿರಬೇಕು. ಆದರೆ ೧೦೮ ಸಂಖ್ಯೆ ಹೊಂದಿಕೆ ಆಗುವಂತೆ ಕೆಲವು ನಾಡುಗಳಲ್ಲಿ ಸಂಖ್ಯಾವ್ಯತ್ಯಾಸ ಮಾಡಿ ೨೮ ನಾಡುಗಳಲ್ಲಿ ಮೊದಲಿ ನಿಂದಲೂ ಇದ್ದ ೪೫ ಮಠಗಳ ಜೊತೆಗೆ ೬೩ ಮಠಗಳನ್ನು ಕೂಡಿಸಿ ಒಟ್ಟು ೧೦೮ ಮಠಗಳನ್ನು ಭೌಗೋಳಿಕವಾಗಿ ಸಂಗಡಿಸಿ ನೆಲೆ ಗೊಳಿಸಿರಬೇಕೆನಿಸುತ್ತದೆ. ಅನುಗುಣವಾಗಿ ದಾನ ದತ್ತಿ ಜಹಗೀರುಗಳನ್ನು ನೀಡಿ ಕೆಲವು ಮಠಗಳಿಗೆ ಸಂಬಳಿ ಭೂಮಿಯನ್ನು ನೀಡಲಾಗಿದೆ. ಆದರೆ ಅರಸಿ ಹೋದಾಗ ೯೧ ಮಠಗಳ ಹೆಸರು ನೆಲೆ ಕಾಣಸಿಕ್ಕಿತು. ಉಳಿದವುಗಳ ಹೆಸರು, ಅಸ್ತಿತ್ವ ಜನತೆಯ ನೆನಪಿನಿಂದಲೇ ಮರೆಯಾಗಿರುವಂತಿದೆ.

ಒಂದು ಅಭಿಪ್ರಾಯದ ರೀತ್ಯ ಕೊಡಗಿನಲ್ಲಿ ಇದ್ದ ೫೭ ಮಠಗಳಿಗೆ ೩೧,೫೫೭ ಭಟ್ಟಿ ಭೂಮಿ ದತ್ತಿ ಇತ್ತು. ಅದನ್ನು ರೈತರಿಗೇ ಬಿಟ್ಟಿದ್ದರೆ ಸರ್ಕಾರಕ್ಕೆ ೩೬೦ ರೂಗಳ ಆದಾಯ ಒದಗುತ್ತಿತ್ತು. ಬಹಳ ಶ್ರೀಮಂತ ಬಳುವಳಿಯಾಗಿ ·ಜಮೀನು ಪಡೆದಿದ್ದ ಮಠ ಗಳೆಂದರೆ ಬಸವನಹಳ್ಳಿ ಮಠ (೪೧೦೫ ಭಟ್ಟಿ); ಅಬ್ಬಿಮಠ (೪೦೦೫ ಭಟ್ಟಿ) ಮಾದಾಪುರಮಠ (೨೬೪೩.೭೫ ಭಟ್ಟಿ) ಸಿದ್ಧಾಪುರ ಮಠ ಹೊರೂರು ಕೂರೊಕ್ಕಲು ನಾಡು (೨೩೭೦.೩೩ ಭಟ್ಟಿ) ಅಮ್ಮತ್ತಿ ನಾಡಿನ ತಾನಡಿ ಮಠ ·(೧೪೮೫ ಭಟ್ಟಿ), ಹೊರೂರು ಕೂರೊಕ್ಕಲು ನಾಡಿನ ಭಟ್ಟಿ ಚಡದರಹಳ್ಳಿ ಮಠ (೧೪೩೦ ಭಟ್ಟಿ), ಎಡೆನಾಲ್ಕು ನಾಡಿನ ಜಪದಕಟ್ಟೆಮಠ (೧೧೮೩.೭೫ ಭಟ್ಟಿ) ಗಡಿನಾಡಿನ ತೊರೆನೂರು ಮಠ (೧೦೦೦ ಭಟ್ಟಿ) – ಒಟ್ಟಾರೆ ೧೮೩೩೦ ಭಟ್ಟಿಗಳು – These 57 mattas or Jangamas are religious institutions originated and endowed by Coorg Rajas... evidently of greater importance to the Shivachara priests who desire an easy living from the rich endowments than of any practical use for the Coorg people amongst whom this sect inspite of its royal patronage never struck any root[14] ಎನ್ನುವ ಮಾತು ಒಂದು ಸಾಕ್ಷಿಕವಾಗಿದೆ ಹಾಗು ವಾಸ್ತವ ಸಂಶೋಧನೆಯದಲ್ಲ ಎನ್ನುವುದು ಈ ಹಿಂದೆ; ಮುಂದೆ ವಿವೇಚಿಸಿರುವ ವಿಷಯದಿಂದ ಅರಿವಾಗುತ್ತದೆ. ಅಲ್ಲದೆ ಕೊಡಗಿನ ಸಾಂಸ್ಕೃತಿಕ ಜೀವನದಲ್ಲಿ ೧೦೮ ಮಠಗಳ ಪಾತ್ರ ಹಾಸುಹೊಕ್ಕಾಗಿ ಮಾಡಿರುವ ಪರಿಣಾಮಗಳನ್ನು ಇಂದೂ ಗಮನಿಸಬಹುದಾಗಿದೆ. ಕೊಡಗಿನ ಮನೆ ತನಗಳ ಮೇಲೆ ಈ ಮಠಗಳು ಬೀರಿರುವ ಪರಿಣಾಮ, ಸದ್ಭೋಧೆಯ ಹಾಗು ಶಾಂತಿಯ ನೆಲೆ ಗಳಾಗಿ ಇದ್ದು ಸಾಂಸ್ಕೃತಿಕ ಪಾಲುದಾರಿಗಳಲ್ಲಿ, ಕನ್ನಡ ತನದ ಬಳುವಳಿ ನೀಡುವಲ್ಲಿ, ಸಮಾಜಿಕ ಸೇವೆ ಕಾರ್ಯಗಳಲ್ಲಿ, ವಿದ್ಯಾ ದಾನ, ದಾನದತ್ತಿ ನೀಡಿಕೆಯಲ್ಲಿ ಹುಟ್ಟು–ಸಾವು–ಸಮಾಧಿ, ಹಬ್ಬ–ಉತ್ಸವಗಳಲ್ಲಿ, ಮಠಗಳ ಪಾತ್ರ ಗಣನೀಯವಾಗಿರುವುದು ಶಾಸನ ಹಾಗು ಜನಜೀವನವನ್ನು ಗಮನಿಸಿದರೆ ಅರಿವಿಗೆ ಬರುತ್ತದೆ. ಹಾಗಿದ್ದರೂ ಕೆಲವು ಮಠಗಳು ತಮ್ಮ ಕ್ರಿಯಾರಾಹಿತ್ಯದಿಂದ ಅನ್ಯಾಕ್ರಮಣಕ್ಕೆ, ಪರಾಧೀನತೆಗೆ ಪಕ್ಕಾಗಿರುವುದು ಸುಳ್ಳಲ್ಲ. ಈ ದೃಷ್ಟಿಯಿಂದ ಮಠಗಳ ಸಾಂಪ್ರದಾಯಿಕ ಹಾಗು ಆಧುನಿಕ ಅರ್ಥಗಳು ಕೊಡಗಿನ ಈ ಮಠಗಳಲ್ಲಿ ಅನ್ವಯವಾಗಿರುವ ರೀತಿಯನ್ನು ಹಾಗು ಕೆಲವು ಮುಖ್ಯಮಠಗಳ ವಿವರಗಳನ್ನು ಗಮನಿಸಬಹುದು.

'ಮಠಸ್ಚಾತ್ರಾದಿ ನಿಲಯಂ' ಎಂಬ ಅಮರಕೋಶದ ಮಾತಿನಲ್ಲಿ, ವಿದ್ಯೆ ಹಾಗೂ ಅಶನದ ವ್ಯವಸ್ಥೆಯ ನೆಲೆ ಎಂಬ ಅರ್ಥವು ಸಾಮಾನ್ಯಾಗಿ ಕಂಡು ಬರುತ್ತದೆ. ಹಾಗೆಯೇ ವೀರಾಗಮದ ರೀತ್ಯ

ಮಠಮಧ್ಯೇ ಮಹಾತ್ರೇಷ್ಠಾನ್ವೀರ ಮಹೇಶ್ವರಾನ್ ಪ್ರಿಯೇ
ಪೂಜ್ಯಾನ್ ಪುರಾತನಾನ್ ಪೂರ್ವಾನ್ ಪರುಷಾರ್ಥ
ಪ್ರದಾಯಕಾನ್।

– ಮಠದಲ್ಲಿ ವೀರಮಾಹೇಶ್ವರರು, ಪೂಜ್ಯರು ಪುರಾತನರು, ಪುರುಷಾರ್ಥಪ್ರದಾಯಕರು ಇರುತ್ತಿದ್ದರು. ಮಾಹೇಶ್ವರ ಜ್ಞಾನದಾನ, ಜ್ಞಾನಗೋಷ್ಠಿ ನಡೆ ಯುತ್ತಿತ್ತು[15]. ಈ ವೀರಶೈವ ಮಠಗಳ ರಾಜಸಿಕ ಸಂವಿಧಾನದಲ್ಲಿ ಹೊಣೆ ಹಕ್ಕುಗಳುಂಟು. ಗುರುಮಠ, ವಿರಕ್ತಮಠಗಳಿಗೆ ಲಿಂಗದೀಕ್ಷೆ ನೆರವೇರಿಸುವ ಅಧಿಕಾರ ವಿದ್ದರೆ, ವಿರಕ್ತ ಮಠಗಳು ವ್ಯಕ್ತಿಗಳ ಕುಟುಂಬಗಳ ಸಮುದಾಯಗಳ ಜೊತೆಗೆ ನಿಕಟ ಸಂಬಂಧಗಳನ್ನೂ ಪಡೆದು ಶ್ರೀಸಾಮಾನ್ಯರ ಜೀವನದಲ್ಲಿ ಬೆರೆತದ್ದುಂಟು[16]. ಆದರೆ ಕೆಲವು ಗುರುಪೀಠಗಳು, ಪಟ್ಟದ ಮಠಗಳು

ಇಂತಹ ಸಂಬಂಧಗಳನ್ನೂ ಪಡೆದಿವೆ. ಕೊಡಗು ಈ ಎಲ್ಲಾ ಸಂದರ್ಭಗಳನ್ನು ಪಡೆದಿದೆ.

ಸಮಾಜ ಶಾಸ್ತ್ರೀಯ ದೃಷ್ಟಿಯಿಂದ, ಈ ಮಠಗಳ ರಚನೆ ಅಥವ ಚೌಕಟ್ಟು ಕ್ರಿಯೆ, ಸಂಚಲನ, ರೋಗ ಸ್ಥಿತಿ, ಪರಿಹಾರಾತ್ಮಕ ಸಂಪನ್ಮೂಲ ಎಂಬ ಶೀರ್ಷಿಕೆ ಮೂಲಕ ವಿವೇಚಿಸುವ ಆಧುನಿಕ ಪ್ರಯತ್ನವಿದೆ[17]. ಆಧ್ಯಾತ್ಮಿಕ ಜ್ಞಾನ ಪ್ರಸರಣ, ದೀಕ್ಷಾ ಸಮಸ್ಕಾರ, ವಿದ್ಯೆ, ವಸತಿ, ಕಲ್ಯಾಣ ಯೋಜನೆ, ಅಂಥರ ಕ್ಷೇಮಾಭಿವೃದ್ಧಿ, ಜಾತಿರಹಿತ ಹಾಸ್ಟೆಲ್ ನಿರ್ಮಾಣ, ವೃದ್ಧಾಶ್ರಮ ಗ್ರಂಥ ಪ್ರಕಟನೆ, ಗ್ರಂಥ ಭಂಡಾರ, ಜನಸಂಪರ್ಕ, ಕಷ್ಟ ಸುಖಗಳಲ್ಲಿ ಪಾಲುದಾರಿಕೆ ತಮ್ಮ ಇತಿಮಿತಿ ಜ್ಞಾನ ಹಾಗು ಪರಿಹಾರ ಈ ಬಗ್ಗೆ ಸಾಂಸ್ಕೃತಿಕವಾಗಿ, ಸಾಮಜಿಕವಾಗಿ, ಕ್ರಿಯಾಶೀಲ ವಾಗಿರುವ ಅನೇಕ ವೀರಶೈವ ಮಠಗಳು ಇಂದಿವೆ. ಈ ದಿಸೆಯಲ್ಲಿ ಕೊಡಗಿನ ಅನೇಕ ವೀರಶೈವ ಮಠಗಳೂ ಹಿಂದೆ ಬಿದ್ದಿಲ್ಲ. ಕೊಡಗಿನಲ್ಲಿ ವಿರಕ್ತ ಹಾಗು ಪಟ್ಟದ ಮಠಗಳನ್ನು ಕಟ್ಟಿಸಿದ್ದಾರೆ ಆದರೆ ವಾಹೀಕೃತ ಮಠ (ಸಂಸಾರಿ ಮಠ) ಕಟ್ಟಿಸಿದ ಬಗ್ಗೆ ಪುರಾವೆ ಇಲ್ಲ. ಅಲ್ಲದೆ ಉತ್ತರ ಕರ್ನಾಟಕದಲ್ಲಿ ಸಾಮಾನ್ಯವಾಗಿ ಕಾಣ ಬರುವ ಹಿರೇಮಠಗಳು ಕೊಡಗಿನಲಿಲ್ಲ. ಗುರುಸ್ಥಲದ ಪೀಠದ ಶ್ರೀಶೈಲ, ಬಾಳೆಹೊನ್ನೂರು ಉಜ್ಜಯನಿ ಹಾಗೂ ಶ್ರೀಶೈಲ ನಿಡುಮಾಮಿಡಿ ಸಂಪ್ರದಾಯದ ಮಠಗಳು, ವಿರಕ್ತ ಸಂಪ್ರದಾಯದ ಅಲ್ಲಮಪ್ರಭು ಶಿಷ್ಯಪರಂಪರೆಯ ಶ್ರೀ ಮುರುಘಾ, ಚೀಲಾಳ್, ಲೀಲಾಖ್ಯ ಸಮಯ ಮಠಗಳು ಕಾಣಬರುತ್ತವೆ. ಇಲ್ಲಿ ಈ ಎರಡೂ ಸಂಪ್ರದಾಯದ ಸಂಸಾರಿ ಮಠಗಳು ಈಗ (ಬಹುಶಃ ವಾಹೀಕೃತ ಮಠವಾಗಿ ಪರಿವರ್ತನ ಗೊಂಡವು) ಕಾಣಬರುತ್ತವೆ.

ಅಬ್ಬಿಮಠ: ಶಾಸನ ಹಾಗು ದಾಖಲೆ ದೃಷ್ಟಿಯಿಂದ ಕೊಡಗಿನ ಪ್ರಾಚೀನ ಮಠವಾಗಿರು ವಂತಿದೆ. ಕ್ರಿ.ಶ. ೧೬೨೮ರಲ್ಲಿಯೇ 'ಯಡವನಾಡು ಅಬ್ಬಿಮಠಕ್ಕೆ ಪ್ರಾಕು ನಡೆದು ಬರುತ್ತಿದ್ದ ಗ್ರಾಮ ಹೊಸಳ್ಳಿಗ್ರಾಮ ವೆಂದು, ಜಿಗಟ್ಟಹಳ್ಳಿ ಗ್ರಾಮ ವೆಂದು' ಎಂದಿದ್ದರು, ಕ್ರಿ.ಶ. ೧೭೭೬ರಲ್ಲಿ ಜೀರ್ಣೋದ್ಧಾರ ದಾನ ಶಾಸನವು ಈ ಮಠಕ್ಕೆ ಒದಗಿದೆ[18]. ಅದಾಗಿ ಕ್ರಿ.ಶ. ೧೮೬೬ರಲ್ಲಿ ಹುಲಸೇಗ್ರಾಮದ ಜಂಗಮ ಈರಯ್ಯ ಬರೆದ ಹಸ್ತಪ್ರತಿಯಲ್ಲಿ ಚಿತ್ರದುರ್ಗದ ಶೂನ್ಯ ಸಿಂಹಾಸನಕ್ಕೆ ಸೇರಿದ ಮುರುಘಾ ಸ್ವಾಮಿಗಳ ಶಿಷ್ಯ ಶಾಂತಮಲ್ಲಿಕಾರ್ಜುನ ಸ್ವಾಮಿಗಳು ಮೊದಲಿಗೆ ಇಲ್ಲಿ ಚೌಕಿ ಕಟ್ಟಿಸಿದ್ದರು, ಎಂದು ಹೇಳಿದೆ. ಚಿಕ್ಕ ವೀರರಾಜೇಂದ್ರ ಒಡೆಯ ಇದನ್ನು ಚೌಕಿ ಮಠವನ್ನಾಗಿ ರೂಪಿಸಿ[19] ಎಂದು ಜೀರ್ಣೋದ್ಧಾರವಾದ ಸಂಗತಿಯನ್ನು ಹೇಳಿರುವಂತಿದೆ. ಆದರೆ ಇಲ್ಲಿನ ಮಲ್ಲಿಕಾರ್ಜುನ ಗುಡಿಯ ಶಾಸನದಲ್ಲಿ (ಕ್ರಿ.ಶ. ೧೪೬೪) ಶಾಂತ ಮಲ್ಲಸ್ವಾಮಿಗಳು ತಪಸ್ಸಿಗೆ ದಯಮಾಡಿಸಿದ ದಿನವನ್ನು ಹೇಳಿದೆ ಎಂದು ತಪ್ಪಾಗಿ ಹಸ್ತಪ್ರತಿಯಲ್ಲಿ ಉಲ್ಲೇಖಿತವಾಗಿದೆ. ಕಾರಣ ಶಾಸನದ ಪಾಠ ಹಾಗಿಲ್ಲ. ಕ್ರಿ.ಶ. ೧೭೭೬ರಲ್ಲಿ ಶಾಸನೋಕ್ತ ಮಹಂತ ಸ್ವಾಮಿ ಅವರ ಚರಮೂರ್ತಿ ಶಾಂತ ವೀರಸ್ವಾಮಿ. ಅವರ ಚಿರಮೂರ್ತಿ ಅಬ್ಬಿ ಮಠದ ನಿರಂಜನ ದೇವರು, ಎಂಬು ಅಂಶವು ಹಸ್ತಪ್ರತಿಯಲಿಲ್ಲ.

ಈ ಮಠದಲ್ಲಿ ನಾಲ್ಕು ಗದ್ದುಗೆಗಳಿವೆ. ವಿಶಾಲವಾದ ನಿಸರ್ಗಸುಂದರ ಮಠವಾಗಿದೆ. ಚಿತ್ರ ದುರ್ಗದ ಬೃಹನ್‌ಮಠದ ನೇರ ಆಡಳಿತದ ಬೇಳೂರು ಮಠದ ನಿರ್ವಹಣೆಯಲ್ಲಿ ಈ ಮಠವಿದೆ. ಕೊಡಗಿನ ವೀರಶೈವ ಗುರುಗಳು ಮಲ್ಲಿಕಾರ್ಜುನ ಪರ್ವವನ್ನು ವಾರ್ಷಿಕವಾಗಿ ಇಲ್ಲಿನ ಅಬ್ಬಿಯ ಬಳಿ ಆಚರಿಸುತ್ತಿದ್ದರು. ಸನಿಹದಲ್ಲಿ ಪ್ರಾಚೀನ ಮಲ್ಲಿ ಕಾರ್ಜುನಗುಡಿ ಇದ್ದು, ತೇರುಗದ್ದೆ ಬಯಲನ್ನು ಕೆಳಗೆ ಪಡೆದಿದೆ. ಹುತ್ತರಿ, ಶಿವರಾತ್ರಿ ಸಂಕ್ರಾಂತಿಯಲ್ಲಿ ಗದ್ದುಗೆ ಹಾಗು ಗುಡಿಯ ಪೂಜೆಗೆ ಜನತೆ ಬರುತ್ತದೆ. ಕ್ರಿ.ಶ. ೧೪೬೪ರಲ್ಲಿ ಮಲ್ಲಪ್ಪ ನಾಯಕ ಸಿದ್ದಪ್ಪ ನಾಯಕರು ಇಲ್ಲಿ ಆಳುತ್ತಿದ್ದ ಬಗ್ಗೆ ಶಾಸನೋಲ್ಲೇಖವಿದೆ. ಕಾರ್ತೀಕ ಶುಕ್ರವಾರ ಇಲ್ಲಿ ಲಕ್ಷದೀಪೋತ್ಸವ ನಡೆಯುತ್ತಿತ್ತು.

ಮಾದಾಪುರ ಮಠ: ಮುರುಘಾ ಸಂಪ್ರದಾಯಕ್ಕೆ ಸೇರಿದ ಈ ಮಠದ ಮುಂಬಾಗಿಲು, ಬಸವನ ಗುಡಿಯ ಒಳಬಾಗಿಲು, 'ಗೋಪುರದ ಕಳಶದ ಹಿತ್ತಾಳೆ ಪತಾಕೆಯ ಮೇಳೆ ಶಾಸನವಿದ್ದು, ತಾಮ್ರ ಶಾಸನವೂ ಬೇರೆ ಇದೆ. ಹೆಚ್ಚು ಶಾಸನಗಳನ್ನು ಹೊಂದಿರುವ ಈ ಮಠದ ಶಾಸನಗಳಲ್ಲಿ ಹಾವೇರಿ ಅರಸರು ತಮ್ಮ ಗೋತ್ರ, ಸೂತ್ರ, ಶಾಖೆಗಳನ್ನು ನೀಡಿದ್ದಾರೆ. ಇಲ್ಲಿ ಲಿಂಗರಾಜೇಂದ್ರ ಒಡೆಯನ ಗದ್ದುಗೆ ಇದ್ದು ಅದರ ಮೇಲೆ ಕ್ರಿ.ಶ. ೧೭೭೯ರಲ್ಲಿ ಆತನ ಮಗ ವೀರರಾಜೇಂದ್ರ ಒಡೆಯನು ಬಸವೇಶ್ವರ ದೇಗುಲ ಕಟ್ಟಿಸಿದ್ದು, ಶಾಸನೋಕ್ತವಿದೆ. ಮಠದ ಆವರಣದಲ್ಲಿ ಸೋಮೇಶ್ವರ ಶಿವಯೋಗಿಗಳ ಗದ್ದುಗೆ ಹಾಗು ಅವರ

ಮುಲ ಸಂಜಾತ ಗುರುಪಾದ ಸ್ವಾಮಿಗಳ ಗದ್ದುಗೆಯೂ
. ಈ ಮಠದ ದೇಗುಲಕ್ಕೆ ಜಂಬೂರು, ಬೇಳೂರು,
ವನಹಳ್ಳಿಯಲ್ಲಿ ಜಹಗೀರಿ ಜಮೀನು ನೀಡಲಾಗಿತ್ತು.

ಹುತ್ತರಿ ಹಬ್ಬದಲ್ಲಿ ಮಠದ ಗದ್ದೆಯಿಂದ ಭತ್ತದ
ರ ತಂದು ಗದ್ದುಗೆ ಬಸವೇಶ್ವರನ ಬಳಿ ಇಟ್ಟು
ಜೆಯ ನಂತರ ಗ್ರಾಮದ ಎಲ್ಲ ಜನಾಂಗದವರು
ರುಗಳನ್ನೂ ಮನೆಗೆ ಒಯ್ಯುತ್ತಿದ್ದರು. ಪೌರ್ಣಮಿಯ
ೀಹಿಣಿ ನಕ್ಷತ್ರದಲ್ಲಿ ಅರಮನೆ ಗದ್ದೆಗಳಲ್ಲಿ ಕದಿರು
ುದ್ದು ಅರಮನೆ ಪೊಳ್ದು ಆಚರಿಸುತ್ತಿದ್ದರು. ಮರು
ನಾಡು ಹುತ್ತರಿ (ನಾಡು ಪೊಳ್ದು) ಅಂದು
ವರ ಗದ್ದೆ ಅಥವಾ ಮಠದಗದ್ದೆಯಿಂದ ಕದಿರು
ುದ್ದು ಮೇಲಿನಂತೆ ಪೂಜಿಸಿ ಒಯ್ಯುತ್ತಿದ್ದರು. ಈ
ಠದ ಮುಂದೆ ಹುತ್ತರಿ ಕೋಲಾಟ ನಡೆಯುತ್ತಿತ್ತು.
ತ್ತಿಕೊಟುಪಾತಾಳ (ವಿವಿಧ ದೈವಗಳ ತೆರೆ ಮತ್ತು
ೀಲುಗಳು) ಕಟ್ಟಿಸಲಾಗುತ್ತಿತ್ತು. ಇಂದಿಗೂ ಕೇರಳದ,
ಡ, ಉತ್ತರ ಕನ್ನಡ ಜಿಲ್ಲೆಯಿಂದ ವರ್ಷ ಕ್ಕೊಮ್ಮೆ
ರು ಬಂದು ಇಲ್ಲಿ ಪೂಜೆ ಮಾಡಿಸಿಕೊಂಡು
ೀಗುತ್ತಾರೆ. ಮಳೆಗಾಲದಲ್ಲಿ ನಾಟಿ ನೆಡುವ ಹಬ್ಬ
ಯು ಹಾಕುವುದು' ಹಾಗು ಸ್ಪರ್ಧೆ 'ಓಟ್‌ನಾಟಿ'
ಆಚರಣೆಗಿತ್ತು. ಕೊಡವರ ವೇಷ ಕುಪ್ಪಸ ದಟ್ಟಿ
ಸಿ ಮಠದ ಸ್ವಾಮಿಗಳು ಸ್ಪರ್ಧಾ ವಿಜೇತರಿಗೆ
ುಮಾನ ನೀಡುತ್ತಿದ್ದರು; ಹುತ್ತರಿಯಲ್ಲಿ ಕೋಲಾ
ನ್ನು ಗುರುಗಳು ಆಶೀರ್ವದಿಸಿ ಕೋಲು ಹೊಡೆದ
ಲೆ ಕೊಡವರು ಕೋಲಾಟ ಆರಂಭಿಸುತ್ತಿದ್ದರು.
ಡಗಿನ ರಾಜರು ಇಲ್ಲಿ ದೀಪಾವಳಿ ಹಾಗು ಜಂಬೂ
ಾರಿ ನಡೆಸುತ್ತಿದ್ದರು. ಕೊಡಗಿನ ಉತ್ತರಾ ಭಾಗಕ್ಕೆ
ೀಗಿ ಬರುವವರಿಗೆ ಈ ಮಠ ತಂಗದಾಣವಾಗಿತ್ತು;
ಸೋಹದ ನೆಲೆ ಆಗಿತ್ತು. ಈ ಮಠದ ವಾಸ್ತು
ಡಿಕೇರಿ ಓಂಕಾರೇಶ್ವರ ದೇಗುಲದ ವಾಸ್ತುವಿನಂತೆ
ಡೋ-ಸಾರ್ಸೆನಿಕ ಶೈಲಿಯಲ್ಲಿ ಆಕರ್ಷಕವಾಗಿದೆ.

**ಬೇಳೂರು ಮಠ:** ಚಿತ್ರದುರ್ಗದ ಬೃಹತ್
ಠದ ನೇರ ಆಡಳಿತಕ್ಕೆ ಸೇರಿದ ಈ ಮಠದ
ಯಿಂದ ಶಾಲೆಯೊಂದು ನಡೆಯುತ್ತಿದೆ. ಹುತ್ತರಿ
ಚರಣೆ, ಶಿವರಾತ್ರಿ ಹಬ್ಬ ಇಲ್ಲಿ ಉಂಟು.
ದುರ್ಗದ ಮುರುಘಾ ಮಠದ ಜಗದ್ಗುರುಗಳು
ಾಗ ಇಲ್ಲಿಗೆ ದಯ ಮಾಡಿಸಿ ಮಠದ ವತಿಯಿಂದ,
ಣಿಕ ಅಭಿವೃದ್ಧಿಪರ ಕಾರ್ಯಗಳನ್ನು ಹಮ್ಮ
ಂಡಿದ್ದಾರೆ. ವೀರರಾಜೇಂದ್ರ ಒಡೆಯನು ಸ್ಥಾಪಿಸಿದ್ದ

ಬಸವನ ಮಠಕ್ಕೆ ಸ್ವಾಮಿಗಳು ಇಲ್ಲದೇ ಹೋದಾಗ,
ಬೇಳೂರು ಮಠದ ವಶಕ್ಕೆ ಅದು ಬಂದಿತು.

**ಸೋಮವಾರಪೇಟೆ ಮಠ:** ಕ್ರಿ.ಶ. ೧೭೪೦ರಲ್ಲಿ 'ಶ್ರೀ ಮತ್ಕೆಳದಿ ಬಸಪ್ಪನಾಯಕರು... ಬಿದರೂರು ತಳವಾರಿಕೆ ಸಿಸ್ತಿನಲ್ಲು, ಸೋಮವಾರಪೇಟಯಲ್ಲು ಮುರಿಗೆ ಸ್ವಾಮಿಯವರ ಸಂಪ್ರದಾಯದ ಶಾಂತವೀರ ಸ್ವಾಮಿಗಳಿಗೆ ಕಟ್ಟಿಸಿಕೊಟ್ಟ ವಿರಕ್ತ ಮಠ[21] ಎಂದು 'ನಗರ'ದ ಶಾಸನವಿದೆ. ಆದರೆ ಶಾಸನದಲ್ಲಿ ಉಕ್ತವಾಗಿರುವ ಈ ಸ್ಥಳ 'ಕೊಡಗಿನ' ಸೋಮವಾರ ಪೇಟೆ ಆಗಿರಬಹುದೇ? ಜಮಾಬಂದಿಲ್ಲಿ 'ನಗರೂರು ಮಠ' ಎಂದಿರುವ ಕಾರಣ ಕೆಳದಿಯ ಕಿರಿಯ ಬಸಪ್ಪನಾಯಕ ನೇ (ಕ್ರಿ.ಶ. ೧೭೪೦-೧೭೫೫) ಇದರ ಸ್ಥಾಪಕವಾಗಿರುಬೇಕು. ಶಾಂತವೀಧ ಸ್ವಾಮಿ ಯವರು ಇದರ ಪ್ರಥಮ ಗುರುವಾಗಿರಬೇಕು. ನಗರದ ಕಡೆಯ ನಾಯಕ ಸ್ಥಾಪಿಸಿದ್ದರಿಂದ 'ನಗರೂರು ಮಠ' ಎಂಬ ಹೆಸರೆ ನಿಂತಿರುವಂತಿದೆ ಜಮಾಬಂದಿಯಲ್ಲಿ ಕೆಳದಿ ಅರಸರ ಕಾಲದಲ್ಲಿ ಮಠಗಳ ಕಾರ್ಯನಿರ್ವಹಣೆ ೧೯೩೮ರಲ್ಲಿ ಮಠಾಧಿಪತಿಗಳಾಗಿ ಬಂದ ಶ್ರೀ ಗುರುಶಿದ್ದ ಸ್ವಾಮಿಗಳು ಮಠಗಳಿಗೆ ಯೋಗ್ಯವಾದ ಕೈಂಕರ್ಯಗಳ ಜೊತೆಗೆ, ಹರಿಜನರು ಸೇರಿದಂತೆ ಎಲ್ಲ ವರ್ಗದ ಜನರಿಗೆ ಉಚಿತ ಹಾಸ್ಟೆಲ್, ವಿದ್ಯಾಶಾಲೆ, ಧನ ಸಹಾಯ ಮಾಡಿ ಮಠದ ಪ್ರಸಿದ್ಧಿಯನ್ನು ಹೆಚ್ಚಿಸದರು. ಈ ಮಠದಲ್ಲಿ 'ಚೌಡಿ' ಪೂಜೆ ಉಂಟು. ಹುತ್ತರಿ ಆಚರಣೆ ಉಂಟು. ಕೊಡಗಿನ ಮಠಾಧಿಪತಿಗಳನ್ನು ಸಂಘಟಿಸಿ ಶಿವಾನುಭವ ಗೋಷ್ಠಿಗಳನ್ನು ಶೈಕ್ಷಣಿಕ, ಸಾಂಸ್ಕೃತಿಕ ಚಟುವಟಿಕೆಗಳನ್ನು ಸತತವಾಗಿ ನಡೆಸಿಕೊಂಡು ಬರುತ್ತಿರುವ ಕೀರ್ತಿ ಈ ಮಠಕ್ಕಿದೆ. ಉತ್ತರಕೊಡಗಿನ ಒಂದು ಜೀವಂತ ಸಕ್ರಿಯ ಮಠವೆನಿಸಿದೆ. ವಿಶಾಲವಾದ ಸುಂದರ ಅಂಗಳ, ಆಕರ್ಷಕ ಗದ್ದುಗೆ ಮನೆಯನ್ನೂ ಹೊಂದಿದೆ.

**ಅರಮೇರಿ ಮಠ:** ದಕ್ಷಿಣ ಕೊಡಗಿನ ಪ್ರಸಿದ್ಧ ಜೀವಂತ ಮಠವಿದು. ದೊಡ್ಡ ವೀರಪ್ಪ ಒಡೆಯನ ತಂಗಿ ನೀಲಮ್ಮಾಜಿಯನ್ನು ನಾಯಕಂಡ ಮನೆಯ ಉತ್ತಪ್ಪನನ್ನು, ಚೆನ್ನ ಬಸಪ್ಪನನ್ನಾಗಿ ಮಾಡಿ ಮದುವೆ ಮಾಡಿಕೊಡಲಾಗಿತ್ತು. ಆತ ಮೈಸೂರಿನಲ್ಲಿ ತೀರಿ ಕೊಂಡಾಗ ಆಕೆಗೆ ಚಿಕ್ಕ ವಯಸ್ಸು. ಆಕೆ ಅರಮನೆಯಲ್ಲಿ ಉಳಿಯಲಿಚ್ಚಿಸದೆ ಬೆಪ್ಪು ನಾಡಿನ ಅರಮೇರಿಯಲ್ಲಿದ್ದ ಗಂಡನ ಮನೆಗೆ ಬಂದು ನಿಂತಳು.

ಆಕೆ ಸದ್ಬೋಧೆಗಾಗಿ ವೀರರಾಜೇಂದ್ರ ಒಡೆಯ ಕ್ರಿ.ಶ. ೧೭೧೨ರಲ್ಲಿ ಮಠವನ್ನು ಕಟ್ಟಿಸಿ ಶಿವಾನಂದ ಸ್ವಾಮಿಗಳನ್ನ ಈ ಮಠದ ಮೊದಲ ಗುರುಗಳನ್ನಾಗಿಸಿ ನಿರೂಪ ಹೊರಡಿಸಿದ. ಇದು ಚೇಲಾಳ ಸಮಯಕ್ಕೆ ಸೇರಿದ ಮಠವಾಗಿದೆ. ಬಹಳ ಅಚ್ಚುಕಟ್ಟಾಗಿ, ವ್ಯವಸ್ಥೆಗೊಳಿಸಿರುವ ಈ ಮಠದಲ್ಲಿ ಬಸವಜಯಂತಿ ದಾಸೋಹ, ಹುತ್ತರಿ ಆಚರಣೆ ಶಿವಾನುಭವ ಗೋಷ್ಠಿ ವ್ಯವಸ್ಥೆಗಳುಂಟು. ಕೊಡವರು ಮೊದಲಿಗೆ ಇಲ್ಲಿ ಹುತ್ತರಿ ಆಚರಣೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಜಮ್ಮ ಮಾಪಿಳ್ಳೆಗಳ ಜನಪದ ಕಲೆಯಾದ ದಪ್ಪು ಆಟ ಇಲ್ಲಿ ನಡೆಯುತ್ತಿತ್ತು. ಮಠದ ವತಿಯಿಂದ ಶೈಕ್ಷಣಿಕ, ಸಾಂಸ್ಕೃತಿಕ, ಸಾಮಾಜಿಕ ಸೇವಾ ಕಾರ್ಯಗಳು ಸಾಕಷ್ಟು ನಡೆದಿವೆ.

**ತೊರೆನೂರು ಮಠ:** ತೊರೆನೂರು ಪಂಚಮಠಗಳೆಂದೇ ಪ್ರಸಿದ್ಧವಾಗಿರುವ ಈ ಮಠ ಚೇಲಾಳ ಸಮಯಕ್ಕೆ ಸೇರಿದ್ದು ಮರುಳ ಸಿದ್ಧೇಶ್ವರರ ಗದ್ದುಗೆಯನ್ನು ಹೊಂದಿದೆ. ಶಿರಂಗಾಲ ಕಣಿವೆ, ಕೂಡು ಮಂಗಳೂರು, ಕೊಡಿಗೆ ಕೊಪ್ಪಲಿನ ಬಳಿ ಹೆಗ್ಗಡಹಳ್ಳಿ, ಕುಶಾಲನಗರ, ಹುಲಸೆ, ಹಾರಂಗಿ, ಕಮ್ಮತ್ತನಹಳ್ಳಿ ಇತ್ಯಾದಿ ಕಡೆ ಜಹಗೀರು ಜಮೀನು ಇತ್ತು. ರಾಜನು ಇಲ್ಲಿನ ಸ್ವಾಮಿಗಳಿಗೆ ಭೂದಾನ ಕೊಡಲು ಬಂದರೂ ಸ್ವೀಕರಿಸಲಿಲ್ಲವಂತೆ. ಕೊನೆಗೆ ರಾಜನ ಕುದುರೆ ಹತ್ತಿ ಹೋದ ಜಾಗಗಳಲ್ಲಿ ಅವರಿಗೆ ದಾನ ತೆಗೆದುಕೊಳ್ಳಲು ಪ್ರಾರ್ಥಿಸಿದನಂತೆ. ಹೆಗ್ಗಡಹಳ್ಳಿಯಲ್ಲಿ ಹಾಗೆ ಕೊಟ್ಟ ಜಮೀನು ಈ ಮಠಕ್ಕೆ ಇತ್ತು. ಈ ಹಳ್ಳಿಯಲ್ಲಿ ಶಿವಾಲಯವೊಂದಿತ್ತು. ಇಂದು ಅದರ ನವರಂಗದ ಸ್ತಂಭ, ಸ್ತಂಭದ ಮೇಲಿನ ನಂದಿ, ಉಳಿದಿದ್ದು ಲಿಂಗದ ಪಾಣಿ ಪೀಠಗಳು ಶಿಥಿಲವಾಗಿ ಬಿದ್ದಿವೆ. ಕ್ರಿ.ಶ. ೧೭೩೦ರಲ್ಲಿ ದೊಡ್ಡ ವೀರಪ್ಪನು ಕುಡುಮದ ಮಂಜುನಾಥ ದೇವರಿಗೆ (ಧರ್ಮಸ್ಥಳ) ಹೆಗ್ಗಡಹಳ್ಳಿಯಿಂದ ಸಿರಂಗಾಲದ ಉಭಯಗಡಿಗೆ ಸೇರುವ ಉಪಗ್ರಾಮ, ೨ನೂ ದೇವತಾಸೇವೆಗೆ, ಡಮರು, ತ್ರಿಶೂಳ ಸಂಕೇತಗಳನ್ನು ಹಾಕಿಸಿ ನೀಡಿದ್ದಾನೆ.[22] ಬಹುಶಃ ಇಲ್ಲಿದ್ದ ಶಿವಾಲಯವು ಮಂಜುನಾಥ ದೇವರ ಸಾಕ್ಷಿಗುಡಿಯಾಗಿದ್ದಿರಬೇಕು. ಸಿರಂಗಾಲದಲ್ಲಿಯೂ ಮಠದ ಜಮೀನು ಇರುವ ಕಾರಣ, ಮೇಲಿನ ಗುಡಿಯ ನಿರ್ವಹಣೆ ಈ ಮಠಕ್ಕೆ ಮೊದಲಿಗೆ ಇಟ್ಟಂತಿದೆ. ಮಠದ ಶ್ರೀಗಳಿಂದಲೇ ಗ್ರಾಮದೇವತೆಗೆ ಫಲಪೂಜೆ ನಡೆಯುತ್ತದೆ. ದೊಡ್ಡವೀರರಾಜೇಂದ್ರ ಒಡೆಯನ ಕಾಲದಲ್ಲಿ (೧೭೮೧-೧೮೦೯) ಮಠ ಜೀರ್ಣೋದ್ಧಾರವಾದಂತಿದೆ. ಈ ಮಠದ ಶಾಖೆಗಳು ಮತ್ತು ಜಮೀನು ಹಾರಂಗಿಯಲ್ಲಿ ಮುಳುಗಿವೆ.

**ನೂರುಬಾಡಿ ಮಠ :** ಹಾಲೇರಿ ಅರಸು ಕುಮಾರನಿಗೆಂದು ಕಟ್ಟಿದ ಕಟ್ಟಡ. ಮೊಲವೊಂದು ಬಂದು ಹೊಕ್ಕಿದ್ದರಿಂದ ರಾಜಕುಮಾರನ ವಾಸ್ತವ್ಯಕ್ಕೆ ಒಗ್ಗಿ ಬರದು ಎಂದು ಇದನ್ನ ಗುರುಮನೆ-ಗುರುಮಠ ವಾಗಲೆಂದು ರಾಜರು ತೀರ್ಮಾನಿಸಿದರಂತೆ. ಬಹುಶಃ ದೊಡ್ಡವೀರ ರಾಜೇಂದ್ರ ಒಡೆಯ ನಾಲ್ಕು ನಾಡಿನಲ್ಲಿ ಪುಲಿಯಂಡ ಮನೆತನದ ಭೂಮಿಯಲ್ಲಿ ಕ್ರಿ.ಶ, ೧೭೯೧ ಡಿಸೆಂಬರ್ ತಿಂಗಳಲ್ಲಿ ಅರಮನೆಯನ್ನು ಕುಟುಂಬದ ರಕ್ಷಣೆಯ ಕಾರಣವಾಗಿ ಕಟ್ಟಿಸಿ, ನೂರಂಬಾಡಿಯ ಕಟ್ಟಡವನ್ನು ಮಠಕ್ಕೆ ಬಿಟ್ಟಿರಬೇಕು. ಅದಕ್ಕೆ ಮೊಲದ ಕತೆ ಅಂಟಿದೆ. ಈ ಮಠ ರೂಪಿಸಿದ ವೇಳೆಯಲ್ಲಿ ಹಾಲೇರಿ ಅರಸರು ವೀರಭದ್ರನ ಹಲಗೆ ನೀಡಿದ್ದಾರೆ. ಇದು ಬಾಳೆಹೊನ್ನೂರು ಶಾಖೆಗೆ ಸೇರಿದ ಮಠ. ಇಲ್ಲಿ ದೇವರ ದಾಸಿಮಯ್ಯನ ಜಯಂತಿಯನ್ನು ಆಚರಿಸುತ್ತಾರೆ. ಕೊಡಗಿನ ಸಾಂಸ್ಕೃತಿಕಹೃದಯವಾದ ನಾಪೋಕ್ಲುವಿನಲ್ಲಿ ಇಡೀ ನಾಲ್ಕು ನಾಡಿಗೆ ಇದೊಂದೇ ವೀರಶೈವ ಮಠ ಉಳಿದಿದ್ದು ಇಂದು ಸಂಸಾರಿ ಮಠವಾಗಿದೆ. ವಾಸ್ತುವಿಕ ದೃಷ್ಟಿಯಿಂದ ಒಂದು ರಾಜಗೃಹದಂತಿದೆ. ಕೇಟೋಳಿರ, ಅಪ್ಪಾರಂಜ, ಹಾಗೂ ಬಿಟ್ಟಾಟಂಡಚೆ ಕೊಡವ ಮನೆತನಗಳು ಈ ಮಠಕ್ಕೆ ಮೊದಲಿಗೆ ನಡೆದುಕೊಳ್ಳುತ್ತಿದ್ದವು.

**ದೊಡ್ಡಕೊಡ್ಲಿಕಲ್ಲು ಮಠ:** ಪರಶುರಾಮ ಕೊಡಲಿ ಇಟ್ಟ ಕ್ಷೇತ್ರವಂತೆ. ಅಂತಾಗಿ ಕೊಡ್ಲಿಪೇಟೆಯ ಈ ಮಠ ಚೇಲಾಳ ಸಮಯದ್ದು, ಕೊಡಗಿನ ನಿರಂಜನ ಪೀಠ; ಮೊದಲ ಮಠವೆಂದು ಪ್ರತೀತಿ. ಮೊದಲಿಗೆ ಹುಲ್ಲು ಮಾಡು ಇದ್ದ ಮಠ, ಮಹಂತ ಸ್ವಾಮಿಗಳ ಗದ್ದುಗೆಯನ್ನು ಹೊಂದಿದದೆ. ಇದಕ್ಕೆ ೧೯೪೭ರಲ್ಲಿ ಕಲ್ಲು ಕಟ್ಟಡವನ್ನು ನಿರ್ಮಿಸಲಾಯಿತು. ಮಠಕ್ಕೆ ೨೫ ಎಕರೆ ಗದ್ದೆ, ಬಾಣೆ, ಜಹಗೀರು ಆಗಿ ಬಂದಿದೆ. ಚೌಡಮ್ಮ ಇಲ್ಲಿದೆ. ಒಳಗೆ ಮಠಾಂತರ್ಗತ ದೇಗುಲವಿದೆ. ದ್ರಾವಿಡ ಶೈಲಿಯ ದೇಗುಲ, ತ್ರಿಶೂಲ, ಢಮರು, ನಾಗಬಂಧ ಹಿಡಿದ ಚತುರ್ಭುಜ ಸ್ಥಾನಕ ಮೂರ್ತಿಗಳಾಗಿ ದಂಪತಿ ದ್ವಾರಭದ್ರ, ದ್ವಾರ ಭದ್ರೆಯರಿದ್ದಾರೆ. ಗರ್ಭಗೃಹ, ನವರಂಗದಲ್ಲಿ ಭುವನೇಶ್ವರಿ ಇದೆ. ಬ್ರಹ್ಮಕಾಂತ ಸ್ತಂಭಗಳಲ್ಲಿ ಆನೆ,

ಕಾಮಧೇನು, ವೀರಭದ್ರ, ಬೇಡರ ಕಣ್ಣಪ್ಪ ಶಿಲ್ಪಗಳ ಕೆತ್ತನೆ ಹೊಂದಿವೆ. ಆನೆ ಮರಿಗಳನ್ನು ಕೊಕ್ಕಿನಲ್ಲಿ ಹಿಡಿದ ಗಂಡುಭೇರುಂಡ ಶಿಲ್ಪವಿದೆ. ಗರ್ಭಗೃಹದಲ್ಲಿ ಮಹಂತ ಸ್ವಾಮಿಗಳ ಗದ್ದುಗೆ ಇದೆ.

**ಕಿರಿ ಕೊಡ್ಲಿಮಠ:** ಉಜ್ಜಯನಿ ಶಾಖೆಯ ಈ ಮಠದಲ್ಲಿ ಎರಿಬಸವ ಸ್ವಾಮಿಗಳ ಗದ್ದುಗೆ ಇದೆ. ಇಲ್ಲಿ 'ಮಠದ ಅಮ್ಮ' (ಬಹುಶಃ ಚೌಡಿ) ನಿಗೆ ಪೂಜೆ ಇದೆ. ದೀಪಾವಳಿಯಂದು ಸ್ವಂತ ಗದ್ದೆಯಿಂದ ಭತ್ತದ ತೆನೆತಂದು ಗದ್ದಗೆ ಬಳಿ ಇಟ್ಟು ಪೂಜಿಸುತ್ತಾರೆ.

**ದೊಡ್ಡಕೊಡ್ಲಿ ಊರು ಮಠ:** ಉಜ್ಜಯನಿ ಶಾಖೆಯ ಈ ಮಠದಲ್ಲಿ ಸಿದ್ದೇಶ್ವರರ ಗದ್ದುಗೆ ಇದೆ. ಮೊದಲಿಗೆ ಇಲ್ಲಿ ಸುಗ್ಗಿ ಸ್ತಂಭ ಇದ್ದು ದೇವೀರಮ್ಮನ ಮೂರು ಮುಖವಾಡಗಳನ್ನಿಟ್ಟು 'ದೇವೀರಮ್ಮನ ಸುಗ್ಗಿ' ಮಾಡುವ ರೂಢಿ ಇತ್ತು. ಈ ಮಠದ ದ್ವಾರದ ಹಿಂಬದಿಯ ಮೇಲಿನ ಮರದ ಮಚ್ಚಿನಲ್ಲಿ ಸ್ಖಾಲಿತ್ಯದಿಂದ ಕೂಡಿದ ಶಾಸನದ ಬರಹವಿದೆ – 'ಶ್ರೀಮತು ಯಿ ಮಟವ ಜಿರಣ ಉದರವ ಮಡಿದು ಸುಕ್ಲಸಂವತ್ಸರದಿ ಮಟವ ಕಟ್ಟಿ ದೇಸವಾರದ ನಂಜಯ್ಯ' –ಅಂದರೆ ೧೮–೧೯ನೇ ಶತಮಾನದ ಲಿಪಿಯನ್ನೂ ಹೋಲುವ ಈ ಶಾಸನದಿಂದ ತಿಳಿಯುವುದು ಹಾಲೇರಿ ಅರಸರ ಕಾಲದಲ್ಲಿ ಕ್ರಿ.ಶ. ೧೭೫೦ ಅಥವಾ ೧೮೧೦ರ ಸಮಯದಲ್ಲಿ ನಡೆದ ಜೀರ್ಣೋದ್ಧಾರ. ಇದನ್ನು ದೇಸವಾರದ ನಂಜಯ್ಯನು ಕಟ್ಟಿದ್ದಾನೆ.

**ಓಣಿಪುರದ ಮಠ:** ಮಲೆನಾಡಿನ ಈ ಮಠವನ್ನು ಕ್ರಿ.ಶ. ೧೮೯೯ರಲ್ಲಿ ಲಿಂಗರಾಜನು ಹೊರಗದ್ದುಗೆ ಪೂಜೆಗಾಗಿ ನಿರ್ಮಿಸಿ ೬ ಎಕರೆ ಜಮೀನು ಉಂಬಳಿ ನೀಡಿದ. ಬಾಳೆಹೊನ್ನೂರು ಶಾಖೆಗೆ ಸೇರಿದ, ಈ ಮಠ, ಗದ್ದುಗೆ ಮಣ್ಣಿನ ಕಟ್ಟಡ ಹೊಂದಿತ್ತು. ಈಗ ಸಂಸಾರಿ ಮಠವಾಗಿ, ಮಠದ ಮನೆ ಎಂದು ಕರೆಸಿ ಕೊಳ್ಳುತ್ತಿದೆ. ವಾರದಲ್ಲಿ ನಾಲ್ಕುದಿನ ಅಂದರೆ ಸೋಮವಾರ ಗುರುಗಳ ಹೆಸರಿನಲ್ಲಿ ಹುಚ್ಚಪ್ಪನವರ ಗದ್ದುಗೆ, ಮಂಗಳವಾರ ಚೌಡಮ್ಮನ ಹೆಸರಿನಲ್ಲಿ, ಬುಧವಾರ ಹಿರಿಯ ಹೆಸರಿನಲ್ಲಿ, ಗುರುವಾರ ಕರೆ ಅಮ್ಮನ ಹೆಸರಿನಲ್ಲಿ ಎಡೆ ಇಡುತ್ತಾರೆ. ಮೊದಲಿಗೆ ಹುತ್ತರಿ, ಜಟನಾಟಿ, ಅಂಜ್‌ಕೂಟ್ ಪಾತಾಳ ತೆರೆಕಟ್ಟಿಸುವ ಪದ್ದತಿ ಇತ್ತು.

**ಮುದ್ದಿನ ಕಟ್ಟೆ ಮಠ:** ಉಜ್ಜಯಿನಿ ಸದ್ಧರ್ಮ ಸಿಂಹಾಸನ ಶಾಖೆಯಾದ ಈ ಮಠದಲ್ಲಿ ಮೂಲ ಕರ್ತೃ ಸಿದ್ದಲಿಂಗ ಶಿವಾಚಾರ್ಯರ ಗದ್ದುಗೆ ಇದ್ದು, ಮಠದ ಇತಿಹಾಸ ಸುಮಾರು ಮುನ್ನೂರು ವರ್ಷಗಳದ್ದು, ಎಂದು ಹಾಲಿ ಮಠಾಧಿಪತಿಗಳ ಹೇಳಿಕೆ. ಒಮ್ಮೆ ಚಿಕ್ಕ ವೀರರಾಜೇಂದ್ರ ಜಹಗೀರು ಕೊಡಲು ಬಂದನಂತೆ ಆಗಿನ ಸ್ವಾಮಿಗಳು ಮಠದ ಶಿಷ್ಯರೇ ಸಾಕು, ರಾಜ ದಾನ ಬೇಡವೆಂದು ತಿಳಿಸಿದರಂತೆ, ಅಂತಾಗಿ ಮಠದ ಶಿಷ್ಯರೇ ಎಂಟು ಎಕರೆ ಜಮೀನನ್ನು ಮಠಕ್ಕೆ ಮುಡುಪಿಟ್ಟು ಕಂದಾಯ ಕಟ್ಟುತ್ತಿದ್ದಾರೆ. ಈ ಮಠಕ್ಕೆ ಬಿಳಿ ಚೌಡಿ, ಕರಿ ಚೌಡಿ ಇಬ್ಬರು ಇದ್ದು ಏಪ್ರಿಲ್–ಮೇ ತಿಂಗಳಲ್ಲಿ 'ಚೌಡಮ್ಮ'ನನ್ನು ಆಚರಣೆ ಮಾಡುತ್ತಾರೆ.

**ಗುಡ್‌ಗೂರು ಮಠ:** ಶ್ರೀಶೈಲ ಮಾಮಿಡಿ ಪರಂಪರೆಗೆ ಇರುವ ಎರಡು ಮಠಗಳಲ್ಲಿ ಸೇರಿದಂತೆ ಮೇಲಣಮಠ ಸಂಸಾರಿಮಠವಾಗಿದೆ. ಕೆಳಗಣ ಸಂನ್ಯಾಸಿ ಮಠ ಇಂದು ಅಸ್ತಿತ್ವದಲಿಲ್ಲ. ಮಠದ ಕುರುಹು ಮಾತ್ರ ಉಳಿದುಕೊಂಡಿದೆ. ಹುತ್ತರಿಯಲ್ಲಿ ಗದ್ದುಗೆಗೆ, ಬಸವಣ್ಣನ ದೇವಸ್ಥಾನಕ್ಕೆ ಕದಿರು ಇಡುತ್ತಾರೆ. ಮೊದಲಿಗೆ ದೇವರ ಗದ್ದೆಯಿಂದ ಕದಿರುತಂದು ಪೂಜಿಸಿ, ಈ ಮಠದವರೇ ಹಂಚುತ್ತಿದ್ದರು. 'ಚೌಡಮ್ಮನ ಅಡ್ಲು'ಎಂಬ ಜಾಗದಲ್ಲಿ ಚೌಡಿಗೆ ಪೂಜೆ ಇತ್ತು ಕಳ್ಳರನ್ನು ಆಕೆ ಹಿಡಿದು ಕೊಡುತ್ತಾಳೆ ಎಂಬ ನಂಬಿಕೆ ಆಕೆಯ ಆರಾಧನೆಯ ಹಿನ್ನೆಲೆಯಲ್ಲಿದೆ. ಗಳಿಗಸಿಗೆ (ಭೂಕಾಮುಗಾರನ ಸಂಕೇತ) ಗೌಡ ಜನಾಂಗದವರಿಂದ ಕೋತ್ರಿ(ಕಡ್ಡಿಯ ಬತ್ತಿ) ಇಡಿಸಿ ಬಲಿ ಕೊಡಿಸುತ್ತಾರೆ, ವಾರ್ಷಿಕವಾಗಿ.

**ಗುತ್ತಿಮಠ:** ಕ್ರಿ.ಶ. ೧೮೪೭ರ ಮಾದಾಪುರ ಶಾಸನದಲ್ಲಿ ಬರುವ ಶಾಂತವೀರಸ್ವಾಮಿಗಳ ಶಿಷ್ಯರಾಗಿದ್ದ ಸೋಮಶೇಖರ ಶಿವಯೋಗಿಗಳ ಗದ್ದುಗೆ (ಸೋಮಪ್ಪನ ಗದ್ದುಗೆ) ನಂಜರಾಯಪಟ್ಟಣದ ಈ ಗುತ್ತಿ ಮಠದಲ್ಲಿರುವಂತಿದೆ. ಜಂಗಮಗಣಾರಾಧನೆಯಲ್ಲಿ ನೀರನ್ನೆ ತುಪ್ಪ ಮಾಡಿ ಬಡಿಸಿದ ಪವಾಡ ಇವರ ಹೆಸರಿನಲ್ಲಿವೆ. ಕಾವೇರಿ ಕವಲುಗಳ ನಡುವೆ ದಿಬ್ಬ ದ್ವೀಪದಲ್ಲಿರುವ ಈ ಮಠದ ವಾಸ್ತು ದೇಗುಲದಂತೆಯೇ ಇದ್ದು, ಒಂದು ಕಾಲಕ್ಕೆ ಕೊಡಗು ಶ್ರೀರಂಗಪಟ್ಟಣ ಎಂಬ ಹೆಸರು ಈ ಪ್ರದೇಶಕ್ಕೆ ಬರಲು ಕಾರಣವಾದ ಶ್ರೀ ರಂಗನಗುಡಿ ಇದ್ದ ನೆಲೆ

ಇದಾಗಿರುವಂತೆ ತೋರುತ್ತದೆ. ಈ ಮಠಕ್ಕೆ ೧೦ ಎಕರೆ ಬಾಣೆ ಜಮೀನು ಇದೆ.

**ಬೆಂಮತ್ತಿ ಮಠ:** ದ.ಕೊಡಗಿನ ದನುಗಾಲದ ಬಳಿ ಇರವು ಈ ಮಠ ತೊರೆನೂರು ಮಠದ ಶಾಖೆಯಾಗಿ ಚೇಲಾಳ ಸಮಯಕ್ಕೆ ಸೇರಿದ್ದು, ಈಗ ಸ್ವತಂತ್ರ ಸಂಸಾರಿ ಮಠವಾಗಿದೆ. ಶಾಸನದಲ್ಲಿ ಸೂಚಿತ[23] ಸಂವತ್ಸರದ ಹಾಗು ಲಿಪಿ ದೃಷ್ಟಿಯಿಂದ ಕ್ರಿ.ಶ. ೧೮೧೪-೧೫ರಲ್ಲಿ ಲಿಂಗರಾಜ ಒಡೆಯ ದಾನ ನೀಡಿ ಹೆಸರಿಸಿರುವಂತೆ ತೋರುತ್ತದೆ. ಇದಕ್ಕೆ ವಿರಾಜಪುರ ಮಠ ಎಂದು ಹೆಸರಿದ್ದಂತೆ ತೋರುತ್ತದೆ.

**ದನಗಲ್ಲು ಮಠ:** ಯಡತೊರೆ ಮಠಕ್ಕೆ ಸಂಬಂಧಿಸಿದ ಬಹುಶಃ ಬೆಟ್ಟದಪುರದ ಶಾಖೆಯಾಗಿ ಶಾಸನದ[24] ಸಂವತ್ಸರ - ಲಿಪಿ ದೃಷ್ಟಿಯಿಂದ ಕ್ರಿ.ಶ. ೧೮೩೦-೩೧ರ ಚಿಕ್ಕವೀರರಾಜೇಂದ್ರ ಒಡೆಯನ ಕಾಲದಲ್ಲಿ ಬಹುಶಃ ಜೀರ್ಣೋದ್ಧಾರ ಮಾಡಿ ಶಿದ್ದಲಿಂಗ ಸ್ವಾಮಿ ಅವರಿಗೆ ಕೊಟ್ಟಂತಿದೆ

**ಮಾಯಮುಡಿ ಮಠ:** ಉಜ್ಜಯಿನಿ ಶಾಖೆಗೆ ಸೇರಿದ್ದು ಜಪದಕಟ್ಟೆ ಮಠವೆಂದೇ ಹೆಸರಾಗಿದೆ. ಶಾಸನದ ಲಿಪಿ ದೃಷ್ಟಿಯಿಂದ[29] ವೀರರಾಜೇಂದ್ರ ಒಡೆಯನ ಹೆಸರು ಹಾಗೂ ,ಅಂದಿನ ಗುರು ಗಂಗಾಧರ ದೇವರು ಎಂಬ ಹೆಸರೂ ಇರುವ ಕಾರಣ, ಕ್ರಿ.ಶ. ೧೮೮೯ರಲ್ಲಿ ವೀರಾಜೇಂದ್ರ ಒಡೆಯನಿಂದ ರೂಪಿತವಾಗಿರುವಂತಿದೆ. ಇಲ್ಲಿ ಹುತ್ತರಿ, ತುಲಾಸಂಕ್ರಮಣದ ಆಚರಣೆ ಉಂಟು. ಹುತ್ತರಿ ಸಮಯದಲ್ಲಿ ಈ ಮಠದ ಸ್ವಾಮಿಗಳು ಕುದುರೆಯ ಮೇಲೆ ಹೋಗಿ ಆಶೀರ್ವಾದ ಮಾಡಿ ಮೇಲೆ ಮಾಯ ಮುಡಿ (ಕೋಲು ಬಾಣೆಯಲ್ಲಿ) ಹುತ್ತರಿ ಕೋಲಾಟ ಆರಂಭವಾಗುತ್ತಿತ್ತು. ವೀರಶೈವರೂ ಕೊಡವ ವೇಷದಲ್ಲಿ ಆ ಕೋಲಾಟದಲ್ಲಿ ಭಾಗವಹಿಸುತ್ತಿದ್ದರು. ಮಠದ ಬಳಿ ಕೊಂಡ ಹಾಯುವ ಪದ್ಧತಿ, ಪಾಷಾಣಮೂರ್ತಿ ತೆರೆಯನ್ನು ಪಾಲೆಯರಿಂದ ಕಟ್ಟಿಸುವ ಪದ್ಧತಿ ಇತ್ತು. ಎರವರಿಂದ, ಗೂಳಿಗ, ಚಾವುಂಡಿ ಮುಂತಾದ ನೆಲೆ ದೈವಗಳಿಗೆ ಆಹಾರ ಕೊಡಿಸುವ ಪದ್ಧತಿ ಇತ್ತು. ಗುರುಸ್ಥಲದ ಈ ಮಠ ಇಂದಿಗೆ ಮೂರು ತಲೆಮಾರುಗಳ ಹಿಂದೆ ಸಂಸಾರಿ ಮಠವಾಯಿತು. ಕೋಸೂರಿನ ಅಮ್ಮಕೊಡವರಾದ ಪೆಮ್ಮಚ್ಚೆ ಮನೆತನದವರು ಉಗಾದಿ ಸಮಯದಲ್ಲಿ ಈ ಊರಿನ ಮಠದ ಜಂಗಮರನ್ನು ಕರೆಸಿ ತಮ್ಮಲ್ಲಿನ ಈಶ್ವರಲಿಂಗಕ್ಕೆ ಮಹಾಪೂಜೆ, ಕೈಮಡ (ಹಿರಿಯರ ಸ್ಮಾರಕ ಕಟ್ಟಡ) ಸಮಾಧಿಗಳಿಗೆ ಸಂಸ್ಕಾರ ಮಾಡಿಸುತ್ತಾರೆ.

**ಮಡಿಕೆ ಬೀಡುಮಠ:** ಮುಪ್ಪಿನ ಸ್ವಾಮಿ ಗದ್ದುಗೆ ಇರುವ ಈ ಮಠಕ್ಕೆ ಮುಪ್ಪಿನ ಸ್ವಾಮಿ ಮಠ, ಮೂಗನ ಮಠ ಎಂದೂ ಹೆಸರಿದೆ. ಸಂಸಾರಿ ಮಠವಾಗಿ ಹೆಂಗಳೆಯರಿಬ್ಬರಿದ್ದರು. ಇಂದು ಅವರೂ ಇಲ್ಲ ಕ್ರಿ.ಶ. ೧೬೧೫ರ ಸುಮಾರಿನಲ್ಲಿ ಕೆಳದಿ ವೆಂಕಟಪ್ಪ ನಾಯಕನು ಚನ್ನಬಸವಪ್ಪ ಸ್ವಾಮಿ ಅವರಿಗೆ ಗುರುಪುರಮಠವನ್ನು ಉಂಬಳ ಸಹಿತ ನೀಡಿದೆ. ಆ ಪರಂಪರೆಯಲ್ಲಿ ಬಹುಶಃ ಬಂದ ಮತ್ತೊಬ್ಬ ಚರಮೂರ್ತಿ ಚನ್ನಬಸಪ್ಪ ಸಂನ್ಯಾಸಿ ಕ್ರಿ.ಶ. ೧೮೭೭ರಲ್ಲಿ ಅಲ್ಲಿದ್ದು[25] ಅಂತ್ಯಕಾಲದಲ್ಲಿ ಮಡಿಕೆ ಬೀಡಿಗೆ ಬಂದು ಮುಪ್ಪಿನ ಸ್ವಾಮಿ ಎನಿಸಿ ಮಠದಲ್ಲಿ ನೆಲೆ ನಿಂತಿ ರಬೇಕು. ಅಂದರೆ ಕ್ರಿ.ಶ. ೧೬೧೫ರ ಸಮಯದಲ್ಲಿ ಕೊಡಗಿನ ಪಾಲ್ವರೆಯನ್ನು ಗೆದ್ದು ವೆಂಕಟಪ್ಪ ನಾಯಕನ ಆಡಳಿತಕ್ಕೆ ಒಳಪಟ್ಟತ್ತೆಂದು ಹೇಳಲಾಗಿರುವುದರಿಂದ[26] ಪಾಲ್ವರೆಯ ಸಮೀಪದ ಮಡಿಕೆ ಬೀಡಿನಲ್ಲಿ ಗುರಪುರ ಮಠದ ಶಾಖೆಯನ್ನು ಮಠವನ್ನು ನಿರ್ಮಿಸಿರುವ ಸಾಧ್ಯತೆ ಇದೆ. ಆ ಕಾರಣ, ಅದನ್ನ ಅರಸಿ ಚೆನ್ನಬಸವಪ್ಪ ಸ್ವಾಮಿ ಇಲ್ಲಿಗೆ ಬಂದು ನೆಲೆಸಿದಂತೆ ತೋರುತ್ತದೆ. ಈ ಮಠವನ್ನು ಈಗ ಮಠದ ಮನೆ ಎನ್ನುತ್ತಾರೆ.

**ನಾಣಚ್ಚಿ ಮಠ:** ಶ್ರೀ ಮಂಗಲ ನಾಡು ಪೂರ್ವಬಾಡಗದ ಬಳಿ ಹಾಲೇರಿ ಅರಸರು ನಿರ್ಮಿಸಿದ ಈ ಮಠಕ್ಕೆ ೨೮ ಎಕರೆ ಭೂಮಿ, ಹಾಗು ಕಾಡು ನೀಡಿದ್ದರಂತೆ. ಮಠಕ್ಕೂ ನೆರೆಯ ಕುಟ್ಟದ ಗ್ರಾಮದೇವತೆ ಕರಿಂಗಾಲೀ ಅವ್ವ (ಕುಟ್ಟಲಮ್ಮ) ಗೂ ಜಾನಪದ ಸಂಬಂಧವಿದೆ. ಆಕೆಯ ವಾರ್ಷಿಕ ಜಾತ್ರೆಯಲ್ಲಿ, ಕೇರಳದ ..ಮುನ್ನೂಟ ಜಾತಿಯವರು ಮಾತ್ರ 'ತೆರೆ'ಕಟ್ಟುವ ಅವಕಾಶವಿದ್ದು ಅವರ ಮೇಲೆ, ಆಕೆಯ ತಿರುವಳ (ಆವೇಶ) ಬಂದಾಗ ಕೇಳುತ್ತಾಳೆ : "ನಾಣಚ್ಚಿ ಮಠತ್ತುಳ್ಳ ಗುರುಗಳ ಉಂಡೋ" - ನಾಣಚ್ಚಿ ಮಠದ ಗುರುಗಳ ದಯಮಾಡಿಸಿದ್ದಾರೆಯೆ?

**ಹೆಗ್ಗಡಹಳ್ಳಿ ಮಠ:** ಶ್ರೀ ಶೈಲ ಪೀಠದ ಶಾಖೆಗೆ ಸೇರಿದ (ಈಗಿನ ಹಾಸನ ಜಿಲ್ಲೆಯ) ಈ ಮಠ ಒಂದು ಕಾಲಕ್ಕೆ ಕೊಡಗಿನ ಗಡಿಯ ಮಠವಾಗಿತ್ತು.

ವೀರರಾಜೇಂದ್ರ ಒಡೆಯ ಈ ಮಠಕ್ಕೆ ಜಹಗೀರು ನೀಡಿದ್ದ. ವಾರ್ಷಿಕವಾಗಿ ಮಕರ ಸಂಕ್ರಾಂತಿಯ ಮರುದಿನ ನಡೆಯುವ ಗೊಡ್ಡು ದೊಡ್ಡಯ್ಯನ ಜಾತ್ರೆ (ಈಗ ಹಾಸನ ಜಿಲ್ಲೆ, ಕೊಡಗಿನ ಕನ್ನಾಂಬ ದೊಡ್ಡಯ್ಯನಿಗೆ ಇದರ ಸಂಬಂಧವಿದೆ) ಹಾಗು ಶನಿವಾರಸಂತೆ ಬಳಿಯ ಹುಲುಕೋಡಯ್ಯನ ಜಾತ್ರೆಗೂ ಈ ಮಠದ ಸಾಂಸ್ಕೃತಿಕ ಸಂಬಂಧವಿದ್ದು ಅಂದು ಗುರುಗಳು ಅಲ್ಲಿಗೆ ದಯ ಮಾಡಿಸಲೇಬೇಕು. ಮಠದ ವಿಶೇಷವೆಂದರೆ ಹರಿಜನರಿಗೆ ಕೊದೀವಳಿ-ಕಣೆಯ ದೀಕ್ಷೆ ನೀಡಿ ಮುಖ್ಯ ಸ್ಥಳವನ್ನಾಗಿ ಮಾಡಿ ಮಠದ ಉತ್ಸವಾದಿ ಜಾತ್ರೆಗಳಲ್ಲಿ ಗುರುಗಳೊಡನೆ ಪಾಲ್ಗೊಳ್ಳುವಂತೆ ಮಾಡುವುದು, ಅವರಲ್ಲಿ ಹವ್ಯ ಕವ್ಯಾದಿಗಳನ್ನ ನಡೆಸಲು ಅಧಿಕಾರ ನೀಡುವುದು. ಅವರು ಸಸ್ಯಾಹಾರಿಗಳೂ ಹೌದು

**ಚಂಗಡಹಳ್ಳಿಮಠ:** ಮೊದಲು ಕೊಡಗಿಗೆ (ಇಂದು ಹಾಸನ ಜಿಲ್ಲೆಗೆ) ಸೇರಿದ್ದ, ಚಿತ್ರದುರ್ಗದ ಜಗದ್ಗುರುಗಳ ಖಾಸಾಮಠ ಕ್ರಿ.ಶ. ೧೭೩೦-೫೦ರ ಕಾಲದ್ದು, ಇಲ್ಲಿ ಮುರುಘಾ ಸಂಪ್ರದಾಯದ ೧೧ನೇ ಜಗದ್ಗುರುಗಳ ಗದ್ದುಗೆ ಇದೆ (ಶಿರಹಟ್ಟಿ ಶಿದ್ದಲಿಂಗ ಸ್ವಾಮಿಗಳು) ಮಠದ ಪ್ರವೇಶ ದ್ವಾರದ ಬಳಿ ಶಾಸನವೊಂದಿದ್ದು ಸಂಬಂಧಿಸಿದ ಕೆರೆಯ ವಿಷಯವನ್ನು ತಿಳಿಸುವಂತಿದೆ. ಕೊಡಗಿನಲ್ಲಿ ಈ ಮಠಕ್ಕೆ ಸೇರಿದ ಜಮೀನು ಇದೆ.

**ರಾಜಾಪುರದಮಠ:** ಹೇಮಾವತಿ - ಯಗಚಿ ನದಿಗಳ ಸಂಗಮದ ಬಳಿ ಕೊಡಗಿಗೆ ಸೇರಿದ್ದ ತೇಜೂರು ಮಾಯಿ ಗೌಡನ ರಾಜಾಪುರ ಮಠ ಇತ್ತು. ಅಣೆಕಟ್ಟಿನಲ್ಲಿ ಅದು ಮುಳುಗಿದ ಮೇಲೆ ಬಾಳೆಹೊನ್ನೂರು ಶಾಖೆ ಶಿಷ್ಯ ವರ್ಗದ ಈ ಮಠವನ್ನು ಶಿಷ್ಯಮಂಡಲಿ ಅಪೇಕ್ಷೆಯ ಮೇರೆಗೆ ೧೯-೪-೧೯೫೧ರಲ್ಲಿ, ಕೊಡಗಿನ ಶಿಡುಗಳಲೆ ಮಠ ಪಟ್ಟದ ಬಸವರಾಜ ದೇಶಿಕೇಂದ್ರದಿಂದ, ಶ್ರೀ ಚಂದ್ರಶೇಖರ ಸ್ವಾಮಿಗಳಿಗೆ ಶಿವದೀಕ್ಷಾ ಪಟ್ಟಾಭೀಷೇಕವಾಗಿ ಇಲ್ಲಿ ಮಠ ಸ್ಥಾಪನೆಗೊಂಡಿತು.

**ಮೈಸೂರಿನ ಕೊಡಗು ಮಠ:** ಇದಕ್ಕೆ ಕಾಂತಿ ಮಹಾಸ್ವಾಮಿಗಳ ಮಠ ಎಂಬ ಹೆಸರೂ ಇದೆ. ಮೈಸೂರಿನ ಬಸವೇಶ್ವರ ರಸ್ತೆಯಲ್ಲಿದ್ದು ಮಹಾರಾಜರ ಕುದುರೆಯನ್ನ ಪಳಗಿಸಿ ತೋರಿಸಿದ ಸಹಾಸಕ್ಕಾಗಿ ಸ್ವಾಮಿಗಳಿಗೆ ಜಹಗೀರು ನೀಡಿದರಂತೆ. ಮಠದ ವತಿಯಿಂದ ದಾಸೋಹ ನಡೆಸುತ್ತಿದ್ದರು. ಈಗ ಸಂಸಾರಿ ಮಠವೂ ಆಗಿದೆ. ಸೋಮವಾರ ಪೇಟೆ ಮಠದೊಡನೆ ಸಮಬಂಧವು ಇತ್ತು.

**ಸಂಗಮ ಪಟ್ಟದ ಮಠ:** ಶ್ರೀ ಮಂಗಲ ನಾಡಿನ ನಾಲ್ಕೇರಿ ಗ್ರಾಮದಲ್ಲಿ ೧೯೭೪ರಲ್ಲಿ ನದಿಸಂಗಮದ ಬಳಿ ನಿರ್ಮಿತವಾಯಿತು. ೪-೫ ವರ್ಷಗಳ ಕಾಲ ಸ್ವಾಮಿಗಳು ಅಲ್ಲಿದ್ದು ಈಗ ಬಿಟ್ಟು ಹೋಗಿದ್ದಾರೆ.

**ಸಿದ್ದೇಶ್ವರ ಮಠ:** ಕೊಡಗು ಶ್ರೀ ರಂಗ ಪಟ್ಟಣ - ಮಾಲ್ದಾರೆ ಆಚೆ ಸಿದ್ದೇಶ್ವರ ಬೆಟ್ಟದಲ್ಲಿ ಸಿದ್ದೇಶ್ವರ ಗದ್ದುಗೆ ಮುರುಘಾಸಂಪ್ರದಾಯದ ಮಠವೊಂದು ೧೭ನೇ ಶತಮಾನದಲ್ಲಿ ಇತ್ತು ಎಂಬುದು ಪ್ರತೀತಿಯಲ್ಲಿದೆ.

ವೀರರಾಜ ಪೇಟೆ ತಾಲೂಕಿನಲ್ಲಿ 18, ಮಡಿಕೇರಿ ತಾಲೂಕಿನಲ್ಲಿ 18 ಹಾಗು ಸೋಮವಾರ ಪೇಟೆ ತಾಲೂಕಿನಲ್ಲಿ 55 ಮಠಗಳು ಕಾಣಬರುವಲ್ಲಿ ಐತಿಹಾಸಿಕ ಎಳೆಯನ್ನು ಗಮನಿಸಬಹುದು. ಅಂದರೆ ಉತ್ತರ ಕೊಡಗಿನ ಭಾಗವು ಹಾಲೇರಿ ಅರಸರ ಮುನ್ನವೆ ಹೆಚ್ಚುಕಾಲ ವೀರಶೈವ ಚಂಗಾಳ್ವಾರಸರ ಆಡಳಿತಕ್ಕೆ ಇದ್ದುದು ಈ ಸಂಖ್ಯೆಗೆ ಕಾರಣ ತಿಳಿಸುವಂತಿದೆ. ದ. ಕೊಡಗಿನಲ್ಲಿ ಪ್ರಭಾವ ಕಡಿಮೆ ಕಾಣುತ್ತದೆ. ಅಲ್ಲದೆ ಈ ಎರಡೂ ಅರಸು ವಂಶಗಳು ಕೆಳದಿ ಅರಸರಂತೆಯೆ -ಗುರು-ವಿರಕ್ತ ಮಠಗಳ ಸಮನ್ವಯವನ್ನೂ ಪೋಷಿಸಿರುವುದನ್ನು ಕಾಣಬಹುದು.

ಒಟ್ಟಾರೆ ಚಂಗಾಳ್ವ-ಹಾಲೇರಿ ಅರಸರ ಕೊನೆಯವರೆಗೂ ವೀರಶೈವ ಮಠಗಳಿಗೆ ರಾಜಪೋಷಣೆ ದೊರೆತು ನಂತರ ಅವುಗಳ ಪ್ರಭಾವ ಇಳಿಮುಖವಾದರೂ ತಮ್ಮ ಅಸ್ತಿತ್ವವನ್ನೂ ಪೂರ್ಣವಾಗಿ ಅಳಿಸಿಕೊಳ್ಳಲಿಲ್ಲ. ಅವು ವೀರಶೈವ ಧರ್ಮದ ಸಸಿಗಳನ್ನು ಸಾಂಸ್ಕೃತಿಕ ವೃಕ್ಷದ ಪುಷ್ಪಗಳನ್ನಾಗಿ ಬೆಳೆಸಿದುವೇ ವಿನಾ ಒತ್ತಾಯದ ಮತಾಂತರದ ಮುಳ್ಳಾಗಿ ಕೊಡಗಿನಲ್ಲಿ ಬೆಳೆಯಲಿಲ್ಲ. ಆಳಿದ ವೀರಶೈವ ಅರಸು ವಂಶಗಳೂ ಕೂಡ ಸಾಮೂಹಿತ ಮತಾಂತರದ ಒತ್ತಾಯದ ತಿಳಿಗೇಡಿ ಕೆಲಸಕ್ಕೆ ಕೈ ಹಾಕದೆ, ರಾಜಕುಟುಂಬದ ವೈವಾಹಿಕ ಸಂಬಂಧಕ್ಕೆ ಮಾತ್ರ ಸೀಮಿತಗೊಳಿಸಿಕೊಂಡರು. ಈ ಅರಸು ಕೂಡ

ತಮ್ಮ ಸಾಂಸ್ಕೃತಿಕ ಕ್ಷೇತ್ರವಾಗಿದ್ದ ಈ ಅನೇಕ ಮಠಗಳ ವಾಸ್ತುವನ್ನೂ, ದೇಗುಲ, ವಾಸ್ತುವನ್ನು ಇಂಡೋ–ಇಸ್ಲಾಮಿಕ್ ಶೈಲಿಗೆ ಅಳವಡಿಸಿರುವುದು ಸಮನ್ವಯ ದೃಷ್ಟಿಯದ್ಯೋತಕವಾಗಿದೆ. ಇಲ್ಲಿನ ವೀರಶೈವ ಮಠಗಳು ಸಾಮಾನ್ಯ ಜನತೆಯ ಮೇಲೆ ತಮ್ಮ ಸಾಂಸ್ಕೃತಿಕ ಚಹರೆಗಳನ್ನು ಗಾಢವಾಗಿ ಒತ್ತಿದಂತೆ, ಅವರ ಜನಪದ ಸಂಸ್ಕೃತಿಯಲ್ಲಿ ಮಿಳಿತವಾಗಿ ಅದನ್ನು ತಮ್ಮಲ್ಲಿಯೂ ಅಳವಡಿಸಿಕೊಂಡುದುದನ್ನು, ಹುತ್ತರಿ, ತುಲಾಸಂಕ್ರಮಣ, ಸುಗ್ಗಿಕಟ್ಟೆಹಬ್ಬ, ಮದ್ದಿನ ತಕ್ಕಿ, ತೆರೆ–ಕೋಲ ಕಟ್ಟಿಸುವಿಕೆಯನ್ನು ಮಠಗಳು ಆಚರಿಸುತ್ತಿದ್ದ ಬಗೆಯಿಂದ ಕಾಣಬಹುದು. ಹಾಗೆಯೇ ಕೊಡಗಿನ ಜನತೆ, ಮಠದ ಸ್ವಾಮಿಗಳನ್ನು ಹುತ್ತರಿಯ ಆಶೀರ್ವಾದದ ಕೋಲು ಪಡೆಯಲು, ಕೈಮಟಗಳ ಸಂಸ್ಕಾರ ದೇಗುಲಗಳ ಆರಾಧನೆ–ಉದ್ಘಾಟನೆಗೆ ಕರೆದೊಯ್ಯುತ್ತಿದ್ದು ಮನೆಗಳಲ್ಲಿ ಭಸ್ಮ ಸಂಪುಟಗಳ ನಿರ್ವಹಣೆ, ಮಠಕ್ಕೆ ಹುತ್ತರಿ ಕದಿರು ತಂದು ಪೂಜೆಗಿಟ್ಟು ಒಯ್ಯುವುದು ಆ ಮಠಗಳ ಸಾಂಸ್ಕೃತಿಕ ಪ್ರಭಾವದ ನಿದರ್ಶನವಾಗಿದೆ. ಇದೊಂದು ರೀತಿ ವಿನಿಮಯ ಪ್ರಭಾವ. ಇಂದಿನ ಅಗತ್ಯಗಳಿಗೂ ಈ ಮಠಗಳು ಅನುವಾಗಿ, ವಿದ್ಯಾದಾನ–ಶಾಲಾ ನಿರ್ವಹಣೆ, ವಿದ್ಯಾರ್ಥಿವೇತನ ನೀಡಿಕೆ, ಶೀಲಾಭಿವೃದ್ಧಿಗೆ ಕೊಡಗು, ಶಿವಾನುಭವ ಗೋಷ್ಠಿಗಳ ನಿರ್ವಹಣೆ, ವಿಧವಾ ವಿವಾಹ ಇತ್ಯಾದಿ ಸಾಂಸ್ಕೃತಿಕ, ಶೈಕ್ಷಣಿಕ ಸಾಮಾಜಿ ಸೇವೆಗಳ ಮೂಲಕ ಸ್ಪಂದಿಸಿ ವರ್ತಮಾನಕ್ಕೂ ಪ್ರಸ್ತುತವೆನಿಸಿಕೊಂಡಿವೆ. ಅಲ್ಲದೆ ಕೊಡಗಿನಲ್ಲಿ ಕನ್ನಡದ ವಾತಾವರಣವನ್ನು ಮೂಡಿಸುವಲ್ಲಿ ತಮ್ಮ ದೇಣಿಗೆಯನ್ನು ನೀಡಿವೆ. ಸಾಂಸ್ಕೃತಿಕ ಪ್ರತಿಷ್ಠಾನವನ್ನು ರೂಪಿಸಿದೆ.

ಎಲ್ಲಾ ವೀರಶೈವ ಮಠಗಳ ಗೋಷ್ವಾರೆಯನ್ನು ಹೀಗೆ ಸೂಚಿಸಬಹುದು

| ಸಂಪ್ರದಾಯ | ಸ್ವಾಮಿಗಳಿ ರುವುದು | ಸಂಸಾರಿ ಮಠ | ಪರಾಧೀನ / ಮುಳುಗಡೆ | ಒಟ್ಟು |
|---|---|---|---|---|
| 1. ಬಾಳೆಹೊನ್ನೂರು | 1 | 16 + 1 | 8 | 26 |
| 2. ಶ್ರೀ ಶೈಲ<br>ಶ್ರೀ ಶೈಲ ನಿಡುಮಾಮಿಡಿ | | 1 + 1 | 6 | 10 |
| | | 1 | 1 | |
| 3. ಉಜ್ಜಯಿನಿ | 3 | 2 | 3 | 8 |
| 4. ಚೀಲಾಳಸಮಯ | 3 | 3 | 15 + 3 | 24 |
| 5. ಮುರುಘಾಸಮಯ | 6 | 2 + 1 | 4 | 13 |
| 6. ಬೆಟ್ಟದ ಪುರ<br>ಲೀಲಾಸ್ಯಸಮಯ | - | - | 3 | 3 |
| 7. ಅನಿಶ್ಚಿತ ಜಂಗಮ ಮಠಗಳು | 1 | 1 + 1 | 2<br>2 | 7 |
| ಒಟ್ಟು | 14 | 30 | 47 | 91 |

## ಅಡಿ ಟಿಪ್ಪಣಿಗಳು

1. ಡಿ.ಎನ್. ಕೃಷ್ಣಯ್ಯ: 'ಕೊಡಗಿನ ಇತಿಹಾಸ', ಮೈಸೂರು, ೧೯೭೪, ಪು. ೪೪
2. ಶ್ರೀ. ಜಚನಿ 'ಚಂದ್ರಗುಂಡ ಶಿವಾಚಾರ್ಯ', ಜಚನಿ ಪುಸ್ತಕ ಭಂಡಾರ, ಬೆಂಗಳೂರು ೧೯೬೪, ಪು.೬, ೨೩, ೨೫; ಮತ್ತು 'ಯುಗಪುರುಷ ಶ್ರೀ ವಿರೂಪಾಕ್ಷ ದೇಶಿಕೇಂದ್ರರು', ಶ್ರೀ ಜಚನಿ ಅಧ್ಯಯನ ಪೀಠ – ಸಂಶೋಧನಾ ಸಂಸ್ಥೆ, ಬೆಮಗಳೂರು, ೧೯೯೦, ಪು ೨
3. Coorg District Gazetteer, Bangalore, 1965 P. 43-45
4. 'ಕೊಡಗಿನ ಕೊಲೆಕಲ್ಲುಗಳು' ಪರತಿಸಿರಿ (ಹೆಚ್.ಪಿ. ವೀರನಾಯಕ 'ಪರತಿ' ನೆನಪಿನ ಸಂಪುಟ) ಪರ್ತಿಕೋಟೆ, ೧೯೮೭, ಪು. ೭೨೦
5. ಎಂ.ಜಿ. ನಂಜುಡಾರಾಧ್ಯ 'ಶ್ರೀ ನಿಡುಮಾಮಿಡಿ ಶ್ರೀ ಶೈಲ ಪೀಠ ಪರಿಚಯ' ಮಾಮಿಡಿ, ಸಂ. ೪, ಸಂ. ೧೬, ೧೯೮೪, ಗೂಳೂರು ಪು. ೪೬
6. ಎ.ಕ. ಸಂಪುಟ. ೧ (ಪರಿಷ್ಕೃತ್ತ) ಯಡೂರು ೬೨ 'ಪರತಿಸಿರಿ' ಪು. ೭೧೬
7. ಅದೇ ನಂದಿಗುಂದ ೮೩
8. ಅದೇ, ಗಣಗೂರು ೫೭
9. ಅದೇ, ಚೇರಲಸಿರಿಮಂಗಲ ೩೫
10. "ಕೊಡಗಿನ ಕೊಲೆಕಲ್ಲುಗಳು", : 'ಪರತಿಸಿರಿ' ಅದೇ, ಪು ೭೦೦, ೭೪೫
11. ಕೆಳದಿಗುಂಡಾಜೋಯಿಸ್ : 'ಇಕ್ಕೇರಿಯ ಐತಿಹಾಸಿಕ ಹಿನ್ನೆಲೆ,' ಕೆಳದಿ, ೧೯೨೫, ಪು, ೭೫.
12. ತಾಪ್ರುಪಪ್ಲು ಮಠದ ಮುಖ್ಯಸ್ಥ ಜಂಗಮರ ಶ್ರೀ ಚನ್ನಾವೀರಯ್ಯ ಅವರು ತಿಳಿಸಿದ್ದು
13. ಡಿ.ಎನ್. ಕೃಷ್ಣಯ್ಯ: ಅದೇ ಪು. ೧೨೦ ರೀತ್ಯ, ಹಾಲೇರಿ ಒಡೆಯರ ಅಂಗಣದಲ್ಲಿ ಬೆಳಗಿನ ಜಾವದಲ್ಲಿ ಕಂಚಿನ ಕೊಂಬನ್ನು ಜೋರಾಗಿ ಊದಿದಾಗ ಆ ಸ್ವರವು ಎಲ್ಲಿಯವರೆಗೆ ತಲುಪಿತೋ ಆ ಸೀಮೆಯೆಲ್ಲಾ ಒಂದು ಕೊಂಬು ಆಯಿತು. ಅಲ್ಲಿ ಕೊಂಬು ಊದಿ ಆ ಸ್ವರವು ಮುಂದೆ ಎಲ್ಲಿ ನಿಂತಿತೋ ಅದು ಮುಂದಿನ ಕೋಂಬು ಆಯಿತು. ಹೀಗೆ ಕೊಡಗು ದೇಶದಲ್ಲಿ ೧೨ ಕೊಂಬುಗಳಾದುವು.
14. Coorg Memoirs, 1869, P. 175-176
15. ಡಾ: ಶ್ರೀ. ಜಚನಿ : 'ರುದ್ರ-ಭದ್ರ-ರೇಣುಕ' ಮಾಮಿಡಿ ಪ್ರಕಾಶನ, ಬೆಮೆಗಳೂರು ೧೯೮೫, ಪು- ೬೩
16-17. ಡಾ|| ಎಚ್.ಎಂ. ಮರುಳಸಿದ್ದಯ್ಯ: 'ವೀರಶೈವ ಮಠಗಳ ಸಾಮಾಜಿಕ ಹೊಣೆಗಾರಿಕೆ', ಉಪನ್ಯಾಸ ಸಂಚಯ, (ಸಂ): ಟಿ.ಆರ್. ಮಹದೇವಯ್ಯ: ಶ್ರೀ ಸರ್ವಭೂಷಣ ಮಠ, ಬೆಂಗಳೂರು ೧೯೯೧, ಪು. ೨೬೯
18. ಎ.ಕ. ಸಂಪುಟ ೧, ಅಬ್ಬಿ ಮಠ ೬೭.
19. ಈ ದಾಖಿಲೆಯನ್ನು ಹೊಸಪಟ್ಟಣದ ಶ್ರೀ. ಬಿ.ಈ. ವೀರರಾಜು ಅವರು ತೋರಿಸಿದರು.
20. ಕೇರಳ ಹಾಗು ದ.ಕ.ಜಿಲ್ಲೆಯ ದೈವಗಳಿಂದ ಪ್ರಭಾವಿತರಾಗಿ ಕಟ್ಟಿಸುತ್ತಿದ್ದ, ಚಾವುಂಡಿ, ನಚ್ಚುಟ್ಟಿ, ಭೈರವ, ಮುಂದರ್ಣ ಮೂರ್ತಿ ಕುಟ್ಟಿಚಾತ, ಪೊಟ್ಟಕುಳಿಯ, ವಿಷ್ಣುಮೂರ್ತಿ, ಪಂಜುರ್ಲಿ ಮುಂತಾದ ವಿಧದ ಕೋಲಗಳು
21. ಎ.ಕ. ಸಂಪುಟ ೮, (ರೈಸ್ ಆವೃತ್ತಿ), ನಗರ 32
22. ಎ.ಕ.ಸಂಪುಟ ೧, ಹೆಗ್ಗಡಹಳ್ಳಿ ೪೦, ೪೧
23-24. ಎ.ಕ. ಸಂಪುಟ ೧ ದನಗಲ್ಲು ೧೦೩, ೧೦೪
25. 'ಗುರುಪುರ ಮಠದ ಇತಿಹಾಸ' ಬಸವಪಥ, ಬೆಂಗಳೂರು, ೧೯೮೦? ಪು. ೮೮
30. ಕೆಳದಿಗುಂಡಾಜೋಯಿಸ್: ಇಕ್ಕೇರಿಯ ಐತಿಹಾಸಿಕ ಹಿನ್ನೆಲೆ, ಅದೇ, ಪು. ೩೫, ೫೨

ಎಸ್.ಶಿವಣ್ಣ

# ಚಿತ್ರದುರ್ಗ'ಬೃಹನ್ಮಠ' ಸಂಗ್ರಹದಲ್ಲಿನ ಕೆಲವು ಕೃತಿಗಳು

ಚಿತ್ರದುರ್ಗದಲ್ಲಿನ ಶೂನ್ಯ ಸಿಂಹಾಸನ ಪರಂಪರೆಯ ಬೃಹನ್ಮಠ ವೀರಶೈವ ಸಮಾಜದ ವಿರಕ್ತಮಠಗಳ ಮುಡಿಯಮಾಣಿಕ. ಇಲ್ಲಿನ ಗುರು ಪರಂಪರೆ ಕ್ರಿ.ಶ. ಹದಿನೇಳನೆಯ ಶತಮಾನದ ಉತ್ತರಾರ್ಧದಿಂದ ಇಂದಿನವರೆಗೂ ಮುಂದುವರಿದಿದೆ. ಬಿಚ್ಚುಗತ್ತಿ ಬರಮಪ್ಪ ನಾಯಕ ಮುರಿಗಾ ಶಾಂತವೀರಸ್ವಾಮಿಗಳು (?-1703) ಚಿತ್ರದುರ್ಗದಲ್ಲಿ ಸ್ಥಿರವಾಗಿ ನೆಲಸಲು ಕಾರಣೀಭೂತನಾದನು.

ಮಠದಲ್ಲಿ ಕಾಲದಿಂದ ಕಾಲಕ್ಕೆ ಸಂಗ್ರಹಗೊಂಡ ಸುಮಾರು ಏಳುನೂರಕ್ಕೂ ಮೀರಿ ಓಲೆ ಕೃತಿಗಳ ಸಂಗ್ರಹವಿದ್ದು ಇದರೊಳಗಿನ ಕೃತಿಗಳ ಸಂಖ್ಯೆ ನಾಲ್ಕು ಸಾವಿರದ ಆರುನೂರರಷ್ಟಿದೆ. ಇವುಗಳಲ್ಲಿ ಹಲವು ಕೃತಿಗಳು ಕವಿಚರಿತೆಕಾರರಾದ ರಾವ್‌ಬಹದ್ದೂರ್ ಆರ್. ನರಸಿಂಹಾಚಾರ್ಯರಿಗೂ ಸಿಗದಂತಹವುಗಳಾಗಿದ್ದು ಅವುಗಳಲ್ಲಿ ಕೆಲವನ್ನು ಈ ಮುಂದೆ ಪರಿಚಯಿಸಲಾಗಿದೆ.

**ಹರೀಶ್ವರ ದೇವರಕಂದ :** ಹಂಪೆಯ ಹರಿಹರ (1200) ಕೃತ. 102 ಕಂದಗಳಿವೆ. ಹಂಪೆಯ ವಿರೂಪಾಕ್ಷ ಸ್ತುತಿ ಕೃತಿಯವಸ್ತು. ಈತನ 'ಮಹಿಮಾಷ್ಟಕ', 'ಪ್ರೇಮಾಷ್ಟಕ'ಗಳಲ್ಲಿನ ಕಂದಗಳೂ ಇಲ್ಲಿ ದೊರೆಯುತ್ತವೆ.

ಆದಿಯ ಕಂದ:
ಶ್ರೀಮತ್ಸರ್ವಂ ಪರಮ
ಸ್ವಾಮಿ ದಯಾಪಾರ್ಥಿ ಭಕ್ತಿಯ ಕೊಡು ನಮಗು
ದ್ದಾಮ ಸುರರಾಜರಾಜಂ
ಸೋಮಧರಂ ಕೂರ್ತು ಹಂಪೆಯ
ವಿರೂಪಾಕ್ಷಾ ॥೧॥
ಅಂತ್ಯದ ಕಂದ :
ಸತ್ಕೃತ ಸದ್ಭಕ್ತರಸ
ತ್ಕೃತ್ಯರ ಸರ್ವಾಂಗಲಿಂಗಸಾಹಿತ್ಯರ ಸಂ
ಸ್ತುತ್ಯರ ಸಂತುಷ್ಟಾತ್ಮರ
ಭೃತ್ಯತ್ವಮನೀಯ ಹಂಪೆಯವಿರೂಪಾಕ್ಷಾ ॥೧೦೨॥

**ನೂತನ ಪುರಾತನರ ರಗಳೆ :** ವಿರಕ್ತತೋಂಟದಾರ್ಯ (1616) ಆದಿಯಲ್ಲಿ ಕಂದವಿದ್ದು ಉಳಿದ ಭಾಗ ರಗಳೆಯಲ್ಲಿದೆ.

ಕಾತ್ಯಾಯಧಿಪತಿ ನೇಮದಿ
ಭೂತಳದೊಳಗುದಿಸಿಸಳ ಮಹಿಮೆಯ ಪಡೆದ
ತ್ಯಾತಿಶಯನಾಂತ ನೂ(ತ್ನ)[1]ಪು
ರಾತರ ನಾಂ ಪೊಗಳ್ವೆ ಗುರು ನಿರಂಜನಲಿಂಗಾ

ಶ್ರೀಗುರು ನಿರಂಜನಗಣೇಶ ಕೇಳೊಲವಿನಿಂ
ರಾಗದಿಂ ನೂತ್ನ ಪ್ರಮಥರ ಬಂಟ ನಾನಯ್ಯ॥೧॥

ಭೋಗಿಶಯನ ಪ್ರಥುಮೆಯಂ ನೆಲಕೆ ಕೆಡಪಿದ ಶಿವ
ನಾಗಮಜ್ಜನು ಪಾಲ್ಕುರಿಕೆಸೋಮನಾಳಯ್ಯ॥೨॥

ಚಕ್ರಪಾಣಿಯರಂಗುಪದೇಶವಿತ್ತ ಗುರು
ಚಕ್ರವರ್ತಿಯು ಚತುರ್ಮುಖ ಬಸವನಾಳಯ್ಯ॥೩॥

ಶುಭದಿ ಭಸಿತವ ತಳಿದು ಕೆಱೆಯ ನೆಱೆ ನಿರ್ಮಿಸಿದ
ಅಭವಸಮರೂಪ ಪದುಮರಸರಾಳಾನಯ್ಯ॥೪॥

ಚಂದದಿಂ ಬಸವಪುರಾವಣನುಸುರ್ದು ಶಿವ
ನಿಂದ ಮುಕ್ತಿಯಂ ಪಡೆದ ಭೀಮಕವಿಯಾಳಾನಯ್ಯ॥೭॥

ತೆರೆಯ ಸೀರೆಯು ಬೇಯೆ ಹಂಪೆಯೊಳ್ ದ್ವಾರಾಬ್ಧಿಯಿಂ
ಕರದಿ ನಂದಿಸಿದ ಹರೀಶ್ವರದೇವರಾಳಾನಯ್ಯ॥೯॥

ಉರುತರದದ ಷಡುಸ್ಥಲದ ಜ್ಞಾನಿಯೆಂದೆನಿಸುತಿಹ
ವರ ವೀರಶೈವ ಜಕ್ಕಣ್ಣರಾಳಾನಯ್ಯ॥೧೧॥

ಹರಭಕ್ತರಿಗೆ ಭವಗಳಿಲ್ಲೆಂದು ಸ್ತಂಭವಂ
ನೆಱೆ ನೆಡಿಸಿದಾ ಮಾಯಿದೇವರಾಳಾನಯ್ಯ॥೧೨॥

ಶೈವರತ್ನಾಕರವ ಪೇಳ್ದ ಶಿವನೊಲವೊಡೆದ
ಕೋವಿದನು ಜೋತಿನಾಥರ ಬಂಟನಾನಯ್ಯ॥೧೫॥

ಉರುವೇದ ನಾಲ್ಕನಂತ್ಯಜನಿಂದಲೋದಿಸಿದ
ಹಿರಿಯ ಗುಬ್ಬಿಯ ಮಲ್ಲಣಾರ್ಯರಾಳಾನಯ್ಯ॥೧೭॥

ನಿರುತದಿಂ ಬಸವಪೌರಾಣ ಕೋವಿದನೆನಿಪ
ಗರುವ ಗುಬ್ಬಿಯ ಚಿಕ್ಕಮಲ್ಲಣ್ಣನಾಳಾನಯ್ಯ॥೧೮॥

ಗುರು ನಿರಂಜನಲಿಂಗದಮಲಚಾರಿತ್ರಮಂ
ವಿರಚಿಸಿದ ಶಾಂತಮಲ್ಲಯ್ಯನಾಳಾನಯ್ಯ॥೧೯॥

ಪರಗೃಹದೊಳಗಿರ್ದು ಹೂಗಲ್ಲ ಹಾಱಿಸಿ ರಜಿತ
ಗಿರಿಗೆ ನೆಱೆ ಹೋದ ವೀರಣ್ಣನಾಳಾನಯ್ಯ॥೩೫॥
ಚರಣಜಲದಳಿದು ಕುದುರೆಯ ಸೂಲೆಯಿಂ ಕಳೆದ
ವರಧಾನ್ಯದಮ್ಮನ ಮನೆಯ ತೊಂಡನಾನಯ್ಯ॥೩೯॥

ಪುರದಹನವಾಗುತಿರೆ ಚರಣಜಲಭಾಂಡದಲೆ
ಪರಿಹರಿಸಿಮೆಱೆದ ಅಮ್ಮಾಯಿಯಾಳಾನಯ್ಯ॥೪೦॥

**ಶಿವಸಹಸ್ರನಾಮ:** ವಿರಕ್ತತೋಂಟದಾರ್ಯ (1616) ಕೃತ ವಾರ್ಧಕಷಟ್ಪದಿ ಮತ್ತು ಪರಿವರ್ಧಿನಿ ಷಟ್ಪದಿ ಗಳಲ್ಲಿನ 48 ಪದ್ಯಗಳಿವೆ.

ಆದಿಯ ಪದ್ಯ –

ವಾರ್ಧಿಕ ಷಟ್ಪದನು॥
ಶ್ರೀಮದುಪಲಬ್ದಿ ಪ್ರಕಾಶನನುಪಮಸುಖ
ಸೋಮನಪರಿಚ್ಛೇದ್ಯ ಪಥಿಕ ಮಹಿಮಾನ್ವಿತನ
ನಾಮಯನಖಂಡಸ್ವರೂಪನುನ್ನತ ಯೋಗಿಜನ
[ಹೃತ್ಕಮಲಕರ್ನಿಕಾ
ಧಾಮನವ್ಯಕ್ತನವ್ಯಯನವಿಕೃತಂ ಮುಕ್ತಿ
ಭಾಮಾಮನೋವಲ್ಲಭಂ ನಿಗಮ ದುರ್ಲಭಂ
ಪ್ರೇಮದಿಂದಂ ನಿರಂಜನಲಿಂಗನಿರದೆಮಗಾನಂದ
[ಸಂದೋಹಮಂ ॥೧॥

ಬಸವ ಸ್ತೋತ್ರದಕಂದ : ಸಂಪಾದನೆ ಸಿದ್ಧವೀರೇಶ್ವರದೇವ(1600) ಅಪೂರ್ಣ 10 ಕಂದಗಳಿವೆ.

ಶ್ರೀ ಗುರುವೆ ಶರಣು ಬಸವಾ
ಆಗಮನಿಗಮಾತೀತ ಶರಣುಲಿಂಗವೆ ಬಸವ
ಭೋಗಿಚರ ಶರಣು ಬಸವಾ
ಯೋಗಿವರ ನಿಮ್ಮನಾಂ ಸ್ತುತಿಯಿಸುವೆ ಬಸವಾ ॥೧॥

ಗುರುವೆ ಶ್ರೀಗುರುವೆ ಬಸವಾ
ಪರವೇ ಆದಿಮಧ್ಯಾಂತರಹಿತ ಬಸವಾ
ಮರುತಾನಲಜಲನಭರವಿ
ಧರೆ ಸೋಮಾತ್ಮ ಕಾಯ ನಿರ್ಮಾಯನೆ ಬಸವಾ ॥೨॥

ಪಂಚತ್ವ ದೂರನೆ ಬಸವ
ಸಂಚಿತ ಕರ್ಮಾದಿ ಗುಣಗಣ ರಹಿತನೆ ಬಸವ
ಪಂಚೇಶುನಾಶನೆ ಬಸವ
ಪಂಚಾಱುನಷ್ಟವಿಂಶತಿ ಸಂಚನೆ ಬಸವಾ ॥೬॥

**ಜೆಡೆಯ ಚಿಕ್ಕಬಸವ ಸ್ತೋತ್ರ :** ಅಜ್ಞಾತ (1730). 53 ಷಟ್ಪದಿ ಹಾಗೂ ಕಡೆಯಲ್ಲಿ 3 ಕಂದ ಗಳಿವೆ. ಶ್ರೀಮದಭ್ರಗಜೂಟ ಶಿಷ್ಟೇಷ್ಟಧಾತ ಪ್ರ
ಧಾಮ ಭಾಸ್ಮಣಿವಹ್ನಿನಯನತ್ರಯುೂರ್ವಿಜಲ
ಧೂಮಾಂಕಸ್ವನನಾಗಸಂ ಚಂದ್ರಸೂರ್ಯಾತ್ಮ ಪ್ರೇಮ
ದೊಡಲೆಂದೆನಿಸಿದಂ
ಸ್ವಾಮಿ ಸರ್ವಾಂತರ್ಗತ ತಜ್ಜ್ಯೋತಿ ಚಿದ್ಬೀಜ
ಗ್ರಾಮ ಪ್ರಪಂಚರಹಿತಂ ದಯಾನಿಧಿ ನಿತ್ಯ
ಕೋಮಲಾಭಯ ವರದಪಾಣಿ ರಕ್ಷಿಸು
ಪದವ ನಂಬಿದೆಂ ಜೆಡೆಯವೃಷಭಾ ॥೧॥

ವಾಗ್ರಮಣಿವರ ಪಂಕಜಾಲಯಪ್ರೀತ ನುತ
ಶೀಗ್ರಗಾಶನಕರ್ನವೇಷ್ಟ ನಿಚ್ಯಕ ದಿವಿಜ
ದುಗ್ರಮಣಿಮೌಳಿರಾಜಿತಪಾದಪಂಕಜಂಪರಮಗುಣ
ನಿಳಯವಿರಳಂ
ಸುಗ್ರೀವಗಳಾಸುರಜೇಷ್ಟ ಮೂರ್ಧನನಾಂಕ
ಅಗ್ರಗಣ್ಯಯುತಾಮಳಪಾಣಿ ಪರಮಪ್ರ
ದಿಗ್ರಮ್ಯಚಲ ರಕ್ಷಿಪುದು ನಂಬಿದೆ ನಿನ್ನ
ಜೆಡೆಯದೇಸಿಕೇಂದ್ರ ॥೨॥

ಶರಣು ಸರ್ವಜ್ಞ ಪರ ಶರಣು ಶಾಶ್ವತಮೂರ್ತಿ
ಶರಣು ಶಮನ ವಿಭಂಗ ಶಾಂತ ಹೃದಯುರುಲಿಂಗ
ಶರಣು ದುರ್ಭಯ ಭಂಗ ಕರುಣಾಂತರಂಗ
ಪುರಹರಣ ಪರಿಕೋಟಿವರಣ
ಶರಣು ಕರ[ಣ] ಪ್ರಬಲವರಣವರ್ಯವರೇಣ್ಯ
ಶರಣು ಪೂಸರ ತ್ರಿಗುಣದೋಷ ಸಂತತಿ ನಾಶ

ಶರಣು ಶ್ರೀಗುರು ಚಿಕ್ಕವೃಷಭೇಶ ಕೀರ್ತಿ( ಯಹ)[2]
ಶರಣು ತದಪದಯುಗಳಕೆ ॥೩॥

ಗುರು ಜೆಡೆಯ ಚಿಕ್ಕಬಸವೇ
ಶ್ವರ ಪದಪದ್ಮಂಗಳೆನ್ನ ಹೃದಯದೊಳನಿಶಂ
ಭರದಿಂದ ಶೋಭಿಸುತ್ತಿರೆ
ಧರೆಯೊಳ್ಸದ ನಿತ್ಯ ಮುಕ್ತನಲ್ಲವೆ ತಿಳಿಯಲ್ ॥೧॥

ಗುರುಕರುಣ ಕಾರಣವಾಗಿ
ಗುರುವಿಂದಧಿಕದೈವವಿಲ್ಲ ನೋಡಲ್ (?)
ಗುರುವನೇ ಭಜಿಸಿ ಯಜಿಸುತೆ
ಬರಿಭವವಂ ಕಳೆಯಬೇಕು ಬಲ್ಲವರ್ಮುದದಿಂ ॥೨॥

ಶ್ರೀ ಗುರುವೆ ಲಿಂಗ ತನಗಂ
ಶ್ರೀ ಗುರುವೆ ಜಂಗಮು ವ ಮಲ ಗುರು ಮೂರೊಂದೇ
ಶ್ರೀ ಗುರುವೆ ಏಕಮದು ಶಿವ
ಶ್ರೀ ಗುರುವಿನ ಪದವ ಭಜಿಪನವ ಕೃತಕೃತ್ಯಂ ॥೩॥

**ಗುರುಸ್ತೋತ್ರದದ ಕಂದನಾಂದ್ಯ :** ಅಜ್ಞಾತ (1730). ಆದಿಯಲ್ಲಿ ವೃತ್ತವೊಂದಿದ್ದು. ಅನಂತರ ಇಪ್ಪತ್ತೈದು ಕಂದಗಳಿವೆ.

॥ ವೃತ್ತ ॥ ಶ್ರೀಮದ್ಭಕ್ತಸುಬಂಕರಂ ಶಶಿಧರಜೂಟಂ ದಯಾಸಾಗರಂ
ಪಾಪಾಂಬೋಧರ ಚಂಡಮಾರುತನಿಭಂ ಪಂಚಾನನಂ ಪಾರ್ವತೀ
ನಾಮಾಂಗಂ ವರಹಾವತಾರಿ ಹರಿಣೀ ಸನ್ಮುಕ್ತಿದ ಶ್ರೀಕರಂ
ಪ್ರೇಮುಚಿತ್ತನಗೀಗೆ ಮುಕ್ತಸುಬವುಶ್ರೀ ಬಂಡೆದಣ್ಣಾಯಕಂ

॥ಕಂದ॥
ಶ್ರೀಮತ್ಪಂಕಜನುತ ಮು
ಖ್ಯಾಮರ ನತಪಾದಕಮಲ ಪರಿನುತ ಪರನತ
ಪ್ರೇಮಿ ನೀಯೆನ್ನ ರಕ್ಷಿಸು
ಸ್ವಾಮಿ ಶ್ರೀ ಜೆಡೆಯ ಚಿಕ್ಕಬಸವ ಮಹೇಶಾ -೧-

ಕರದಲಿ ಬ್ರಹ್ಮಕಪಾಲವು
ಶಿರದಲಿ ಸುರನದಿಯು ಉರದಿ ಶಿರಮಾಲೆಗಳಂ
ಧರಿಸಿ ರಂಜಿಸುವ ದೇವನೆ
ಪೊರೆಯೊ ಶ್ರೀ ಜೆಡೆಯ ಚಿಕ್ಕಬಸವಮಹೇಶಾ -೨-

ಬಿಜ್ಜಳಪತಿ ಸನ್ನುತ ಮಹ
ಪಜ್ಜಳಜನೆ ಕಾಯಕದಳಿಕುಂಜರರೂಪ
ಸಜ್ಜಂಗಮಪದಪೂಜಕ
ಮಜ್ಜೀವೇಶ್ವರನೆ ಬಸವ ಪಾಲಿಪುದೆನ್ನಂ -೩-

ಅಕ್ಕನಾಗಲೆಯ ಪುತ್ರನೆ
ಮುಕ್ಕಣ್ಣಾಚಾರವರ್ಧಿ ಚಂದ್ರೋದಯನೇ
ಪಕ್ಕಿಗಳ ವಂದ್ಯನೆ ಜೆಡೆಯ
ಚಿಕ್ಕಬಸವ ಮ(ಹಿ)[3]ಶ ರಾಜ ರಕ್ಷಿಪುದೆನ್ನಂ -೪-

ಗುರುಸ್ತೋತ್ರವ(ನು)[4] ರಾಗದಿ
ಬರದೋದಿ ಕೇಳೆ ಭವಬಂಧನಂಗಳು ಹೋಗಿ
ವರ ಭೋಗ ಮೋಕ್ಷ[5] ಆಗುವ
ವರಸಿದ್ಧಾಂತವು ಜೆಡೆಯ ಬಸವೇಶಮಹೇಶ -೫-

---

1. ತನ
2. ಯಯಸವ
3. ಹೇ
4. ನವ
5. +ವು

ಡಾ॥ ಎ.ಕೆ. ಶಾಸ್ತ್ರಿ

# ಚಿತ್ರದುರ್ಗಕ್ಕೆ ಸಂಬಂಧಿಸಿದ ಶೃಂಗೇರಿ ಮಠದ ದಾಖಲೆಗಳು

ಶೃಂಗೇರಿಮಠದ ಪತ್ರಾಗಾರದಲ್ಲಿ ಚಿತ್ರದುರ್ಗವನ್ನು ಉಲ್ಲೇಖಿಸುವ ಕೆಲವೇ ದಾಖಲೆಗಳು ದೊರೆತಿವೆ. ನಮಗೆ ತಿಳಿದಂತೆ, ಚಿತ್ರದುರ್ಗದ ನಾಯಕರು (ಪಾಳೆಗಾರರು) ಸುಮಾರ ೨೦೦ ವರ್ಷಗಳ ಕಾಲ, ಅಂದರೆ, ಕ್ರಿ.ಶ. ೧೫೬೮–೧೭೭೯ರ ವರೆಗೆ ಕರ್ನಾಟಕದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಮಹತ್ವದ ಪಾತ್ರ ನಿರ್ವಹಿಸಿದ್ದಾರೆ.

ಶಾಲಿವಾಹನ ಶಕ ವರ್ಷ ೧೬೬೬ (ಕ್ರಿ.ಶ. ೧೭೪೪) ರಲ್ಲಿ ಮದಕರಿ ನಾಯಕರು ಶ್ರೀ ಮದಭಿನವ ಸಚ್ಚಿದಾನಂದ ಭಾರತೀ ಸ್ವಾಮಿಗಳ ಶೃಂಗೇರಿ ಮಠಕ್ಕೆ ಬಾಗೂರು ಸೀಮೆಯೊಳಗಿನ ಕಡಿವಾಣಕಟ್ಟೆ ಗ್ರಾಮವನ್ನು ದಾನವಾಗಿ ಕೊಟ್ಟ ಸಾಧನಪ್ರತಿ,[1] ಸುಮಾರು ಕ್ರಿ.ಶ. ೧೮೦೦ರಲ್ಲಿ, ದಿವಾನ್ ಪೂರ್ಣಯ್ಯನವರು ಚಿತ್ರದುರ್ಗದ ಚೆನ್ನಮಲ್ಲಪ್ಪ ನವರಿಗೆ, ಕಡಿವಾಣ ಕಟ್ಟೆ ಗ್ರಾಮವು ಶೃಂಗೇರಿ ಮಠಕ್ಕೆ ಇನಾಮಾಗಿ ನಡೆಸಿಕೊಂಡು ಬರುವಂತೆ ಬರೆಸಿ ಕಳುಹಿಸಿದ ಪರವಾನೆ,[2] ಕ್ರಿ.ಶ. ೧೮೩೬–೩೭ರ ಅವಧಿಯಲ್ಲಿ ಚಿತ್ರದುರ್ಗದ ಡಿವಿಜನಲ್ ಸುಪ್ರಿಂಟೆಂಡೆಟ್ ಸಾಹೇಬರು, ಶೃಂಗೇರಿಯ ಅಷ್ಟಮ ಶ್ರೀ ನರಸಿಂಹಭಾರತೀ ಸ್ವಾಮಿಗಳು ರಾಮೇಶ್ವರ ತೀರ್ಥಯಾತ್ರೆಗೆ ಹೋಗಿ ಬರುವದರಿಂದ, ತಾಲೂಕುಗಳ ಅಮಿಲ್, ಶಿರಸ್ತದಾರ್, ಜಹಗೀರದಾರ್ ಕಿಲ್ಲದಾರ್, ಚೌಕಿದಾರ್, ಠಾಣೆದಾರ, ಮುಂತಾದವರಿಗೆ ಕಳುಹಿಸಿದ ರಹಾದಾರಿಗಳು, ಸು.ಕ್ರಿ.ಶ. ೧೮೦೪ರಲ್ಲಿ ಶೃಂಗೇರಿ ಮಠಕ್ಕೆ ಹಣ ಸಲ್ಲಿಸುವ ವಿಷಯ ಕುರಿತು, ಚಿತ್ರದುರ್ಗ ಡಿವಿಜನ್ನಿನ ಆಕ್ಟಿಂಗ್ ಹೆಡ್ ಶಿರಸ್ತೇದಾರ ವೆಂಕಟರಾಯರು ಶೃಂಗೇರಿಯ ಶ್ರೀ ನರಸಿಂಹ ಭಾರತೀ ಸ್ವಾಮಿಗಳಿಗೆ ಬರೆದ ಬಿನ್ನವತ್ತಳೆ,[4] ಕ್ರಿ.ಶ.೧೮೮೪ರಲ್ಲಿ, ಪಾವಗಡ ತಾಲೂಕಿನ ಸೀಮೆಯ ತುಕಡಿಗೆ ಸಂಬಂಧಿಸಿ ಚಿತ್ರದುರ್ಗ ಜಿಲ್ಲೆಯ ಸಾಹೇಬರಿಂದ ಶೃಂಗೇರಿ ಮಠದ ಏಜಂಟ್‌ರವರಿಗೆ ಬರೆದ ಪತ್ರ[5] ಮುಂತಾದ ಕೆಲವು ದಾಖಲೆಗಳು ಶೃಂಗೇರಿ ಮಠದಲ್ಲಿ ದೊರಕಿವೆ. ಶೃಂಗೇರಿ ಮತ್ತು ಚಿತ್ರದುರ್ಗಕ್ಕೆ ಸಂಬಂಧ ಕಲ್ಪಿಸುವ ಕೆಲವು ದಾಖಲೆಗಳನ್ನು ಪ್ರಸ್ತುತದಲ್ಲಿ ಪರಿಚಯಿಸಲಾಗಿದೆ.

ಮೊದಲೇ ಹೇಳಿದಂತೆ, ಶಕವರ್ಷ೧೬೬೬ (ಕ್ರಿ.ಶ. ೧೭೪೪) ರಲ್ಲಿ ಮದಕರಿ ನಾಯಕರು[6] ಶ್ರೀಮದಭನವ ಸಚ್ಚಿದಾನಂದ ಭಾರತೀ ಸ್ವಾಮಿಗಳ ಶೃಂಗೇರಿ ಮಠಕ್ಕೆ ಬಾಗೂರು ಸೀಮೆಯೊಳಗಿನ ಕಡಿವಾಣಕಟ್ಟೆ ಗ್ರಾಮವನ್ನು ದಾನವಾಗಿಕೊಟ್ಟ ಶಾಸನ – ಪ್ರತಿಯು ಕಡತದಲ್ಲಿ ದೊರಕಿದೆ.[7] ಶಾಸನದ ಪ್ರಾರಂಭದಲ್ಲಿ "…. ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ್ಯ ಪದವಾಕ್ಯಪ್ರಮಾಣ ಪಾರಾವಾರ ಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ದಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನು ನಿಷ್ಠ.. ಕರ್ನಾಟಕ ಸಿಂಹಾಸನ ಪ್ರತಿಷ್ಠಾನಾಚಾರ್ಯ…" ಮುಂತಾದ ಯಥೋಕ್ತ ಬಿರುದಾವಳಿಗಳನ್ನು ಪ್ರಥಮ ಶ್ರೀ ಅಭಿನವ ಸಚ್ಚಿದಾನಂದ ಭಾರತೀ ಸ್ವಾಮಿಗಳಿಗೆ ನೀಡಲಾಗಿದೆ. ಅದೇ ರೀತಿ "…. ವಾಲ್ಮೀಕಿ ಗೋತ್ರದ ಶ್ರೀ ಮನ್ಮಹಾನಾಯಕಾಚಾರ್ಯ್ಯ ಕಾಮನ ಶ್ರೀ ಕಸ್ತೂರಿ ಮೆದಕರ್ರಿ ನಾಯಕರ ಪುತ್ರರಾದ ಬರಮಂಣ ನಾಯಕರ ಪುತ್ರರಾದ ಮೆದಕರಿ ನಾಯಕರೂ ಬರೆಸಿ ಕೊಟ್ಟ ಅಗ್ರಹಾರದ ದಾನಪತ್ರದ ಕ್ರಮವೆಂತೆಂದರೆ ನಂಮ ಹಿರಿಯವರುಗಳಿಗೆ ಪುಂಣ್ಯ ಸುಕ್ರುತವಾಗಬೇಕುಯಂದು ಗ್ರಾಮವಂನ್ನು ಹಿರಂಣ್ಯೋದಕ ದಾನ ಧಾರಪೂರ್ವಕವಾಗಿ ತ್ರಿವಾಚ ತ್ರಿಕರಣಯುಕ್ತವಾಗಿ ಶಿವಾರ್ಪಣವಾಗಿ ಕೊಟ್ಟು ಯಿಧೇವೆ ಯಿಾ ಗ್ರಾಮಕ್ಕೆ ಸಲುವ ಕಾಹಾರಂಭ ನಿರಾರಂಭ ನಿಧಿ ನಿಕ್ಷೇಪ ಜಲಪಾಷಾಣ ಅಕ್ಷಿಣಿ ಆಗಾಮಿಸಿಧಿ ಸಾಧ್ಯಂಗಳೆಂಬ ಅಷ್ಟಭೊಗ ತೆಜೋಪಾರ್ಜನೆಯುಂನ್ನು ಆಚಾರ್ಯ ಸ್ವಾಮಿಗಳವರ ಶ್ರೀಮಠದ ಶ್ರೀ ಶಾರದಾಂಬಾ ಶ್ರೀ ವಿದ್ಯಾಶಂಕರನ ಧರ್ಮಕ್ಕೆ ನಂಮ ಪುತ್ರ ಪಾರಂಪರ್ರಿಯ್ಯವ ನಡೆಯುಬೆಕುಯೆಂದು ಬರೆಸಿಕೊಟ್ಟ ದಾನಪತ್ರ…" ಎಂಬುದಾಗಿಯೂ ಶಾಸನದ ಪ್ರತಿಯಲ್ಲಿ ನಮೂದಿಸಲಾಗಿದೆ.

ದಿವಾನ ಪೂರ್ಣಯ್ಯನವರು ಚಿತ್ರದುರ್ಗದ ಚೆನ್ನಮಲ್ಲಪ್ಪನವರಿಗೆ, ಸಿದ್ಧಾರ್ಥಿ ಸಂವತ್ಸರ (ಸು.ಕ್ರಿ.ಶ ೧೮೦೦) ದಲ್ಲಿ ಕಳುಹಿದ ಪರವಾನೆ ಪತ್ರವು[8] ಮೇಲ್ಕಾಣಿಸಿದ ಶಾಸನವನ್ನು ದೃಢೀಕರಿಸುತ್ತದೆ. ಪರವಾನೆಯ

ಮುಖ್ಯಭಾಗವು ಇಂತಿದೆ. ರಾಜಶ್ರೀ ಚಿತ್ರದುರ್ಗದ ಚಂನ ಮಲ್ಲಪ್ಪನವರ್ರಿಗೆ ಪೂರ್ಣಯ ನವರು ನಮಸ್ಕಾರ ನಿಂಮ ತ್ತಾಲೂಕು ಬಾಗೂರ ಶಿಮೆ ಕಡ್ಡಿವಣಕಟ್ಟೆ ಗ್ರಾಮ ಗೆ25 ದುರ್ಗಿ ಯಿಪ್ಪತ್ತೈದು ವರಹಾನ ಗ್ರಾಮ ಉ ಪೂರ್ವಾರಭ್ಯಕು ಶೃಂಗೇರ್ರಿ ಶ್ರೀ ಸ್ವಾಮಿಗಳವರ ಮಠಕ್ಕೆ ಯಿನಾಮಾಗಿ ನಡದು ಬರುತ್ತ ಯಿದದ್ರಿಂದ ಯಿಾ ಗ್ರಾಮ ಯಥಪ್ರಕಾರಕ್ಕೆ ಯಿನಾಮಾಗಿ ನಡೆಸುವ ಹಾಗೆ ಅಪ್ಪಣೆ ಕೊಡ್ಡಿಶಿಯಿರುವದರಿಂದ ಯಿಾ ಗ್ರಾಮ ವಂನ್ನು ಮಠದವರ ವಶಾ ಮಾಡ್ಡಿಕೊಟ್ಟು ಯಾವ ವಿಷಯದಲ್ಲು ಉಪದ್ರವಿಲ್ಲದ ಹಾಗೆ ಮಾಡ್ಡಿ ಸರಾಗ ವಾಗಿ ನಡೆಸುತ್ತಾ ಬರುವ್ವುದು...'' ಮುಂತಾಗಿ ಮದಕರಿ ನಾಯಕರು ಕಾಲದಿಂದಲೇ 25 ವರಹದ ಕಡಿವಾಣಕಟ್ಟೆ ಗ್ರಾಮವು ಶೃಂಗೇರಿ ಮಠಕ್ಕೆ ಇನಾಮಾಗಿ ಬಂದಿದ್ದು ಮತ್ತು ಕಾಲಕ್ರಮೇಣ ಈ ಪದ್ಧತಿಗೆ ತೊಂದರೆಯುಂಟಾಗಿದ್ದರಿಂದ ದಿವಾನ ಪೂರ್ಣಯ್ಯ ನವರು ಈ ಇನಾಮತಿಗ್ರಾಮವನ್ನು ಶೃಂಗೇರಿ ಮಠಕ್ಕೆ ಪುನಃ ಒಪ್ಪಿಸಿದ್ದು, ಮೇಲ್ಕಾಣಿಸಿದ ಪತ್ರಿಕೆಯಿಂದ ಸ್ಪಷ್ಟವಾಗುತ್ತದೆ.

ಕ್ರಿ.ಶ. ೧೭೭೯ರಲ್ಲಿ ಚಿತ್ರದುರ್ಗವು ಮೈಸೂರು ರಾಜ್ಯದಲ್ಲಿ ವಿಲೀನಗೊಂಡಿದ್ದನ್ನು ಮೊದಲೇ ಅರಿತಾಗಿದೆ. ನಾಲ್ಕನೇ ಆಂಗ್ಲ ಮೈಸೂರು ಯುದ್ಧ (೧೭೯೯) ದ ನಂತರ ಮೈಸೂರು ರಾಜ್ಯವನ್ನು ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಒಪ್ಪಿಸಲಾಯಿತು. ಮುಮ್ಮಡಿ ಕೃಷ್ಣರಾಜ ಒಡಯರವರು ಅಪ್ರಾಪ್ತ ವಯಸ್ಕರಾಗಿದ್ದುದರಿಂದ ಪೂರ್ಣಯ್ಯನವರೇ ರಾಜ ಪ್ರತಿನಿಧಿಯಾಗಿ ೧೮೧೧ರವರೆಗೆ ಅಧಿಕಾರ ನಿರ್ವಹಿಸಿದರು. ಮುಂದೆ, ೧೮೩೧ರಲ್ಲಿ, ಮುಮ್ಮಡಿ – ಕೃಷ್ಣರಾಜ ಒಡೆಯರು ಸರಕಾರ ನಡೆಸಲು ಅಸಮರ್ಥರೆಂಬ ಅಪಾದನೆಯ ಮೇರೆಗೆ, ಅಂದಿನ ಗವರ್ನರ್ ಜನರಲ್‌ರಾದ ಲಾರ್ಡ್ ವಿಲಿಯಮ್ ಬೆಂಟಿಂಕ್‌ರು ಮೈಸೂರು ರಾಜ್ಯವನ್ನು ಬ್ರಿಟಿಷ್ ಕಮಿಷನರ್‌ರ ಆಡಳಿತಕ್ಕೆ ಒಳಪಡಿಸಿದರು. ಕಮಿಷನರ್‌ರ ಆಡಳಿತ ೧೮೮೧ರ ವರೆಗೂ ಸಾಗಿತು. ಅಂದಿನ ಪ್ರಭುತ್ವವನ್ನು ಪುನಃ ದಯಪಾಲಿಸಿದರು. ಕಮಿಷನರ್‌ರ ಕಾಲದಲ್ಲಿ ಚಿತ್ರದುರ್ಗವು ಒಂದು ಆಡಳಿತ ವಿಬಾಗದ ಕೇಂದ್ರವಾಗಿತ್ತೆಂದು ತಿಳಿದು ಬರುತ್ತದೆ. ಕಮಿಷನರ್ ಕಾಲದ ಕೆಲವು ದಾಖಲೆಗಳು ಶೃಂಗೇರಿ ಮಠದಲ್ಲಿ ಲಭ್ಯವಾಗಿವೆ.

ಶೃಂಗೇರಿ ಶ್ರೀ ನರಸಿಂಹಭಾರತೀ ಸ್ವಾಮಿಗಳು ಮೈಸೂರಿಗೆ ಬಂದು, ಅಲ್ಲಿಂದ ರಾಮೇಶ್ವರಕ್ಕೆ ಹೋಗಿ ಬರುವದರಿಂದ, ಅವರಿಗೆ ಸಕಲ ಮರ್ಯಾದೆ ನೀಡಿ ಎಲ್ಲ ಸೌಲಭ್ಯಗಳನ್ನು ಕಲ್ಪಿಸಿಕೊಡಬೇಕಾಗಿ ಚಿತ್ರದುರ್ಗ ತುಕಡಿ ಸುಪ್ರಿಂಟೆಂಡೆಂಟ್ ಕ್ಯಾಪ್ಟನ್ ಡಾಬ್ಸ್ ಸಾಹೇಬರು ೧೮೩೬ರಲ್ಲಿ ತಾಲೂಕುಗಳ ಅಮಿಲ, ಶಿರಸ್ತೆದಾರ, ಪೇಷ್ಕಾರ ಮುಂತಾದವರಿಗ ರಹದಾರಿಯನ್ನು ನಿರೂಪಿಸಿದರು.[9] ಸದರಿ ವಿಷಯಕ್ಕೆ ಸಂಬಂಧಿಸಿ, ೧೮೩೬–೩೭ರ ಅವಧಿಯಲ್ಲಿ, ಡಾಬ್ಸ ಸಾಹೇಬರು ಹೊರಡಿಸಿದ ಇನ್ನೂ ಮೂರು ರಹದಾರಿಗಳು ದೊರೆತಿವೆ.[10] ಶ್ರೀಮಠದ ವಿಚಾರವಾಗಿ ಕಮಿಷನರ್ ಸಾಹೇಬರು ಸಾದರ ಮಾಡಿರುವ ರಹಾದಾರಿ ಮೇರೆಗೆ ಲೇಶವೂ ನ್ಯೂನತೆ ಇಲ್ಲದ ಹಾಗೆ ನಡೆದುಕೊಳ್ಳಬೇಕು. ರಹದಾರಿಗೆ ವಿರೋಧವಾಗಿ ನಡೆದವರನ್ನು ತಕ್ಕ ಶಿಕ್ಷೆಗೆ ಗುರಪಡಿಸಲಾಗುವದೆಂದು ನಮೂದಿಸಲಾಗಿದೆ.

ಸ್ವಾಮಿಗಳು, ವೇದಮೂರ್ತಿ ನರಸಿಂಹ ಶಾಸ್ತ್ರಿಗಳ ಸಂಗಡ ಶ್ರೀಮುಖ, ಫಲ ಮಂತ್ರಾಕ್ಷತೆ ಕಳುಹಿಸಿರುವದನ್ನು ಶಿರಸಾವಹಿಸಿರುವುದಾಗಿ ಮತ್ತು ಗೃಹಕೃತ್ಯ ತಾಪತ್ರಯದಿಂದ ತನ್ನ ಕಡೆಯ ಜನಕ್ಕೆ ಧರ್ಮಶಾಸನದಂತೆ ಮಠಕ್ಕೆ ಹಣ ಸಲ್ಲಿಸುವಲ್ಲಿ ಸ್ವಲ್ಪ ವ್ಯತ್ಯಾಸವಾಗಿದ್ದಕ್ಕಾಗಿ, ಶ್ರೀಗಳವರು ಅನುಗ್ರಹಿಸ ಬೇಕೆಂದು ಚಿತ್ರದುರ್ಗ ಡಿವಿಜನ್ ಅಕ್ಟಿಂಗ್ ಹೆಡ್ ಶಿರಸ್ತೆದಾರ ವೆಂಕಟರಾಯರು, ೧೮೪೦ರಲ್ಲಿ, ಶೃಂಗೇರಿ ಮಠದ ಅಷ್ಟಮ ಶ್ರೀ ನರಸಿಂಭಾರತೀ (ಪೀಠಾಧಿಪತ್ಯ ೧೮೧೭–೭೯) ಸ್ವಾಮಿಗಳಿಗೆ ಪ್ರಣಾಮ ಪೂರ್ವಕವಾಗಿ ಬರೆದ ವಿಜ್ಞಾಪನಾ ಪತ್ರವು ಶ್ರೀ ಮಠದ ಪಾತ್ರಾಗಾರದಲ್ಲಿ ದೊರಕಿದೆ.[11]

ಚಿತ್ರದುರ್ಗ ಜಿಲ್ಲೆಯ ಸಾಹೇಬರು ೧೮೮೯ರ ಜನೆವರಿ 15ರಂದು, ತುಮಕೂರು ಜಿಲ್ಲೆಯ ಪಾವಗಡ ತಾಲೂಕಿಗೆ ಸಂಬಂಧಿಸಿದ ವಿಷಯವನ್ನು ಶೃಂಗೇರಿ ಮಠದ ಏಜೆಂಟ್ರವರಿಗೆ ಬರೆದ ಪತ್ರವೊಂದು ಲಭಿಸಿದೆ.[12]

ಈ ರೀತಿಯಾಗಿ, ಶೃಂಗೇರಿ ಮಠದ ಕಡತಗಳಲ್ಲಿಯ ೨ ಮತ್ತು ಕಾಗದಗಳಲ್ಲಿಯ 6 ದಾಖಲೆಗಳು ಚಿತ್ರದುರ್ಗಕ್ಕೆ ಸಂಬಂಧಿಸಿವೆ. ೧೭೪೪ರ ಸಾಧನ ಪ್ರತಿಯು ಅತಿ ಹಳೆಯದಾದರೆ, ೧೮೮೯ರ ಪತ್ರವು ಇತ್ತೀಚಿನದು. ಮೇಲ್ಕಾಣಿಸಿದ ಕೇವಲ ೮ ದಾಖಲೆಗಳ ಆಧಾರದಿಂದ ಶೃಂಗೇರಿ ಮಠದ ಅಥವಾ ಚಿತ್ರದುರ್ಗದ ೧೪೫ ವರ್ಷಗಳ ಸಂಪೂರ್ಣ ಐತಿಹಾಸಿಕ ಚಿತ್ರಣ ನೀಡಲು ಸಾಧ್ಯವಿಲ್ಲ. ಆದರೂ ಪ್ರಾದೇಶಿಕ

ಚರಿತ್ರೆಯನ್ನು ಪುನಃ ರೂಪಿಸಿ, ಆ ಮೂಲಕ ಕರ್ನಾಟಕದ ಚರಿತ್ರೆಯನ್ನು ಸಮಗ್ರವಾಗಿ ರೂಪಿಸುವಲ್ಲಿ, ಶೃಂಗೇರಿ ಮಠದ ಈ ಐತಿಹಾಸಿಕ ದಾಖಲೆಗಳು ಪ್ರಯೋಜನ ಕಾರಿಯಾಗಿವೆ.

---

## ಟಿಪ್ಪಣಿ

ಶೃಂಗೇರಿ ಮಠದ ಇತಿಹಾಸವನ್ನರಿಯಲು ಲೇಖಕರ ಈ ಕೆಳಗಿನ ಗ್ರಂಥಗಳನ್ನು ಓದಿರಿ. 1) A History of Sringeri, Karnataka University, 1982; 2) ಶೃಂಗೇರಿ ಧರ್ಮಸಂಸ್ಥಾನ, ಶೃಂಗೇರಿ ಮಠ, 1983; 3) Selections from the Kadatas of the Sringeri Matha Vol.I, ICHR 1982 (Un Pub.) ಪ್ರಸ್ತುತ ಲೇಖನದಲ್ಲಿಯ ದಾಖಲೆಗಳಿಗೆ ಈ ಯಾದಿಗಳೇ ಆಧಾರ. i. Contents of the Kadatas of the Sringeri Matha (Un Pub.), Karnataka State Archieves, 1974. ii. CKRASM (Catalogue of the Kannada Records in the Archives of the Sringeri Matha) Part I and II, Un-Pub. Karnataka State Archives, 1988.

## ಉಲ್ಲೇಖನಗಳು

ಕ (ಕಡತ) 184, ದಾ (ದಾಖಲೆ) 108
2. ಕ 187, ದಾ. 12
3. CKRASM ಭಾಗ 1, ಧಾಖಲೆಗಳು: R.10, R.11, R.12
   CKRASM ಭಾಗ 2, ದಾಖಲೆ C 33
4. CKRASM ಭಾಗ 1 ದಾ Mis 13
5. CKRASM ಭಾಗ 1 ದಾ. R 39
6. ಚಿತ್ರದುರ್ಗದ ಪಾಳೆಗಾರರ ಮನೆತನದಲ್ಲಿ, ಹೈದರಲಿಯ ಸೈನ್ಯದೊಂದಿಗೆ ಕಾದಾಡಿದ ಐದನೇ ಮದಕರಿ ನಾಯಕರು (ಕ್ರಿ.ಶ. 1755-79) ಪ್ರಸಿದ್ಧರು. ಆದರೆ ಶಾಸನದಲ್ಲಿ ಕಾಲವನ್ನು ಕ್ರಿ.ಶ. 1744 ಎಂದು ನಮೂದಿಸಲಾಗಿದ್ದರಿಂದ, ಸ್ವಲ್ಪ ವ್ಯತ್ಯಾಸ ದೂರೀಕರಿಸುವಂತಿಲ್ಲ. ಏಕೆಂದರೆ, ದಿವಾನ ಪೂರ್ಣಯ್ಯನವರ ಪರವಾನೆ ಪತ್ರವು ಇದೇ ಶಾಸನವನ್ನು ದೃಢೀಕರಿಸುತ್ತದೆ.
7. ಕ 184, ದಾ 108
8. ಕ 187, ದಾ 12
9. CKRASM ಭಾಗ 1, ದಾ R 10
10. CKRASM ಭಾಗ 1, ದಾ. 11 ಮತ್ತು 12
    CKRASM ಭಾಗ 2, ದಾ. C33
11. CKRASM ಭಾಗ 1, ದಾ Mis 13
12. CKRASM ಭಾಗ 1, ದಾ R 39

ಕೆ. ಜಗನ್ನಾಥಶಾಸ್ತ್ರಿ

# ಕೆಳದಿ ಅರಸರ ಕಾಲದ ಐತಿಹಾಸಿಕ ಸಾಹಿತ್ಯ – ಸ್ಥೂಲಪರಿಚಯ

ಕೆಳದಿನೃಪವಿಜಯ, ಶಿವತತ್ವರತ್ನಾಕರ, ಕೆಳದಿ ರಾಜ್ಯಾಭ್ಯುದಯ, ಬಸವರಾಜಾಭ್ಯುದಯ, ವೀರಶೈವ ಧರ್ಮ ಶಿರೋಮಣಿ, ಶಿವಗೀತೆ, ಪರಮದೇವ ಕವಿರಚಿತ ಕೀರ್ತನೆಗಳು, ಜನಪದಸಾಹಿತ್ಯ – ಇವು ಕೆಳದಿ ಅರಸರ ಕಾಲದ ಐತಿಹಾಸಿಕ ವಿಷಯಗಳನ್ನು ಪ್ರತಿಪಾದಿಸುತ್ತಿವೆ.

ಕೆಳದಿನೃಪವಿಜಯ: ಇದರ ಕರ್ತೃ ಕವಿಲಿಂಗಣ್ಣ: ಕಾಲ. ಕ್ರಿ.ಶ.1750 ಇದು ಚಂಪೂಕಾವ್ಯ. ಇದರಲ್ಲಿ ಕೆಳದಿರಾಜರ, ರಾಜವಂಶದವರ, ಅವರ ಬಂಧು–ಬಾಂಧವರ, ಆಚೆ–ಈಚೆಯವರ ವಿವಾಹ, ಪಟ್ಟಾಭಿಷೇಕ ರಾಜ್ಯಭಾರ, ಮರಣ ಮುಂತಾದುವುಗಳ ವಿವರವನ್ನೂ ಅರಮನೆಯ ಅಂತರಂಗ ಬಹಿರಂಗಗಳನ್ನು ಚಿತ್ರಿಸಲಾಗಿದೆ. ಈ ಕಾವ್ಯದಲ್ಲಿ 12 ಆಶ್ವಾಸಗಳಿವೆ. ಕ್ರಿ.ಶ. 1500ರಿಂದ ಕ್ರಿ.ಶ.1763ರ ವರೆಗೆ ಅಂದರೆ ಚೌಡಪ್ಪ ನಾಯಕನಿಂದ ಸೋಮಶೇಖರ ನಾಯಕನವರೆಗೆ ಕೆಳದಿ ರಾಜ್ಯವನ್ನು ಆಳಿದ ಸುಮಾರು 18 ಜನ ರಾಜ–ರಾಣಿಯರ, ವೀರದ, ವಿಜಯದ, ಆಳ್ವಿಕೆಯ, ಸಮಾಧಿಯ ವರ್ಣನೆ ಇದೆ. ಇದಲ್ಲದೆ ವಿಜಯನಗರದ ಅರಸರ ವಂಶಾವಳಿ, ಮರಾಠೆ ರಾಮರಾಯನ ವಂಶಾವಳಿ, ದಿಲ್ಲಿ ಸುಲ್ತಾನನ ವಂಶಾವಳಿ, ವಿಜಾಪುರ, ಗೋಲ್ಕಂಡ, ದೇವಗಿರಿ, ಬಿದರೆ, – ಈ ಸಂಸ್ಥಾನಗಳನ್ನು ಆಳಿದ ಸುಲ್ತಾನರ ವಿವರ; ಶೃಂಗೇರಿ ಮಠದ ಪರಂಪರೆಯನ್ನು ಆದಿಯಿಂದ ಅಭಿನವ ಸಚ್ಚಿದಾನಂದ ಸ್ವಾಮಿಗಳವರೆಗೆ ವಿವರಿಸಿದ ಪಟ್ಟಿ – ಇವು ಇವೆ.

ಅರಮನೆಯ ಅಂತರಂಗದ ವಿವರಣೆ ಈ ಕಾವ್ಯದ ವೈಶಿಷ್ಟ್ಯಗಳಲ್ಲೊಂದು. ಅರಮನೆಯೊಳಗೆ ನಡೆಯುತ್ತಿದ್ದ ಕುಟಿಲ ತಂತ್ರಗಳ ಯಥಾವತ್ ಚಿತ್ರಣ ಈ ಕಾವ್ಯದಲ್ಲಿದೆ.

ಕ್ರಿಶ. 1500ರಿಂದ ಕ್ರಿ.ಶ. 1630ರವರೆಗೆ, ಸುಮಾರು 130 ವರ್ಷಗಳ ಕಾಲ, ಕೆಳದಿ ಅರಸರ ಅರಮನೆಯ ಅಂತರಂಗದಲ್ಲಿ, ಸಿಂಹಾಸನದ ಅಧಿಕಾರ ದಾಹ ಎಲ್ಲಿಯೂ ಕಂಡು ಬರುವುದಿಲ್ಲ. ಕ್ರಿ.ಶ. 1630ರಿಂದ ಪ್ರಾರಂಭವಾದ ವೀರಭದ್ರನಾಯಕನ ಆಳ್ವಿಕೆಯಲ್ಲಿ ಅಧಿಕಾರದಾಹ ತಲೆಯೆತ್ತುತ್ತದೆ. ಇವನು ಇಕ್ಕೇರಿ ರಾಜಧಾನಿಯಿಂದ ರಾಜ್ಯವಾಳುತ್ತಿರುತ್ತಿದ್ದ. ಒಮ್ಮೆ ಇವನು ತೀರ್ಥರಾಜಪುರಕ್ಕೆ ಹೋಗಿ ಕೆಲವು ದಿನ ತಂಗಿರಲು ಇತ್ತ, ಅರಮನೆಯಲ್ಲಿ, ಮೃತ್ಯುಂಜಯದೇವರು – ಮುಂತಾದವರು ದುರಾಲೋಚನೆ ಮಾಡಿ ರಾಮರಾಜನ ಮಗ ವೀರ ಒಡೆಯರಿಗೆ ಪಟ್ಟಗಟ್ಟುತ್ತಾರೆ. ಇದನ್ನು ತಿಳಿದ ವೀರಭದ್ರನಾಯಕನು ಕೌಲೇದುರ್ಗ ಪ್ರಾಂತವನ್ನು ಆಕ್ರಮಿಸಿ, ಸಮಯ ಸಾಧನೆ ಮಾಡುತ್ತಾ, ಆನಂದಾಪುರದಲ್ಲಿ, ವಾಸತೊಡಗಿದ್ದಾನೆ. ಮೂರು ತಿಂಗಳ ನಂತರ ವೀರ ಒಡೆಯ ಸತ್ತುಹೋದನು. ಆನಂದಾಪುರದಲ್ಲಿದ್ದ ವೀರಭದ್ರನಾಯಕ ಇಕ್ಕೇರಿಗೆ ಹೋಗಲು ಸಿದ್ಧತೆ ಮಾಡುತ್ತಿದ್ದಂತೆ, ಅತ್ತ ಇಕ್ಕೇರಿಯಲ್ಲಿ, ವೀರ ಒಡೆಯರ ತಮ್ಮ ಬಸವಲಿಂಗ ನಾಯಕನಿಗೆ ಪಟ್ಟಗಟ್ಟು ಸನ್ನಾಹ ನಡೆಯುತ್ತದೆ. ಅಷ್ಟರಲ್ಲಿ ಮತ್ತೊಂದು ಘಟನೆ ನಡೆಯುತ್ತದೆ. ವೀರಭದ್ರನಾಯಕನಿಗೆ ಸದಾಶಿವನಾಯಕ ಎಂಬ ಹೆಸರಿನ ಮೈದುನ ಇದ್ದ. ಇವನು, ತಾನು ರಾಜನಾಗಬೇಕೆಂದು ಬಯಸಿ, ಬಸವಲಿಂಗನಾಯಕನನ್ನು ಅಂಗಹೀನನನ್ನಾಗಿ ಮಾಡಿಸಿ, ತಾನೇ ರಾಜನೆಂದು ಸಾರಿ, ಸಿಂಹಾಸನವೇರಿದನು. ವೀರಭದ್ರನಾಯಕ ಸೈನ್ಯಸಮೇತ ಇಕ್ಕೇರಿಯ ಕಡೆ ಸಾಗಿ ಬಂದನು. ಇದನ್ನರಿತ ಸದಾಶಿವನಾಯಕ ಓಡಿಹೋಗಿ, ಸೋದೆ ಅರಸರ ಆಶ್ರಯ ಪಡೆದನು. ಇಕ್ಕೇರಿಯನ್ನು ಸ್ವಾಧೀನ ಮಾಡಿಕೊಂಡು ವೀರಭದ್ರನಾಯಕ ಸೋದೆಯ ಮೇಲೆ ದಂಡೆತ್ತಿ ಹೋಗಲು, ಇದನ್ನರಿತ ಸದಾಶಿವನಾಯಕ ಸತ್ತುಹೋಗುತ್ತಾನೆ. ಸೋದೆಯನ್ನು ಗೆದ್ದ ವೀರಭದ್ರನಾಯಕ, ಇಕ್ಕೇರಿಗೆ ಹಿಂತಿರುಗುತ್ತಾನೆ. ಕೆಲವು ದಿನಗಳನಂತರ ರಕ್ಷಣಾಮಂತ್ರಿ ಪುಟ್ಟಣ್ಣ – ಮುಂತಾದವರು, ಶಿವಪ್ಪನಾಯಕನನ್ನು ಕೊಲ್ಲಲು ಪ್ರಯತ್ನಿಸಿದರು. ಶಿವಪ್ಪನಾಯಕ ಸಾಗರಕ್ಕೆ ಓಡಿಹೋಗಿ, ಅಪಾಯದಿಂದ ಪಾರಾಗುತ್ತಾನೆ. ಹೆಂಡತಿಯಾದ ವೀರಮ್ಮಾಜಿಯ ಸಾವಿನಿಂದ ವೀರಭದ್ರನಾಯಕನಿಗೆ ವೈರಾಗ್ಯ ಬಂದು, ಅವನು ಕೆಲವು ದಿನ ಕುಂದಲೂರಿಗೆ ಹೋಗಿ ನೆಲೆಸುತ್ತಾನೆ. ಆಗ ಕೆಳದಿ ರಾಜ್ಯಕ್ಕೆ ಅರಸರೇ ಇಲ್ಲದಂತಾಗುತ್ತದೆ. ಇದನ್ನರಿತ ರಾವುತಪರಸಪ್ಪ – ಮುಂತಾದವರು ಶಿವಪ್ಪನಾಯಕನನ್ನು ಬಿದನೂರಿಗೆ ಕರೆಸಿ

ಕೊಂಡು ರಾಜ್ಯದ ಲೆಕ್ಕ ಪತ್ರಗಳನ್ನು ಪರಿಶೋಧನೆ ಮಾಡುವಂತೆ ತಿಳಿಸುತ್ತಾರೆ. ಒಂದು ದಿನ ಕಿರಿಯ ವೆಂಕಟಪ್ಪನಾಯಕ ಮತ್ತು ಶಿವಪ್ಪನಾಯಕಕಡತದ ಚಾವಡಿಯಲ್ಲಿದ್ದಾಗ, ಸೇನೆ ದಿವಾನ ಪುಟ್ಟಣ್ಣ – ಮುಂತಾದವರು, ಇವರಿಬ್ಬರನ್ನೂ ಕೊಲ್ಲಲ್ಲು ಪ್ರಯತ್ನಿಸುತ್ತಾರೆ. ಆದರೆ ಉಪಾಯದಿಂದ ಅವರಿಬ್ಬರೂ ಪಾರಾಗುತ್ತಾರೆ.

ಅನಂತರ ಸೋಮಶೇಖರ ನಾಯಕನ ಆಳ್ವಿಕೆಯಲ್ಲಿ – ಅವನಿಗೆ ಕೆಲವು ಕುತಂತ್ರಿಗಳು ಆನೆಯ ಮಾವುತನಿಂದ, ಆನೆಯ ಮದೋದಕವನ್ನು ಕುಡಿಸುತ್ತಾರೆ. ಅದರ ಪರಿಣಾಮವಾಗಿ ಸೋಮಶೇಖರ ನಾಯಕಹುಚ್ಚನಾಗುತ್ತಾನೆ. ಅವನ ಹೆಂಡತಿ ಚೆನ್ನಮ್ಮಾಜಿ ಆ ಕುಹಕಿಗಳನ್ನು ಶಿಕ್ಷಿಸಿ, ತಾನೆ ರಾಜ್ಯಾಧಿಕಾರವನ್ನು ವಹಿಸಿಕೊಳ್ಳುತ್ತಾಳೆ. ಅವಳ ಮೈದುನನಾದ ಬಸವಲಿಂಗನಾಯಕನು, ಕುಹಕಿಗಳ ದುರ್ಬೋಧನೆಗೆ ಒಳಗಾಗಿ, ಸಿಂಹಾಸನವನ್ನು ಏರಬಯಸುತ್ತಾನೆ. ಇದನ್ನರಿತ ಚೆನ್ನಮ್ಮ ಬಸವಲಿಂಗನಾಯಕನನ್ನು ಸ್ಥಳಾಂತರಿಸಿ, ಅಂಗವಿಕಲನನ್ನಾಗಿ ಮಾಡಿಸುತ್ತಾಳೆ. ಅನಂತರ ಕಂದಾಚಾರದ ಲಕ್ಕಯ್ಯ, ವೀರಭದ್ರಯ್ಯ – ಮುಂತಾದವರು ಚೆನ್ನಮ್ಮನನ್ನು ಸಿಂಹಾಸನದಿಂದ ಇಳಿಸಲು ದುರಾಲೋಚನೆ ಮಾಡಿ, ಹೊಸಂಗಡಿಯ ಅಂಧಕ ವೆಂಕಟಯ್ಯನ ಮಗನಿಗೆ ' ಶಿವಪ್ಪನಾಯಕ' ಎಂದು ಹೆಸರಿಟ್ಟು, ಬಿದನೂರಿಗೆ ಕರೆಸಿ, ಅವನ ಹೆಸರಿನಲ್ಲಿ ರಾಜ್ಯಭಾರ ನಡೆಸಲು ಪ್ರಯತ್ನಸುತ್ತಾರೆ. ಇದನ್ನು ಒಪ್ಪದ ಕಾಸರಗೋಡು ತಿಮ್ಮಪ್ಪಯ್ಯ, ಸುಬ್ಬನೀಸ್ ಕೃಷ್ಣಪ್ಪಯ್ಯ – ಮುಂತಾದವರು ಬಿದನೂರನ್ನು ಬಿಟ್ಟು ಬೀಳಗಿ ಪ್ರಾಂತ್ಯಕ್ಕೆ ಹೋಗುತ್ತಾರೆ. ಅವರು, ಜಾತಪ್ಪನ ಮಗ ಭದ್ರಯ್ಯ – ಎಂಬುವವನನ್ನು ಬಿದನೂರು ಸಿಂಹಾಸನಕ್ಕೆ ತರಬೇಕೆಂದು ಬಯಸುತ್ತಾರೆ. ಇದನ್ನರಿತ ಚೆನ್ನಮ್ಮಾಜಿ ಭುವನಗಿರಿ ದುರ್ಗಕ್ಕೆ ಹೋಗಿ, ಅಲ್ಲಿಗೆ ಸುಬ್ಬನೀಸ್ ಕೃಷ್ಣಪ್ಪ ಮುಂತಾದವನ್ನು ಕರೆಸಿಕೊಂಡು, ತಿಳಿವಳಿಕೆ ಹೇಳಿ, ತಾನೇ ರಾಜ್ಯಕ್ಕೆ ಅರ್ಹಳು ಎಂಬುದನ್ನು ಮನಗಾಣಿಸಿ, ಒಪ್ಪಿಸುತ್ತಾಳೆ. ಅನಂತರ ಅವರ ಸಹಾಯದಿಂದ ಭುವನಗಿರಿ ದುರ್ಗದಲ್ಲಿಯೇ ಪಟ್ಟಾಭಿಷಿಕ್ತಳಾಗಿ, ಬಿದನೂರಿಗೆ ಬರುತ್ತಾಳೆ. ಅನಂತರ ಆ ಕೃತಕ ಶಿವಪ್ಪನಾಯಕನನ್ನು ಅಂಗವಿಕಲಗೊಳಿಸಿ, ತಾನೇ ಬಿದನೂರುರಾಜ್ಯದ ರಾಣಿಯಾಗಿ ಘೋಷಿಸಿ, ರಾಜ್ಯಭಾರ ಮಾಡುತ್ತಾಳೆ.

ಆಮೇಲೆ ಕ್ರಿ.ಶ. 1740ರಲ್ಲಿ ಪಟ್ಟಕ್ಕೆ ಬಂದ ಬಸವಪ್ಪನಾಯಕನ ಕಾಲದಲ್ಲಿ ಅರಮನೆಯೊಳಗೆ ರಾಜದ್ರೋಹ ನಡೆಯುತ್ತದೆ. ಸಿಂಹಾಸನಕ್ಕೆ ಬಂದಾಗ ಬಸ್ವಪ್ಪನಾಯಕನಿಗೆ ವಿವಾಹವಾಗಿರಲಿಲ್ಲ. ಇವನಿಗೆ ಮಲತಾಯಿಯೊಬ್ಬಳಿದ್ದಳು. ಅವಳ ದುರ್ಬೋಧನೆಗೆ ಒಳಗಾಗಿ, ಆರಗದ ಪರಮೇಶ್ವರ ಮತ್ತು ಅವನ ತಮ್ಮ – ಇಬ್ಬರೂ ಕುಹಕತನ ನಡೆಸುತ್ತಾರೆ. ಇದನ್ನರಿತ ಬಸವಪ್ಪನಾಯಕ ಇವರಿಬ್ಬರನ್ನೂ ಕರೆಸಿ, ಶಿಕ್ಷಿಸುತ್ತಾನೆ. ಹಾಗೂ ದುರ್ಬೋಧನೆಯನ್ನು ಮಾಡಿದ ಮಲತಾಯಿಯನ್ನು ಅಂಕೆಯಲ್ಲಿಡುತ್ತಾನೆ.

**2. ಶಿವತತ್ತ್ವ ರತ್ನಾಕರ** : ಇದು ಸಂಸ್ಕೃತದಲ್ಲಿ ಬರೆಯಲ್ಪಟ್ಟಿದೆ. ಇದರ ಕರ್ತೃ ಹಿರಿಯ ಬಸವಪ್ಪನಾಯಕ. ಕಾಲ ಕ್ರಿ.ಶ. 1698 - 1715. ಇದು ಅನೇಕ ವಿಷಯಗಳನ್ನು ವಸ್ತುವಾಗುಳ್ಳ ಒಂದು ವಿಶ್ವಕೋಶ. ಇದರಲ್ಲಿ ಪ್ರಧಾನ ಅಧ್ಯಾಯಗಳನ್ನು 'ಕಲ್ಲೋಲ' ಎಂದೂ, ಉಪ-ಅಧ್ಯಾಯಗಳನ್ನುತರಂಗ' ಎಂದೂ ಕರೆಯಲಾಗಿದೆ. ಇದರಲ್ಲಿ ಒಟ್ಟು ಒಂಬತ್ತು ಕಲ್ಲೋಲಗಳಿವೆ. ಒಂದುನೂರಎಂಟು ತರಂಗಗಳಿವೆ. ಕೆಲವು ಕಲ್ಲೋಲಗಳಲ್ಲಿ ಮಾತ್ರ ಕೆಳದಿ ಇತಿಹಾಸಕ್ಕೆ ಸಂಬಂಧಿಸಿದ ವಿಷಯಗಳಿವೆ.

ಪಂಚಮ ಕಲ್ಲೋಲದ ಮೊದಲನೆಯ ತರಂಗದಲ್ಲಿ ಕೆಳದಿ ರಾಜ್ಯದ ಪ್ರಸ್ತಾಪವಿದೆ. ಈ ರಾಜ್ಯವನ್ನು ಮಲ್ಲದೇಶ– ಎಂದು ಕರೆಯುತ್ತಿದ್ದರೆಂದು ಅದು ತಿಳಿಸುತ್ತದೆ. ಎರಡನೆಯ ತರಂಗದಲ್ಲಿ ಮಲ್ಲದೇಶದ ವಿಸ್ತಾರ: ಕೆಳದಿ ಊರು; ಅಲ್ಲಿ ಬಸವ – ಬಸವಾಂಬೆ – ಎಂಬ ಶಿವಭಕ್ತ ದಂಪತಿಗಳು. ಅವರಿಗೆ ನಾಲ್ಕು ಜನ ಗಂಡು ಮಕ್ಕಳು; ಇಬ್ಬರು ಸತ್ತು ಇಬ್ಬರು ಉಳಿದದ್ದು. ಈ ಇಬ್ಬರ ಹೆಸರು ಚೌಡಪ್ಪ ಮತ್ತು ಭದ್ರಪ್ಪ – ಈ ವಿಷಯಗಳಿವೆ ನಾಲ್ಕನೆಯ ತರಂಗದಲ್ಲಿ – ಚೌಡಪ್ಪನಿಗೆ ನಿಧಿ ಸಿಗುವುದು; ವಿಜಯನಗರದ ಅರಸು ಚೌಡಪ್ಪನಿಗೆ ಮಲ್ಲ ರಾಜ್ಯದ ಅಧಿಕಾರವನ್ನು ಕೊಡುವುದು; ಚೌಡಪ್ಪನಾಯಕನು ಕೆಳದಿ ರಾಮೇಶ್ವರನಿಗೆ ದೇವಸ್ಥಾನ ಕಟ್ಟಿಸುವುದು. ಸದಾಶಿವ ಮತ್ತು ಭದ್ರಪ್ಪ – ಎಂಬ ಮಕ್ಕಳಾಗುವುದು; – ಈ ವಿಚಾರಗಳಿವೆ. ಪಂಚಮ ತರಂಗದಲ್ಲಿ ಸದಾಶಿವನಾಯಕನ ಹಿರಿಯ ಹೆಂಡತಿಯಲ್ಲಿ ದೊಡ್ಡ ಸಂಕಣ್ಣನಾಯಕ ಮತ್ತು ಕಿರಿಯ ಹೆಂಡತಿಯಲ್ಲಿ ಚಿಕ್ಕ ಸಂಕಣ್ಣನಾಯಕ ಜಂಬೂರು ದೇಶವನ್ನು ಗೆದ್ದದ್ದು; ಅವನಿಗೆ ರಾಮರಾಜ ಮತ್ತು ವೆಂಕ

ಟಪ್ಪ – ಎಂಬ ಮಕ್ಕಳು ಹುಟ್ಟುವುದು; ದೊಡ್ಡಸಂಕಣ್ಣ ನಾಯಕನ ತೀರ್ಥಯಾತ್ರೆ – ಇವು ಇವೆ. ಹದಿನೈದ ನೆಯ ತರಂಗದಲ್ಲಿ ಚಿಕ್ಕ ಸಂಕಣ್ಣನಾಯಕನಿಗೆ ಸಿದ್ದಪ್ಪ– ಎಂಬ ಮಗ ಹುಟ್ಟುವುದು; ಚಿಕ್ಕ ಸಂಕಣ್ಣ ನಾಯಕನು ಮಂಜುಳಖಾನ ಮತ್ತು ಗೇರುಸೊಪ್ಪೆರಾಣಿ – ಇವ ರೊಂದಿಗೆ ಯದ್ಧ ಮಾಡಿ ಜಯಿಸಿದ್ದು, ಇವನನಂತರ ದೊಡ್ಡ ಸಂಕಣ್ಣನಾಯಕನ ಮಗ ವೆಂಕಟಪ್ಪನಾಯಕ ರಾಜನಾದದ್ದು – ಇವೆ.

ಷಷ್ಠಕಲ್ಲೋಲದ ಪ್ರಥಮ ತರಂಗದಲ್ಲಿ – ವೆಂಕ ಟಪ್ಪ ನಾಯಕನ ಆಳ್ವಿಕೆ; ಹದಿಮೂರನೆಯ ತರಂಗ ದಲ್ಲಿ – ವೆಂಗಟಪ್ಪನಾಯಕನಿಗೆ ಭದ್ರಪ್ಪನಾಯಕ – ಎಂಬ ಮಗ ಹುಟ್ಟುವುದು; ಭದ್ರಪ್ಪನಾಯಕನಿಗೆ ವೀರಭದ್ರನಾಯಕ ಹುಟ್ಟುವುದು; ವೆಂಕಟಪ್ಪನಾಯಕನು ಹೊಳೆಹೊನ್ನೂರಿನಲ್ಲಿದ್ದ ಹನುಮ ನಾಯಕನನ್ನು ಸೋಲಿಸುವುದು; ಹನುಮನಾಯಕನಿಗೆ ಸಹಾಯಕನಾಗಿ ಬಂದ ಮಂಜುಲಖಾನ – ಎಂಬುವನನ್ನು ಗೆಲ್ಲುವುದು; ಇದರ ನೆನಪಿಗಾಗಿ ಹಾನುಗಲ್ಲಿನಲ್ಲಿ ವೆಂಕಟಪ್ಪನಾಯಕ ವಿಜಯಸ್ತಂಭವನ್ನು ನಿಲ್ಲಿಸುವುದು; ವೆಂಕಟಪ್ಪನಾಯಕನು ವೇಣುಪುರದ ಶಂಕರನಾರಾಯಣಭಟ್ಟನನ್ನು ಗೆಲ್ಲು ವುದು; ಭುವನಗಿರಿದುರ್ಗವನ್ನು ವಶಮಾಡಿ ಕೊಳ್ಳು ವುದು; ಶೃಂಗೇರಿ ಮಠದ ಜೀರ್ಣೋದ್ಧಾರ; ಆನಂದಾ ಪುರ ಮತ್ತು ಅಲ್ಲಿಯ ಕೋಟೆಯ ನಿರ್ಮಾಣ, ಅಲ್ಲಿ ರಂಗನಾಥದೇವರ ಸ್ಥಾಪನೆ; ಸದಾಶಿವಸಾಗರ – ಎಂಬ ನಗರ ನಿರ್ಮಾಣ; ಇಕ್ಕೇರಿಯಲ್ಲಿ ವೆಂಕಟಪ್ಪ ನಾಯಕ ತನ್ನ ಮೊಮ್ಮಗ ವೀರಭದ್ರನಾಯಕನಿಗೆ ಪಟ್ಟಗಟ್ಟುವುದು ಈ ವಿಚಾರಗಳಿವೆ.

ಆರನೆಯ ಕಲ್ಲೋಲದ ಇಪ್ಪತ್ತೇಳನೆಯ ತರಂಗ ದಲ್ಲಿ – ವೀರಭದ್ರನಾಯಕನು ದಾಯಾದಿ ಗಳೊಂದಿಗೆ ಮಾಡಿದಹೋರಾಟ; ಯವನರೊಂದಿಗೆ ಸೇರಿ ಇಕ್ಕೇರಿ ಯನ್ನು ಮುತ್ತಲು ಬಂದ ಬಸವಪಟ್ಟಣದ ಹನುಮ ನಾಯಕನನ್ನು ಓಡಿಸುವುದು; ಶಿವಪ್ಪನಾಯಕನ ಪಟ್ಟಾ ಭಿಷೇಕ – ಇವೆ.

ಏಳನೆಯ ಕಲ್ಲೋಲದ ಆರನೆಯ ತರಂಗದಲ್ಲಿ – ಶಿವಪ್ಪನಾಯಕನ ರಾಜ್ಯಭಾರ; ಭದ್ರಪ್ಪನಾಯಕನ ಜನ ಇವೆ. ಏಳನೆಯ ತರಂಗದಲ್ಲಿ – ಸೋಮಶೇಖರ ನಾಯಕನ ವಿಚಾರವಿದೆ. ಹದಿನಾಲ್ಕನೆಯ ತರಂಗದಲ್ಲಿ – ವೇಲಾಪುರವನ್ನು ಶಿವಪ್ಪನಾಯಕನ ಗೆಲ್ಲುವುದು; ಭದ್ರಪ್ಪ ಮತ್ತು ಸೋಮಶೇಖರ ನಾಯಕನ ವಿದ್ಯಾಭ್ಯಾಸ – ಇವೆ.

ಎಂಟನೆಯ ಕಲ್ಲೋಲದ ಒಂದನೆಯ ತರಂಗದಲ್ಲಿ – ವೆಂಕಟಪ್ಪನಾಯಕನ ರಾಜ್ಯಭಾರ; ಭದ್ರಪ್ಪನಾಯಕನ ರಾಜ್ಯಾಭಿಷೇಕ; ಭದ್ರಪ್ಪನಾಯಕ ರಾಜ್ಯಭಾರ; ಶಿವಪ್ಪ ನಾಯಕನ ಮರಣ – ಇವೆ. ಎರಡನೆಯ ತರಂಗದಲ್ಲಿ – ಭದ್ರಪ್ಪ ನಾಯಕನ ಆಕ್ರಮಣ; ಉಡುಪಿಯ ಶ್ರೀ ಕೃಷ್ಣನಿಗೆ ಭದ್ರಪ್ಪನಾಯಕನಿಂದ ಪೂಜೆ; ಭದ್ರಪ್ಪ ನಾಯಕನ ಮರಣ; ಸೋಮಶೇಖರ ನಾಯಕನ ಧನುರ್ವಿದ್ಯಾಭ್ಯಾಸ – ಇವೆ. ಐದನೆಯ ತರಗತಿಯಲ್ಲಿ – ಸೋಮಶೇಖರ ನಾಯಕ ಮತ್ತು ಚೆನ್ನಮ್ಮಾಜಿಯ ವಿವಾಹವೂ ಏಳನೆಯ ತರಂಗದಲ್ಲಿ – ಸೋಮಶೇಖರ ನಾಯಕನ ಅವಸಾನ; ಬಸಪ್ಪನಾಯಕನ ಪಟ್ಟಾಭಿಷೇಕ; ಎಂಟನೆಯ ತರಂಗದಲ್ಲಿ – ಚೆನ್ನಮಾಜ್ಜಿಯ ಆಳ್ವಿಕೆ; ಮರಾಠರ ರಾಜಾರಾಮನಿಗೆ ಆಶ್ರಯ ಕೊಟ್ಟದ್ದು; ಔರಂಗಜೇಬನ ಸೈನ್ಯದೊಡನೆ ಯುದ್ಧ; ಜಯ; 1,60,000 ಜಂಗಮರ ಆರಾಧನೆ; ಚೆನ್ನಮ್ಮಾಜಿ ಯಿಂದ ಬಸವ ಭೂಪಾಲನಿಗೆ ಧರ್ಮೋಪದೇಶ; ಚೆನ್ನ ಮ್ಮಾಜಿಯ ಮರಣ ಈ ಎಲ್ಲ ಇವೆ.

**3. ಕೆಳದಿ ರಾಜ್ಯಾಭ್ಯುದಯ :** ಇದರ ಕರ್ತೃ ಕೆಳದಿ ಗಂಗಾದೇವಿ. ಕಾಲ ಕ್ರಿ.ಶ. 1700. ಇದು ಕನ್ನಡ ಗದ್ಯಪದ್ಯಾತ್ಮಕ ಕಾವ್ಯ. ಈವರೆಗೆ ಮೊದಲ ಸೋಪಾನವು ಪೂರ್ಣವಾಗಿಯೂ, ಎರಡನೆಯದ ಅಪೂರ್ಣವಾಗಿಯೂ ದೊರೆತಿದೆ. ಇವಳು ಕೆಳದಿ ಅರ ಸರ ಗುರುಗಳಾದ ಚೆನ್ನವೀರ ಶಿವಾಚಾರ್ಯರ ಪತ್ನಿ. ಇವಳ ತಾಯಿ ಗೌರಿದೇವಿ; ತಂದೆ ಶಿವಪ್ಪ, ಮೊದಲ ನೆಯ ಸೋಪಾನದಲ್ಲಿ ಕೇವಲ ಪೀಠಿಕಾ ಭಾಗವಿದೆ .ಎರಡನೆಯ ಸೋಪಾನದಿಂದ ಕೆಳದಿ ಅರಸರ ಇತಿ ಹಾಸ ಪ್ರಾರಂಭವಾಗುತ್ತದೆ. ಮೊದಲನೆಯ ಸೋಪಾನ ಭಾಮಿನಿಷಟ್ಪದಿಯಲ್ಲಿದ್ದರೆ; ಎರಡನೆಯ ಸೋಪಾನ ಗದ್ಯದಲ್ಲಿದೆ. ಇದರಲ್ಲಿ ಮಲ್ಲದೇಸ; ಬಸವಪ್ಪ – ಬಸ ವಾಂಬೆಯರ ದಾಂಪತ್ಯಜೀವನಲ; ಇವರ ಇಬ್ಬರು ಮಕ್ಕಳ ಮರಣ; ಅವರನ್ನು ರುದ್ರ ಮುನಿಸ್ವಾಮಿಗಳು ಸಮಾಧಾನ ಪಡಿಸುವುದು – ಮುಂತಾದ ವಿಷಯಗ ಳಿವೆ. ಇದು ಅಪೂರ್ಣವಾಗಿ ದೊರೆತಿದೆ. ಈ ಬಗ್ಗೆ ಸಂಶೋಧನೆ ನಡೆಯಬೇಕಾಗಿದೆ.

**4. ಕರ್ಣಾಟಕ ಶಿವಗೀತೆ:** ಇದರ ಕರ್ತೃ ತಿರು ಮಲಭಟ್ಟ. ಕಾಲ ಕ್ರಿ.ಶ. 1600. ಇದು ವಾರ್ಧಕ

ಷಟ್ಪದಿಯಲ್ಲಿದೆ. ಕಾವ್ಯದ ಪ್ರಾರಂಭದಲ್ಲಿ ತನ್ನ ಒಡೆಯನಾದ ಹಿರಿಯ ವೆಂದಟಪ್ಪನಾಯಕನನ್ನು ಸ್ತುತಿಸಿ, ಅನಂತರ ಇಕ್ಕೇರಿ ನಗರದ ವರ್ಣನೆಯನ್ನು ಮಾಡಿ, ಆಮೇಲೆ ಇಕ್ಕೇರಿ ಅರಸರ ವಂಶದ ಚರಿತ್ರೆಯನ್ನು ಸದಾಶಿವನಾಯಕನಿಂದ ಪ್ರಾರಂಬಿಸಿ ಹಿರಿಯ ವೆಂದಟಪ್ಪ ನಾಯಕನವರೆಗೆ ಸಂಗ್ರಹವಾಗಿ ಹೇಳಿದ್ದಾನೆ. ನಾಂದೀ ಪದ್ಯದಲ್ಲಿ ಈ ವೆಂಕಟಪ್ಪ ನಾಯಕನನ್ನು ಸರ್ವಜ್ಞ ಶಿವ ಎಂದೂ ನವ ಭೋಜ ಪ್ರಚಂಡಬುಧಸಖ ಎಂದೂ ಹೋಗಳಿದ್ದಾನೆ.

**5. ಕವಿಪರಮದೇವನ ಕೃತಿಯಲ್ಲಿ, ಇತಿಹಾಸ :** ಪರಮದೇವನ ಕವಿ ಕೆಳದಿ ಅರಸರ ಕಾಲದಲ್ಲಿದ್ದ ಕವಿ. ಇವರ ಕಾಲ ಕ್ರಿ.ಶ.1721 – ಕ್ರಿ.ಶ.1805. ಕ್ರಿ.ಶ 1763ರಲ್ಲಿ ಹೈದರಾಲಿ ಬಿದನೂರು ರಾಜ್ಯವನ್ನು ಗೆಲ್ಲುತ್ತಾನೆ. ಅನಂತರ ಕ್ರಿ.ಶ.1765ರ ವೇಳೆಗೆ ಸೋಂದ ಮತ್ತು ಸವಣೂರು ರಾಜ್ಯಗಳನ್ನು ಇವನು ಗೆಲ್ಲುತ್ತಾನೆ. ಸವಣೂರು ನವಾಬರ ಸ್ನೇಹಿತರಾದ ಮರಾಠರು ಕ್ರಿ.ಶ.1791ರಲ್ಲಿ ಪರಶುರಾಮಭಾವೂ – ಎನ್ನುವವನ ನಾಯಕತ್ವದಲ್ಲಿ ಬಂದು ಇಕ್ಕೇರಿ ಪ್ರಾಂತವನ್ನು ಲೂಟಿ ಮಾಡುತ್ತಾರೆ. ಇದರ ದುಷ್ಟ ಪರಿಣಾಮವನ್ನು ಪರಮದೇವ ಕವಿ ತನ್ನ ಆನೆಕ ಕೀರ್ತನೆಗಳಲ್ಲಿ ವರ್ಣಿಸಿದ್ದಾನೆ.

**6. ಜನಪದ ಸಾಹಿತ್ಯ :** ಔರಂಗಜೇಬನ ಸೈನ್ಯ ಮರಾಠಿಗರ ರಾಜಾರಾಮನನ್ನು ಹಿಡಿಯಲು ಬೆನ್ನಟ್ಟಿ ಬರುತ್ತದೆ. ರಾಜಾರಾಮನು ಚೆನ್ನಮ್ಮಾಜಿಯ ಆಶ್ರಯವನ್ನು ಬಯಸಿದಾಗ, ಅವಳು ಆಶ್ರಯ ಕೊಡುತ್ತಾಳೆ. ಮೊಗಲರ ಸೈನ್ಯ ಚೆನ್ನಮ್ಮಾಜಿಯ ಮೇಲೆ ಯುದ್ಧ ಮಾಡುತ್ತದೆ. ರಾಣಿಯು ಆ ಸೈನ್ಯವನ್ನು ಸೋಲಿಸು ತ್ತಾಳೆ. ಈ ವಿಚಾರವನ್ನು ಹೇಳುವ ಗೀತೆ ಹೀಗಿದೆ.

ಮೊಗಲಖಾನರಿಗಂಜಿ ಮರಾಠಿ ಮರಿಯರಸ । ಮಲೆನಾಡ
ರಾಣಿಗೆ ಬೆನ್ನಿಗೆ ಬಿದ್ದಜಾಣೆ॥
ಮೊಗಲಶಾಹಿ ಪರಂಗಖಾನ ಬಿಗುವಿಲೆ ಕೆಳದಿಗೆ ಇಳಿದ ।
ಹಗಲಿರುಳು ದಿಗಿಲಾಗ ದಿನದಿನಕೆ ಜಾಣೆ ।
ಮುನ್ನೋಡೆ ಕೊಡ ಹೇಳೋ ಚೆನ್ನಮ್ಮ ರಾಜಾರಾಮ್ನ ।
ಕನ್ನಕೊಲೆ ಸುಲಗಿ ಇಲದಿರಕ ಜಾಣೆ ॥
ಖಾನರಕರಿಸ್ಯಾಳೆ, ಆರಮನಿಗೆ ಇಳಿಸ್ಯಾಳೆ ।
ನೆವಣೆ ನಿಟ್ಟ ಬಿಗಿಸಿ ಹುಗಿಸ್ಯಾಳೆ ಜಾಣೆ ॥
ಬೆಳಗಾಗಿ ಹೌಹಾರಿ ಮೊಗಲರ ಇಡಿದಂಡು ।
ಕಾಲಕಿತ್ತು ಓಡ್ಯಾರೋ ಖಾನರು ಜಾಣೆ ॥
ಉಳವಿಯ ಚೆನ್ನಬಸವ ಉಳಿಸಿದ ನಮ್ಮಾನ ।
ಕಳಸವ ಕಟ್ಟಿ ಕೈಮುಗಿದು ಜಾಣೆ ॥
ಕೆಳದಿಯ ಶಿವರಾಜ್ಯ ಬೆಳೆಯಲಿ ಶಿವ ಶಿವನೇ ।
ಇಳಿವ್ಯಾಗ ಸೊಗನಲಿದು ಉಂಡುಟ್ಟುಜಾಣೆ ॥

( ಶ್ರೀ ಕೆಳದಿ ಗುಂಡಾಜೋಯಿಸ್‌ರವರ
ಸಂಗ್ರಹದಿಂದ ಆರಿಸಲಾಗಿದೆ)

ಡಾ|| ಸೂರ್ಯನಾಥ ಕಾಮತ್

# ಕರ್ನಾಟಕದಲ್ಲಿ ಗುಲಾಮಗಿರಿ ಹಾಗೂ ಅದರ ರದ್ದತಿ (1843)

ಗುಲಾಮ ಪದ್ಧತಿ ಅಥವಾ ಗುಲಾಮಗಿರಿ ಪ್ರಾಚೀನ ಭಾರತದಲ್ಲೂ ಕರ್ನಾಟಕದಲ್ಲೂ ಸಾಮಾನ್ಯ ವಾಗಿ ಇದ್ದ ವ್ಯವಸ್ಥೆ. 'ತೊತ್ತು' ಎಂಬ ಶಬ್ದವನ್ನು ಹೆಣ್ಣುದಾಸಿ ಅಥವಾ ಗುಲಾಮಳಿಗೂ ಗಂಡು ತೊತ್ತು, ತೊಂಡ ಎಂಬ ಶಬ್ದವನ್ನು ಪುರುಷ ಗುಲಾಮನಿಗೂ ಬಳಸಲಾಗಿದ್ದು[1] ಈ ವ್ಯವಸ್ಥೆಯು ನಮ್ಮ ಪ್ರಾಚೀನ ಆರ್ಥಿಕ ವ್ಯವಸ್ಥೆಯ ಭಾಗವಾಗಿತ್ತು. ಬ್ರಿಟಿಷರ ಆಗಮ ನವಾಗಿ ಮುಂದೆ 1843ರಲ್ಲಿ ಗುಲಾಮಗಿರಿ ಪದ್ಧತಿ ಯನ್ನು ಅವರು ರದ್ದು ಮಾಡಿದರೂ ಅದು ಒಮ್ಮೆಗೇ ಕಣ್ಮರೆ ಆಗಲಿಲ್ಲ. ನಮ್ಮ ಕಾಲದಲ್ಲಿ ಜೀತ ಪದ್ಧತಿ ಯನ್ನು ರದ್ದು ಮಾಡಿದಂತೆಯೇ ಆಗಿನ ಸ್ಥಿತಿ ಇತ್ತು. ಗುಲಾಮರು ಬದುಕಲು ಬೇರೆ ದಾರಿ ಇದ್ದಾಗ ಮಾತ್ರ ಅವರು ಮುಕ್ತಿ ಪಡೆಯಬಹುದಾಗಿತ್ತು. ಇಲ್ಲ ವಾದರೆ ಪಂಜರದಲ್ಲಿ ಬಂಧಿಸಿದ್ದ ಪ್ರಾಣಿಯನ್ನು ಹೊರ ಬಿಟ್ಟರೂ ಅದು ಪಂಜರದಿಂದ ಹೊರ ಬರಲು ಅಸಮರ್ಥವಾದ ಮನಃಸ್ಥಿತಿಯಲ್ಲಿ ಅವರು ಇದ್ದರು.

ಜೀತ ಪದ್ಧತಿ ಮತ್ತು ಗುಲಾಮಗಿರಿಯಲ್ಲಿ ವ್ಯತ್ಯಾಸವಿದೆ. ಜೀತವು ಕಾಲಮಿತಿಗೆ ಒಳಪಟ್ಟದ್ದು. ಸಾಲ ಪಡೆದ ವ್ಯಕ್ತಿ ಸಾಲ ತೀರುವವರೆಗೆ ತನ್ನ ಮಾಲೀಕನಲ್ಲಿ ದುಡಿಯಬೇಕು. ಜೀತಕ್ಕೆ ಅಸ್ಪೃಶ್ಯರೇ ಅಲ್ಲದೆ ಮೇಲ್ಜಾತಿಯವರಾದ ಲಿಂಗಾಯತರೂ, ಬ್ರಾಹ್ಮಣರೂಕೂಡ ಒಳಪಟ್ಟ ಉದಾಹರಣೆಗಳುಂಟು. ಜೀತ ಪದ್ಧತಿಯನ್ನು ಇಲ್ಲಿ ಚರ್ಚಿಸಿಲ್ಲ. ಗುಲಾಮ ಎಂದರೆ ಆತ ತನ್ನ ಒಡೆಯನ ಸೇವಕ; ಒಡೆಯನನ್ನು ಆತ ಬಿಟ್ಟು ಹೋಗುವಂತಿಲ್ಲ. ಆತನನ್ನು ತನ್ನಲ್ಲಿನ ರಾಸುಗಳಂತೆ ಒಡೆಯನು ಮಾರಬಹುದು. ಜೀತದಾ ಳನ್ನು ಮಾರುವಂತೆ ಇಲ್ಲ. ಗುಲಾಮರು ಗದ್ದೆ ತೋಟ ಗಳಲ್ಲಿ ಕೆಲಸ ಮಾಡುವವರಾದರೆ ಅವರು ಬಹುಪಾ ಲಿಗೆ ಅಸ್ಪೃಶ್ಯ ಜಾತಿಗೆ ಸೇರಿದವರು. ಮನೆಯಲ್ಲಿ ಸೇವ ಕರಾದರೆ ಮೇಲ್ಜಾತಿಯವರು. ಆದರೆ ಗುಲಾಮರಾಗಿದ್ದ ವರಲ್ಲಿ ಅಸ್ಪೃಶ್ಯರೇ ಹೆಚ್ಚು. ರಾಜರು ಸೈನಿಕ ಇಲ್ಲವೇ ಸಾರ್ವಜನಿಕ ಸೇವೆಗೆ ಪ್ರತಿಫಲವಾಗಿ ನೀಡಿದ್ದ ಭೂಮಿ ಯನ್ನು ಸಾಗುಮಾಡಲು ಮೂಲ ದಾಳು ಅಥವಾ ಗುಲಾಮರನ್ನು ಕೊಟ್ಟುದು ಕೊಡಗಿನ ದಾಖಲೆಗಳಲ್ಲಿ ಕಾಣಬ ರತ್ತದೆ. ಉದಾಹರಣೆಗೆ ಲಿಂಗರಾಜೇಂದ್ರ ಒಡೆಯ (1811-20)ನ ಕಾಲದಲ್ಲಿ ಹಾರಂಗಿ ಗ್ರಾಮದಲ್ಲಿದ್ದ ಕ್ಷತ್ರಿ ದಳವಾಯಿ ರಾಮಯ್ಯ ಎಂಬಾತನಿಗೆ ಅವನ ಭೂಮಿ ಆರಂಭಕ್ಕಾಗಿ ಬಲಗೈಲಿಂಗಿ ಎಂಬ "ಹೆಣು ಜನ" ಹಾಗೂ ಅವಳ 4 ವರ್ಷದ ಮಗ ತಿಪ್ಪ ಹಾಗೂ ಒಂದು ವರ್ಷದ ಲಿಂಗಿ ಅಂತು ಜನ 3 ಮೂರನ್ನು "ನಿನಗೆ ಜಮ್ಮಕ್ಕೆ ಅಪ್ಪಣೆ ಕೊಡಿಸಿರುವುದ ರಿಂದ ನಿನ್ನ ಪುತ್ರ ಪಾರಂಪರ್ಯವಗಿ ಜಮ್ಮವಾಗಿ ಅನುಭವಿಸಿ ಸ್ವಾಮಿ ಕಾರ್ಯಮುಖ್ಯವೆಂದು ನಡೆದು ಕೊಳ್ಳುವುದಾಗಿ ಸನದು" ಎಂಬ ಅಜ್ಞೆಯ ದಾಖಲೆ ಯಿಂದ ಸಿಗುವ ಮಾಹಿತಿ ಗಮನಿಸಿ.[2] ಡಿ.ಎನ್. ಕೃಷ್ಣಯ್ಯ ವರದಿ ಮಾಡಿರುವಂತೆ ಚಿಕ್ಕವೀರ ರಾಜೇಂದ್ರನ ಕಾಲದಲ್ಲಿ (1820-34) ಕೊಡಗಿನಲ್ಲಿ 6089 ಜನ ಜಮ್ಮದಾಳುಗಳು ಇದ್ದರು.[3] ಅವರೇ ಹೇಳುವಂತೆ ಈ ಜಮ್ಮದಾಳುಗಳಲ್ಲಿ ಭೂಮಿ ಜಮ್ಮ ದಾಳು ಮತ್ತು ಒಕ್ಕಲು ಜಮ್ಮದಾಳು, ಎಂಬ ಭೇಧ ವಿತ್ತು. "ಭೂಮಿ ಜಮ್ಮದಾಳುಗಳು ತಾವಿದ್ದ ಭೂಮಿಯಲ್ಲಿ ಆಳುಗಳಾಗಿದ್ದು ಆ ಭೂಮಿಯ ಯಜ ಮಾನರು ಬದಲಾದರೂ ಇವರು ಆ ಭೂಮಿಗೆ ಸಂಬಂಧಪಟ್ಟು ಅಲ್ಲೇ ವಾಸಿಸಬೇಕಾದವರು[4]" ಇನ್ನು ಒಕ್ಕಲು ಜಮ್ಮದಾಳು "ತಾವು ಯಾರ ಆಳುಗಳಾಗಿರು ವರೋ ಅವರು ಎಲ್ಲಿ ಭೂಮಿ ಮಾಡುತ್ತಿದ್ದರೂ ಅವರೊಡನೆ ಹೋಗಿ ಅಲ್ಲಿ ಕೆಲಸಮಾಡಬೇಕು.[5]" ಈ ಜಮ್ಮದಾಳು ಅಥವಾ ವ್ಯವಸಾಯ ಕ್ಷೇತ್ರದ ಗುಲಾಮರು ಅಸ್ಪೃಶ್ಯ ಮತ್ತು ಬುಡಕಟ್ಟು ವರ್ಗಕ್ಕೆ ಸೇರಿದವರಾಗಿದ್ದರೆಂದು ತಿಳಿಸಿ ಅವರು ಅಂಥವರುಗಳ ಜಾತಿಗಳ ಪಟ್ಟಿಕೊಟ್ಟಿದ್ದಾರೆ.[6] ಕೊಡಗಿನ ವೀರರಾಜೇಂದ್ರನ ಪನ್ಯ ಭೂಮಿ ಅಥವಾ ಅರಮನೆ ಜಮೀನಿನಲ್ಲಿ 168 ಭೂಮಿ ಜಮ್ಮದಾಳುಗಳೂ 1,055 ಒಕ್ಕಲು ಜಮ್ಮದಾಳುಗಳೂ ಇದ್ದರೆಂದೂ ಅವರು ತಿಳಿಸಿದ್ದಾರೆ.[7]

ದಕ್ಷಿಣ ಕನ್ನಡದಲ್ಲಿ "ಮೂಲದ ಹೊಲೆಯ" ಮತ್ತು 'ಸಾಲದ ಹೊಲೆಯ' ಎಂಬ ಕೃಷಿ ಕೂಲಿಗಾರರು ಇದ್ದ ವಿಚಾರವನ್ನು ಸ್ಟರಾಕ್, ಅಲ್ಲಿನ ಗ್ಯಾಸೆಟಿಯರ್ (1894)ನಲ್ಲಿ ಹೇಳಿದ್ದಾರೆ.[8] ಇಲ್ಲಿ ಸಾಲದ ಹೊಲೆಯರೆಂದರೆ ಸಾಲಕ್ಕೆ ಜೀತವಾದವರು. ಅವರ ವಿಚಾರ ಬಿಟ್ಟರೆ, ಮೂಲದ ಹೊಲೆಯರು ಕೃಷಿ ಗುಲಾಮರೆಂದು (ಫಾರ್ಮ್ ಸ್ಲೇವ್ಸ್) ಬಣ್ಣಿಸಿರುವ ಅವರು, "ಗುಲಾಮಗಿರಿಯು ಕಾನೂನಿನಂತರದ್ದಾದರೂ ರೂಢ ಪದ್ಧತಿಗಳು ಬೇಗನೇ ಮಾಯವಾಗುವುದಿಲ್ಲ" ಎಂದಿದ್ದಾರೆ. ಗಟ್ಟದ ಮೇಲಿನ ಕಾಫಿ ತೋಟದಲ್ಲಿ ಹೆಚ್ಚಿನ ಕೂಲಿಸಿಗುವ ಆಕರ್ಷಣೆ ಇದ್ದರೂ ಅವರು ತಮ್ಮ ಪರಂಪರಾಗತ ಒಡೆಯನನ್ನು, ಒಡೆಯನು ತಮ್ಮನ್ನು ಚೆನ್ನಾಗಿ ನಡೆಸಿಕೊಳ್ಳುವಷ್ಟು ಕಾಲ, ತ್ಯಜಿಸಲು ಇಚ್ಛೆಪಡುವುದಿಲ್ಲ, ಎಂದು ತಿಳಿಸಿದ್ದಾರೆ. ಜೈನರೂ, ಬ್ರಾಹ್ಮಣರೂ ಕೃಷಿಗಾಗಿ ಇವರನ್ನೇ ಅವಲಂಬಿಸಿದ್ದಾರೆ, ಎಂದು ಹೇಳಿ ಅವರಿಗೇ ನೀಡುವ ಅಶನಾರ್ಥ ಕೂಲಿಯ ವಿವರ ಕೂಡ ಹೇಳಿದ್ದಾರೆ.[9] ಈ ಎರಡು ಗುಂಪಿನಲ್ಲಿ ಇರುವ ವ್ಯತ್ಯಾಸ ಕಣ್ಮರೆಯಾಗುತ್ತಿದೆ, ಎಂದಿರುವ ಅವರು ಸಾಲದ ಹೊಲೆಯನ ವಿಚಾರದಲ್ಲಿ ವರ್ಷಕ್ಕೆ ಸ್ವಲ್ಪ ನಗದು ಹಣ ಅವನ ಲೆಕ್ಕಕ್ಕೆ ಸೇರುವ ವಿನಾ, ಉಳಿದ ವಿಚಾರದಲ್ಲಿ ಇಬ್ಬರಿಗೂ ಸಮಾನ ಸ್ವಲ್ಪ ನಗದು ಹಣ ಅವನ ಲೆಕ್ಕಕ್ಕೆ ಸೇರುವ ವಿನಾ, ಉಳಿದ ವಿಚಾರದಲ್ಲಿ ಇಬ್ಬರಿಗೂ ಸಮಾನ ವಸ್ತುರೂಪದ ಕೂಲಿ ನೀಡಲಾಗುತ್ತಿದೆ ಎಂದು ಅವರು ವಿವರಿಸದ್ದಾರೆ.[10] ಹೇಗಿದ್ದರೂ ಬ್ರಿಟಿಷರ ಕಾನೂನು, ಕಾಫಿ ತೋಟಗಳಲ್ಲಿ ಮತ್ತು ಇತರ ಕಡೆಗಳಲ್ಲಿ ಕೂಲಿ ಕೆಲಸ ಸಿಗುವ ಅವಕಾಶದ ಹೆಚ್ಚಳಗಳಿಂದ ಮೂಲದ ಹೊಲೆಯರ ಸ್ಥಿತಿ ಜೀತದಾಳುವಿನ ಮಟ್ಟಕ್ಕೆ ಬಂತು ಬ್ರಿಟಿಷರ ಆಗಮನದ ಪೂರ್ವದಲ್ಲಿ ಅವರು ಆ ಸ್ಥಿತಿಯಲ್ಲಿ ಇರಲಿಲ್ಲ; ಎಂಬುದನ್ನು ನೆನಪಿಡಬೇಕು. ಇದೇ ಗ್ಯಾಸೆಟಿಯರ್‌ನ ಎರಡನೇಯ ಭಾಗದಲ್ಲಿ ಸ್ಟುವರ್ಟ್ ಹೇಳುವಂತೆ, "ಬಹುಪಾಲು ಅಸ್ಪೃಶ್ಯ ಜಾತಿಯ ಭೂಕಾರ್ಮಿಕರು ಮೂಲದ ಇಲ್ಲವೇ ಸಾಲದ ಹೊಲೆಯರು. ಮೂಲದ ಹೊಲಿಯರು ಪರಂಪರಾಗತವಾಗಿದ್ದ ಗುಲಾಮ ಪದ್ಧತಿಯ ಕಟ್ಟುಪಾಡಿನಂತೆ ನಡೆದುಕೊಳ್ಳುತ್ತಿದ್ದಾರೆ, ಮತ್ತು ಇದು ಬಹು ಮಟ್ಟಿಗೆ ಹಿಂದಿನ ಗುಲಾಮಗಿರಿಯ ಬಂಧನವಷ್ಟೇ ಬಲವಾಗಿದೆಯೆನ್ನಬಹುದು, ಎಂದಿದ್ದಾರೆ."[11]

ಧಾರವಾಡ ಜಿಲ್ಲೆಯ 1828ರ ಒಂದು ವರದಿಯಲ್ಲಿ ಪೇಶ್ವೆಯರ ಕಾಲದಲ್ಲಿ ಸ್ವಲ್ಪ ಹೆಚ್ಚಿದ್ದರೂ ಗುಲಾಮಗಿರಿಯು ಬಹುಮಟ್ಟಿಗೆ ಅಷ್ಟೊಂದು ಸಾರ್ವತ್ರಿಕವಾಗಿರಲಿಲ್ಲ, ಎಂದಿದೆ. "ಗುಲಾಮನು(ಳು) ತನ್ನ ಒಡೆಯನನ್ನ ತ್ಯಜಿಸುವಂತಿಲ್ಲ, ಮತ್ತು ಅವನ(ಳ)ನ್ನು ಮಾರಾಟ ಮಾಡಬಹುದು. ಹೀಗಿದ್ದರೂ ಗುಲಾಮಗಿರಿಯ ಸ್ವರೂಪ ಸೌಮ್ಯವಾಗಿತ್ತು" ಎಂದು ವರದಿ ತಿಳಿಸುತ್ತದೆ. ಐರೋಪ್ಯ ದೇಶಗಳಲ್ಲಿ ಹಾಗೂ ನೀಗ್ರೊ ಗುಲಾಮರನ್ನು ನಡೆಸುವ ವಿಧಾನಗಳಲ್ಲಿ ಮತ್ತು ಭಾರತದಲ್ಲಿ ಇದ್ದ ವಿಧಾನದಲ್ಲಿ ತುಲನೆ ಮಾಡಿ ಈ ಮಾತು ಹೇಳಿದೆ. ಇಲ್ಲಿ ಗುಲಾಮರನ್ನು ಆಯಾತ ಮಾಡಲಾಗುತ್ತದೆ, ಎಂದು ವರದಿ ತಿಳಿಸುತ್ತದೆ. ಆದರೆ ಎಲ್ಲಿಂದ ಎಂದು ಹೇಳಿಲ್ಲ, ಅದರ ಇಲ್ಲಿನ ಉಲ್ಲೇಖದಲ್ಲಿ ಕೃಷಿ ಕಾರ್ಮಿಕ ಗುಲಾಮರ ಬಗ್ಗೆ ಉಲ್ಲೇಖವಿಲ್ಲ. ಬಹುಪಾಲು ಮನವಾರ್ತೆಯ ತೊತ್ತಿನ ಬಗ್ಗೆ ವಿವರಗಳಿವೆ.[12]

ಹಳೇ ಮೈಸೂರು ಸಂಸ್ಥಾನದಲ್ಲಿ ಇದ್ದ ಗುಲಾಮರ ಬಗ್ಗೆ ಥರ್ಸ್‌ಟನ್ 'ಹುಟ್ಟಾಳು' ಮತ್ತು 'ಮಣ್ಣಾಳು' ಎಂಬ ವರ್ಗೀಕರಣ ಮಾಡಿದ್ದಾರೆ. ಹುಟ್ಟಾಳು ಕೊಡಗಿನ ಒಕ್ಕಲು ಜಮ್ಮದಾಳು ಇದ್ದಂತೆ. ಆತ ತನ್ನ ಸ್ವಾಮಿಯ ಎಲ್ಲ ಭೂಮಿಯಲ್ಲಿ ಕೆಲಸ ಮಾಡಬೇಕು; ಆತ ಗುಲಾನಾಗಿ ಹುಟ್ಟಿದ್ದು ತಲೆತಲಾಂತರದಿಂದ ಕೃಷಿ ಕೂಲಿ ಮಾಡುತ್ತಾನೆ. ಇನ್ನೊಂದು ವರ್ಗ ಮಣ್ಣಾಳು. ಈತ ಕೊಡಗಿನ ಭೂಮಿ ಜಮ್ಮದಾಳುಗಳಂತೆ. ಅವರು ಒಂದು ವಿಶಿಷ್ಟ ವ್ಯವಸಾಯ ಭೂಮಿಗೆ ಬದ್ಧರಾದ ಗುಲಾಮರು. ಭೂಮಿಯ ಹಸ್ತಾಂತರದೊಂದಿಗೆ ಇವರದೂ ಹಸ್ತಾಂತರವಾಗುತ್ತದೆ.[13]

ಈ ಗುಲಾಮರು ಅಸ್ಪೃಶ್ಯ ಜಾತಿಯವರೆಂದು ಥರ್ಸ್ಟನ್ ತಿಳಿಸಿದ್ದಾರೆ. ಅಸ್ಪೃಶ್ಯರಲ್ಲಿ ಗಂಗಡಿಕಾರ ಮತ್ತು ಮರಸು[14] ಎಂಬ ಜಾತಿಯವರಿದ್ದುದನ್ನು ಅವರು ಉಲ್ಲೇಖಿಸಿದ್ದಾರೆ. ಇವರು ಮೈಸೂರು ಸಂಸ್ಥಾನದ ಮುಖ್ಯ ಕೃಷಿ ವರ್ಗವಾದ ಗಂಗಡಿಕಾರ ಮತ್ತು ಮೊರಸು ಒಕ್ಕಲುಗಳ ಗುಲಾಮರಾಗಿದ್ದರೆಂದು ಊಹಿಸಲು ಯಾವ ಅಡಚಣೆಯೂ ಇಲ್ಲ. ಇಂದು ಗುಲಾಮಗಿರಿ ಇರದಿದ್ದರೂ ಗಂಗಡಿಕಾರ ಒಕ್ಕಲುಗರಿಗೆ ಸಂಬಂಧಿಸಿ ಪ್ರತಿಯೊಂದೂ ಊರಲ್ಲೂ ಹಳೆಮಕ್ಕಳು (ಹೊಲೆ ಮಕ್ಕಳು?) ಇದ್ದು ಈ ಒಕ್ಕಲಿಗರ ಮನೆಗಳಲ್ಲಿ

ಮದುವೆಯಾದಾಗ ವರನ ಚಪ್ಪಲಿ ಸಾಗಿಸಲು, ಆ ಜಾತಿಯವರ ಸಂದೇಶವಾಹಕರಾಗಿ, ಸತ್ತವರ ಹೆಣದ ಮುಂದೆ ಬೆಂಕಿ ಒಯ್ಯಲು ಹಾಗೂ ಸುಡುತ್ತಿರುವ ಒಕ್ಕಲಿಗರ ಹೆಣ ಪೂರ್ತಿಸುಡುವವರೆಗೆ ಕಾಯುವ, ಮುಂತಾದ ಜವಾಬ್ದಾರಿ ಈ ಹಳೆ ಮಕ್ಕಳಿಗೆ ಇದೆ, ಎಂದು ಥರ್ಸ್ಟನ್ ಹೇಳಿರುವುದು[15] ಈ ಊಹೆಗೆ ಸಮರ್ಥನೆ ನೀಡುತ್ತದೆ.

ಇನ್ನು ಮನೆವಾರ್ತೆ ಗುಲಾಮರ ವರ್ಗ ಇನ್ನೊಂದು. ಇಲ್ಲಿ ಬಹುಪಾಲು ಹೆಂಗಸರೇ ಇದ್ದಿರಬಹುದು. ಗಂಡು ತೊತ್ತು ಇರಲಿಲ್ಲವೆಂದಲ್ಲ. ಯುದ್ಧ ಕಾಲದಲ್ಲಿ ಸೆರೆಸಿಕ್ಕ ಗಂಡು ಅಥವಾ ಹೆಣ್ಣನ್ನು ಮನೆವಾರ್ತೆ ಗುಲಾಮರಾಗಿ ನೀಡುತ್ತಿದ್ದ ವಿಚಾರ ಕೊಡಗಿನ ಇತಿಹಾಸದಲ್ಲಿ ವಿಪುಲವಾಗಿ ದೊರಕುತ್ತದೆ. ಇದಲ್ಲದೆ ನೀತಿಗೆಟ್ಟ, ಎಂದರೆ ವ್ಯಭಿಚಾರ ಮಾಡಿದ ಮಹಿಳೆಯರನ್ನು ತೊತ್ತಾಗಿ ಮಾರುತ್ತಿದ್ದರು. ಅವಳ ಮಕ್ಕಳೂ ಮುಂದೆ ಗುಲಾಮರಾಗುತ್ತಿದ್ದರು. ಇಂಥ ತೊತ್ತನ್ನು ಮನೆಯೊಡೆಯನು ಮನೆವಾರ್ತೆಗೆ ದುಡಿಸುವುದರ ಜೊತೆಗೆ ಅವಳ ಜೊತೆ ವಿವಾಹ ಬಾಹಿರ ಸಂಬಂಧವನ್ನೂ ಇಟ್ಟುಕೊಳ್ಳುತ್ತಿರಬೇಕು. ಕೊಡಗಿನ ಹದಿಮೂರನೇಯ ಶತಮಾನದ ಒಂದು ಶತಮಾನದಲ್ಲಿ ಆಸ್ತಿಯ ಹಕ್ಕನ್ನು ಹೆಣ್ಣುಮಕ್ಕಳಿಗೂ ತೊತ್ತಿನ ಮಕ್ಕಳಿಗೂ (ಗಂಡು ಇಲ್ಲವೇ ನಿಯಮಬದ್ಧ ಮಕ್ಕಳಿಲ್ಲದಾಗ) ನೀಡಬೇಕೆಂದು ಮಾಡಿದ ಕಾನೂನಿನ ಉಲ್ಲೇಖವಿದೆ.[16] ಪರಪುರುಷನ ಜೊತೆ ಸಂಬಂಧವಿರಿಸಿ "ಯಿರುಳು ತಪ್ಪಿದಕ್ಕೆ" ವಿವಾಹಿತ ಮಹಿಳೆಯ ಗಂಡನೊಬ್ಬನು ಆ ಹೆಣ್ಣು ತನಗೆ ಬೇಡವೆಂದು ಸರಕಾರಕ್ಕೆ ಬರಕೊಂಡದ್ದಕ್ಕೆ "ಯಿಾ ಹೆಣ್ಣು ನಿನಗೆ ಬೇಡದೆಯಿದ್ರೆ ಅರಮನೆ ತರಕ್ಕೆ ದಾಖಲು ಮಾಡುವುದಾಗಿಯೆಂಬ ನಿರೂಪ" ಎಂದು ಕೊಡಗಿನ ಒಂದು ಅರಮನೆ ದಾಖಲೆ ಹೇಳುತ್ತದೆ.[17] (ಇಲ್ಲಿ ವ್ಯಭಿಚಾರಕ್ಕೆ ಕಾರಣನಾದ ಗಂಡಸಿಗೆ 'ಪಾರಾದಲ್ಲಿ' ಇಟ್ಟದ್ದು – ಎಂದರೆ ಬಂಧೀಖಾನೆಯಲ್ಲಿ ಇಟ್ಟದ್ದು ಕಾಣಬುರತ್ತದೆ; ಅಲ್ಲದೆ ಆತನಿಗೆ "ಯೇಳು ಕೊರಡ ಹೊಡಸಿಯಿನ್ನು ಮುಂದೆ ಯಿಾ ಪ್ರಕಾರ ಮಾಡದಂತೆ ಬಾಯಿಂದ ಬಿಗಿ ಹತ್ತಿಸಿದ" ವಿಚಾರ ತಿಳಿಯುತ್ತದೆ). ಇಂಥ ಮಹಿಳೆಯರನ್ನು ಅರಮನೆಯವರು ಮಾರಾಟ ಮಾಡುತ್ತಿರಬಹುದು.

ಶೃಂಗೇರಿ ಮಠದ ಕಡತಗಳಲ್ಲಿ ಇಂಥ ವ್ಯಭಿಚಾರ ಮಾಡಿದ ಮಹಿಳೆಯರನ್ನು ಮಠಕ್ಕೆ ಒಪ್ಪಿಸುವ ಹಾಗೂ ಅವರನ್ನು ಮಾರಾಟ ಮಾಡುವ ಸಂಪ್ರದಾಯದ ಉಲ್ಲೇಖವಿದೆ. "ಕೊಪ್ಪದ ಶೀಮೆ ಶಿಸಲೆ ಮಂಜನ ಹೆಂಡತಿ ಪಣಿಯೆಂಬ ವಿಧವೆಯು ಪ್ರಾಕು ಯಿರುಳು ತಪ್ಪಿ ಬಂದಲ್ಲಿ ಯಿಾ ಹೆಣ್ಣನ್ನು ನಿಮಗೆ ಕ್ರಯಕ್ಕೆ ಕೊಟ್ಟ ಸಮಂಥಾ ಬಹಾಕ್ರಯ ಗದ್ಯಾಣ ಮೂರು ವರ್‍ರಾಹ" ಎಂದು ಒಂದು ದಾಖಲೆ ಹೇಳಿದರೆ, ಇನ್ನೊಂದು ದಾಖಲೆಯಲ್ಲಿ "ನಿನ ತಂಗಿ ಗೊದಿಯೆಂಬ ವಿದುವೆಯು ಯಿರುಳು ತಪ್ಪಿ ಶ್ರೀ ಮಠಕ್ಕೆ ಹರಕೆರಿ ಚಾವಡಿಗೆ ಬಂದಲ್ಲಿ" ಎಂದಿದ್ದು ಅವಳನ್ನು ಅವಳ ಸೋದರನಿಗೇ 12 ವರಹಕ್ಕೆ ಮಾರಿದ ಉಲ್ಲೇಖವಿದೆ.[18] ಒಂದು ಸರಕಾರವು ಮಾಡುವ ಕ್ರಮವನ್ನೇ ಶೃಂಗೇರಿ ಮಠವು ಮಾಡಿದೆ. 'ಹರಕೆರಿ ಚಾವಡಿ' ಎಂಬ ಶಬ್ದ ಹಾಗೂ ಕೊಡಗು 'ಅರಮನೆ ತರಕ್ಕೆ' ಎಂಬ ಶಬ್ದಗಳಲ್ಲಿ ಏನಾದರೂ ಸಂಬಂಧವಿದೆಯೇ ಅಥವಾ ಈ ಎರಡು ಮೂಲ ದಾಖಲೆಯನ್ನು ಓದುವಲ್ಲಿ ಏನಾದರೂ ತಪ್ಪಾಗಿದೆಯೇ ಎಂಬ ಸಂಗತಿ ವಿಚಾರಾರ್ಹ.

ಮೈಸೂರು ಸಂಸ್ಥಾನದಲ್ಲಿ 'ಸಮಯಾಚಾರ' ಎಂಬುದಾಗಿ ಇಂಥದೇ ವ್ಯವಸ್ಥೆ ಇತ್ತೆಂದೂ ಇದನ್ನು 1834 ರಲ್ಲಿ ನಿಲ್ಲಿಸಿದರೆಂದೂ ಎಂ. ಶಾಮರಾವ್ ಹೇಳಿದ್ದಾರೆ. "ವ್ಯಭಿಚಾರದ ಅಪರಾದ ಮಾಡಿದ ಮಹಿಳೆಯರನ್ನ ಸಾರ್ವಜನಿಕವಾಗಿ ಹರಾಜುಮಾಡಿ ಮಾರುವುದು ಬ್ರಿಟಿಷ್ ಕಮಿಶನರ್ ಆಡಳಿತದ ಆರಂಭದ ದಿನಗಳವರೆಗೂ ಸಾಮಾನ್ಯವಾಗಿತ್ತು. 1834ರ ಸರಕಾರೀ ಘೋಷಣೆ (ಪ್ರೊಕ್ಲಮೇಶನ್) ಯಿಂದ ಇದನ್ನು ನಿಲ್ಲಿಸಲಾಯಿತು." ಎಂದು ಹೇಳಿರುವ ಅವರು ಈ ಹರಾಜಿನಿಂದ ಸರಕಾರಕ್ಕೆ ಆದಾಯ ಬರುತ್ತಿತ್ತು ಎಂದಿದ್ದಾರೆ.[19] ಈ ವ್ಯವಸ್ಥೆ ವಿವರಗಳನ್ನು ಆ ಕಾಲದ ದಾಖಲೆಗಳಿಂದ ತಿಳಿಯ ಬೇಕಾಗಿದೆ.

ಇಂಥ ಮನೆವಾರ್ತೆ ಗುಲಾಮಗಿರಿಯ ಮೂಲದ ವಿಚಾರ ಮೇಲೆ ಉಲ್ಲೇಖಿಸಿದ 1821ರ ಧಾರವಾಡದ ಒಂದು ವರದಿ ಹೀಗೆ ಹೇಳುತ್ತದೆ: "ಕಳವು ಇಲ್ಲವೇ ವ್ಯಭಿಚಾರ ಮಾಡಿದ ಮಹಿಳೆಯನ್ನು ಕೆಲವು ಬಾರಿ ಸರಕಾರದ ಗುಲಾಮಳಾಗಿ ಮಾಡಲಾಗುತ್ತಿತ್ತು. ಇಲ್ಲವೇ ಮಾರಾಟ ಮಾಡಲಾಗುತ್ತಿತ್ತು. ಬರಗಾಲ ಬಂದಾಗ ಜನ ತಮ್ಮ ಹೆಣ್ಣು ಮಕ್ಕಳನ್ನು ಗುಲಾಮರಾಗಿ ಮಾರುತ್ತಿದ್ದರು." ಇದೇ ವರದಿ ತಿಳಿಸುವಂತೆ "ಯಜಮಾನನು ತನ್ನ ಗುಲಮಳಾದ ಹುಡುಗಿಗೆ ಹುಟ್ಟಿದ ಮಕ್ಕಳನ್ನು ಸಾಕುವ ಮತ್ತು ಅವರ ಮದುವೆ

ಏರ್ಪಡಿಸುವ ಜವಾಬ್ದಾರಿ ಹೊಂದಿದ್ದನ್ನು" ಎಂದು ತಿಳಿಸುತ್ತ ಗುಲಾಮಳದಾವಳು ಮನೆಯ ಸೇವಕಿಯಾಗಿದ್ದು ಅವಳ ಮಗಳೂ ವಿವಾಹಿತಳಾಗದಿದ್ದರೆ ಗುಲಾಮಳಾಗಿ ಅಥವಾ ವೇಶ್ಯೆಯಾಗಿ ಇರುತ್ತಿದ್ದಳು, ಎಂದು ಹೇಳಿದೆ. ಗುಲಾಮಳಿಗೆ ಮಗನಾದರೆ ತಾಯಿಗೆ (ಅವಳ ಆಸ್ತಿಗೆ) ಅತ ಉತ್ತರಾಧಿಕಾರಿಯಾಗುತ್ತಿದ್ದ. ಗುಲಾಮಳು ವೇಶ್ಯೆಯಾಗಿ ಏನನ್ನಾದರೂ ಸಂಪಾದಿಸಿದರೆ, ಅವಳೂ ಅದನ್ನು ತನ್ನ ಮಕ್ಕಳಿಗೆ ನೀಡಬಹುದಾಗಿತ್ತು, ಎಂದು ವರದಿ ವಿವರಣೆ ನೀಡಿದೆ. "ಗುಲಾಮಳಾಗಲೀ ಅವಳ ಮಗನಾಗಲೀ ಸರಿಯಾಗಿ ವರ್ತಿಸದಿದ್ದಲ್ಲಿ ಯಜಮಾನನು ಅವರನ್ನು ಹೊಡಯಬಹುದು. ಅವರ ಮರಣಕ್ಕೆ ಅವನು ಕಾರಣನಾದರೆ ಅವನಿಗೆ ಉಗ್ರ ದಂಡ ವಿಧಿಸಲಾಗುತ್ತದೆ" ಎಂದು. ವರದಿ ಮುಂದುವರಿದು ಹೇಳಿದೆ.

ಆದರೆ ಹಳೆಯ ಮೈಸೂರಿನಲ್ಲಿ ಹಾಗೂ ಕೊಡಗಿನಲ್ಲಿ ಗುಲಾಮರ, ಮುಖ್ಯವಾಗಿ ಅಸ್ಪೃಶ್ಯ ಕೃಷಿ ಕಾರ್ಮಿಕರ, ಮಕ್ಕಳು ಯಜಮಾನನ ಆಸ್ತಿಯೇ ಆಗಿದ್ದರು. ಆದರೆ ಕೊಡಗಿನಲ್ಲಿ ತನ್ನ ಗುಲಾಮ ಕೃಷಿ ಕಾರ್ಮಿಕರಿಗೆ ವಧುವನ್ನು 3 ಇಲ್ಲವೇ 4 ಪಗೋಡಾ (ಪಗೋಡಾ – ಮೂರು ರೂ) ಕೊಟ್ಟು ಅವನ ಯಜಮಾನನು ಖರೀದಿಸಬೇಕಾಗಿತ್ತು, ಇಲ್ಲವೆ ತನ್ನ ಗುಲಾಮನ ಕುಟುಂಬದ ಹೆಣ್ಣನ್ನು ಬೇರೆಯವರ ಗುಲಾಮರ ಮನೆಗೆ ಕೊಟ್ಟು ಅಲ್ಲಿಂದ ಒಂದು ಹೆಣ್ಣನ್ನು ಸಾಟೆಯಾಗಿ ಪಡೆಯಬೇಕಾಗಿತ್ತು. ಮದುವೆಯ ವೆಚ್ಚವಾಗಿ ಆರು ರೂ. ಮತ್ತು 150 ಸೇರು ಅಕ್ಕಿ ಪಡೆಯಬೇಕಾಗಿತ್ತು, ಎಂದು ಅನಂತಕೃಷ್ಣ ಅಯ್ಯರ್ ಹೇಳಿದ್ದಾರೆ.[20] ದಕ್ಷಿಣ ಕನ್ನಡಕ್ಕೆ ಸಂಬಂಧಿಸಿ ಒಂದು ವರದಿಯಲ್ಲಿ 1819 ರಲ್ಲೆ ಜಿಲ್ಲೆಯಲ್ಲಿ (ಈಗಿನ ಕಾಸರಗೋಡು ಜಿಲ್ಲೆ ಸೇರಿಸಿ) ಕೃಷಿ ಗುಲಾಮರ ಸಂಖ್ಯೆ 82,000 ಎಂದು ಹೇಳಿದೆಯಲ್ಲದೆ, "ಭೂಮಿಗೆ ಬದ್ಧನಾದವನಿರಲಿ, ಇರದೇ ಇರಲಿ, ಗುಲಾಮನ ಮಾರಾಟ ಯಜಮಾನನ" ಪ್ರತ್ಯೇಕ ಹಕ್ಕಾಗಿದ್ದು "ಗುಲಾಮರನ್ನು ಬೇರೆಯವರಿಗೆ ಮುಡಿತಕ್ಕೆ ('ಬಾಡಿಗೆಗೆ') ಕೊಡಬಹುದಾಗಿತ್ತು," ಎಂದು ತಿಳಿಸಿದೆ.[21]

ಬ್ರಿಟೀಷ್ ಸರಕಾರವು ಗುಲಾಮಗಿರಿಯನ್ನು ಬಹಿಷ್ಕರಿಸಿದರೂ, ಈ ದುಷ್ಟ ಪದ್ಧತಿಯು ಸುಲಭವಾಗಿ ಕಣ್ಮರೆಯಾಗಲಿಲ್ಲ. 1910ರ ಒಂದು ವರದಿ ಹೇಳುವಂತೆ, ಕೊಡಗಿನಲ್ಲಿ ಕಾಫಿ ತೋಟಗಾರಿಕೆ ಬೆಳೆದಂತೆ, ಇಂಥ ಗುಲಾಮರು ನಿಧಾನವಾಗಿ ತೋಟಗಳಿಗೆ ಕೆಲಸಕ್ಕೆ ಹೋಗತೊಡಗಿದರು. ಕಾನೂನಿಂದ ಗುಲಾಮಗಿರಿ ರದ್ದುಪಡಿಸಿದರೂ (1843) ಹಿಂದಿನ ಪದ್ಧತಿ ಬಹು ಮಟ್ಟಿಗೆ ಹಾಗೆಯೇ ಮುಂದುವರಿಯಿತು. ಆದರೆ ಕೃಷಿ ಕಾರ್ಮಿಕ ಜಮ್ಮದಾಳುಗಳಿಗೆ ನೀಡುವ ಜೀವನಾಂಶವನ್ನು ಇತರ ಕೂಲಿಗಳ ಮಟ್ಟಕ್ಕೆ ಎತ್ತರಿಸುವುದು ಮಾಲಿಕರಿಗೆ ಅನಿವಾರ್ಯವಾಯಿತು, ಎಂದು ಈ ವರದಿ ಹೇಳಿದೆ. ಒಟ್ಟಿನಲ್ಲಿ ಸಾರ್ವಜನಿಕ ಕಾಮಗಾರಿಕೆ ಕೂಲಿಗಳು ಸಿಗದಂಥ ಸನ್ನಿವೇಶ ಉಂಟಾದ 1864ರ ಪರಿಸ್ಥಿತಿಯನ್ನು ಈ ವರದಿ ಹೇಳುತ್ತದೆ.[22]

ಇದೇ ರೀತಿಯ[23] ವರದಿಯನ್ನು ಅನಂತಕೃಷ್ಣ ಅಯ್ಯರ್ ನೀಡಿದ್ದಾರೆ. 1843ರ. ತಮ್ಮ ಮುಕ್ತಿಯ ಆಜ್ಞೆಯನ್ನು ಅನೇಕ ಜಮ್ಮದಾಳುಗಳು ತಮ್ಮನ್ನು ಕಿತ್ತುಹಾಕುವ ಅಥವಾ ಹೊರದೂಡುವ ಕ್ರಮವೆಂದು ('ಡಿಸ್‌ಮಿಸ್ಸಲ್') ಭಾವಿಸಿದ್ದರು. ಅಲ್ಲದೆ, "ಗುಲಾಮಗಿರಿಯನ್ನು ರದ್ದುಪಡಿಸಿದರೂ ಹಾಗೂ (ಕಾಫಿ) ತೋಟಗಾರರು ಹೆಚ್ಚಿನ ಕೂಲಿಯ ಆಮಿಷ ಒಡ್ಡಿದರೂ ಈ ಪದ್ಧತಿ ಕಣ್ಮರೆಯಾಗಿಲ್ಲ. ಅನೇಕ ಜಮ್ಮದಾಳುಗಳು ('ಸರ್ಫ್ಸ್ ಅಂಡ್ ಸ್ಲೇವ್ಸ್') ತಮ್ಮ ಪೂರ್ವಜರ ಪಾರಂಪರಿಕ ಯಜಮಾನರಿಗೆ ಅಂಟಿ ಕೊಂಡಿದ್ದಾರೆ; ತಮ್ಮ ಪಂಗಡದ ರೂಢಿಗನುಗುಣವಾಗಿ ತಮ್ಮನ್ನು ಚೆನ್ನಾಗಿ ಪಾಲನೆ ಪೋಷಣೆ ಮಾಡುತ್ತಿದ್ದರೆ ಅವರನ್ನು ಬಿಟ್ಟು ಹೋಗಬೇಕೆಂಬ ಯೋಚನೆಯನ್ನು ಮಾಡುತ್ತಿಲ್ಲ".[24]

ಕಾಫಿ ತೋಟಗಳಲ್ಲಿ ಕೂಲಿಗೆ ಬೇಡಿಕೆ ಇದ್ದು ಅಲ್ಲಿ ಹೋಗುವ ಅನುಕೂಲ ಇರುವ ದಕ್ಷಿಣ ಕನ್ನಡದ ಮೂಲದವರು ಮೈಸೂರು ಸಂಸ್ಥಾನದ ತೋಟಗಳಿಗೆ ಹೋಗುತ್ತಿರುವುದರಿಂದ ಆ ಜಿಲ್ಲೆಯ ಪಶ್ಚಿಮ ಭಾಗಗಳಲ್ಲಿ ಕೂಲಿದರ ಹೆಚ್ಚಿದೆ, ಹಾಗೂ ಇಡೀ ಜಿಲ್ಲೆಯಲ್ಲಿ ಅದರ ಪರಿಣಾಮ ಆಗಿದೆ, ಮತ್ತು ಗುಲಾಮಗಿರಿಯ ಹಿಡಿತ ತಾನಾಗಿಯೇ ಸಡಿಲಾಗಿದೆ, ಎಂದು ಸ್ಟರಾಕ್ ಹೇಳಿದ್ದಾರೆ.[25] ಗುಲಾಮಗಿರಿ ರದ್ದತಿ ಕಾನೂನಿಗಿಂತ ಈ ಸನ್ನಿವೇಶ ಹೆಚ್ಚು ಪರಿಣಾಮಕಾರಿಯಾಗಿದೆಯಂದು ಇದರಿಂದ ಸ್ಪಷ್ಟವಾಗುತ್ತದೆ. ಈ ಜಿಲ್ಲೆಯಿಂದ ಸುಮಾರು ಒಂದು ಲಕ್ಷ ಜನ ಮೈಸೂರು ಕೊಡಗು ತೋಟಗಳಿಗೆ ಕೆಲಸಕ್ಕೆ ಹೋಗುತ್ತಾರೆ (1985) ಎಂದು ಸ್ಟುವರ್ಟ್ ಹೇಳಿದ್ದಾರೆ.[26]

ಥರ್ಸ್ಟನ್ ಅವರು ಸೂಚಿಸುವಂತೆ ಹಳೆ ಮೈಸೂರಿನ ಮಲೆನಾಡು ಪ್ರದೇಶದಲ್ಲಿ ಹೊಲೆಯರು ಕೃಷಿ ಗುಲಾಮರ ಸ್ಥಿತಿಯಲ್ಲಿ ಇದ್ದು ಬ್ರಿಟಿಷರು ಬಂದ ಹಲವು ದಶಕಗಳವರೆಗೂ ಅವರ ಸ್ಥಿತಿ ಸುಧಾರಿಸಿರ ಲಿಲ್ಲ ಎಂದು ಹೇಳಿರುವ ಮಾತನ್ನು ಬುಕಾನನ್‌ನ ದೀರ್ಘ ವರದಿಯ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ ಹಳೆಯ ಮೈಸೂರಿನ ಬಯಲು ಪ್ರದೇಶಗಳಿಗೆ ಕೃಷಿ ಗುಲಾಮಗಿರಿ ಅಷ್ಟೊಂದು ತೀವ್ರವಾಗಿ ಇರದಂಥ ಸನ್ನಿವೇಶ 1800ರ ಸುಮಾರಿಗೇ ಸೃಷ್ಟಿಯಾಗಿರಬೇಕೆಂಬ ಭಾವನೆಗೆ ಅವಕಾಶವಾಗುತ್ತದೆ. ಒಕ್ಕಲಿಗ ಜಾತಿಯವರೇ ಇಲ್ಲಿ ಬಹುಪಾಲು ಭೂಮಾಲೀಕರಾಗಿದ್ದರು. ಇದಕ್ಕೆ ಕಾರಣ ಬಹುಶಃ ಟಿಪ್ಪು ಹೈದರ್ ಕಾಲದಲ್ಲಿ ಸೇನಾ ಸೇವೆಗಾಗಿ ಭೂಮಿ ಕೊಡದೇ ಇದ್ದುದು (ಟಿಪ್ಪು – ಹೈದರ್ ಹೆಚ್ಚಾಗಿ ಸಂಬಳದ, ಹಾಗೂ ರಾಜ್ಯದ ಹೊರಗಿನ ಮರಾಠಾ, ರಜಪೂತ ಸೈನಿಕರನ್ನು ತಮ್ಮ ಸೇನೆಯಲ್ಲಿ ಭರ್ತಿ ಮಾಡಿದ್ದರು). ಭೂಮಾಲೀಕರೇ ಸ್ವತಃ ಕೃಷಿ ಕಾರ್ಯದಲ್ಲಿ ತೊಡಗಿದ್ದು ದಂಡಿನ ಸೇವೆಗೆ ಅವರು ಕಡಿಮೆ ಅವಲಂಬಿಸಿದ್ದರು. ಅಂದರೆ 18ನೇಯ ಶತ ಮಾನಕ್ಕೂ ಮೊದಲು ಒಕ್ಕಲಿಗರು ಕೃಷಿ ಕೂಲಿ ಕೆಲಸಕ್ಕೆ ಗುಲಾಮರನ್ನು ಹೊಂದಿದ್ದು ಸ್ಪಷ್ಟ.

ಗುಲಾಮಗಿರಿಯ ರದ್ದತಿಯ ಕಾನೂನಿಗಿಂತಲೂ ಹೆಚ್ಚಾಗಿ ಕಾಫಿ ತೋಟ, ಸಾರ್ವಜನಿಕ ಕಾಮಗಾರಿ (ರಸ್ತೆ, ರೈಲು ಇತ್ಯಾದಿ ಕೆಲಸ), ನಿಧಾನವಾಗಿ ಬಂದ ಕೇಂದ್ರೀಕೃತ ಕೈಗಾರಿಕೆಗಳು, ಇವೆಲ್ಲ ಗುಲಾಮಗಿರಿ ಯಂಥ ದೃಷ್ಟ ಪದ್ಧತಿಯ ನಿವಾರಣೆಗೆ ಕಾರಣವಾದವು. ಆದರೆ ಈ ಕಾನೂನು ಮುಕ್ತರಾಗ ಬಯಸಿದ ಗುಲಾಮ ವರ್ಗಗಳಿಗೆ ನೈತಿಕ ಬಲ ಒದಗಿಸಿತು. ಇಲ್ಲಿ ಗುಲಾಮ ಪದ್ಧತಿಯ ಎಲ್ಲ ಮುಖಗಳನ್ನೂ ಚರ್ಚಿಸಿ ಲ್ಲವೆಂದು ಹೇಳಬಯಸುತ್ತೇನೆ.

(ಗುಲಾಮಗಿರಿಯನ್ನು ಇಂಗ್ಲೆಂಡ್‌ನಲ್ಲಿ 1833ರಲ್ಲಷ್ಟೇ ರದ್ದು ಮಾಡಿದ್ದು, ಆದರ ಹಿಂದೆಯೇ 1843ರಲ್ಲಿ ಇಂಥ ಕಾನೂನು ತಂದರೆಂದು ಇಲ್ಲಿ ಉಲ್ಲೇಖಿಸಬೇಕು. ಭಾರತದಲ್ಲಿ ಈ ಬಗ್ಗೆ ಮೆಕಾತಿ ಸಮಿತಿಯನ್ನು ನೇಮಿಸಲಾಗಿತ್ತು – 1840).

---

## ಟಿ ಪ್ಪ ಣಿ ಗ ಳು.

1. ನೋಡಿ, ಎಂ.ಚಿದಾನಂದ ಮೂರ್ತಿ, "ಸ್ಲೇವರಿ ಇನ್ ಏನ್‌ಶಂಟ್ ಕರ್ನಾಟಕ", 'ಕ್ವಾರ್ಟರ್ಲಿ ಜರ್ನಲ್ ಆಫ್ ದಿ ಮಿಥಿಕ್ ಸೊಸೈಟಿ,' ಸಂಪುಟ.77, ಸಂಚಿಕೆ 1-2, ಪುಟ.71 - 78
2. ಡಿ.ಎನ್.ಕೃಷ್ಣಯ್ಯ ಉಲ್ಲೇಖಿಸಿದ ದಾಖಲೆ, ನೋಡಿ: 'ಕೊಡಗಿನ ಇತಿಹಾಸ' (1974) ಪುಟ.417.
3. ಅದೇ ಪು. 579
4. ಅದೇ
5. ಅದೇ
6. ಅದೇ, ಪುಟ.580. ಕೆಂಬಟ್ಟಿ ಹೊಲೆಯರು, ಮಾರಂಗಿ ಹೊಲೆಯರು, ಬಲಗೈ ಹೊಲೆಯರು ಹಾಗೂ ಪಂಜರಿಯರವ, ಕಾಗಿ ಯರವ, ಬೆಟ್ಟ ಕುರುಬ, ಜೇನು ಕುರುಬ, ಮುಂಡ ಹೊಲೆಯ, ಪಾತಿಗಳು, ಮಾರಿ ಹೊಲೆಯರು, ಕುಕ್ಕ ಹೊಲೆಯರು ಮತ್ತು ಮಾದಿಗರು.
7. ಅದೇ, ಪುಟ.581.
8. ಸ್ಟರಾಕ್, ಜೆ., 'ಸೌತ್ ಕೆನರಾ ಮಾನ್ಯುವಲ್', (1894) I, ಪುಟ.198.
9. ಅದೇ
10. ಅದೇ, ಪುಟ 210 - 11

11. ಸ್ಟುವರ್ಟ್. ಎಚ್.ಎ., 'ಸೌತ್ ಕೆನರಾ ಮಾನ್ಯುವಲ್' II (1985) ಪುಟ.928.
12. 'ಧಾರವಾಡ ಜಿಲ್ಲಾ ಗ್ಯಾಸೆಟಿಯರ್' (1884) ಪು.463, (1821ರ ಈಸ್ಟ್ ಇಂಡಿಯಾ ಪೇಪರ್ಸ್, IV - ಪು.806 - 7ರಿಂದ ಉದ್ಧರಿಸಿದೆ).
13. ಥರ್ಸ್ಟನ್, ಇ.ಎಲ್.,'ಕಾಸ್ಟ್ಸ್ ಅಂಡ್ ಟ್ರೈಬ್ಸ್ ಇನ್ ಸೌತ್ ಇಂಡಿಯಾ' II ಪುಟ.335.
14. ಅದೇ, ಪುಟ.332
15. ಅದೇ.
16. 'ಎಪಿಗ್ರಾಫಿಯಾ ಕರ್ನಾಟಕ' (1974) ಕ್ರ.60.
17. 'ಕೊಡಗಿನ ಇತಿಹಾಸ', ಪು.412.
18. ಶಾಸ್ತ್ರಿ, ಎ.ಕೆ., 'ಶೃಂಗೇರಿ ಧರ್ಮ ಸಂಸ್ಥಾನ' (1983) ಪುಟ.182.83.
19. ಶಾಮರಾವ್.ಎಂ., 'ಮಾಡರ್ನ್ ಮೈಸೂರ್' (1936) II ಪುಟ.70.
20. ಅನಂತಕೃಷ್ಣ ಅಯ್ಯರ್, 'ಕೂರ್ಗ್ ಕಾಸ್ಟ್ಸ್ ಅಂಡ್ ಟ್ರೈಬ್ಸ್' (1948), ಪುಟ.30-31.
21. ಎಸ್.ಶ್ರೀನಿವಾಸ ರಾಘವಯ್ಯಂಗಾರ್, 'ಮೆಮೊರಂಡಂ ಆನ್ ದಿ ಪ್ರಾಗ್ರೆಸ್ ಆಫ್ ಮೆಡ್ರಾಸ್ ಪ್ರೆಸಿಡೆನ್ಸಿ ಡ್ಯೂರಿಂಗ್ ದಿ ಲಾಸ್ಟ್ ಫಾರ್ಟಿ ಯಿಯರ್ಸ್ ಆಫ್ ಬ್ರಿಟಿಷ್ ಎಡ್ಮಿನಿಸ್ಟ್ರೇಶನ್' (1892),
22. ಗಸ್ಟಾವ್ ಹಾಲರ್, 'ಸೆಟ್ಲ್‌ಮೆಂಟ್ ರಿಪೋರ್ಟ್' (1910), ಪು.9.
23. ಅನಂತಕೃಷ್ಣ ಅಯ್ಯರ್, ಮೇಲಿನದೇ, ಪುಟ.31.
24. ಅದೇ.
25. ಸ್ಟರಾಕ್, ಮೇಲಿನದೇ, ಪುಟ.210.
26. ಸ್ಟುವರ್ಟ್, ಮೇಲಿನದೇ, ಪುಟ.228.

ಜಿ.ವಿ. ಕಲ್ಲಾಪುರ

# ಕೊಂಕಣ ಮಠದವರ ನಿರೂಪಗಳು

ಕೆಳದಿ ಐತಿಹಾಸಿಕ ದಾಖಲೆಗಳ ಸರ್ವೇಕ್ಷಣೆಯ ಸಂದರ್ಭದಲ್ಲಿ ಮದ್ರಾಸಿನ ಗೌರ್ನಮೆಂಟ್ ಓರಿಯಂಟಲ್ ಮಾನ್ಯುಸ್ಕ್ರಿಪ್ಟ್ ಲೈಬ್ರರಿಯಲ್ಲಿನ ಮೆಕಂಜಿ[1] ಸಂಗ್ರಹದಲ್ಲಿ ಕಂಡುಬಂದ ನಿರೂಪಗಳು ಕೆಳದಿ ಅರಸರಿಗೆ ಸಂಬಂಧಿಸದ್ದಾಗಿದ್ದು, ಅವುಗಳನ್ನು ಈ ಪ್ರಬಂಧದಲ್ಲಿ ಮೂಲಪಾಠದೊಂದಿಗೆ ಸಂಗ್ರಹಿಸ ಲಾಗಿದೆ. ಈ ಸಂಗ್ರಹದಲ್ಲಿ ಒಟ್ಟು ಮೂರು ನಿರೂಪಗಳಿದ್ದು ಮೊದಲನೆ ಎರಡು ಕೆಳದಿ ಚೆನ್ನಮ್ಮಾಜಿಗೂ, ಕೊನೆಯದು ಕೆಳದಿ ಸೋಮಶೇಖರ ನಾಯಕನಿಗೂ ಸಂಬಂಧಿಸದ್ದಾಗಿದೆ. ಮೊದಲನೆಯದು ರಾಮಪ್ಪನೆಂಬುವನು ಮುಗುವಿನ ಶೀಮೆಯಲ್ಲಿ ಕಟ್ಟಿಸಿದ ವೆಂಕಟೇಶ ದೇವಸ್ಥಾನಕ್ಕೆ ಬಿಟ್ಟ ಸ್ವಾಸ್ತಿಯಾದರೆ ಎರಡನೆಯದು ಕುಂದಾಪುರದ ಚೆಂನ್ನಕೇಶವ ದೇವರಿಗೆ ಬಿಟ್ಟ ಸ್ವಾಸ್ತಿಯನ್ನು ತಿಳಿಸುತ್ತದೆ. ಮೂರನೆಯದು ಕುಂದಾಪುರದಲ್ಲಿ ತಿಂಮ್ಮ ಶೇನುಬೋವನು ಕಟ್ಟಿಸಿದ ವಿಠ್ಠಲದೇವರ ಮಠಕ್ಕೆ ಬಿಟ್ಟ ಸ್ವಾಸ್ತಿಯದ್ದಾಗಿದೆ. ಕೊಂಕಣ ಮಠವೆಂದರೆ ಕೊಂಕಣಿಯವರ ಮಠ ಎಂದಿರಬಹುದು.

## ನಿರೂಪ 1:

ರಉದ್ರಿ ಸಂವತ್ಸರದ। ಮಾರ್ಗಿಶಿರ ಶುದ್ಧ 3 ರಲ್ಲು ಶ್ರೀಮತು ಕೆಳದಿ ಚೆಂನ್ನಂಮಾಜಿಯವರು ಬಸಪ್ಪಯ್ಯಗೆ ಬರಶಿ ಕಳುಹ್ಸಿದ ಕಾರ್ಯಸೇಮಾರ ರಾಮಪ್ಪ। ತಿಂಮರ್ಸಯ। ಹಜೂರಿಗೆ ಬಂದು। ಮುಗುವಿನ ಶೀಮೆಯಲ್ಲು ರಾಮಪ್ಪ ಕಟ್ಟಿಸ್ತ ದೇವಸ್ತಾನಕ್ಕೆ ಸ್ವಸ್ತಿಯಲ್ಲು। ಕ್ರಯವ ಕೊಡುತೇನೆ ಪಾಲಿಶಿಕೊಳ್ಳಬೇಕುಯಂದು ಹೇಳಿಕೊಂಡ ಸಂಮಂಧಾ ಯಿತ್ತನ ಕೈಯಾ। ಗ ೧೭೫ ನೂರಾಯಪ್ಪತ್ತು ಅಯಿದು ವರಹಾಂನ್ನ ತೆಗೆದುಕೊಂಡು। ಬಿಟ್ಟ ಸ್ವಾಸ್ತಿ ಮುಗುವಿನ ಶೀಮೆವಳಗಣ। ಯೆಡಪಡಲ್ಲಿನ ಗ್ರಾಮದಲ್ಲು ನಾಗನ ತಿಂಮಾಮಿ ವರ್ಗದ ಭೂಮಿಯಿಂದ – ಗ ೧೧॥ ಚಕ್ರದ ಮಟದ ಸ್ವಾಸ್ತಿ। ಅರ್ಥಾನಿವಿಶಿದ ಬಗೆಯಲ್ಲು। ೧॥೧॥ ಯಿ ದೇವಸ್ಥಾನ ಕಟ್ಟಿದ ತೆಂಗಿನ ಮರನ ತೆರು । ಗಂ ॥ ೦/೦ ಅಂತು ಗ ೧3 ॥೨ ಹದಿಮೂರು ವರಹಾಂನ್ನು ಯೇಳು ಗಣ ಬ್ಯಾಳೆ ಸ್ವಾಸ್ತಿ। ಆ ವೆಂಕಟೇಶದೆವರ ದೇವತಾ ವೆಜ್ಜಕ್ಕೆ ಶಿವಾರ್ಪಿತವಾಗಿ ಬಿಟ್ಟಿದೆ। . ರೆಖೆ ಪ್ರಮಾಣ ಭೂಮಿ ವಿಂಗಡಿಶಿ ಕೊಡುವುದು। ಯಿ ಭೂಮಿಗೆ ವಾಮನ ಮುದ್ರೆ ಶಿಲಾಸ್ತಾಪಿತ ಮಾಡಿ ಕೊಡುವ ಬಗ್ಗೆ ಹಜೂರಲ್ಲು ಯಿಹ। ಊಳಿಗದ ಲಿಂಗನ ಕಳುಹಿ ಅದೆ ಯಿತನ ಮುಂತಿಟ್ಟು ಚಉಗ್ರಾಮದವರ। ಕರಶಿಕೊಂಡು ಗಡಿ ಸಿಗದಿ ತತ್ವಾರ ಬಾರದ ರೀತಿ ಸ್ಥಳದ ಶ್ಯಾನಭೋವನ। ಕೈಯಾ ಚಪ್ಪು ಬರೆಶಿಕೊಟ್ಟು ವಾಮನ ಮುದ್ರೆ। ಶಿಲಾಸ್ತಾಪಿತ ಮಾಡಿಶಿ ಆ ವಿವರಕ್ಕೆ ಹಜೂರಿಗೆ ಬರೆಯುವುದು ಯಿ ಕಾಗದ ಶ್ಯಾನಭೋವನ ಕಡಿತಕ್ಕೆ ಬರೆಶಿ ತ್ತಿರುಗಾ। ಯಿತನ ಕೈಯಲ್ಲಿ ಕೊಡುವುದು ಬರೆದು ಬಂದ ನಿರೂಪು ಪ್ರತಿ.

ರೌದ್ರಿ ಸಂವತ್ಸರದ ಮಾರ್ಗಶಿರ ಶುದ್ಧ 3 ರಲ್ಲು ಶ್ರೀಮತ್ ಕೆಳದಿ ಚೆನ್ನಮ್ಮಾಜಿಯು ಬಸಪ್ಪಯ್ಯಗೆ ಬರೆಸಿ ಕಳುಹಿಸಿದ ಕಾರ್ಯ – ಸೇಮಾರ ರಾಮಪ್ಪ, ತಿಮ್ಮರಸಯ್ಯ ಹಜೂರಿಗೆ ಬಂದು ರಾಮಪ್ಪನು ತಾನು ಮುಗುವಿನ ಸೀಮೆಯಲ್ಲಿ ಕಟ್ಟಸಿರುವ ದೇವಸ್ತಾನಕ್ಕೆ ಸ್ವಸ್ತಿಯಿಲ್ಲವಾದ್ದರಿಂದ ಕ್ರಯವನ್ನು ಕೊಡುವೆನು ಪಾಲಿಸಿಕೊಳ್ಳಬೇಕೆಂದು ಕೇಳಿಕೊಂಡ ಸಂಬಂಧಾ, ಅವನ ಬಳಿ ಗ। ೧೭೫। ನೂರಾಯೆಪ್ಪತ್ತೈದು ವರಾಹಗಳನ್ನು ತೆಗೆದುಕೊಂಡು ಬಿಟ್ಟ ಸ್ವಾಸ್ತಿ – ಮುಗುವಿನ ಸೀಮೆಯಲ್ಲಿನ ಯಡಪಡಲ್ಲಿನ ಗ್ರಾಮದಲ್ಲಿನ ನಾಗನ ತಿಂಮಾಮಿ ವರ್ಗದ ಭೂಮಿಯಿಂದ – ಗ ೧೧॥ ಚ-ಕ್ರ-ದ ಮಟದ ಸ್ವಾಸ್ತಿ ಅರ್ಥಾ ನಿವಿಶಿದ ಬಗೆಯಲ್ಲಿ ೧೧॥೧॥ = ಈ ದೇವಸ್ಥಾನ ಕಟ್ಟಿದ ತೆಂಗಿನ ಮರನ ತೆರು । ಗಂ ॥ ೦/೦ ಅಂತು । ಗ ೧3 ॥೨ = ಹದಿಮೂರು ವರಹಾಂನ್ನು ,ಯೇಳುಗಣ ಬ್ಯಾಳೆ ಸ್ವಸ್ತಿಯನ್ನು ಆ ವೆಂಕಟೇಶ ದೇವರ ದೇವತಾ ವೆಜ್ಜಕ್ಕೆ ಶಿವಾರ್ಪಿತವಾಗಿ ಬಿಟ್ಟಿದ್ದೇವೆ, ರೇಖೆ ಪ್ರಮಾಣ ಭೂಮಿ ವಿಂಗಡಿಸಿ ಊಳಿಗದ ಲಿಂಗನ ಕಳುಹಿಸಿ ಚಉಗ್ರಾಮದವರ ಕರೆಸಿಕೊಂಡು ಗಡಿ ವಿವಾದ (ತತ್ವಾರ) ಬಾರದ ಹಾಗೆ ರಾಮಪ್ಪನ ಮುಂದಿಟ್ಟು ವಾಮನ ಮುದ್ರೆ ಶಿಲಾಸ್ತಾಪಿಸಿ ಅದಕ್ಕೆ ಶ್ಯಾನುಬೋಗನ ಕೈಯಾ ಚಪ್ಪು ಬರೆಸಿಕೊಟ್ಟು, ಕಡಿತಕ್ಕೆ ಬರೆಸಿ ರಾಮಪ್ಪನಿಗೆ ಕೊಟ್ಟು ಈ ಕಾರ್ಯದ ವರದಿಯನ್ನು ಹಜೂರಿಗೆ ಬರೆದು ತಿಳಿಸುವುದು.

ಈ ವಿಷಯಕ್ಕೆ ಸಂಬಂಧಿಸಿದಂತೆ ಕೆ.ಜಿ. ವಸಂತ ಮಾಧವರವರು ತಮ್ಮ ಗ್ರಂಥದಲ್ಲಿ[2] ಕೆಳದಿ ಚೆನ್ನಮ್ಮಾಜಿಯು ರಾಮ ಪೈ ಕಟ್ಟಿಸಿದ ವೆಂಕಟರಮಣ ದೇವಸ್ತಾನಕ್ಕೆ ಹದಿಮೂರು ವರಾಹ ದಾನ ಕೊಟ್ಟಿರುವಳೆಂದು ತಿಳಿಸಿರುವರು. ಅವರು ನಿರೂಪವನ್ನು ಕೊಟ್ಟಿಲ್ಲ.

## ನಿರೂಪ – 2

೧೦೨॥ ರಕ್ಷಾಕ್ಷಿ – ಸಂವತ್ಸರ ಮಾರ್ಗಶಿರ ಶು॥ ೭ ಲ್ಲು ಶ್ರೀಮತ್ಕೆಳದಿ ಚೆಂನಮ್ಮಾಜಿಯವರು ಶಿದ್ದ ಬಸಪ್ಪಯ್ಯಗೆ ಬರಶಿಕಳುಹಿದ। ಕಾರ್ಯ ಕುಂದಾಪುರದಲ್ಲು ದೇವಸ್ತಾನದ ಕಟ್ಟಿಶಿ। ಪ್ರತಿಷ್ಠೆ ಮಾಡಿದ। ಚಂನ್ನಕೇಶವ ದೇವರಿಗೆ। ಸ್ವಾಸ್ತಿಯಿಲ್ಲಾ। ಮುಗುವಿನ ಶೀಮೆ। ಮುಡಕುದುರಿ। ಕಮ್ಮರ ಕೊಡಲ್ಲು। ಕಂಚ-ಗೌಡ ಊಂಣಲಾಡಿ। ಕೋಡಿಗ್ರಾಮದಲ್ಲಿ ಸಹಾ ಪ್ರಾಕು ನಷ್ಟಕ್ಕೆ ಕಳದ ಭೂಮಿ। ಅಥೆ ಪಾಲಿಶಿಕೊಂಡರೆ। ಆ ಭೂಮಿಯಲ್ಲಿ ತೆಂಗಿನ ಸಶಿ ಬಾಳೆ ಹಾಕಿಶಿ ಸಾಗು ಮಾಡಿ ದೇವತಾ ಶೇವೆ। ನಡಶಿಕೊಂಡು ಬಂದೆನೆಂದು ರಾಯನು ಹೇಳಿಕೊಂಡ। ಸಂಮಂಧಾ ಬಿಟ್ಟ ಸ್ವಾಸ್ತಿ ಮುಗುವಿನ ಶೀಮೆಯಿಂದಾ। ಪ್ರಾಕುಕಳೆದ। ನಷ್ಟದಿಂದಾ। ಮುಂಡಕುಮ ಆ ಗ್ರಾಮದಿಂದ ।ಗ೯೨।೦ ಚಂನ ಕಮುರಿಯಲ್ಲು। ಗ೯೦ ಉಭಯಂ ।ಗ೪೨। ಕಂಮರ ಕೊಡಲ್ಲು ಗ್ರಾಮದಿಂದಾ ।ಗ೩೧ ಕಂಚಗೌಡ ಗ್ರಾಮದಿಂದಾ। ಗ೭॥೧॥ ಅಂಣಲಾಡಿ ಗ್ರಾಮದಿಂದಾ। ಚಕ್ರಸಾನಂತನ ಸ್ವಾಸ್ತಿಯಲ್ಲು ಗ ೩॥೩೦1 ಅಂತು ।ಗ೧೮11 3 = ಹದಿನೆಂಟು ವರಹಾಂನು ಯೆಂಟು ಹಣ ಬೇಳೆ ಸ್ವಾಸ್ತಿಯಂನು ದೇವತಾ ವೆಚಕ್ಕೆ ಶಿವಾರ್ಪಿತವಾಗಿ ಬಿಟ್ಟೆಲು / ಸಸಿ ಬಾಳೆ ಮುಂತಾಗಿ ಸಾಗು ಮಾಡಿಕೊಂಡು ಅದ ಹುಟ್ಟುವಳಿ ಆದಾಯ ವೆಚ್ಚದಿಂದಾ। ದೇವತಾ ಶೇವೆಯಂನ್ನು ಸಾಂಗವಾಗಿ ನಡೆಶಿ ಬಾಹಾಗೆ ಕಟ್ಟು ಮಾಡಿ ಯೆದೆವೆ। ರೇಖೆ ಪ್ರಮಾಣು ಭೂಮಿಯಂನು ವಿಂಗಡಿಶಿಕೊಟ್ಟು ಯಿಾ ಕಾಗದ ಶೇನಬೊವನ ಕಡಿತಕ್ಕೆ ಬರಶಿ ತಿರುಗಾ ಯಿಾತನ ವಶಕ್ಕೆ – ಕೊಡಿಶಿ ಕೊಡುವುದು ಯಂದು ಬರದ ನಿರೂಪು ಪ್ರತಿ॥

ರಕ್ತಾಕ್ಷಿ ಸಂವತ್ಸರದ ಮಾರ್ಗಶಿರ ಶುದ್ಧ ರಲ್ಲು ಶ್ರೀಮತ್ ಕೆಳದಿ ಚೆನ್ನಮ್ಮಾಜಿಯವರು ಶಿದ್ದ ಬಸಪ್ಪಯ್ಯನಿಗೆ ಬರೆಸಿ ಕಳುಹಿದ ಕಾರ್ಯ – ಕುಂದಾಪುರದಲ್ಲಿ ಚೆನ್ನಕೇಶವ ದೇವರಿಗೆ ದೇವಸ್ಥಾನವ ಕಟ್ಟಿಸಿ ಪ್ರತಿಷ್ಟೆ ಮಾಡಿದ್ದು ಅದಕ್ಕೆ ಸ್ವಾಸ್ತಿಯಿಲ್ಲದ ಕಾರಣ, ಮುಗುವಿನ ಸೀಮೆ ಮುಡಕುದರಿ ಕಂಮ್ಮರ ಕೊಡಲು ಕಂಚಗೌಡ ಊಂಣಲಾಡಿ, ಕೋಡಿ ಗ್ರಾಮದಲ್ಲಿ ಪ್ರಾಕು ನಷ್ಟಕ್ಕೆ ಕಳೆದ ಭೂಮಿಯಿದ್ದು, ಅದ ಪಾಲಿಸಿಕೊಂಡು, ಆ ಭೂಮಿಯಲ್ಲಿ ತೆಂಗಿನ ಸಸಿ, ಬಾಳೆ ಹಾಕಿಸಿ ಸಾಗು ಮಾಡಿಕೊಂಡು ದೇವತಾ ಸೇವೆ ಮಾಡಿಕೊಂಡು ಬರುವೆನೆಂದು ಕೇಳಿಕೊಂಡ ಸಂಬಂಧ ಅದರಲ್ಲಿ ಸಸಿ ಬಾಳೆ ಮುಂತಾಗಿ ಸಾಗುಮಾಡಿಕೊಂಡು ಅದ ಹುಟ್ಟುವಳಿ ಆದಾಯದಿಂದ ದೇವತಾ ಸೇವೆಯನ್ನು ಸಾಂಗವಾಗಿ ನಡೇಸಿಕೊಂಡು ಬರುವಂತೆ ಅದನ್ನು ಚೆನ್ನಕೇಶವ ದೇವರಿಗೆ ಸ್ವಾಸ್ತಿ ಬಿಡಲಾಗಿದೆ. ಇದನ್ನು ರೇಖೆ ಪ್ರಮಾಣ ಭೂಮಿಯನ್ನು ವಿಂಗಡಿಸಿಕೊಟ್ಟು ಶಾನುಬೋಗನ ಕಡತಕ್ಕೆ ಬರೆಸಿ ಅದನ್ನು ರಾಯನಿಗೆ ಕೊಡುವುದು.

## ನಿರೂಪ – 3

೧೦೩॥ ಪರಿಧಾವಿ ಸಂವತ್ಸರದ ಭಾದ್ರಪದ ಬಹುಳ ೧೦ರಲ್ಲು ಶ್ರೀಮತ್ಕೆಳದಿ ಸೋಮಶೇಖರ ನಾಯಕರು। ಗಣಪ್ಪಗೆ ಬರಶಿ ಕಳುಹಿದ ಕಾರ್ಯ – ಕುಂದಾಪುರದ ತಿಂಮ್ಮ ಶೇನುಬೊವನು ಹಜೂರು ಬಂದು ತಾನು ಕುಂದಾಪುರದಲ್ಲು ಮಠ ಕಟ್ಟಿಸಿ। ವಿಠ್ಠಲದೇವರ ಯಿಟ್ಟು ಪೂಜೆ ಮಾಡುವ ಹಾಗೆ ಮಾಡಿಯಿದ್ದೆನೆ। ಸ್ವಾಸ್ತಿಯಿಲ್ಲ ಕ್ರಯವ ಕೊಟ್ಟೆನು। ಯಿಾ ದೇವರ ದೇವತಾ ವೆಚ್ಚಕ್ಕೆ ತಾನು ಮಾಡುವ ಅರವಟಿಗೆ। ಧರ್ಮದ ಬಗ್ಯೆ ಸಹಾ। ಸ್ವಾಸ್ತಿ ವುತ್ತರವಾ ಕೊಡಬೇಕೆಂದು ಹೇಳಿಕೊಳ್ಳುತ್ತಾನೆ. ಆ ರೀತಿ ಅಪ್ಪಣೆ ಆಗಬೇಕೆಂದು ನಿರ್ವಾಣಯ್ಯ ಮಾವನವರು ಹೇಳಿದ ಸಂಮಂದ ಯಿಾ ತಿಂಮಣ್ಣ ಶೇನುಬೊವನ ಕೈಯಾಕ್ರಯವಾ।ಗ೪೯॥ಮುಂನುರ ತೊಂಬತ್ತು ಯೇಳುವರೆ ವರಹಾಂನು ಅರಮನಿಗೆ ತೆಗೆದುಕೊಂಡು। ಉತ್ತಾರ ಕೊಟ್ಟದ್ದು ಬಾರಕೂರು –· ಹೊಬ್ಬಳ್ಳಿ ಕರಣೀಕರು ಬರಶಿದ ಪ್ರಮಾಣ । ಯಿಾ ಹೊಬ್ಬಳ್ಳಿ ಬಳಿ ಸಾವಿರದ ಮಾಗಣ ಶಿರುವದ ಹೊಬ್ಬಳ್ಳಿ ವಳಗಣ। ಮತಾರ ಗ್ರಾಮದಿಂದಾ ರೆಖೆ। ಗ ೩೨೪೪। ವಿಂಗಡದಿಂದಾ ಮಾಣೆಬೆಟ್ಟನ ಗ್ರಾಮದ ಶಿಸ್ತಿನಿಂದಾ । ಗ೧೪ ಉಭಯಂ। ಗ ೩೨೪೪।= ಪ್ರಾಕಾರ ಭವ್ಯ ರಾಡಿಸಿ ಬರುತ್ತಿದ್ದ ಬಗೇ ಯಿಾಗ ಹೆಚ್ಚಿದು ಗ ೧ ಉಭಯಂ । ಗ೩೩೪ ಶಿರುಮದ ಗ್ರಾಮದಿಂದಾ। ಬಗ್ಗಾಳಬೆರ್ಮು ಕಂಪ್ರುಣೆಯವ ಭೂಮಿಯಿಂದಾ। ಸಿಸ್ತಿನಿಂದಾ ।ಗ। ೫।೧॥ ಪ್ರಾಕಾರ ಭವ್ಯರಾಡಿಶಿ ಬರುತಿದ್ದ ಬಗೇ ಯಿಾ ಗದ್ದೆರಗೆದು ೬೧ ಉಭಯಂ। ಗ೫೪೨॥ ಉಭಯಂ ।ಗ ೩೯॥೧॥ = ಚಂನವೀರಪ್ಪನ ಮಟದ ಬಗೆ ಹುಟುವಳಿ ಮೇಲೆ ವರಾಡ್ಸಿ ಕೊಟ್ಟು ಬಂದೆವೆಂದು ।

ಪ್ರಜೆ ಗಳು ಬರಕೊಟ್ಟ ಪಟ್ಟೆ। ಪ್ರಮಾಣಗೆ ಯಿ಼ಾ ಗ್ರಾಮ ದಿಂದಾ ಬರುತ್ತಿದ್ದ ಬಗೇ ಯಿ಼ಾಗ ಹೆಚ್ಚಿದ್ದು ೬॥ = ಉಭಯಂ। ಗ೩೯॥೨॥ ಕೆ ವಿವರಾ। ಪ್ರಾಕು ಶಿಸ್ತುನಿಂದಾ । ಗ೩೮॥೦೦॥। = ವರಾಹಿನ ಬರುತಿದ್ದ ಬಗೆಲು ಯಿ಼ಾಗಾ ಹೆಚ್ಚಿದು। ಗ ೧೪೧ ॥ – ಉಭಯಂ। ಗ ೩೯॥೨॥ ಮೂವತ್ತೊಂಬತ್ತು ವರಹಾಂನ ಯೇಳು ಹಣ ಅಡದ ಸ್ವಾಸ್ತಿಯಂದು। ಯಿಲ್ಲಿದ ಶೇನಬೊವನು ಕುಂದಾಪುರ ದಲ್ಲು। ಕಟ್ಟಿಸಿದ ಮಟದ ವಿಟಲದೇವರ ದೇವತಾ ವೆಚ್ಚಕ್ಕೆ। ಯಿ಼ಾತ ಮಾಡುವ ಅರವಟಗೆ ಧರ್ಮದ ಬಗ್ಯೆ ಸಹಾ ಶಿವಾರ್ಪಿತವಾಗಿ ।ಕೊಟ್ಟು। ಯಿ಼ಾ ಭೂಮಿಗೆ ವಾಮನ ಮುದ್ರೆ ಶಿಲಾಸ್ಥಾಪಿತವ ಮಾಡಿಸು ವಲ್ಲಿಗೆ। ಹಜೂರಿಂದ। ಊಳಿಗದ ಬಸವನ ಕಳುಹಿಸಿ ಥವ ಜು ಗ್ರಾಮುದವರ ಕರಶಿಕೊಂಡು ಗಡಿ ತತ್ವಾರ ಬಾರದ ರೀತಿ ಯಿವನ ಮುಂತಿಟ್ಟು ರೇಖೆ ಪ್ರಮಾಣ ಭೂಮಿಗೆ ಶಿಲಾಸ್ತಾಪಿತವ ಮಾಡಿಶಿಕೊಟ್ಟು। ಯಿ಼ಾ ಕಾಗದದ ಶೇನಬೊವನ ಕಡಿತಕ್ಕೆ ಬರಶಿ ತಿರುಗಾ ಯಿ಼ಾತನ ವಶಕ್ಕೆ ಕೊಡುವದಾಗಿ ಯಂದು ಬರೆದ ಸಾಧನ ಪ್ರತಿ॥

ಪರಿಧಾವಿ ಸಂವತ್ಸರದ ಬಾದ್ರಪದ ಬಹುಳ 10ರಲ್ಲು ಶ್ರೀಮತ್ ಕೆಳದಿ ಸೋಮಶೇಖರ ನಾಯಕರು ಗಣಪ್ಪಗೆ ಬರೆಸಿ ಕಳುಹಿಸಿದ ಕಾರ್ಯ – ಕುಂದಾಪುರದ ತಿಂಮ್ಮ ಶಾನುಬೋಗನು ಹಜೂರು ಬಂದು ತಾನು ಕುಂದಾಪುರದಲ್ಲಿ ಕಟ್ಟಿಸಿದ ವಿಠ್ಠಲದೇವರ ಮಠಕ್ಕೆ ಸ್ವಾಸ್ತಿಯಿಲ್ಲದ ಕಾರಣ ಕ್ರಯವ ಕೊಡುವೆನು ಅಲ್ಲದೆ ದೇವತಾ ವೆಚ್ಚಕ್ಕೆ ತಾನು ಮಾಡುವ ಅರವಟ್ಟಿಗೆ ಧರ್ಮದ ಬಗ್ಗೆಯು ಸಹಾ ಸ್ವಾಸ್ತಿ ಉತ್ತಾರವ ಕೊಡಬೇಕೆಂದು ಕೇಳಿಕೊಂಡಾಗ – ಆ ರೀತಿ ಅಪ್ಪಣೆಯಾಗಬೇಕೆಂದು ನಿರ್ವಾಣಯ್ಯ ಮಾವನವರು ಹೇಳಿ ಸಂಬಂಧ ತಿಂಮ್ಮಣ್ಣ ಶಾನುಬೋಗನಿಂದ ಮುನ್ನೂರಾ ತ್ತೊಂಬತ್ತೇಳುವರೆ ವರಾಹಗಳನ್ನು ಅರಮನೆಗೆ ತೆಗೆದುಕೊಂಡು ಉತ್ತಾರ ಕೊಟ್ಟದ್ದು – ಬಾರಕೂರು ಹೋಬಳಿ ಕರಣೀಕರು ಬರೆಸಿದ ಪ್ರಮಾಣ – ಈ ಹೋಬಳಿ ಸಾವಿರದ ಮಣಿ ಶಿರುವದ ಹೋಬಳಿಯಲ್ಲಿನ ಮತಾರ ಗ್ರಾಮದಿಂದ, ಮಾಣಿಬೆ ಟ್ಟದ ಗ್ರಾಮದ ಸಿಸ್ತಿನಿಂದಾ, ಪ್ರಾಕಾರ ಭವ್ಯರಾಡಿಸಿ ಬರುತ್ತಿದ್ದ ಬಗೆ ಈಗ ಹೆಚ್ಚಾಗಿದ್ದು, ಶಿರುವದ ಗ್ರಾಮ ದಿಂದ ಬಗ್ಗಾಳ ಬೆರ್ಮುರ್ಬ ಕಂಪುಣೆಯವ ಭೂಮಿ ಯಿಂದಾ, ಸಿಸ್ತಿನಿಂದಾ, ಪ್ರಾಕಾರ ಭವ್ಯರಾಡಿಸಿ ಬರು ತ್ತಿದ್ದ ಬಗೆ ಈಗ ಹೆಚ್ಚಾಗಿದ್ದು, ಶಿರುವದ ಗ್ರಾಮದಿಂದ ಬಗ್ಗಾಳ ಬೆರ್ಮುರ್ಬ ಕಂಪುಣೆಯವ ಭೂಮಿಯಿಂದಾ, ಸಿಸ್ತಿನಿಂದಾ, ಪ್ರಾಕಾರ ಭವ್ಯರಾಡಿಸಿ ಬರುತ್ತಿದ್ದ ಬಗೆ ಈಗ ಹೆಚ್ಚಾಗಿದ್ದು, ಚಂನವೀರಪ್ಪನ ಮಟದ ಬಗ್ಗೆ ಹುಟ್ಟುವಳಿ ಮೇಲೆ ಮಾಡಿಸಿಕೊಟ್ಟು ಬಂದೆ ವೆಂದು ಪ್ರಜೆಗಳು ಬರೆದುಕೊಟ್ಟ ಪ್ರಮಾಣಕ್ಕೆ ಈ ಗ್ರಾಮ ದಿಂದ ಬರುತ್ತಿದ್ದ ಬಗೆ ಈಗ ಹೆಚ್ಚಿದ್ದಕ್ಕೆ, ವಿವರ ಪ್ರಾಕು ಶಿಸ್ತಿನಿಂದಾ 38 ವರಾಹ ಬರುತ್ತಿದ್ದ ಬಗೆಯು ಈಗ ಹೆಚ್ಚಿದ್ದು, ಎಲ್ಲ ಸೇರಿ ಒಟ್ಟು ಮೂವತ್ತೊಂಬತ್ತು ವರಾಹ ಏಳು ಹಣ ಅಡದ ಸ್ವಾಸ್ತಿಯನ್ನು – ಇಲ್ಲಿಯ ಶಾನುಭೋಗನು ಕುಂದಾಪುರದಲ್ಲಿ ಕಟ್ಟಿಸಿದ ವಿಠಲದೇವರ ಮಠದ ದೇವತಾ ವೆಚ್ಚಕ್ಕೆ ಈತನು ಮಾಡುವ ಅರವಟ್ಟಿಗೆ ಧರ್ಮದ ಬಗ್ಗೆಯು ಶಿವಾರ್ಪಿತವಾಗಿ ಕೊಟ್ಟ ಈ ಭೂಮಿಗೆ, ಜಾಗ್ರಾಮದವರ ಕರೆಸಿಕೊಂಡು ಗಡಿವಿವಾದ (ತತ್ವಾರ) ಬರದ ಹಾಗೆ ಅವನ ಮುಂದಿಟ್ಟು ರೇಖೆ ಪ್ರಮಾಣ ವಿಂಗಡಿಸಿದ ಭೂಮಿಗೆ ವಾಮನ ಮುದ್ರೆ ಶಿಲಾಸ್ತಾಪಿಸಿ ಕೊಟ್ಟು, ಈ ಕಾಗದವನ್ನು ಶಾನುಬೋಗನ ಕಡತಕ್ಕೆ ಬರೆಶಿ ನಂತರ ಅವನ ವಶಕ್ಕೆ ಕೊಡುವುದು.

ಈ ವಿಷಯಕ್ಕೆ ಸಂಬಂಧಿಸಿದಂತೆ ಕೆ.ಜಿ. ವಸಂತ ಮಾಧವರವರು ತಮ್ಮ ಗ್ರಂಥದಲ್ಲಿ ತಿಳಿಸಿದ್ದು, ಅದರ ನಿರೂಪದ ಮೂಲ ಪಾಠವನ್ನು ಕೊಟ್ಟರುವಿದಿಲ್ಲ

ಕೆಳದಿ ಅರಸರಿಗೆ ಸಂಬಂಧಿಸಿದಂತೆ ಸುಮಾರು ಇನ್ನೂರಕ್ಕೂ ಹೆಚ್ಚು ನಿರೂಪಗಳು ಲಭ್ಯವಿದ್ದು, ಅವುಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅರಸರು ದೇವಸ್ಥಾನ ಇತ್ಯಾದಿ ಧರ್ಮಕಾರ್ಯಗಳಿಗೆ ಬಿಟ್ಟ ಸ್ವಾಸ್ತಿಯ ಬಗ್ಗೆ ಹಾಗೂ ಅವರಿಗೆ ಎಲ್ಲ ಧರ್ಮಗಳಲ್ಲಿಯೂ ಇದ್ದ ಧರ್ಮಶ್ರದ್ಧೆಯ ಬಗ್ಗೆ ತಿಳಿದುಬರುತ್ತದೆ.

## ಆಧಾರ ಗ್ರಂಥಗಳು


1. ಅಲ್ಫಾಬೆಟಿಕಲ್ ಲಿಸ್ಟ್ ಆಫ್ ಕನ್ನಡ ಮ್ಯಾನುಸ್ಕ್ರಿಪ್ಟ್ – (ಮೆಕಂಜೇಸ್ ಕಲೆಕ್ಷನ್ಸ್) ಜಿ.ಓ.ಎಂ.ಎಲ್, ಮದ್ರಾಸ್
2. ರಿಲೀಜನ್ಸ್ ಇನ್ ಕೋಸ್ಟಲ್ ಕರ್ನಾಟಕ – ಕೆ.ಜಿ. ವಸಂತ ಮಾಧವ 1500-1763 ಎ.ಡಿ
3. ಹಿಸ್ಟರಿ ಆಫ್ ದ ದಾಕ್ಷಿಣಾತ್ಯ ಸಾರಸ್ವತಾಸ್ – .ವಿ.ಎನ್. ಕುದ್ವಾ
4. ಕೆಳದಿ ಶಾಸನಗಳು ಸಾಂಸ್ಕೃತಿಕ ಅಧ್ಯಯನ (ಮಹಾ ಪ್ರಬಂಧ) ಡಾ॥ ಕೆ.ಜಿ. ವೆಂಕಟೇಶ ಜೋಯಿಸ್
(ಇದರ ಬರಹಕ್ಕೆ ಮಾರ್ಗದರ್ಶನ ಮಾಡಿದ ಗುಂಡಾ ಜೋಯಿಸರಿಗೂ ಡಾ॥ ಕೆ.ಜಿ ವೆಂಕಟೇಶ ಜೋಯಿಸರಿಗೂ ಲೇಖಕ ಕೃತಜ್ಞನಾಗಿದ್ದಾನೆ)

ಳದಿ ಗುಂಡಾಜೋಯಿಸ್

# ವಾನ್ ಪೂರ್ಣಯ್ಯನವರ ರಹದಾರಿ ಪತ್ರ

ಮೈಸೂರು ಸಂಸ್ಥಾನಕ್ಕೆ ದಿವಾನರಾಗಿದ್ದ ಪೂರ್ಣ ಯ್ಯನವರ ಇತಿಹಾಸವು ಕರ್ನಾಟಕ ಚರಿತ್ರೆಯಲ್ಲಿ ಮುಖವಾದುದು. ಶ್ರೀರಂಗಪಟ್ಟಣದ ಅನ್ನದಾನ ಟ್ಟಿ ಎಂಬ ವರ್ತಕನಲ್ಲಿ ಲೆಖ್ಖಪತ್ರ ಇಡುವ ಕಾರ ಿನರಾಗಿದ್ದು ಪೂರ್ಣಯ್ಯನವರು ಕಾಲಕ್ರಮೇಣ ದರಾಲಿಯ ಆಪ್ತರಾಗಿ ಆತನಲ್ಲಿ ದಫ್ತರ ಖಾನೆಯ ಧಿಕಾರಿಯಾಗಿದ್ದರು. ಪೂರ್ಣಯ್ಯನವರ ಸಮಗ್ರ ಇತಿ ಹಾಸವು ಮೂಲ ಸಾಮಗ್ರಿಗಳ ಅಭಾವದಿಂದಾಗಿ ವರ ಕಾಲದ ಅಜ್ಞಾತ ಸಂಗತಿಗಳು ಕಾಲಗರ್ಭದಲ್ಲಿ ಡಗಿರುವುದಾಗಿ ಸುಬೋಧ ಯಾ ರಾಮರಾಯರು ಭಿಪ್ರಾಯ ಪಟ್ಟಿದ್ದಾರೆ.[1] ಡಾ. ಸೂರ್ಯನಾಥ ಮತ್‌ರವರು ಮೈಸೂರು ಅರಮನೆಯಲ್ಲಿದ್ದ ಸಮಗ್ರ ಾರಿತ್ರಿಕ ದಾಖಲೆಗಳನ್ನು ಕರ್ನಾಟಕ ರಾಜ್ಯ ಪತ್ರಾ ಾರಕ್ಕೆ ಒದಗಿಸಿದಾಗ, ದಿವಾನ್ ಪೂರ್ಣಯ್ಯನವರ ಂಶೀಕರ ಮನೆಯಲ್ಲಿದ್ದ ಯಳಂದೂರು ಜಹಗೀರಿನ ಲವು ಕಡತಗಳೂ ಸೇರ್ಪಡೆಯಾಗಿವೆ. ಮೈಸೂರು ತ್ರಾಗಾರದ ಕಚೇರಿಯಲ್ಲಿರುವ ಈ ಕಡತಗಳನ್ನು ನು ಅವಲೋಕಿಸಿದಾಗ ಕೇವಲ ಲೆಖ್ಖ ಪತ್ರಗಳು ಾತ್ರ ಕಂಡುಬಂದಿವೆ. ಆರ್ಥಿಕ ಹಾಗೂ ಸಾಮಾಜಿಕ ತಿಹಾಸವನ್ನು ರೂಪಿಸಲು ಇವುಗಳು ಆಕರ ಮೌಲ್ಯ ಾಗಿವೆ.

## ಕ್ಷೋಭ್ಯ ತೀರ್ಥ ಮಠದ ದಫ್ತರಖಾನೆ

ಕಳೆದ ಎಂಟು ವರ್ಷಗಳ ಹಿಂದೆ ತಹಸೀಲ್ದಾರ್ ಕಸಗಾರು ಮಾಧವರಾಯರ ಸಹಕಾರದಿಂದ ರ್ಥಹಳ್ಳಿ ತಾಲ್ಲೂಕಿನಲ್ಲಿ ಓಲೆಗರಿ ಹಸ್ತಪ್ರತಿಗಳ ಮೀಕ್ಷೆ ಕೈಗೊಂಡಾಗ ಬಾಳಗಾರು ಗ್ರಾಮದಲ್ಲಿ ಶ್ರೀ ರ್ಯ ಅಕ್ಷೋಭ್ಯ ತೀರ್ಥ ಸಂಸ್ಥಾನ ಮಠದಲ್ಲಿರುವ ರಾತನ ವಸ್ತು ಸಂಗ್ರಹಗಳನ್ನು ಅವಲೋಕಿಸಲು ವಕಾಶವನ್ನು ಪೂಜ್ಯಶ್ರೀಗಳು ನೀಡಿದರು. ಶ್ರೀ ಶ್ರೀಗ ಗೆ ವಿನಮ್ರ ಪ್ರಣಾಮಗಳು. ಕೇವಲ ಅಲ್ಪ ಕಾಲದಲ್ಲಿ ಠದಲ್ಲಿರುವ ಹಳೆಯ ಸಂಗ್ರಹಗಳು ಹಾಗೂ ಕಾಗದ ತ್ರಗಳನ್ನು ಪರಿವೀಕ್ಷಿಸಿ ಅವಲೋಕಿಸಿದಲ್ಲಿ ಸಿಪಾಯಿ ಂಗೆಯ ಮುಂಚಿನ ಪೂರ್ವೇತಿಹಾಸಕ್ಕೆ ಸಂಬಂಧಿಸಿದ ಾರಿತ್ರಿಕ ದಾಖಲೆಗಳು, ಜೇಮ್ಸ್ ಮನ್ರೋ ಹಾಗೂ ಬೂದಿ ಬಸಪ್ಪನಾಯಕನ ಸಂಗತಿಗೆ ಉಲ್ಲೇಖಿಸಿದ ಕಾಗದ ಪತ್ರಗಳು[2] ಕುತೂಹಲವನ್ನು ಕೆರಳಿಸಿದುವು. ಈ ದಫ್ತ ರಖಾನೆಯಲ್ಲಿ ದಿವಾನ್ ಪೂರ್ಣಯ್ಯನವರ ರಹದಾರಿ ಪತ್ರವೊಂದು ಗೋಚರಿಸಿದ್ದು ಐತಿಹಾಸಿಕ ಮಹತ್ವ ದಿಂದ ಕೂಡಿ ಅವರ ಧಾರ್ಮಿಕ ನೀತಿಯನ್ನು ಕುರಿತು ವಿನೂತನ ಬೆಳಕನ್ನು ಚೆಲ್ಲುತ್ತದೆ. ಶ್ರೀ ಮಧ್ವಾಚಾ ರ್ಯರ ಕೃತಿಯೆಂದು ಹೇಳಲಾದ ಓಲೆಗರಿಕಟ್ಟು[3] 15-12-1908ರ ರೆವೆನ್ಯೂ ಮತ್ತು ವ್ಯವಸಾಯ ಗೆಜೆಟ್‌ಗಳು, ಹೈದರಾಬಾದ್ ಸಮಾಚಾರ (ಕನ್ನಡ) ಪತ್ರಿಕೆಗಳು, ಪುರಾತನ ಪಂಚಾಂಗಗಳು, ಕೌಲೇದುರ್ಗದ ತಾಲ್ಲೂಕು ಆಮಿಲ್ ವ್ಯವಹಾರಗಳು ಇತ್ಯಾದಿ ಸಂಗ್ರಹಗಳು ಗಮನಾರ್ಹವಾಗಿವೆ.

## ಪೂರ್ಣಯ್ಯನವರ ಕಾಲದ ಚಾರಿತ್ರಿಕ ದಾಖಲೆಗಳು.

1800-1801ರಲ್ಲಿ ಫ್ರಾನ್ಸಿಸ್ ಬುಕನನ್, ಮೈಸೂರು, ದಕ್ಷಿಣ ಕನ್ನಡ ಮತ್ತು ಮಲಬಾರು ಪ್ರಾಂತಗಳಲ್ಲಿ ಸಂಚರಿಸಿ ಆ ಕಾಲದ ಸಂಗತಿಗಳನ್ನು ಕ್ರೋಢೀಕರಿಸಿ ಪ್ರವಾಸೀ ಕಥನದೋಪಾದಿಯಲ್ಲಿ ವರದಿಯನ್ನು ಸಿದ್ಧಪಡಿಸಲು ದಿವಾನ್ ಪೂರ್ಣಯ್ಯನವರು ಬುಕನನ್‌ನಿಗೆ ಶಾಸನಗಳು, ಕಡತಗಳು ಆದಿಯಾಗಿ ಪುರಾತನ ಸಾಮಗ್ರಿಗಳು ಸಂಸ್ಥಾನದಲ್ಲಿ ಲಭಿಸುವಂತೆ ಪ್ರೋತ್ಸಾಹಿಸಿದರು. ಈ ಸಮೀಕ್ಷೆಯಲ್ಲಿ "ಕೆಳದಿ ರಾಯ ಪದ್ಧತಿ" ಎಂಬ ಪದ್ಯ ಗ್ರಂಥ ಹಾಗೂ ಇದರ ಕನ್ನಡ ಭಾಷಾಂತರ ಕೃತಿಯನ್ನು ಪೂರ್ಣಯ್ಯನವರು ಇತರ ದಫ್ತರದೊಂದಿಗೆ ಬಂಗಾಲ ಸರಕಾರಕ್ಕೆ ರವಾನಿಸಿರುವುದು ಕಂಡುಬರುತ್ತದೆ. ಇದನ್ನು ಬುಕನನ್ ಸಾಹೇಬನೇ ಈ ಕೆಳಕಂಡಂತೆ ನಿರೂಪಿಸಿದ್ದಾನೆ.

I here found a Brahman named Bayluru Dewenppa, whose ancestors have been the heriditory writers of the chronicles of the Kilidi familiy. He engaged to give me the family book called Kilidi Raya Paditti. It is in the old

dialect and character of Karnata and contains 400 slokas or distichs; for, like all other works of any note among the Hindus it is poetical. He afterwards forwarded a copy of the work to Purnea who was so good as to add a translation into the modern language and character and both of them have been delivered to the Bengal Government. The family of the historiographer enjoyed an Enam or free land, to the amount of sixty pagodas a year (Buchanan, 'Journey' II P.378)

ಡಾ. ಎ.ಕೆ.ಶಾಸ್ತ್ರಿಗಳು ಶೃಂಗೇರಿ ಮಠದ ದಫ್ತರ ಖಾನೆಯಲ್ಲಿ ಕಾಗದಗಳಲ್ಲಿ ಉಲ್ಲೇಖಿಸಿದ ದಿವಾನ್ ಪೂರ್ಣಯ್ಯನವರ 22 ಪತ್ರಗಳ ಸೂಚಿ ಸಿದ್ಧಪಡಿಸಿ ರಾಜ್ಯ ಪತ್ರಾಗಾರಕ್ಕೆ ಸಲ್ಲಿಸಿದ್ದಾರೆ. ಇವುಗಳನ್ನು ಈ ಕೆಳಕಂಡಂತೆ ವಿಭಾಗಿಸಬಹುದು.

**I** ಕ್ಷೇಮ ಸಮಾಚಾರ ಪತ್ರಗಳು (ಐದು)

(1) DP 1/ದಿ 12-4-1794
(2) Dp 6/ದಿ 1803-4.
(3) Dp 12/ದಿ 1807-8.
(4) Dp 20/ದಿ 1810-11.
(5) DP 21/ದಿ 1810-11.

**II** ಧಾರ್ಮಿಕ ಕಟ್ಟಳೆ ಪತ್ರಗಳು (ಐದು)

(1) DP 3/ದಿ 1794
(2) DP 5/ದಿ 1802-3
(3) DP 11/ದಿ 1806-7
(4) DP 14/ದಿ 1807-8
(5) DP 17/ದಿ 20-3-1809.

**III** ರಹದಾರಿ ಪತ್ರಗಳು (ಏಳು)

(1) DP 2/ದಿ 12-6-1794

(2) DP 4/ದಿ 1801-2
(3) DP 8/ದಿ 1805-6
(4) DP 9/ದಿ 1805-6
(5) DP 10/ದಿ 1806-7
(6) DP 18/ದಿ 29-4-1810
(7) DP 19/ದಿ 1810.

V ರೆವಿನ್ಯೂ ಪತ್ರಗಳು (ನಾಲ್ಕು)

(1) DP 7/ದಿ 1805-6
(2) DP 13/ದಿ 1807-8
(3) DP 22/ದಿ 1810-11
(4) DP 23/ದಿ 1810-11

VI ಮರಾಮತ್ತು ಕಾಮಗಾರಿ ಪತ್ರ (ಒಂದು)

(1) DP 15/ದಿ ಪ್ರಭವ ಮಾರ್ಗಶಿರ ಶುದ್ಧ ೨.

ಇದಲ್ಲದೆ ಶ್ರೀ ಆರ್ಯ ಅಕ್ಷೋಭ್ಯತೀರ್ಥ ಮಠ ಬಾಳಗಾರು ಹಾಗೂ ಬೆಂಗಳೂರಿನ ಸರಕಾರಿ ವಸ್ತುಸಂಗ್ರಹಾಲಯಗಳಲ್ಲಿ[5] ಒಂದೊಂದರಂತೆ ಎರಡು ರಹದಾರಿ ಪತ್ರಗಳು ದಿವಾನ್ ಪೂರ್ಣಯ್ಯ ನವರದು ಕಂಡು ಬಂದಿವೆ. ಪ್ರಕೃತ ಈ ಎರಡು ಪತ್ರಗಳನ್ನು ಮಾತ್ರ ತುಲನಾತ್ಮಕವಾಗಿ ಪರಿಶೀಲಿಸಲಾಗಿದೆ.

### ಶ್ರೀ ಅಕ್ಷೋಭ್ಯ ತೀರ್ಥ ಮಠ ಮತ್ತು ಬೆಂಗಳೂರು ಮ್ಯೂಜಿಯುಂನ ಪತ್ರಗಳು

ಶ್ರೀ ಅಕ್ಷೋಭ್ಯ ತೀರ್ಥ ಮಠದಲ್ಲಿರುವ ಪತ್ರ ಮ.33.2 ಸೆ.ಮೀ 15.5. ಸೆ.ಮೀ. ಪ್ರಮಾಣವಿದ್ದು, 14 ಸಾಲುಗಳಿಂದ ಕೂಡಿ ಆರಂಭದಲ್ಲಿ ಮೊಹರು ಇದೆ. ಮುದ್ರೆಯಲ್ಲಿ ಈ ಕೆಳಕಂಡಂತೆನಾಗರೀ ಲಿಪಿಯಲ್ಲಿ ಉಲ್ಲೇಖವಿದೆ:

1. ನಿಜಪೂರ್ಣ
2. ಸುಖಶ್ರೀ ...
3. ಕ್ಷೀ ನರಸಿಂಹ

ಅಂತ್ಯದಲ್ಲಿ "ರುಜು ಶ್ರೀ" ಎಂಬುದಾಗಿ ಉಲ್ಲೇಖಿಸಿರುವ ಈ ಪತ್ರವು ಪ್ರಭವ ಸಂವತ್ಸರದ ಕಾರ್ತಿಕ ಶು ರಲ್ಲು ಬರೆದದ್ದಾಗಿದೆ. ಮೈಸೂರು ಸಂಸ್ಥಾನಕ್ಕೆ ದಿವಾನರಾಗಿ 1-7-1799 ರಿಂದ 1811 (ಮಾರ್ಚಿ) ರವರೆಗೆ ಅಧಿಕಾರ ನಡೆಸಿದ ಕಾಲಮಾನವನ್ನು ಪರಿಗಣಿಸಲಾಗಿ ಸ್ವಾಮಿ ಕಣ್ಣುಪಿಳ್ಳೆರವರ ಎಫೆಮೇರೀಸ್ ನೀರಗೆ ಇದು 8-11-1807 ನೇ ಭಾನುವಾರವಾಗುತ್ತದೆ. ಕೆಳದಿ ಇತಿಹಾಸೋತ್ತರ ಕಾಲದಲ್ಲಿ ನಗರ (ಬಿದನೂರು) ವಿಭಾಗದ ಈ ರಹದಾರಿ ಪತ್ರ ಆಗಿನ ಶ್ರೀ ಅಕ್ಷೋಭ್ಯತೀರ್ಥರಿಗೆ ನೀಡಿದ್ದಾಗಿದೆ.[6]

ಬೆಂಗಳೂರು ಸರಕಾರಿ ವಸ್ತುಸಂಗ್ರಹಾಲಯದಲ್ಲಿರುವ ದಾಖಲೆಯು ಎರಡು ಕಾಗದದಲ್ಲಿದ್ದು ಪ್ರತಿಯೊಂದೂ ಸು 8" X 5" ಪ್ರಮಾಣದ್ದಾಗಿದೆ.[7] ಮೊದಲನೇ ಪತ್ರದಲ್ಲಿ 10 ಸಾಲುಗಳೂ ನೇ ಪತ್ರದಲ್ಲಿ 13 ಸಾಲುಗಳೂ ಇವೆ. ಆರಂಭದ ಮುದ್ರೆ ಹಾಗೂ ಅಂತ್ಯಸಾಲಿನ "ರುಜುಶ್ರೀ" ಉಲ್ಲೇಖವೂ ಹೋಲಿಕೆಯಲ್ಲಿಒಂದೇ ವಿಧವಾಗಿ ಕಂಡುಬಂದಿವೆ. ರಕ್ತಾಕ್ಷಿ ಸಂ॥ದ ಆಷಾಢ ಶುದ್ಧ ೫ರಲ್ಲಿ ಬರೆದ ಈ ಪತ್ರದ ಕಾಲವು ಮೇಲ್ಕಂಡಂತೆ ಪರೀಶೀಲನೆಯಲ್ಲಿ ದಿ 12-7-1804 ನೇ ಗುರುವಾರವಾಗುತ್ತದೆ.

### I ಶ್ರೀ ಅಕ್ಷೋಭ್ಯ ತೀರ್ಥಮಠದ ಪತ್ರ ಪಾಠ.

1. ಪ್ರಭವ ಸಂವತ್ಸರದ ಕಾರ್ತಿಕ ಶು॥ಲ್ಲು ಶ್ರೀಮತು
2. ಪೂರ್ಣೈಯನವರು ಅರಮನೆ ಶಿಮೆಗಡಿಗಳ ಆಮಿಲ
3. ಕಿಲ್ಲೆದಾರ್‍ರಿಗೆ ಸಹ ಆದಾಗೀ ನಗರದ ಶೀಮೆ ಬಾಳಗಾರದ
4. ಶ್ರೀ ಸ್ವಾಮಿಗಳವರ್‍ರು, ಮೈಯಿಶೂತ್ರಿಗೆ ಬಂದ್ದುಯಿದ್ದು
5. ಪುನಹಾ । ಸ್ಥಳಕ್ಕೆ ಸಾಗಿ ಹೋಗುವದರ್‍ರಿಂದಾ ಸ್ವಂಗಡ ಬ್ರಾ
6. ಅಂಪ್ಮರು ಪಾಲಖಿ ಸಾಮಾನು ಸರಂಜಾಮೆ ಸಹ ನಿಂಮನಿಂ
7. ಮ್ಮ ಗಡಿಗಳ ಮಾರ್ಗವಾಗಿ ಬಂದ್ದು ಯಿಳಿಯುವದಕ್ಕೆ
8. ಸ್ಥಳವನು ತೋರಿಶಿ ವಂದ ಹೊರೆಹುಲ್ಲು ಯರಡ
9. ಹೊರೆ ಕಟಿಗೆ ಸಹ ಕೊಡ್ಶಿವದೂ ಯಿದಲ್ಲದೆ ಕ್ರ
10. ಯಕ್ಕೆ ಬೆಕೆಂದ ಸಾಮಾನು (ವಾಜಖಿ?) ಕ್ರಯಕೆ ತೊರಿಶಿ
11. ರಾತ್ರೆಯಿಳದ ಬಳಿ ಕಳಕ್ರಾಕರ ಪ್ರಪದ್ರ ತಟದಂತ್ತೆ
12. ಖಬರದಾರ್‍ರಿ ಮಾಡ್ಶೀ ಮುಂದೆ ಸಾಗಿ ಹೋಗುವಲ್ಲು ।
13. ಮಾರ್ಗ ತೊರ್‍ರಿಸುವದಕ್ಕೆ ಗಡಿಯಿಂದಾ ಗಡಿಗೆ ವಂದಾ

14. ಳ ಕೊಟ್ಟ ಕಳುಪ್ಪಿವದೂ ರುಜುಶ್ರಿ.

**II ಬೆಂಗಳೂರು ಸರಕಾರಿ ವಸ್ತುಸಂಗ್ರಹಾಲದಲ್ಲಿರುವ ಪತ್ರಪಾಠ ೧ನೇ ಪತ್ರ.**

1. ರಕ್ತಾಕ್ಷಿ ಸಂವತ್ಸರದ ಅಷಾಢ ಶುದ್ಧ ೫ ಲ್ಲೂ
2. ಶ್ರಿಮತು ಪೂರ್ಣ್ಯಯನವರ್‍ರು ಅರಮನೆ ಶಿ
3. ಮೆ ಗಡಿಗಳ ಕಿಲ್ಲೆದಾರ್‍ರು ಅಮಲದಾರರ್‍ರಿಗೆ
4. ಅದಾಗಿ ರಾಜಶ್ರಿ ಬಾರತಳಿ ಸಾಹೆಬರವ್ಹಿಪ್ರ
5. ನಾಕಸ ಸಾಹೆಬರವರ್‍ರು ಮುಂತ್ತಾದ ಸರ
6. ದಾರ್‍ರು ಮೂರು ಜನ ಹರ್‍ರಿಹರದಿಂದಾ ಶ್ರಿರಂ
7. ಗಪಟ್ಟಣಕ್ಕೆ ಸಾಗಿ ಬರುತ್ತಾರಾದ ಕಾರಣ
8. ಯಿವರ ಸಂಗಡ ಸರಕಾರದ ತಾಲೂಕು
9. ನಾಯಕ ಚಿಕ್ಕಶೆಟ್ಟಯ್ಯನು ಬರುತ್ತಾನಾಗಿ
10. ರಾಜಶ್ರೀ ಸರದಾರರ್‍ರು ಬರ್‍ರುವಲ್ಲಿ ನಿಂಮನಾ

**2 ನೇ ಪತ್ರ**

1. ಯಿಂದ್ದಾ ಮಾಲ್ಲಿಕರ್‍ರಿಗೆ ಕೊಡ್ಡುವದು
2. ಸದರಿ ಬರದ ಮೆರೆಗೆ ಸರದಾರರ ಖಾಸಕು
3. ದುರೆಗಳಿಗೆ ಕೊಟ್ಟ ಹತ್ತು (ಕಬಾಡ?) ಹುಲ್ಲು
4. ತಡಿ ಲಗ್ಗ್ಯ ಮಾತ್ರಾ ಕ್ರಯಾ ಕೆಳದೆ ನಾಯಕ
5. ಶೆಪ್ಪೈನ ರಶಿತ್ತಿ ತೆಗದುಕೊಳುವದು ಯಿಾಸ
6. ರದಾರರ್‍ರು ಬರ್‍ರುವಲ್ಲಿ ನಾಯಕ ಶಿಪ್ಪೆಯ
7. ನು ಮುಂಚಿತ್ತಾಗಿ ನಿಮಗೆ ಬರಶಿ ಕಳುತ್ತಾ
8. ನಾಗಿ ಆ ಪ್ರಕಾರ್‍ರಕ್ಕೆ ನಿಉ ನಡದುಕೊಳು
9. ವದು ಸರದಾರರ್‍ರು ನಿಂಮ ನಿಂಮ ತಾಲೂ
10. ಕುಗಳಿಗೆ ಬಂದು ಅಲ್ಲಿಂದಾ ಮುಂದಕ್ಕೆ
11. ಸಾಗಿ ಬಂದ ವಿವರಕ್ಕೆ ಹುಜೂರ್‍ರಿಗೆ ಅರ್ಜಿಬ
12. ರಶಿ ಕಳುಪ್ಪಿವದು ರ್‍ರುಜುಶ್ರಿ

**ಉಪಸಂಹಾರ:**

ಈವರೆಗಿನ ಪೂರ್ಣಯ್ಯನವರ ಪತ್ರಗಳೆಲ್ಲವನ್ನೂ ಸೂಕ್ಷ್ಮವಾಗಿ ಅವಲೋಕಿಸಿದಲ್ಲಿ ಒಂದೇ ಮಾದರಿಯ ಮುದ್ರೆ ಹಾಗೂ "ರುಜುಶ್ರೀ" ಎಂಬ ಅಂತ್ಯಸಾಲಿನ ಉಲ್ಲೇಖಗಳು ಗಮನಾರ್ಹವಾಗಿದ್ದು ಪೂರ್ಣಯ್ಯನವರ ಸ್ವಹಸ್ತಾಕ್ಷರವೆಂಬುದನ್ನು ಸಿದ್ಧಪಡಿಸುತ್ತದೆ. ಸುಬೋಧ ಯಂ. ರಾಮರಾಯರೂ ಪೂರ್ಣಯ್ಯನವರು ಸ್ವತಃ ಲೇಖನಿಯ ಚಾಲಕರಾಗಿದ್ದರೆಂದು ಅಭಿಪ್ರಾಯ ಪಟ್ಟಿದ್ದಾರೆ. ದಿವಾನ್ ಪದವಿಯಲ್ಲಿ ತಮ್ಮ ವೃದ್ಧಾಪ್ಯದ 75 ವರ್ಷಗಳಲ್ಲಿಯೂ ಪೂರ್ಣಯ್ಯನವರು ಅಧಿಕಾರದಲ್ಲಿದ್ದುದು ಮೇಲ್ಕಂಡ ಪತ್ರಗಳಿಂದ ಕಂಡುಬರುತ್ತದೆ. ೧೯.೫.೧೮೦೪ರಲ್ಲಿ ಕೆಳದಿ ಇತಿಹಾಸನಂತರ ಕಾಲದ ನಗರದ (ಬಿದನೂರು) ಫೌಜದಾರನಿಗೆ ಬೋರೆಘಾ ಟ್ ನಿಂದ ಬ್ರಿಟಿಷ್ ಸೈನ್ಯಾಧಿಕಾರಿ ಬಾರ್‍ಕ್ಲೇ (R Barclay) ಬರೆದ ಪತ್ರವೊಂದು ಪೂರಕ ಅಂಶವನ್ನು ಒದಗಿಸುತ್ತದೆ.

ಪೂರ್ಣಯ್ಯನವರಿಗೆ ಇಂಗ್ಲೀಷ್ ಬರುತ್ತಿರಲಿಲ್ಲ. ಆದರೆ ಆಂಗ್ಲೇಯ ಅಧಿಕಾರಿಗಳೊಂದಿಗೆ ವ್ಯವಹರಿಸುತ್ತಿದ್ದುದು, ಕನ್ನಡದಲ್ಲಿಯೇ ರಾಜ್ಯವನ್ನು ಮುನ್ನಡೆಸಿದುದು ಗಮನಾರ್ಹವಾದುದು. ಸಂಸ್ಕೃತ, ಕನ್ನಡ ಹಾಗೂ ಪಾರ್ಶೀ ಭಾಷೆಗಳಲ್ಲಿ ಪಾಂಡಿತ್ಯವಿದ್ದ ಪೂರ್ಣಯ್ಯನವರ ವಾಕ್ಯಶೈಲಿ ಮನೋಹರ ಹಾಗೂಅರ್ಥಪೂರ್ಣತೆಯಿಂದ ಕೂಡಿ ವಿಷಯ ವಿವರಣೆಯಲ್ಲಿ ವಿಲಂಬಿಸದಂತೆಯೂ ಸಂದಿಗ್ಧಾರ್ಥಕ್ಕೆಡೆ ಯಿಲ್ಲದಂತೆಸ್ಪಷ್ಟವಾಗಿದ್ದು ಈಗಿನ ಸರಕಾರಿ ಕಾಗದ ಪತ್ರಗಳಲ್ಲಿರುವಂತೆ ಅಡ್ಡಗೋಡೆ ಮೇಲೆ ದೀಪವಿಟ್ಟಂತಿ ರಲಿಲ್ಲವೆಂಬುದು ಗಮನಾರ್ಹವಾದುದು. ಸರಕಾರಿ ಇನಾಂ ಕ್ವಿಟ್‌ರೆಂಟ್‌ನ ೧೮೧೦ ದಾಖಲೆಯೊಂದು ಪೂರ್ಣಯ್ಯನವರೇ ಸ್ವತಃ ಲೆಖ್ಖ ಪತ್ರಗಳನ್ನು ಸಿದ್ಧಪಡಿಸುತ್ತಿದ್ದರೆಂಬುದನ್ನು ತೋರಿಸುತ್ತದೆ[8]. ಪೂರ್ಣಯ್ಯನವರು ಮಾಧ್ವ ಸಂಪ್ರದಾಯದವ ರಾಗಿದ್ದರೂ ಅದ್ವೈತ ಮತವನ್ನೂ ಗೌರವಿಸುವುದೂ ಹಾಗೂ ಸರ್ವಧರ್ಮಸಮನ್ವಯತೆಯ ಅವರ ಧಾರ್ಮಿಕ ಧೋರಣೆಯೂ ವೈಶಿಷ್ಟ್ಯಪೂರ್ಣವಾದುದು. ಖಾಸಗೀ ಸಂಗ್ರಹಗಳಲ್ಲಿರುವ ಕೆಳದಿ ಇತಿಹಾಸೋತ್ತರ ಕಾಲದ ಇಂತಹ ಚಾರಿತ್ರಿಕ ದಾಖಲೆಗಳು ಕರ್ನಾಟಕ ಇತಿಹಾಸ ರಚನೆಗೆ ಆಕರಗಳನ್ನು ಒದಗಿಸುವಲ್ಲಿ ಸಮರ್ಥವಾಗಿವೆ.

ದಿವಾನ್ ಪೂರ್ಣಯ್ಯನವರ ಕಾಲದ ಮೂಲ ಸಾಮಗ್ರಗಳನ್ನು ಶೇಖರಿಸಿ ಸೂಚಿ ಸಿದ್ಧಪಡಿಸುವುದರ ಮುಖಾಂತರ ವಿಶ್ವವಿದ್ಯಾಲಯಕ್ಕೆ ಮಹಾ ಪ್ರಬಂಧವೊಂದನ್ನು ಸಾದರ ಪಡಿಸಬಹುದಾಗಿದೆ. ಜಪಾನ್ ಪ್ರಾಚ್ಯವಸ್ತು ಸಂಗ್ರಹಣಾ ಮಾದರಿ ಹಾಗೂ ಅಲಹಬಾದಿನಲ್ಲಿ ಪ್ರಧಾನಿ ನೆಹರೂರವರ ವಸ್ತು ಸಂಗ್ರಹಾಲಯದಂತೆ ಯಳಂದೂರಿನಲ್ಲಿರುವ ಪೂರ್ಣಯ್ಯನವರ ಮನೆಯನ್ನು ಸ್ಮಾರಕವಾಗಿ ರಕ್ಷಿಸಿ ಅಲ್ಲಿಯೇ ಅವರಿಗೆ ಸಂಬಂಧಿಸಿದ ವಸ್ತುಗಳನ್ನು ಸಶಾಸ್ತ್ರೀಯವಾಗಿ ಪ್ರದರ್ಶಿಸಿದಲ್ಲಿ ಮುದ್ದೇನಹಳ್ಳಿ (ದಿವಾನ್ ವಿಶ್ವೇಶ್ವರಯ್ಯನವರ) ಯಂತೆ ಯಳಂದೂರಿಗೂ ಪ್ರಾಮುಖ್ಯತೆ ಲಭಿಸಿ ಪ್ರವಾಸೀ ಆಕರ್ಷಣೆಗೆ ಒಳಪಡುವುದು. ಈ ಕಾರಣಗಳಿಂದ ಸಮೀಕ್ಷೆ ಕೈಗೊಂಡು ಇಂತಹ ಮೂಲ ಸಾಮಗ್ರಿಗಳನ್ನು ಶೇಖರಿಸಿ ರಕ್ಷಿಸುವುದು ಮುಂದಿನ ಪೀಳಿಗೆಗೆ ಸೇರಿದೆ ಎಂದು ಹೇಳಬೇಕಾಗಿಲ್ಲವಷ್ಟೇ?

## ಅಡಿ ಟಿಪ್ಪಣಿಗಳು

1. ದಿವಾನ್ ಪೂರ್ಣಯ್ಯನವರು : ಸಂ:ಯಂ ರಾಮರಾವ್, ಸುಬೋಧ ಪ್ರಕಟನಾಲಯ, ಬೆಂಗಳೂರು 1931, ಸಂ.9, ಕುಸುಮ 114.
2. ಮಲೆನಾಡಿನಲ್ಲಿ ಕಂದಾಯವನ್ನು ಸರಕಾರಕ್ಕೆ ಕೊಡಲು ನಿರಾಕರಿಸಿದ ರೈತರ ಬಗ್ಗೆ ಬೂದಿ ಬಸಪ್ಪನು ತಾನೇ ನ್ಯಾಯಾಧೀಶನಾಗಿ ತೀರ್ಪು ನೀಡಿದ ಕುರಿತು ಈ ದಫ್ತರ ಖಾನೆಯಲ್ಲಿ ದಾಖಲೆಯೊಂದನ್ನು ನೋಡಿದ ನೆನಪಿದೆ.
3. ಪೂಜ್ಯ ಶ್ರೀಗಳು ಪೂಜಾ ಸಮಯದಲ್ಲಿ ನನಗೆ ಇದನ್ನು ತೋರಿಸಿದ್ದರು.
4. ನನ್ನ ಪರಿಶೀಲನೆಯಲ್ಲಿ ಇದು ದಿ 4-10-1807 ನೇ ಭಾನುವಾರವಾಗುತ್ತದೆ.
5. ಇದನ್ನು ಒದಗಿಸಿ ಸಹಕಾರ ನೀಡಿದ ಶ್ರೀ ದೇವರಾಜ್, ನಿರ್ದೇಶಕರು ಪ್ರಾಚ್ಯವಸ್ತು ಸಂಗ್ರಹಾಲಯ ಇವರಿಗೆ ಕೃತಜ್ಞತೆಗಳು.
6. ಮಠದ ಗುರುಪರಂಪರೆಯ ಕಾಲಮಾನ ಬಗ್ಗೆ ಸಂಶೋಧನೆ ಅಗತ್ಯ. ಶ್ರೀ ಕಸಗಾರು ಮಾಧವರಾಯರು ಈ ಕುರಿತು ಕೃತಿಯನ್ನು ಪ್ರಕಟಿಸಿದ್ದಾರೆ.
7. ಸಕಾಲದಲ್ಲಿ ಜೆರಾಕ್ಸ್ ಪ್ರತಿ ಪಡೆಯಲು ಸಾಧ್ಯವಾಗಿಲ್ಲ.
8. ನಗರ ಡಿವಿಜನ್ ಇನಾಂ ರಿಜಿಸ್ಟರಿನ ದಾಖಲೆ ಬಗ್ಗೆ ಅನುಬಂಧ (Xerox ಪ್ರತಿ) ನೋಡಿರಿ. ಬೆಂಗಳೂರು ಸರಕಾರಿ ವಸ್ತು ಸಂಗ್ರಹಾಲಯದಲ್ಲಿ ಪೂರ್ಣಯ್ಯನವರು ಇನಾಂ ಜಮೀನಿನ ಸರ್ವೆಗೆ ಉಪಯೋಗಿಸುತ್ತಿದ್ದ ಅಳತೆಪಟ್ಟಿಯೊಂದಿದೆ.

ಡಾ॥ ಆರ್. ರಾಮಕೃಷ್ಣನ್

# ಮೈಸೂರು ಟ್ಯಾಂಕ್ ಕೋಡ್ : ಮೈಸೂರು ರಾಜ್ಯದ ಕೆರೆಗಳ ವ್ಯವಸ್ಥೆಯ ಬಗ್ಗೆ ವಸಾಹತುಶಾಹಿಯ ನಿಲುವು : ಒಂದು ಸಮೀಕ್ಷೆ 1799-1878.

1831 ರಿಂದ 1881ರ ವರೆಗಿನ ಐವತ್ತು ವರ್ಷಗಳ ಅವಧಿಯನ್ನು ಬಿಟ್ಟರೆ ಮೈಸೂರುರಾಜ್ಯ ಬ್ರಿಟೀಷರ ನೇರ ಆಡಳಿತವನ್ನು ಅನುಭವಿಸಲಿಲ್ಲ. ಆದರೆ 1799ರ ನಾಲ್ಕನೆಯ ಆಂಗ್ಲೋ-ಮೈಸೂರು ಯುದ್ಧದಲ್ಲಿ ಹೋರಾಡುತ್ತಾ ಟಿಪ್ಪೂ ಮಡಿದ ನಂತರ ರಾಜ್ಯದ ಆರ್ಥಿಕ ಸ್ಥಿತಿ ವಸಾಹತುಶಾಹಿಯ ತುಳಿತಕ್ಕೆ ಒಳಗಾಯಿತು. ಮೈಸೂರು ರಾಜ್ಯದಲ್ಲಿ ವಸಾಹತು ಶಾಹಿಯ ತುಳಿತ 'ವಿಭಜನೆ ಒಪ್ಪಂದದಿಂದ' ಆರಂಭ ವಾಗಿ ನಂತರ 1799ರ 'ಸಹಾಯಕ ಸೈನ್ಯ ಒಪ್ಪಂದ', ಆನಂತರ 1831ರಲ್ಲಿ ನಡೆದ ನಗರದಂಗೆಯ ನಂತರ ರಾಜ್ಯದ ಆಡಳಿತವನ್ನು ತಮ್ಮ ನೇರ ಆಳ್ವಿಕೆಗೆ ವಹಿಸಿ ಕೊಂಡಿದ್ದು, ಐವತ್ತು ವರ್ಷಗಳ ಅವರ ಸ್ವತಂತ್ರ ಆಡಳಿತ, ಕೊನೆಗೆ 1881ರ ಪುನರ್‌ದಾನ ಹೀಗೆ ಪ್ರತೀಯೊಂದು ಹಂತದಲ್ಲೂ ಹೆಚ್ಚುತ್ತಾ ಹೋಯಿತು. ಸತ್ಯ ಹೇಳುವುದಾದರೆ 1881ರ ವೇಳೆಗೆ ಮೈಸೂರು ರಾಜ್ಯ ವಸಾಹತುಶಾಹಿಯ ಮುಷ್ಟಿಯಲ್ಲಿ ಸಿಕ್ಕಿ ಕೊಂಡಿದ್ದು ಹಾಗೆಯೇ ಅದೇ ಸ್ಥಿತಿಯಲ್ಲಿ ಮುಂದುವ ರಿಯಿತು. ಇದಕ್ಕೆ ಹೋಲಿಸಿದರೆ ಬ್ರಿಟೀಷ್ ನೇರ ಆಳ್ವಿ ಕೆಯ ಲಾಭಗಳು ಗೌಣವಾಗಿದ್ದವು. ಕಾರಣ ಅವು ಮೇಲ್ನೋಟಕ್ಕಾಗಿದ್ದವೇ ಹೊರತು ರಾಜ್ಯದ ಆಡಳಿತ ವ್ಯವಸ್ಥೆ ಅಥವಾ ಜನರ ಜೀವನಕ್ಕೆ ಸಂಬಂಧಿಸಿರಲಿಲ್ಲ.

ಮೈಸೂರಿನ ಆರ್ಥಿಕ ವ್ಯವಸ್ಥೆ ವಸಾಹತುಶಾಹಿಯ ಆರ್ಥಿಕ ಸ್ಥಿತಿಗೆ ಸಹಾಯಕವಾಗಿರಬೇಕಾಗಿತ್ತು. ವಸಾಹ ತುಶಾಹಿ ವ್ಯವಸ್ಥೆ ಬೇರೆ ರೀತಿಯಲ್ಲಿರಲು ಸಾಧ್ಯವಿರ ಲಿಲ್ಲ! ಮತ್ತು ಈ ಆರ್ಥಿಕ ಅಧೀನತೆಯ ಇತಿಹಾಸ ದಲ್ಲಿ ರಾಜ್ಯದ ನೀರಾವರಿ ಕೆಲಸಗಳ ಬಗ್ಗೆ ಕಂಪನಿಯ ಸರ್ಕಾರ ಹಾಗೂ ಸಾರ್ವಭೌಮ ಸರ್ಕಾರದನಿಲುವು ಬಹಳ ಪ್ರಮುಖವಾಗಿದ್ದವು.

ಬ್ರಿಟೀಷರ ಐವತ್ತು ವರ್ಷಗಳ ನೇರ ಆಡಳಿತದ ಬಗ್ಗೆ ಅಧ್ಯಯನ ಮಾಡಿ ಗ್ರಹಿಸಿದ ಮೊದಲ ಕೆಲವ ರಲ್ಲಿ 1881 ರಿಂದ 1883 ರವರೆಗೆ ಮೈಸೂರು ರಾಜ್ಯದ ದಿವಾನರಾಗಿದ್ದ ಸಿ.ವಿ.ರಂಗಾಚಾರ್ಲು ಒಬ್ಬರು.[1] 'ಕರ್ನಾಟಕ ಪ್ರಕಾಶಿಕೆ' ಎಂಬ ಸಮಕಾಲೀನ ವೃತ್ತ ಪತ್ರಿಕೆಯ ಬಾತ್ಮೀದಾರರು ದಿವಾನರನ್ನು ಟೀಕಿ ಸುತ್ತಿದ್ದವರೂ ಅದ ಒಬ್ಬರು, ಅನೇಕ ಸಮರ್ಥ ವ್ಯಕ್ತಿ ಗಳಿದ್ದರೂ 1881ರಲ್ಲಿ ರಂಗಾಚಾರ್ಲು ಅವರನ್ನೇ ದಿವಾನರನ್ನಾಗಿ ಮಾಡಲು ಕಾರಣ ಅವರು 1874ರಲ್ಲಿ ಬರೆದು ಪ್ರಕಟಪಡಿಸಿದ್ದ ಒಂದು ಕರಪತ್ರ ವೆಂದು ಬರೆದಿದಾರೆ.[2] ಅದೇನೆ ಇರಲಿ, ಪ್ರಮುಖ ವಾದ ವಿಷಯವೆಂದರೆ ರಂಗಾಚಾರ್ಲುರವರು ಕಟು ವಾದ ಟೀಕೆಗಳ ಮಧ್ಯೆಯೂ ಮೈಸೂರಿನಲ್ಲಿ ಬ್ರಿಟೀಷರ ಆಡಳಿತ ಮತ್ತು ಅದರ ಪ್ರಯೋಜನಗಳನ್ನು ವ್ಯವ ಸ್ಥೆಯ ಚೌಕಟ್ಟಿನೊಳಗೆಯೇ ನೋಡಿದ್ದರೇ ಹೊರತು ಹೊರಗಿನಿಂದೆಂದೂ ನೋಡಲಿಲ್ಲ. ರಂಗಾಚಾರ್ಲುರ ವರು ಅವರ ಅನೇಕ ಸಮಕಾಲೀನರಂತೆ ಬ್ರಿಟೀಷ್ ಮಾದರಿಯ ಆರ್ಥಿಕ ಅಭಿವೃದ್ಧಿಯ ದೃಷ್ಟಿಯಲ್ಲೇ ಎಲ್ಲವನ್ನು ನೋಡುವ ತರಬೇತಿಯನ್ನು ಪಡೆದಿದ್ದುದು ಇದಕ್ಕೆ ಒಂದು ಪ್ರಮುಖ ಕಾರಣವಾಗಿತ್ತು. ರಂಗಾಚಾ ರ್ಲುರವರ ವಿವಾದಾತ್ಮಕ ಬರವಣಿಗೆ ವಸಾಹತುಶಾಹಿ ವ್ಯವಸ್ಥೆಯ ಮೂಲಕ್ಕೆ ಹೋಗುವುದಿಲ್ಲ. ಮೈಸೂರು ರಾಜ್ಯದ ಜನರೊಂದಿಗೆ ವಸಾಹತುಶಾಹಿ ವ್ಯವಸ್ಥೆ ಅದರ ನೀತಿಯ ಹೊಂದಾಣಿಕೆಯ ಬಗ್ಗೆ ಪ್ರಶ್ನಿಸು ವುದೂ ಇಲ್ಲ.

1799ರಲ್ಲಿ ರಾಜ್ಯವನ್ನು ಒಡೆಯರಿಗೆ ಒಪ್ಪಿಸಿದ ಮೇಲೆ (ಪಾರ್ಟಿಷನ್ ಒಪ್ಪಂದ ಹಾಗೂ ಸಬ್ಸಿಡಿಯರಿ ಒಪ್ಪಂದದ ನಂತರ) ಗವರ್ನರ್ ಜನರಲ್‌ನು ರಾಜ್ಯದ ರೆಸಿಡೆಂಟ್ ಆಗಿದ್ದ ಬ್ಯಾರಿಕ್ಲೋಸ್‌ನಿಗೆ ಕೆಲವೊಂದು ಸೂಚನೆಗಳನ್ನು ನೀಡಿದನು.

ಅವುಗಳ ಪ್ರಕಾರ ಹೊಸ ಆಡಳಿತದ ಒಂದು ಮುಖ್ಯ ಉದ್ದೇಶ ಕಂಪನಿಗೆ ರಾಜ್ಯದಿಂದ ಬರಬೇಕಾದ

ಪೂಗದಿಯನ್ನು ಸರಿಯಾಗಿ ವಸೂಲಿ ಮಾಡುವುದಾಗಿತ್ತು. ಇದನ್ನು ಸಾಧ್ಯವಾಗಿಸಿಕೊಳ್ಳಲು ರೆಸಿಡೆಂಟನು ರಾಜ್ಯದ ಸಂಪೂರ್ಣ ಆಡಳಿತ ಮೇಲೆ ಪತ್ತೋಟಿ ಮತ್ತು ವಿಶೇಷವಾಗಿ ರಾಜ್ಯದ ಸಂಪತ್ತು ಹಾಗೂಆದಾಯದ ಮೇಲೆ ಗಮನವಿಡುವಂತೆ ಆದೇಶಿ ಸಲಾಯಿತು.[3] 1799 ರಿಂದ ರಾಜ್ಯ ಸರ್ಕಾರವು ಕೈಗೊಂಡ ಎಲ್ಲಾ ಕಾರ್ಯಕ್ರಮಗಳಲ್ಲೂ, ಆ ಕಾರ್ಯದಿಂದ ಬೊಕ್ಕಸಕ್ಕೆ ಬರಹುದಾದ ಹೆಚ್ಚುವರಿ ಆದಾಯದ ಮೇಲೆ ಗಮನ ಹರಿದಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

ಆದಾಯದ ಬಗ್ಗೆ ಅವರ ಈ ಅತೀವ ಆಸಕ್ತಿ 1799 ನಂತರ ಮೈಸೂರಿನ ಆಡಳಿತವು ಅನೇಕ ರೀತಿಯ ಇನಾಂಗಳು, ವ್ಯವಸಾಯ ಮತ್ತು ನೀರಾವರಿಯ ವಿಷಯಗಳತ್ತ ಗಮನಹರಿಸುವಂತೆ ಮಾಡಿತು. 1799ರಿಂದ 1812ರವರೆಗೆ ದಿವಾನರಾಗಿದ್ದ ಪೂರ್ಣಯ್ಯನವರು ರೆಸಿಡೆಂಟ್ ಬ್ಯಾರಿ ಕ್ಲೋಸ್‌ನ ಆದೇಶದ ಮೇರೆಗೆ ಈ ನಿಟ್ಟಿನಲ್ಲಿ ಎರಡು ಕ್ರಮಗಳನ್ನು ಕೈಗೊಂಡರು. ಅವು ಕೊನೆಗೆ ಹಾನಿಕರ ಪರಿಣಾಮ ಬೀರಿದವು. ಇದರಲ್ಲಿ ಮೊದಲ ಹೆಜ್ಜೆ ಎಲ್ಲಾ ರೀತಿಯ ಇನಾಂಗಳನ್ನು ಹಿಂತೆಗೆದು ಕೊಳ್ಳುವುದಾಗಿತ್ತು. ಅವುಗಳನ್ನು ನಿಯಮ ಬದ್ಧಗೊಳಿಸುವ ಉದ್ದೇಶಕ್ಕಾಗಿಯೇ ಈ ಕೆಲಸವನ್ನು ಮಾಡುತ್ತಿರುವುದಾಗಿ ಹೇಳಿಕೊಳ್ಳಲಾಯಿತು.[4] ರಾಜ್ಯ ಸರ್ಕಾರದ ಹಣದಿಂದ ಕಾಲುವೆಗಳು ಹಾಗೂ ಕೆರೆಗಳನ್ನು ದುರಸ್ತಿ ಮಾಡುವುದು ಎರಡನೆಯ ಹೆಜ್ಜೆಯಾಗಿತ್ತು.[5] ಇವೆರಡು ಕ್ರಮಗಳು ಕೊನೆಗೆ 1878ರಲ್ಲಿ 'ಮೈಸೂರು ಟ್ಯಾಂಕ್ ಕೋಡ್' ಅಸ್ತಿತ್ವಕ್ಕೆ ಬರಲು ಕಾರಣವಾದವು.

ಆರ್.ಹೆಚ್.ಸ್ಯಾಂಕಿ ಹೇಳಿರುವಂತೆ " ರಾಜ್ಯದ ಜನತೆಯ ಅಸ್ತಿತ್ವ ಮತ್ತು ಏಳಿಗೆ ಈ ಕೆರೆ ಪದ್ಧತಿಯ ನೀರಾವರಿಯನ್ನೇ ಅವಲಂಬಿಸಿತ್ತು.[6] ಈ ನೀರಾವರಿ ಕಾರ್ಯಗಳತ್ತ ವಸಾಹತುಶಾಹಿಯು ತಳೆದ ಅಸಡ್ಡೆಯ ಮನೋಭಾವವನ್ನು ಈ ಟ್ಯಾಂಕ್ ಕೋಡ್ ಎತ್ತಿ ತೋರಿಸುತ್ತದೆ.'' ಈ ಕೆರೆ ನೀರಾವರಿಯನ್ನು ಸುಸ್ಥಿತಿಯಲ್ಲಿಡಲು ಸರ್ಕಾರವು ಯಾವ ಯಾವ ಕ್ರಮಗಳನ್ನು ಕೈಗೊಳ್ಳಬೇಕು ಎಂಬುದನ್ನು ಸ್ಪಷ್ಟವಾಗಿ ಸೂಚಿಸುವುದು ಈ ಕೋಡಿನ ಮೊದಲ ಉದ್ದೇಶ.[7] ಇದರಿಂದ ಮೈಸೂರಿನ ಕೆರೆಗಳನ್ನು ಸಮರ್ಪಕವಾಗಿಯೂ, ಉತ್ತಮವಾಗಿಯೂ ಇಟ್ಟುಕೊಳ್ಳಬಹುದೆಂದು ಹೇಳಲಾಯಿತು. ರಾಜ್ಯದ ಜೀವನಾಡಿಎಂದು ಪರಿಗಣಿಸಲಾಗದ್ದ ಈ ಕೆರೆಗಳನ್ನು ಸುಸ್ಥಿತಿಯಲ್ಲಿಡಲು ಮತ್ತು ಆಗಾಗ ಅಗತ್ಯಕ್ಕನುಗುಣವಾಗಿ ದುರಸ್ತಿಪಡಿಸಲು ಒಂದು ಸೂತ್ರವನ್ನು ರೂಪಿಸಲು ವಸಾಹತುಶಾಹಿ ಆಡಳಿತ ಸುಮಾರು 80 ವರ್ಷಗಳನ್ನು ತೆಗೆದುಕೊಂಡಿತು. ಈ ನಿಧಾನ ದ್ರೋಹಕ್ಕೆ ಕಾರಣಗಳನ್ನು ನಾವು ಹುಡುಕುವಾಗ ವಸಾಹತುಶಾಹಿ ಪದ್ಧತಿಯ ಮೂಲ ಲಕ್ಷಣಗಳನ್ನು ಕಾಣಬಹುದು.

ಪೂರ್ಣಯ್ಯನವರ ಕಾಲದಲ್ಲಿ ಮೈಸೂರು ಸರ್ಕಾರ ತನ್ನ ಹಣದಿಂದ ಕೆರೆಗಳನ್ನು ದುರಸ್ತಿ ಮಾಡಲು ಆರಂಭಿಸಿದಾಗ ರಾಜ್ಯದ ಕೆರೆಗಳನ್ನು ಸರ್ಕಾರ ಅಥವಾ ಸರ್ಕಾರೀ ಕೆರೆಗಳು ಮತ್ತು ಕೊಡಿಗಿ ಅಥವಾ ಗ್ರಾಮೀಣ ಕೆರೆಗಳೆಂದು ವಿಂಗಡಿಸಲಾಯಿತು. ಗ್ರಾಮೀಣ ಕೆರೆಗಳ ದುರಸ್ತಿಯನ್ನು ರೈತರೇ ಕೊಡಗಿ, ಇನಾಂಗಳ ಸಹಾಯದಿಂದ ಮಾಡಿಕೊಳ್ಳಬೇಕಾಗಿತ್ತು. ಇವುಗಳನ್ನು ಮೇಲ್ನೋಟಕ್ಕಂತೂ ನಿಯಮಬದ್ಧಗೊಳಿಸಿ ಪುನಃ ನೀಡಲಾಗಿತ್ತು. ಸರ್ಕಾರಿ ಕೆರೆಗಳನ್ನು ಸರ್ಕಾರವೇ ಎರಡು ಕಾರಣಗಳಿಗಾಗಿನೋಡಿಕೊಳ್ಳುವಂತಾಯಿತು. ಮೊದಲನೇಯದಾಗಿ ದೊಡ್ಡದಾದ ಕೆರೆಗಳನ್ನು ಕೊಡಗಿದಾರರಿಗೆ ಕೊಡಲು ಸರ್ಕಾರವೇ ಹಿಂಜರಿಯುತ್ತಿತ್ತು. ಕಾರಣ ಅವರಿಗೆ ಹೆಚ್ಚಿನ ಇನಾಂಗಳನ್ನು ಕೊಡಬೇಕಾಗುತ್ತಿತ್ತು. ಮತ್ತು ಉನ್ನತ ಸರಕಾರವು ಇನಾಂಗಳು ಆಸಪ್ಟೂ ಕಡಿಮೆ ಇರುವಂತೆ ನೋಡಿಕೊಳ್ಳಬೇಕೆಂದು ಬ್ಯಾರಿಕ್ಲೋಸ್‌ಗೆ ಆದೇಶಿಸಿತ್ತು.[8] ಎರಡನೇಯದಾಗಿ ಕೊಡಗಿ ಇನಾಂಗಳ ನಿಯಮಗಳು ರೈತರಿಗೆ ಬಹುಶಃ ಅಷ್ಟು ಆಕರ್ಷಕವಾಗಿರಲಿಲ್ಲ. 1799ರ ಮೊದಲು ಕೆರೆಗಳ ವಿಂಗಡನೆ ಈ ರೀತಿ ಇರದೆ, ಅವುಗಳನ್ನು ವಿವಿಧ ಗ್ರಾಮೀಣ ಸಮುದಾಯಗಳು ನೋಡಿಕೊಳ್ಳುತ್ತಿದ್ದವು. ಸಣ್ಣವುಗಳನ್ನು ಒಬ್ಬ ಅಥವಾ ಹೆಚ್ಚಿನ ಜನರು ಇನಾಂಗಳ ಸಹಾಯದಿಂದ ನೋಡಿಕೊಳ್ಳುತ್ತಿದ್ದರು. ರಾಜ್ಯವು ತನ್ನ ನಿಯಮದಂತೆ ಕೆರೆಗಳನ್ನು ತೋಡಿಸುವುದು ಅಥವಾ ದುರಸ್ತಿ ಮಾಡಿಸುವ ಕೆಲಸವನ್ನು ಸಾಧಾರಣವಾಗಿ ಎಂದಿಗೂ ಮಾಡುತ್ತಿರಲಿಲ್ಲ.[9]

ಹೀಗೆ ಕೆರೆಗಳನ್ನು ನಿರ್ದಿಷ್ಟವಾಗಿ ವಿಭಜಿಸಿದ ಮೇಲೆ ಈ ವಿಭಜನೆಗೆ ಮಾನದಂಡವನ್ನು ನಿರ್ಧರಿಸುವ ತೊಡಕನ್ನು ಸರ್ಕಾರವು ಎದುರಿಸಿತು. ಕಾರಣ ರಾಜ್ಯದಲ್ಲಿ ಅನೇಕ ಕೆರೆಗಳಿದ್ದವು. 1871ರಲ್ಲಿ ತಯಾರಿಸಿದ ಅಂಕಿ ಅಂಶಗಳ ಪ್ರಕಾರ ರಾಜ್ಯದ ಎಂಟು ಜಿಲ್ಲೆಗಳಲ್ಲಿ 36,265 ಕೆರೆಗಳಿದ್ದು ಅವುಗಳಲ್ಲಿ ಬತ್ತಿಹೋದ 9,865 ಕೆರೆಗಳನ್ನು ಬಿಟ್ಟು ಮಿಕ್ಕವುಗಳಿಂದ ಸುಮಾರು

30,25,041 ರೂಪಾಯಿಗಳ ಆದಾಯ ಬರುತ್ತಿತ್ತು. ಈ ಕೆರೆಗಳನ್ನು ಅವುಗಳು ನೀರಾವರಿ ಸೌಕರ್ಯ ಒದಗಿಸಿದ್ದ ಜಮೀನಿನ ಆದಾಯದ ಮೌಲ್ಯದ ಮೇಲೆ ವಿಭಜಿಸಲಾಯಿತು (1ನೆಯ ಪಟ್ಟಿ) ನೀರಾವರಿ ಮಾಡುತ್ತಿದ್ದಈ 26,400 ಕೆರೆಗಳನ್ನು ಮೈಸೂರು ಸರ್ಕಾರವು ಸರಿಯಾಗಿ ನೋಡಿಕೊಳ್ಳಲಾಗಲಿಲ್ಲ. ಇದಕ್ಕೆ ಕಾರಣಗಳು ಎರಡು. ಮೊದಲನೇಯದಾಗಿ ಸರ್ಕಾರವು ಅವುಗಳಿಂದ ಬರುವ ಹಣರೂಪದ ಉತ್ಪತ್ತಿಯನ್ನು ಮಾತ್ರ ಪರಿಗಣಿಸುತ್ತಿದ್ದುದು; ಎರಡನೆಯದಾಗಿ 1799ರ ಮೊದಲು ರೈತರು ಅವುಗಳನ್ನು ನೋಡಿ ಕೊಳ್ಳುತ್ತಿದ್ದ ರೀತಿಯಲ್ಲಿ ಮುಂದುವರಿಯಲು ಅವಕಾಶ ವನ್ನು ನೀಡದೇ ಹೋದುದು. ಈ ಕೆರೆಗಳ ಮೇಲ್ವಿ ಚಾರಣೆಗೆ ಉತ್ತಮ ತಾಂತ್ರಿಕ ಗುಣಮಟ್ಟದ ನೈಪುಣ್ಯತೆ ಇರಬೇಕೆಂದೂ, ಅದು ರೈತರಲ್ಲಿ ಇರಲಿಲ್ಲವೆಂದೂ ಅಧಿಕಾರವರ್ಗದವರು ಬಾಲಿಶವಾಗಿ ವಾದಿಸಿದರು.[10] ಇದು ಹುರುಳಿಲ್ಲದ ವಾದ. ಮೈಸೂರಿನ ಕಾಮಗಾರಿ ಇಲಾಖೆ ಅವುಗಳನ್ನು ಗುರುತಿಸುವ ಎಷ್ಟೋ ಕಾಲಕ್ಕೆ ಮೊದಲೇ ರೈತರು ಕೆರೆಗಳನ್ನು ಕಟ್ಟಿ, ನೋಡಿಕೊಳ್ಳುತ್ತಿ ದ್ದರು. ಮೈಸೂರು ಸರ್ಕಾರವು ಈ ಕೆರೆಕಾಮಗಾರಿಗ ಳಿಂದ ತನಗೆ ಅಗುವ ಹೆಚ್ಚುವರಿ ಹಣದ ಉತ್ಪತ್ತಿ ಯನ್ನೇ ಕುರಿತು ಯೋಚಿಸಿದ ಕಾರಣ ಸಹಜವಾಗಿ ತಾನು ಮಾಡಬೇಕಾದ ವೆಚ್ಚ ಮತ್ತು ಅದರಿಂದ ತನಗೆ ದೊರೆಯಬಹುದಾದ ಹೆಚ್ಚುವರಿ ಆದಾಯ ಇವುಗಳ ತ್ತಲೇ ಗಮನಹರಿಸುವಂತೆ ಮಾಡಿತು. ಈ ಕಾಮಗಾರಿ ಗಳು ಜನಜೀವನಕ್ಕೆ ಎಷ್ಟೇಮಟ್ಟಿಗೆಅಗತ್ಯವಾಗಿದ್ದಾಗ್ಯೂ ಅವುಗಳ ನಿರ್ವಹಣೆ ಮತ್ತು ದುರಸ್ತಿಗಳಿಗೆ ಅಧಿಕಾರಿ ಶಾಹಿಯು ಧಾರಾಳವಾಗಿ ಹಣಖರ್ಚುಮಾಡಲು ಸ್ವತಂತ್ರವಾಗಿರಲಿಲ್ಲ. ವೆಚ್ಚ ಮಾಡಿದ ಮೊತ್ತದಲ್ಲಿ ಶೇಕಡಾ ಇಷ್ಟು ಕನಿಷ್ಠ ಆದಾಯವಾದರೂ ವೃದ್ಧಿಯಾ ಗುವುದೇ ಎಂಬುದು ಪ್ರಶ್ನೆಯಾಗಿತ್ತು.[11] ಕಡೆಗೆ ಪ್ರತಿ ತಾಲ್ಲೂಕಿನಲ್ಲಿಯೂ ಕನಿಷ್ಠ 1000 ರೂಪಾಯಿಗಳಷ್ಟಾ ದರೂ ಆದಾಯ ತರುವ ಎರಡು ಅಥವಾ ಮೂರು ಕೆರೆಗಳನ್ನು ಆರಿಸಿ ಅವುಗಳನ್ನು ಸರ್ಕಾರವು ನೋಡಿ ಕೊಳ್ಳುವಂತೆ ಟ್ಯಾಂಕ್‌ಕೋಡಿನಲ್ಲಿ ನಿರ್ಧರಿಸಲಾಯಿತು. ಹೀಗೆ 1878ರ ಟ್ಯಾಂಕ್ ಕೋಡ್ ಪ್ರತಿವರ್ಷ ಗರಿಷ್ಠ 168 ಕೆರೆಗಳನ್ನು ನೋಡಿಕೊಳ್ಳಲು ನಿರ್ಧರಿಸಿತು.[12]

ಸರ್ಕಾರವು ಕೊಡಿಗೆ ಇನಾಂಗಳನ್ನು ಮತ್ತೆ ನೀಡ ಲಾರಂಭಿಸಿದಾಗ ಸುಮಾರು 2319 ಕೆರೆಗಳು ಈ ವ್ಯವಸ್ಥೆಗೆ ಸೇರಿಕೊಂಡವು.[13] ಮಿಕ್ಕವುಗಳನ್ನು ಅವುಗಳ ಅವಶ್ಯಕತೆಗನುಗುಣವಾಗಿ ಹಾಗು ಹಣಸ್ಥಿತಿಯನ್ನನುಸರಿಸಿ ರಾಜ್ಯ ಸರ್ಕಾರವು ದುರಸ್ತಿಮಾಡಿಸಿತು. ಈ ಕಾರ್ಯ 1831ರವರೆಗೆ ದಿವಾನ್‌ಅಥವಾ ರಾಜರ ಅನುಮತಿ ಯಿಂದಲೂ, ಅನಂತರ ಚೀಫ್ ಕಮಿಷನರ ಅನುಮತಿ ಯಿಂದಲು ನಡೆಯುತ್ತಿತ್ತು. ಮೊದಲೇ ತಿಳಿಸಿದಂತೆ ಸಾರ್ವಭೌಮ ಸರ್ಕಾರದ ಆದೇಶವಿದ್ದುದರಿಂದ ಸರ್ಕಾರಕ್ಕೆ ಕೊಡಿಗಿ ಪದ್ಧತಿಯನ್ನು ಮುಂದು ವರಿಸುವುದು ಇಷ್ಟವಿರಲಿಲ್ಲ. ಕೆರೆ ವ್ಯವಸ್ಥೆಯನ್ನು ಕುರಿತ ಆ ಕಾಲದ ವಿಪುಲವಾದ ಪತ್ರವ್ಯವಹಾರಗಳು ಕೊಡಿ ಗಿದಾರರು ಕೆರೆಗಳನ್ನು ದುರಸ್ತಿಯಲ್ಲಿರಿಸುವ ತಮ್ಮ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸುತ್ತಿಲ್ಲ ಎಂಬ ಆರೋಪಗಳನ್ನು ಅವರ ಮೇಲೆ ಹೊರಿಸುತ್ತವೆ. ಆದರೆ ಹಿಂದೆಲ್ಲಾ ಆ ರೀತಿಯ ತೊಂದರೆ ಇಲ್ಲದಿದ್ದು ಈಗ ಹೊಸ ಆಡಳಿತ ಪದ್ಧತಿಯನ್ನು ಆರಂಭಿಸಿದ ಮೇಲೆ ಕೊಡಿಗಿದಾರರು ತಮ್ಮ ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸದಿದ್ದುದಕ್ಕೆ ಕಾರಣವೇನೆಂಬ ಪ್ರಶ್ನೆಯನ್ನು ಯಾರು ಕೇಳಲಿಲ್ಲ. 1799 ಹಾಗು ಅನಂತರದ ಕಾಲ ಗಳ ನಡುವೆ ಇರುವ ಪ್ರಮುಖ ವ್ಯತ್ಯಾಸ ಆಡಳಿತ ವ್ಯವಸ್ಥೆಯಲ್ಲಿ. ಪ್ರಾಚೀನ ಹಾಗು ಮಧ್ಯಕಾಲಗಳಲ್ಲಿ ವಿವಿಧ ರೀತಿಯ ಕೆರೆಗಳು ಹಾಗೂ ಅವುಗಳ ದುರಸ್ತಿ ಯನ್ನು ಜನರೇ ನೋಡಿಕೊಳ್ಳುತ್ತಿದ್ದರು. ಆ ಕಾಲಗಳ 'ವಿಕೇಂದ್ರೀಕೃತ ವ್ಯವಸ್ಥೆ' ತಾನೇ ಸ್ವತಃ ನಿರ್ವಹಿಸುವ ಯೋಜನೆಯೇ ಇರಲಿಲ್ಲ. ಎಷ್ಟೋ ವಿಷಯಗಳನ್ನು ಇಂತಹ ಕಾಮಗಾರಿಗಳನ್ನು ಅನೂಚಾನವಾಗಿ ನಡೆದು ಬರುತ್ತಿದ್ದ ರೀತಿ ರಿವಾಜು ಗಳಿಗೇ ಬಿಡಲಾಗಿತ್ತು. ಸ್ವಾಭಾವಿಕವಾಗಿಯೇ ಕಾಮಗಾರಿ ಕೆಲಸಗಳ ಮೇಲಿನ ವೆಚ್ಚವನ್ನು ರಾಜ್ಯದ ಬೊಕ್ಕಸದಿಂದ ತುಂಬಿಕೊಡುತ್ತಿರ ಲಿಲ್ಲ. ಕೆಲವು ಸಲ ರಾಜನೇ ಕೆರೆಯನ್ನು ಕಟ್ಟಿಸಿದರೂ ಅಥವಾ ಕೆರೆಯ ನಿರ್ಮಾಣಕ್ಕೆ ಭೂಮಿಯನ್ನು ನೀಡಿ ದರೂ ಅವುಗಳನ್ನು ತನ್ನ ಸ್ವಂತ ಹಣದಿಂದಲೇ ನಿರ್ವಹಿಸುತ್ತಿದ್ದನು. 1799ರಲ್ಲಿ ಜಾರಿಗೆ ಬಂದ ಅಧಿ ಕಾರಶಾಹಿವ್ಯವಸ್ಥೆಯು ಆ ಹಿಂದೆ ಮೈಸೂರಿನಲ್ಲಿ ಅಸ್ತಿ ತ್ವದಲ್ಲಿದ್ದ ಚೈತನ್ಯಪೂರ್ಣ ವಿಕೇಂದ್ರೀಕೃತ ಆಡಳಿತ ಪದ್ಧತಿಯನ್ನು ನಾಶಮಾಡ ಲಾರಂಭಿಸಿ ಅದರ ಸ್ಥಾನ ದಲ್ಲಿ ವಿಕೃತವಾದ ಕೇಂದ್ರೀಕೃತ ಅಧಿಕಾರ ವ್ಯವಸ್ಥೆ ಯನ್ನು ನೆಲೆಗೊಳಿಸತೊಡಗಿತು. ಕೆರೆ, ಇನಾಂಗಳು ಇವೆಲ್ಲ ಅಧಿಕಾರದ ದ್ಯೋತಕಗಳು ವಸಾಹತುಶಾಹಿಯ ಮುಷ್ಟಿಯಲ್ಲಿ, ಅಧಿಕಾರವೆಲ್ಲ ಪ್ರಭುತ್ವದ ಹತೋಟಿ ಯಲ್ಲಿ, ಮುಖ್ಯವಾಗಿ ಪ್ರಭುತ್ವದ ಉತ್ತುಂಗ ಶಿಖರ ದಲ್ಲಿ ನೆಲೆಸಿರಬೇಕು. ಹೀಗೆ 1799ರ ನಂತರ ಆಡಳಿ

ತವು ತನ್ನ ಚಲನಾತ್ಮಕತೆಯನ್ನು ಕಳೆದುಕೊಂಡು ಜಡಸ್ಥಿತಿಗೆ ಬಂದಿತು. ಆಗ ಅಸ್ತಿತ್ವದಲ್ಲಿದ್ದ ಕೆರೆಗಳು ಸುಮಾರು 90 ನಾನಾ ರೀತಿಯ ಇನಾಂಗಳು, ಕೊಡುಗೆಗಳು ಮತ್ತು ಎಲ್ಲ ಸಾರ್ವಜನಿಕ ಸಂಸ್ಥೆಗಳು, ಕಂಪನಿಯ ಅಧೀನಕ್ಕೆ ಬಂದವು. ಅವುಗಳನ್ನು ಅಧಿಕಾರ ನಿರ್ವಹಣೆಯ ವಿಷಯವನ್ನಾಗಿ ಪರಿಗಣಿಸಲಾಗಿತ್ತು. ಹಿಂದಿನ ವ್ಯವಸ್ಥೆಯನ್ನು ಮುರಿಯಬೇಕಾಗಿತ್ತು ಮತ್ತು ಮುರಿಯಲಾಯಿತು. ಹಳೆಯ ಅಧಿಕಾರ ವ್ಯವಸ್ಥೆಯನ್ನು ಮುರಿಯುವ ಪ್ರಕ್ರಿಯೆಯನ್ನು ಪ್ರಾರಂಭಿಸಿದ ನಂತರ, ಅಂದರೆ 1799 ರ ನಂತರ ಸರ್ಕಾರವು 2,319 ಕೊಡಿಗಿಗಳನ್ನು ಜಾರಿಗೆ ತಂದಿತು. ಆದರೆ ಅಧಿಕಾರ ವ್ಯವಸ್ಥೆಯ ತಳಪಾಯವನ್ನೇ ಕಿತ್ತುಹಾಕಿದ್ದ ಕಾರಣಈ ಕೊಡಿಗಿಗಳು ಹಿಂದಿನಂತೆ ಸಮರ್ಪಕವಾಗಿ ತಮ್ಮ ಕಾರ್ಯವನ್ನು ನಿರ್ವಹಿಸಬೇಕು ಎಂದು ನಿರೀಕ್ಷಿಸುವಂತಿರಲಿಲ್ಲ.

1831 ರ ನಂತರ ಮೈಸೂರಿನ ಕಮೀಷನರುಗಳು ಇಂತಹ ಅನೇಕ ಸಣ್ಣ ಕೆರೆಗಳನ್ನು ಒಂದೇ ಸಮನಾಗಿ ದುರಸ್ತಿಮಾಡುವುದು, ನೋಡಿಕೊಳ್ಳುವುದೂ ಅಸಾಧ್ಯವೆಂದು ಪರಿಗಣಿಸಿದರು. ಅಧಿಕಾರಿಶಾಹಿಯು 1863 ರಲ್ಲಿ ಬಾಲಿಶವಾದ ನಿಯಮಗಳನ್ನು ಹೊರಡಿಸಿ ಅದನ್ನು 'ಕೆರೆಗಳ ಮೇಲ್ವಿಚಾರಣೆಯಲ್ಲಿ ರೈತರ ಕರ್ತವ್ಯಗಳು' ಎಂದು ಕರೆಯಿತು. ತಮ್ಮ ಕರ್ತವ್ಯಗಳಲ್ಲಿ ಚ್ಯುತರಾದವರಿಗೆ ನೀಡಬಹುದಾದ ದಂಡನೆಗಳನ್ನು ಕುರಿತು ಸಹ ನಿಯಮಾವಳಿಯನ್ನು ರೂಪಿಸಿತು. ಆದರೆ ಬಹು ಶೀಘ್ರದಲ್ಲಿಯೇ ಸಹಜವಾಗಿ ಈ ಕ್ರಮಗಳು ಪರಿಣಾಮಕಾರಿಯಾಗಿಲ್ಲ ಎಂಬುದು ಸರ್ಕಾರಕ್ಕೆ ತಿಳಿದು ಬಂದಿತು. ಅಲ್ಲದೇ ರೈತರು ಉದ್ದೇಶಪೂರ್ವಕವಾಗಿಯೇ ಹಲವು ಕೆರೆಗಳ ದಂಡೆಗಳನ್ನುನಾಶಮಾಡುತ್ತಿದ್ದುದೂ ಗಮನಕ್ಕೆ ಬಂತು. ರೈತರು ಅವರಿಗೆ ಅತ್ಯವಶ್ಯಕವಾದ ಈ ಕಾಮಗಾರಿಗಳನ್ನು ಏಕೆ ನಾಶಮಾಡುತ್ತಿದ್ದಾರೆ ಮತ್ತು ಈ ಕೆರೆಗಳ ದುರಸ್ತಿಗಾಗಿ ಅವರ ಮೇಲೆ ಹೇರಿದ ನಿಯಮಗಳನ್ನು ಏಕೆಅನುಸರಿಸುತ್ತಿಲ್ಲವೆಂಬುದನ್ನು ತಿಳಿಯುವಲ್ಲಿ ರಾಜ್ಯ ಸರ್ಕಾರವು ವಿಫಲವಾಯಿತು. ಹೊಸ ರಾಜ್ಯವ್ಯವಸ್ಥೆಯು ರೈತರ ಸಾಂಪ್ರದಾಯಿಕ ಅಧಿಕಾರ ಹಾಗೂ ಹಕ್ಕುಗಳನ್ನು ಕಸಿದುಕೊಂಡಿದ್ದು ಈ ಪರಸ್ಥಿತಿಗೆ ಕಾರಣವಾಗಿತ್ತು.

ಈ ಪರಿಸ್ಥಿತಿಯನ್ನು ಸುಧಾರಿಸಲು ಮೈಸೂರು ಗ್ಯಾಂಕ್‌ಕೋಟ್ ಇನ್ನೂ ಕಠಿಣಕರವಾದ ನಿಯಮಗಳನ್ನು ಜಾರಿಗೆ ತಂದಿತು. ದುರಸ್ತಿಗಾಗಿ ಆರಿಸದಿದ್ದ ಕೆರೆಗಳನ್ನು 'ಹಳ್ಳಿಯ ಕೆರೆಗಳೆಂದು' ವಿವರಿಸಿದ ಈ ಕೋಡ್ ಹಳ್ಳಿಗಳ ಕಂದಾಯ ಅಧಿಕಾರಿಗಳು ಪ್ರತಿಯೊಂದು ಹಳ್ಳಿಗೂ ಸಾಲುಪಟ್ಟಿಗಳನ್ನು ಇಟ್ಟುಕೊಳ್ಳುವಂತೆ ಆದೇಶಿಸಿತು. ಇದು ಪ್ರತಿಯೊಬ್ಬ ರೈತನೂ ತಾನು ನೀರು ಪಡೆಯುತ್ತಿದ್ದ ಕೆರೆಯ ದುರಸ್ತಿಯಲ್ಲಿ ನಿರ್ವಹಿಸಬೇಕಾಗಿದ್ದ ಪಾಲಿನ ದಾಖಲೆಯಾಗಿತ್ತು. ಕೆರೆಯ ದಡದಲ್ಲಿ ಗುರುತಿನ ಕಲ್ಲುಗಳನ್ನಿಟ್ಟು ಪ್ರತಿಯೊಬ್ಬ ರೈತನ ಪಾಲನ್ನು ಗುರುತಿಸಲು ಅವುಗಳನ್ನು ದಾಖಲು ಮಾಡಿಕೊಳ್ಳಬೇಕಿತ್ತು. ಪಾಲುಪಟ್ಟಿಗನುಗುಣವಾಗಿ ರೈತರು ತಮ್ಮ ಪಾಲಿನ ಕೆಲಸವನ್ನು ನಿರ್ವಹಿಸದಿದ್ದಲ್ಲಿ ಅವರನ್ನು ಶಿಕ್ಷಿಸಬಹುದಿತ್ತು. ಇಂತಹ ಒಂದು ಯೋಜನೆಯನ್ನು ಆಡಳಿತಶಾಹಿವ್ಯವಸ್ಥೆಯು ಮಾತ್ರ ಕಲ್ಪಿಸಿಕೊಳ್ಳಬಲ್ಲದು. ಹೀಗೆ ರೂಪಿಸಿದ ಸಂಹಿತೆಯಲ್ಲಿಯೇ ಅದರವಿಫಲತೆಯ ಅಂಶಗಳು ಅಡಗಿರುವುದನ್ನು ಸ್ಪಷ್ಟವಾಗಿ ಕಾಣಬಹುದು.

1867ರವರೆಗಿನ ಕಡತಗಳಲ್ಲಿ ಮೈಸೂರು ರಾಜ್ಯದಲ್ಲಿ ಕೆರೆಗಳ ದುರಸ್ತಿಯ ಬಗ್ಗೆ ಯಾವುದೇ ರೀತಿಯ ಚರ್ಚೆಗಳೂ ಕಂಡುಬರುವುದಿಲ್ಲ. ಆ ವರ್ಷದಲ್ಲಿ ಭಾರತ ಸರ್ಕಾರದ ಒಂದು ಸುತ್ತೋಲೆಗೆ ಉತ್ತರಿಸುತ್ತಾ ಆರ್.ಎಚ್.ಸ್ಯಾಂಕಿಯವರು ಮೈಸೂರು ರಾಜ್ಯದ ಕೆರೆಗಳ ವ್ಯವಸ್ಥೆಯ ಬಗ್ಗೆ ಮೊದಲ ಸಮಗ್ರ ವರದಿಯನ್ನು ಮಂಡಿಸಿದರು. ಅವುಗಳ ಉತ್ತಮ ನಿರ್ವಹಣೆಗೆ ಒಂದು ಮಾರ್ಗವನ್ನು ಸೂಚಿಸಿದರು. ಇದರಿಂದ ಒಂದು ದೊಡ್ಡ ಅರ್ಥಹೀನ ಚರ್ಚೆಯು ಆರಂಭವಾಯಿತು. ಅದು ಅರ್ಥಹೀನವಾಗಿತ್ತೆಂಬುದನ್ನು ಸುಲಭವಾಗಿ ನಿರೂಪಿಬಹುದು. ವಿವಾದಕ್ಕೊಳಗಾದ ಒಂದು ಪ್ರಮುಖ ಸಮಸ್ಯೆಯೆಂದರೆ ಕೆರೆಯನ್ನು ಕಾಮಗಾರಿ ಇಲಾಖೆ ದುರಸ್ತಿ ಮಾಡಬೇಕೇ, ಅಥವಾ ಕಂದಾಯ ಇಲಾಖೆ ದುರಸ್ತಿಮಾಡಬೇಕೆ ಎಂಬುದಾಗಿತ್ತು. ವಿವಾದಕ್ಕೊಳಗಾದ ಇತರ ಮುಖ್ಯ ಅಂಶಗಳೆಂದರೆ ಇಲಾಖೆಯ ವ್ಯವಸ್ಥೆ, ಕೆಲಸಗಾರರ ವೇತನ, ಅವರ ಸಂಖ್ಯೆ ಮತ್ತು ಅವರು ದೇಶೀಯರಾಗಿರಬೇಕೆ ಅಥವಾ ಯುರೋಪಿಯನ್ನರಾಗಿರಬೇಕೆ ಮತ್ತು ದುರಸ್ತಿಗೆ ಖರ್ಚು ಮಾಡಬೇಕಾದ ಹಣ ಇವೇ ಮುಂತಾದುವು. ಈ ರೀತಿಯಲ್ಲಿ ವ್ಯರ್ಥವಾದ ಪತ್ರವ್ಯವಹಾರಗಳು ಜರುಗುತ್ತಿರುವಾಗ ಕೆರೆಗಳು ಅವನತಿಯತ್ತ ಸಾಗಿದವು. ದಾಖಲೆಗಳ ಪ್ರಕಾರ 9,865 ಕೆರೆಗಳನ್ನು ನಿಷ್ಪ್ರಯೋಜನ ಎಂದು ಗುರುತಿಸಿಲಾಗಿದ್ದರು ಆ ಕೆರೆಗಳಿಂದ ನೀರಾವರಿ ಸೌಲಭ್ಯ ಪಡೆಯುಬಹುದಾಗಿದ್ದ ಭೂಮಿಯಿಂದ ದೊರೆಯಬಹುದಾಗಿದ್ದ ಕಂದಾಯದ

ಮೊತ್ತವನ್ನು ಕುರಿತು ಏನೊಂದೂ ಪ್ರಸ್ತಾಪವಿಲ್ಲದಿರುವುದು ಮತ್ತು ಅಂತಹ ಕೆರೆಗಳನ್ನು ದುರಸ್ತಿಮಾಡಲು ಯಾವುದೇ ಕ್ರಮವನ್ನು ಕೈಗೊಳ್ಳದಿದ್ದುದು ಮಹತ್ವದ ಅಂಶ ವಾಗಿದ್ದಿತು.

ಈ ದೀರ್ಘ ಚರ್ಚೆ ಮುಗಿಯವ ವೇಳೆಗೆ 1870ರಲ್ಲಿ ಭಾತರ ಸರ್ಕಾರವು ಒಂದು ಸುತ್ತೋಲೆ ಯನ್ನು ಹೊರಡಿಸಿ ರೈಲ್ವೆ ನಿರ್ಮಾಣದ ಕಾರ್ಯವು ಪ್ರಾರಂಭವಾಗಬೇಕೆಂದು ಮತ್ತು ಆ ಕಾರ್ಯಕ್ಕೆ ಕೆರೆ ಕಾಮಗಾರಿಗಳಿಗಿಂತ ಹೆಚ್ಚಿನ ಪ್ರಾಶಸ್ತ್ಯ ನೀಡಬೇಕೆಂದು ಸೂಚಿಸಿತು. ಆಗ ಮೈಸೂರಿನ ಕಮೀಷನರ್ ಆಗಿದ್ದರಿ ಚರ್ಡ್‌ಮೀಡ್ ಈ ವಾದವನ್ನು ಒಪ್ಪಿಕೊಂಡರು. 1878ರಲ್ಲಿ ಮೈಸೂರಿಗೆ ರೈಲ್ವೆ ಬಂತು. ಕೆರೆಗಳ ದುರ ಸ್ತಿಗಾಗಿ ಅವಶ್ಯಕವಾದ ಹಣದ ವಿಚಾರದಲ್ಲಿ ಭಾತರ ಸರ್ಕಾರವು ಅಂತಹ ವೆಚ್ಚ ನಿಜವಾಗಿಯೂ ಹೆಚ್ಚಿನ ಆದಾಯವನ್ನು ತರವುದೇ ಎಂದು ತಿಳಿಯಲಿಚ್ಛಿಸಿತಾ ದರೂ ರೈಲ್ವೇ ನಿರ್ಮಾಣದ ವಿಷಯದಲ್ಲಿ ಈಪ್ರಶ್ನೆಯನ್ನೇ ಎತ್ತಲಿಲ್ಲ. 1878ರಿಂದ ಕಡೆಯ ಪಕ್ಷ 1910ರವರೆ ಗಾದರೂ ಮೈಸೂರಿನಲ್ಲಿ ರೈಲ್ವೆಗಳು ನಷ್ಟದಲ್ಲಿಯೇ ನಡೆದವು. ಕೆರೆಗಳು ಮತ್ತು ರೈಲ್ವೇ ಇವೆರಡು ಅಧಿಕಾರ ಚಲಾಯಿಸುವ ಬಲವನ್ನು ನೀಡುತ್ತವೆ. ಆದರೆ ಕೆರೆಗಳ ಸಂಬಂಧವಾಗಿ ಇಂತಹ ಬಲ ಜನರ ಕೈಯಲ್ಲಿದ್ದುದ ರಿಂದ ಅದು ವಸಾಹತುಶಾಹಿ ಸರ್ಕಾರಕ್ಕೆ ಅನಿಷ್ಟವಾ ಯಿತು. ರೈಲ್ವೆಗಳ ಸಂಬಂಧವಾಗಿ ಅಂತಹ ಬಲ ಪ್ರಭುತ್ವದ ಹತೋಟಿಯಲ್ಲಿಯೇ ಉಳಿಯುವಂತಹದಾ ದುದರಿಂದ ಅವುಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಹಾಗು ಆದ್ಯತೆ ದೊರೆಯಿತು.

: 1ನೆಯ ಪಟ್ಟಿ :

ಅಚ್ಚುಕಟ್ಟು ಪ್ರದೇಶಗಳಿಂದ ಹುಟ್ಟುವ ಭೂಕಂ ದಾಯದ ಆಧಾರದ ಮೇಲೆ ಕೆರೆಗಳ ಜಿಲ್ಲಾವಾರು ವಿಂಗಡನೆ.

ಭೂಕಂದಾಯ (ರೂಪಾಯಿಗಳಲ್ಲಿ)

| ಜಿಲ್ಲೆಗಳು | -0- | 0-500 | 50-100 | 100-500 | 500-1000 | 1000-2000 | 2000-3000 | 3000-4000 | 4000-5000 | and above |
|---|---|---|---|---|---|---|---|---|---|---|
| ಬೆಂಗಳೂರು | 254 | 862 | 407 | 630 | 84 | 31 | 5 | 2 | 2 | - |
| ಕೋಲಾರ | 1427 | 2028 | 783 | 886 | 108 | 33 | 7 | 7 | 3 | - |
| ತುಮಕೂರು | 1096 | 285 | 175 | 389 | 94 | 39 | 20 | 6 | 7 | - |
| ಮೈಸೂರು | 36 | 874 | 219 | 280 | 45 | 14 | 1 | 1 | 4 | - |
| ಹಾಸನ | 566 | 3903 | 910 | 847 | 68 | 21 | 7 | 2 | nil | - |
| ಶಿವಮೊಗ್ಗ | 931 | 3871 | 1418 | 1855 | 175 | 49 | 3 | 1 | 1 | - |
| ಕಡೂರು | 4452 | 2910 | 640 | 635 | 55 | 34 | 7 | nil | 5 | - |
| ಚಿತ್ರದುರ್ಗ | 1103 | 268 | 93 | 226 | 53 | 29 | 7 | 3 | 3 | - |
| ಒಟ್ಟು | 9865 | 15001 | 4645 | 5718 | 682 | 250 | 57 | 22 | 25 | - |

ಎಲ್ಲಾ ವರ್ಗಗಳ ಒಟ್ಟು ಸಂಖ್ಯೆ : 36265.

ಒಟ್ಟು ಆದಾಯ : ರೂ. 3025041

ಆಧಾರ : ರೆಕಾರ್ಡ್ಸ್ ಪುಟ.108 (ಬಿ. ಪಟ್ಟಿ) [W.R.ಜಾನ್ಸನ್]

: 2ನೆಯ ಪಟ್ಟಿ :

ಮೈಸೂರು ಸ್ಟೇಟ್ ರೈಲ್ವೆಯಲ್ಲಿ ಹೂಡಿದ ಬಂಡವಾಳಕ್ಕೆ ಹೋಲಿಸಿದಂತೆ ಶೇಕಡಾವಾರು ಖೋತಾ ನಷ್ಟ.

| ವರ್ಷಗಳು | ಹೂಡಿದ ಬಂಡವಾಳ(ರೂ) | ಶೇಕಡಾವಾರು ಖೋತಾ/ನಷ್ಟ |
|---|---|---|
| 1881 | 36,00,827 | 5.67 |
| 1882 | 42,90,214 | 5.93 |
| 1883 | 43,08,795 | 7.22 |
| 1884 | 62,64,640 | 6.96 |
| 1885 | -ಅಂಕಿ ಅಂಶಗಳ ಮಾಹಿತಿ ದೊರೆತಿಲ್ಲ- | |
| 1886 | 71,35,112 | 1.47 |
| 1887 | 91,36,438 | 2.47 |
| 1888 | 125,76,692 | 2.84 |
| 1889 | 144,24,093 | 2.88 |
| 1890 | 147,11,610 | [illegible].76 |
| 1891 | 150,76,285 | 2.15 |
| 1892 | 146,36,205 | 2.71 |
| 1893 | 146,42,217 | 1.80 |
| 1894 | 147,60,296 | 3.25 |
| 1895 | 149,22,452 | 2.67 |
| 1896 | 151,08,257 | 20.6 |
| 1897 | 151,99,757 | 1.16 |
| 1898 | 155,07,319 | 2.75 |
| 1899 | 156,75,416 | 3.02 |
| 1900 | 158,70,510 | 2.30 |
| | | 81.07 |

ಸರಾಸರಿ ಖೋತಾ/ನಷ್ಟ 4.26%

(ಆಧಾರ :- ಮೈಸೂರು ವಾರ್ಷಿಕ ಆಡಳಿತದ ವರದಿಗಳು 1881-1900.)

1) "A Mysorean", The Fifty Years of British Administration in Mysore, (London : Longmans Green and Co., 1874)
2) Karnataka Prakasike, 18.3.1880 (Gokhale Institute of Public Affairs, Bangalore)
3) Memorandum of Instructions to Col. Close, 4th September 1799, paras 10 & 13(Karnataka State Archives)
4) Gopal, M.H., The Finances of the Mysore State, 1799-1831, (Bombay : Orient Longmans, 1960) P.22.
5) Wilks Mark, Report on the Interior Administration of Mysore, No.3, Appendix to the Report, P.78.
6) No.3828/507 Civil Works Agricultural, Major R.A.Sankey to Secretary to the Commissioner of the territories of H.H. the Rajah of Mysore, 19.11.1866, Records Connected with the Tank system in Mysore (hereinafter cited as Records) RP.2-25, Para 4 (Karnataka State Archives).
7) Records, P.56.
8) Memorandum of Instruction, Op.Cit., Para 20.
9) No. Gen 6689/Est. 153, 1867-68, Chief Commissioner of Mysore to Secretary to Government of India, PWD, 27.2.1868, para 13 and No.Gen 3795/Est. 101, 1868-69, 29.9.1868, same to same P.67, Records.

10) No.561-3II, Officiating Secretary to Government of India, PWD to Chief Commissioner of Mysore, 2.10.1871, P.202, Records.
11) No.Gen 3795/Est 101, 1868-69, Chief Commissioner of Mysore to Secretary, Government of India, PWD, P.67, Records.
12) Records, P.226.
13) Memo of Points Requiring attention in the Maintenance of Civil, Works, Selections from the Records the Mysore Government, No.2, papers Relating to Enfranchisement of Kodigi Inams (Bangalore:Government Press, 1911) (hereinafter cited as Selections).
14) No.129 I, Government of India, PWD, 12.3.70, Records and No.68, 5.8.1869, Selections.
15) Burton Stein, in Peasant, State, and Society in Medieval South India, (NewDelhi:Oxford University Press, 1979).
16) Records, P.51.
17) Ibid. P.70.
18) DraftTank code, Chapter II, Records.
19) Ibid, RP.225.
20) No.143 and 67 I, 4.3.1871, Records.
21) Circular No.48, PWD, Government of India, 26.3.1868 and 67 I 4.3.1871, Records.
22) Records P.109.



ಕುರುಬರ ಕೇರಿಯ ಅರಸಿನ ಮಠದ ಈಶ್ವರ ಲಿಂಗ ಮತ್ತು ಗರ್ಭಗೃಹ



ಹರಪನ ಹಳ್ಳಿಯ ಕುರುಬರ ಕೇರಿಯ ಅರಸಿನ ಮಠದಲ್ಲಿ ಕಾಣುವ ಒಂದು ಖಾಲಿ ಗರ್ಭಗೃಹ (ದೇವರಿಲ್ಲದ).



ಹರಪನಹಳ್ಳಿಯ ಕುರುಬರ ಕೇರಿಯ ಅರಸಿನ ಮಠದ ಕಂಬಗಳು



ಹರಪನಹಳ್ಳಿಯ ಕುರುಬರ ಕೇರಿಯ ಅರಸಿನ ಮಠದ ಕಂಬಗಳ. ಉಬ್ಬು ಚಿತ್ರಗಳು

ಆರಮೇರಿ ಗದ್ದುಗೆ ಮನೆ ಮತ್ತು ಮಠ





ಶ್ರೀರಂಗನ ಗುಡಿಯ ನೆರೆಯಲ್ಲಿರುವ ಗುತ್ತಿಮಠ ಮತ್ತು ಮಾದಾಪುರ ಮಠ





ಕೆಳದಿಯ ಕಿರಿಯ ಬಸಪ್ಪನಾಯಕ ಕಟ್ಟಿಸಿದನೆನ್ನಲಾದ
ಸೋಮವಾರಪೇಟೆ ವಿರಕ್ತಮಠ (ನಗರೂರು ಮಠ) ಮತ್ತು ಅಬ್ಬಿಮಠ





(ತೇಜೂರು ಮಾಯಿಗೌಡನ ಹಳ್ಳಿಯ ರಾಜಾಪ್ಪನ ಮಠ ಮತ್ತು
ದೊಡ್ಡಕೊಟ್ಲೆ ಊರು ಮಠ





ಕೊಡಗಿನ ಪ್ರಪ್ರಥಮ ಮಠವೆನ್ನಲಾದ ದೊಡ್ಡಕೊಡ್ಲಿ ಕಲ್ಲುಮಠ ಮತ್ತು ಗದ್ದುಗೆ (ನಿರಂಜನಪೀಠ)



ಶಿವಪುರ ಗುಂಡ್ಲುಪೇಟೆ ತಾ॥



ನಾಗಲಾಪುರದಲ್ಲಿ ದೊರೆತ ನೂತನ ಶಿಲಾಯುಗದ ಆಯುಧಗಳು



ವೈ.ಎನ್ ಹಳ್ಳಿಯಲ್ಲಿ ದೊರೆತ ನೂತನ ಶಿಲಾ ಯುಗದ ಅವಶೇಷಗಳು



ರಾಚಮಾರನಹಳ್ಳಿಯಲ್ಲಿ ದೊರೆತ ಚರಿತ್ರೆಯ ಆರಂಭದ ಕಾಲದ
ಮಡಕೆ ಚೂರುಗಳು



ರಾಚಮಾರನಹಳ್ಳಿಯಲ್ಲಿ ದೊರೆತ ಚರಿತ್ರೆಯ ಆರಂಭದ ಕಾಲದ
ಮಡಕೆ ಚೂರುಗಳು



ಹಾನಗಲ್ಲ ಕದಂಬ ಮಾವುಲಿ ದೇವನ
ವಿಷಯವನ್ನು ಹೇಳುವ ಬೆಳ್ಳಟ್ಟಿ ಶಿಲಾಶಾಸನ
ಸಿದ್ಧಾಪುರ ತಾಲೂಕು, ಉತ್ತರ ಕನ್ನಡ ಜಿಲ್ಲೆ



ನರಸಿಂಹನ ಮೂರ್ತಿ, ಮುಗ್ದೂರು, ಸಿದ್ಧಾಪುರ
ಉತ್ತರ ಕನ್ನಡ ಜಿಲ್ಲೆ



ಹೊಗೆಕುಣಿ, ಶಿರಳಗಿ, ಸಿದ್ಧಾಪುರ ತಾಲೂಕು
ಉತ್ತರ ಕನ್ನಡ ಜಿಲ್ಲೆ



ನಿರಗುಡಿಯ ಶಿವಾಲಯ, ಸಿದ್ಧಾಪುರ,
ಕನ್ನಡ ಜಿಲ್ಲೆ





ಡಂಬಳದಲ್ಲಿ ಬೌದ್ಧಾವಶೇಷಗಳ ಶೋಧನೆ





ಗಜಲಕ್ಷ್ಮಿ, ನಂಜನಗೂಡು



ಹಾನುಗಲ್–ಗಣಪತಿದೇವಾಲಯ



ಹಾನುಗಲ್ ಗಣಪತಿದೇವಾಲಯ ಶಿಖರ

ಚಿತ್ರದುರ್ಗ ಜಿಲ್ಲೆಯ – ತವಂದಿ ಗ್ರಾಮದಲ್ಲಿ ದೊರೆತ – ಒಂದು ವಿಶಿಷ್ಟ ವೀರಹಾಸ್ತಿ ಶಿಲ್ಪ



ಬನ್ನಿಕೊಪ್ಪ – ಶ್ರೀರಾಮ





ಪಂಚಲಿಂಗೇಶ್ವರ ಗವಿಯ ಶಿವಲಿಂಗದ ನೇರ
ಮತ್ತು ಪಾರ್ಶ್ವ ನೋಟ







ಮಯೂರವರ್ಮನ ಶಾಸನದ ಬಂಡೆಗೆ
ಒರಗಿಸಿರುವ ಶಿವಲಿಂಗದ ಮೂರು ಮುಖಗಳು

ವೇಮಗಲ್ ಸೋಮಶೇಖರ್.

# ೧೮೮೮ರಲ್ಲಿ ನಡೆದ ಪ್ರಥಮ ಮೈಸೂರು (ದಸರಾ) ವಸ್ತು ಪ್ರದರ್ಶನದಲ್ಲಿ ಚಿತ್ರದುರ್ಗ ಜಿಲ್ಲೆಯ ಪಾತ್ರ

೧೮೮೮ರಲ್ಲಿ ಮೈಸೂರು ಸಂಸ್ಥಾನದಲ್ಲಿ ಪಪ್ರಥಮವಾಗಿ ವಸ್ತು ಪ್ರದರ್ಶನವು ಅಕ್ಟೋಬರ್ ರಿಂದ ಒಂದು ವಾರದ ಕಾಲ ಮೈಸೂರು ನಗರದಲ್ಲಿ ನಡೆಯಿತು. ಈ ಪ್ರದರ್ಶನಕ್ಕೆ ಪೂರ್ವಭಾವಿಯಾಗಿ ೩೪ ಜನರುಳ್ಳ ಒಂದು ಮುಖ್ಯ ಸಮಿತಿಯನ್ನು ಹಾಗೂ ಪ್ರತಿ ಜಿಲ್ಲೆಯಿಂದ ಸುಮಾರು ೧೫ ಜನರುಳ್ಳ ಜಿಲ್ಲಾ ಸಮಿತಿಗಳನ್ನು ರಚಿಸಲಾಯಿತು. ಈ ಸಮಿತಿಯಲ್ಲಿ ಆಯಾ ಜಿಲ್ಲೆಯ ವಿವಿಧ ಇಲಾಖೆಯ ಮುಖ್ಯಸ್ಥರು, ಹಿರಿಯ ಉದ್ಯಮಿಗಳು ಜಮೀನ್ದಾರುಗಳು ಮುಂತಾದ ಪ್ರಮುಖ ವ್ಯಕ್ತಿಗಳನ್ನು ಸದಸ್ಯರನ್ನಾಗಿ ನೇಮಿಸಿದರು. ಈ ರೀತಿಯಾಗಿ ಚಿತ್ರದುರ್ಗ ಜಿಲ್ಲೆಯಿಂದ ೧೪ ಸದಸ್ಯರುಳ್ಳ ಸಮಿತಿಯನ್ನು ರಚಿಸಿದರು.ಆಗ್ಗೆ ಚಿತ್ರದುರ್ಗ ಜಿಲ್ಲೆಯ ಡೆಪ್ಯುಟಿ ಕಮಿಷನರ್ ಆಗಿದ್ದಂಥ ಬಿ.ಆರ್. ವೆಂಕಟ ವರದ ಅಯ್ಯಂಗಾರ್ ಅವರನ್ನು ಅಧ್ಯಕ್ಷರನ್ನಾಗಿಯೂ ಅಸಿಸ್ಟೆಂಟ್ ಕಮಿಷನರ್ ಆಗಿದ್ದಂತ ಜಿ. ರಘುನಾಥರಾವ್ ಅವರನ್ನು ಉಪಾಧ್ಯಕ್ಷರನ್ನಾಗಿಯೂ ನೇಮಿಸಲಾಯಿತು.

ಸದಸ್ಯರುಗಳು.

(೧) ಮೆರ್ವಿನ್ ಸ್ಮಿತ್ (ಭೂಗರ್ಭ ಶಾಸ್ತ್ರಜ್ಞರು) (೨) ಎ. ರಂಗರಾವ್. (೩) ಎಮ್. ಎ. ತಿರುನಾರಾಯಣಾಚಾರ್. (೪) ವೈದ್ಯನಾಥ ಶಾಸ್ತ್ರಿ (ಅಸಿಸ್ಟೆಂಟ್ ಸರ್ಜನ್) (೫) ಎಮ್.ಬಿ. ಶ್ರೀನಿವಾಸಅಯ್ಯಂಗಾರ್. (೬) ಎಮ್. ಅನಂತ ಶೆಟ್ಟಿ. (೭) ಮಹಮದ್ ಇಸಾಕ್ ಸಾಹೇಬ್ (೮) ರಂಗಸ್ವಾಮಿ ಅಯ್ಯಂಗಾರ್ (೯) ಜಿ.ಸಿ. ಬಾಲ್ (೧೦) ರಾಘವೇಂದ್ರರಾವ್ (ಬ್ಯಾಂಕ್ ಏಜೆಂಟ್) (೧೧) ಕಾಶಿ ಅಪ್ಪಣ್ಣ (ಶ್ರೀಮಂತರು ಹಾಗೂ ದಾನಿಗಳು) (೧೨) ಗುಲ್ ಬಾಷಾ (೧೩) ಬಿ. ನಾರಾಯಣ ಅಯ್ಯಂಗಾರ್ (೧೪) ಎ.ಟಿ. ದಲಾಲ್ (ಅಮಲ್ದಾರ್)

ಈ ಸದಸ್ಯರುಗಳು ತಮ್ಮ ಜಿಲ್ಲೆಯಿಂದ ವಸ್ತು ಪ್ರದರ್ಶನದಲ್ಲಿ ಯಾರಾರು ಬಾಗವಹಿಸಿ ಯಾವ ಯಾವ ವಸ್ತುಗಳನ್ನು ಪ್ರದರ್ಶಿಸಬಹುದು ಎಂಬುದನ್ನು ಆಯ್ಕೆ ಮಾಡಿ ಅಲ್ಲಿಗೆ ವಸ್ತುಗಳೊಡನೆ ಭಾಗವಹಿಸಲು ಸೂಕ್ತ ಏರ್ಪಾಟನ್ನು ಮಾಡಿದರು. ಸಮಿತಿಯಲ್ಲಿದ್ದ ಸದಸ್ಯರೂ ಸಹ ಕೆಲವರು ಪ್ರದರ್ಶನದಲ್ಲಿ ಭಾಗವಹಿಸಿದ್ದರು.

ದುರ್ಗದ ಬಾಲಕಿಯರ ಶಾಲೆಯಿಂದ ಕೆಲವು ಹೆಣ್ಣು ಮಕ್ಕಳು ಬಟ್ಟೆಯ ಮೇಲೆ ಕಸೂತಿ ಕುಶಲಕಲೆಯನ್ನು ಪ್ರದರ್ಶಿಸಿದರು. ಇವರುಗಳಲ್ಲಿ ೭ ವರ್ಷದ ಬಾಲಕಿಯೊಬ್ಬಳು ಕ್ರೋಶಕಡ್ಡಿಯಿಂದ ಹಾಕಿದ ಕಲಾತ್ಮಕ ಕುಶಲತೆಯ ಪ್ರದರ್ಶನವನ್ನು ತೀರ್ಪುಗಾರರು ಬಹಳ ಮೆಚ್ಚಿ ವಿಶೇಷ ಬಹುಮಾನವನ್ನು ನೀಡಿದರು.

ದುರ್ಗದ ಚಿತ್ರಗಾರ ತಿಪ್ಪಯ್ಯ ಎಂಬುವರು ಶಿಲ್ಪಗಳನ್ನು ಪ್ರದರ್ಶಿಸಿ ದ್ವಿತೀಯ ಬಹುಮಾನ ೨೦ ರೂಗಳನ್ನು ಪಡೆದರು.

ದುರ್ಗದಲ್ಲಿ ಅಸಿಸ್ಟೆಂಟ್ ಸರ್ಜನ್ ಹಾಗೂ ಸಮಿತಿ ಸದಸ್ಯರೂ ಆಗಿದ್ದ ವೈದ್ಯನಾಥ ಶಾಸ್ತ್ರಿಗಳು ವೈದ್ಯಕೀಯಕ್ಕೆ ಸಂಬಂಧ ಪಟ್ಟಂತ ಸಸ್ಯಗಳು ಮತ್ತು ಬೇರುಗಳನ್ನು ಪ್ರದರ್ಶಿಸಿ ಮೆಚ್ಚಿಗೆ ಬಹುಮಾನವನ್ನು ಪಡೆದರು.

ದುರ್ಗದ ಎಮ್ಮೆಹಟ್ಟಿ ಕಳಸಪ್ಪನವರ ರಂಗಪ್ಪ ಅವರು ಪ್ರದರ್ಶಿಸಿದ ಕಪ್ಪು ಕಂಬಳಿ ಮತ್ತು ಹಳದಿ ರೇಷ್ಮೆ ಚೌಕಳಿ ಕಂಬಳಿಗಳು ತೀರ್ಪುಗಾರರಿಂದ ಮೆಚ್ಚಿಗೆ ಪಡೆದು ೨೫ ರೂ.ಗಳ ವಿಶೇಷ ಬಹುಮಾನವನ್ನು ಪಡೆದರು.

ಸಮಿತಿಯ ಸದಸ್ಯರಾಗಿದ್ದಂತ ಮಿ.ಮೆರ್ವಿನ್‌ಸ್ಮಿತ್ ಅವರು ಪ್ರದರ್ಶಿಸಿದ್ದ ಬೆಳ್ಳಿಯ ಅದುರಿಗೆ ೧೦ರೂ.ಗಳ ಬಹುಮಾನ ಮತ್ತು ಕಬ್ಬಿಣದ ಅದುರಿಗೆ ವಿಶೇಷ ಬಹುಮಾನವಾಗಿ ತಾಮ್ರದ ಪದಕವನ್ನು ಪಡೆದರು. ಓವರ್‌ಸೇರ್ ಆಗಿದ್ದಂತ ಆನಂದರಾವ್ ಅವರುಕಬ್ಬಿಣ ತಯಾರು ಮಾಡುವ ವಿವಿಧ ಹಂತಗಳನ್ನು ಪ್ರದರ್ಶಿಸಿ೫ ರೂ.ಗಳ ವಿಶೇಷ ಬಹುಮಾನ ಪಡೆದರು.

ಕಮ್ಮಾರ ವೃತ್ತಿಯನ್ನು ಮಾಡುತ್ತಿದ್ದ ದಾನಪ್ಪ ಎಂಬುವರು ತಾವೇ ತಯಾರು ಮಾಡಿದ ಬೀಗವನ್ನು 'ಗನ್ ಲಾಕ್' ಪ್ರದರ್ಶಿಸಿ ೩ ರೂ. ಬಹುಮಾನವನ್ನು ಪಡೆದರು. ಅದೇ ರೀತಿ ದುರ್ಗದಲ್ಲಿ ಮರಗೆಲಸ ಮಾಡುತ್ತಿದ್ದ ಹೊಸೂರಪ್ಪ ಎಂಬುವರು ಪ್ರದರ್ಶಿಸಿದ

ಓತ್ತಾಳೆಯ ಬೀಗಕ್ಕೆ ೧೦ರೂ.ಗಳ ಬಹುಮಾನ ದೊರೆಯಿತು.

ಶ್ರೀಮಂತರು ಮಾತ್ರ ಉಪಯೋಗಿಸುತ್ತಿದ್ದ ವೈಶಾಕೀ ಭತ್ತವನ್ನು ತೀರ್ಪುಗಾರರು ಮೆಚ್ಚಿ ೮ರೂ.ಗಳ ಪ್ರಥಮ ಬಹುಮಾನವನ್ನು ದಾವಣಗೆರೆಯ ನಂಜುಂಡ ರಾವ್ ಅವರು ಪಡೆದರು. ಇದೇ ರೀತಿಯ ಕಾರ್ತಿಕ ಭತ್ತವನ್ನು ಸಿದ್ದಾಪುರದ ಬಾಬುರಾವ್ ಎಂಬುವರು ಸಹ ಪ್ರದರ್ಶಿಸಿ ತೃತಿಯ ಬಹುಮಾನವಾಗಿ ೩ರೂ.ಗಳನ್ನು ಪಡೆದರು.

ಹದ ಮಾಡಿದ ಚರ್ಮ ಹಾಗೂ ಅದಕ್ಕೆ ಬೇಕಾದ ವಿವಿಧ ಸಲಕರಣೆಗಳನ್ನು ಪ್ರದರ್ಶಿಸಿದ ದುರ್ಗದ ಎ.ಎಮ್.ಸ್ಮಿತ್ ಮತ್ತು ಲಬ್ಬೆ ಗಫಾರ್ ಸಾಬ್ ಅವರಿಗೆ ತೃತಿಯ ಬಹುಮಾನವಾಗಿ ೧೫ರೂ.ಗಳನ್ನು ಪಡೆದರು.

## ಪ್ರದರ್ಶನವಾದ ವಿರಗಳು.

| ಸಂಖ್ಯೆ | ಹೆಸರು | ವಸ್ತು | ಬಹು | ರೂ. |
|---|---|---|---|---|
| 1. | ಹೊಸದುರ್ಗದ ಚಿಗಾರ | ತಾವೇತಯಾರು ಮಾಡಿದ ಕ್ರಮಗ್ಗದ ಬಟ್ಟೆಗಳು | ಪ್ರ. | 10 |
| 2. | ಹೊಸದುರ್ಗದ ಬಾಣವ | " | ತೃ. | 20 |
| 3. | ಮೊಳಕಾಲ್ಮುರಿನ ದೇವಟ್ಟಿದೊಡ್ಡಯ್ಯ | " | ತೃ. | 15 |
| 4. | ಮೊಳಕಾಲ್ಮುರಿನ ಕುಬಾಜಿ ದುರ್ಗಪ್ಪ | " | ದ್ವಿ. | 20 |
| 5. | ಮೊಳಕಾಲ್ಮುರಿನ ವೀರಣ್ಣ | " | ಪ್ರ. | 30 |
| 6. | ದುರ್ಗದ ಬ್ಯಾಂಕ್ ಏಜೆಂಟ್ ಹಾಗೂ ಬಡ್ಡಿ ಏಜೆಂಟ್ ಆಗಿದ್ದಂತ ಸಿ.ರಾಘವೇಂದ್ರರಾವ್ | " | ದ್ವಿ. | 5 |
| 7. | ದುರ್ಗದ ತಿಮ್ಮರಾಶಿ ಭೀಮಯ್ಯ | " | ತೃ. | 3 |
| 8. | ದುರ್ಗದ ದಾಶಿ | " | ವಿ. | 2 |
| 9. | ಆನೇಕಲ್ ರಾಮಸ್ವಾಮಿ | " | ದ್ವಿ. | 10 |
| 10. | ಆನೇಕಲ್ ಚಿಕ್ಕಣ್ಣ | " | ತೃ. | 3 |
| 11. | ಯಳಂದೂರಿನ ರಾಮಶೆಟ್ಟಿ | " | ವಿ. | 2 |
| 12. | ದೇವಸಂದ್ರದ ಹೀರಾಲ್ ಹಣ್ಣೂರ್ ಸಾಬ್ | " | ವಿ. | 2 |
| 13. | ದೇವಸಂದ್ರದ ಮಲ್ಲಿಕಾರ್ಜುನಪ್ಪಾ | " | ವಿ | 2 |
| 1. | ದುರ್ಗದ ಲಕ್ಕಿನ ಹನುಮಣ್ಣ | ವಿವಿಧ ಉಣ್ಣೆ ಕಂಬಳಿಗಳ ಪ್ರದರ್ಶನಕ್ಕೆ | ಪ್ರ. | 40 |
| 2. | ದುರ್ಗದ ಬಂಗಿ ಎಕ್ಕಪ್ಪ | " | ಪ್ರ. | 40. |
| 3. | ದುರ್ಗದ ಪ್ಲೀಡರ್ ರಾಘವೇಂದ್ರ ರಾವ್ | " | ತೃ. | 15. |
| | | ಹತ್ತಿ ಪ್ರದರ್ಶನ. | | |
| 1. | ಅಡ್ವಕೇಟ್ ಅಂನತ ಶೆಟ್ಟಿ | ಮೈಸೂರು ಹತ್ತಿ | ಪ್ರ. | 20 |
| 2. | ಮೆರ್ವನ್ ಸ್ಮಿತ್ | ವಿದೇಶಿ ಹತ್ತಿ | ಪ್ರ. | 20 |
| 3. | ಬಿ.ಕೆ.ವೆಂಕಟ ವರದ ಅಯ್ಯಂಗಾರ್ | ಉಣ್ಣೇ ಮತ್ತು ಮೈಸೂರು ಹತ್ತಿ | ವಿ. | |



1988 ವಸ್ತು ಪ್ರದರ್ಶನದ ಪ್ರವೇಶ ದ್ವಾರ

| ಸಂಖ್ಯೆ | ಹೆಸರು | ವಸ್ತು | ಬಹು | ರೂ. |
|---|---|---|---|---|
| | | **ಸಾಂಬಾರ ಪದಾರ್ಥಗಳು** | | |
| 1. | ಹಿರಿಯೂರಿನ ಹನುಮಂತಯ್ಯ | OMUN | ಪ್ರ. | 5 |
| 2. | ದುರ್ಗದ ಪಟ್ಟಣಶೆಟ್ಟಿ ಮಹೇಶ್ವರಪ್ಪ | ಕಲ್ಲುಹೂ | ದ್ವಿ. | 3 |
| 3. | ದುರ್ಗದ ಕಾಟಪ್ಪ | ಮೆಂತ್ಯ | ವಿ. | |
| | | **ಬಣ್ಣಗಳು – ರಂಗುಗಳು** | | |
| 1. | ಚಿಕ್ಕನ ಹಳ್ಳಿ ಭೀಮ | ಮಡ್ಡೀ ಚಿಕ್ಕೆ | ದ್ವಿ | 10 |
| 2. | ಹೊಳಲ್‌ಕೆರೆಯ ಪ್ಯಾರ | ಮುತ್ತುಗ ಹೂವು | ಪ್ರ. | 20 |
| 3. | ಹೊಳಲ್‌ಕೆರೆಯ ಗೋಪಾಲಯ್ಯ | ಕೇರು ಬೀಜ | ಪ್ರ. | 15 |
| 4. | ಹಿರಿಯೂರಿನ ಪಟೇಲ್ ಬಸಪ್ಪಾ | FARINALEOUS FEEDS | ಪ್ರ. | 30 |
| | | **Hard Ware And Cutlery** | | |
| 1. | ಬಿ.ಕೇಶವ ಅಯ್ಯಂಗಾರ್ ಹೊಳಲ್‌ಕೆರೆ | ಕಬ್ಬಿಣ | ದ್ವಿ. | 10 |
| 2. | ಚಿಕ್ಕಣ್ಣ | ಸ್ಥಳೀಯ ಉಕ್ಕು | ಪ್ರ. | 20 |
| 3. | ಹಿರಿಯೂರಿನ ಕರಿಯಣ್ಣ | ಕಬ್ಬಿಣ | ಪ್ರ. | 15 |
| 4. | ಹೊಸದುರ್ಗದ ಶಿವಣ್ಣ | ಕಂಚು | ಪ್ರ. | 30 |
| | | **ಧಾನ್ಯಗಳು** | | |
| 1. | ದುರ್ಗದ ಮಲ್ಲಿಕಾಜಿ | ಹೊಲದ ರಾಗಿ | ದ್ವಿ. | 5 |
| 2. | ದುರ್ಗದ ತಿಮ್ಮಯ್ಯ | ಅಚ್ಚೆಳ್ಳು | ಪ್ರ. | 6 |
| 3. | ದುರ್ಗದ ಅಚ್ಚಪ್ಪ | ಹುಚ್ಚೆಳ್ಳು | ದ್ವಿ | 4 |
| 4. | ದುರ್ಗದ ಸುಬ್ಬರಾಮ ಶೆಟ್ಟಿ | ಕಡಲೆ | ಪ್ರ. | 5 |
| 5. | ದುರ್ಗದ ಕುಂಚಿಗುಂಟಲ ಬಸಪ್ಪ | ನವಣೆ | ದ್ವಿ. | 7 |
| 6. | ದುರ್ಗದ ಹನುಮಂತಪ್ಪಾ | ಅವರೆ | ದ್ವಿ. | 3 |
| 7. | ಚಿತ್ರದುರ್ಗ ಜಿಲ್ಲೆಯ ಮಠದ ಸೀತಾರಾಮಯ್ಯ | ಒಣಕೊಬರಿ | ದ್ವಿ | 4 |
| 8. | ಚಿತ್ರದುರ್ಗ ಶಾನುಬೋಗ್ ರಾಮಣ್ಣ | ತೊಗರಿ | ವಿ. | |
| 9. | ಚಿತ್ರದುರ್ಗ ಜಿಲ್ಲೆಯ ನಾಡಿಗ ದುಗ್ಗಪ್ಪ | ಹುರುಳಿ | ದ್ವಿ | 3 |
| 10. | ಚಿತ್ರದುರ್ಗ ಜಿಲ್ಲೆಯ ಚಿರಂತಪ್ಪ | ವಿವಿಧ ಬೇಳೆಗಳು | ದ್ವಿ | 3 |
| 11. | ಬೊಮ್ಮ ಗೊಂಡನ ಕೆರೆಯ ಪಟೇಲ್ ಮರಿಗೆಪ್ಪ | ತೋಟದ ರಾಗಿ | ತೃ. | 3 |
| 12. | ಜಗಳೂರಿನ ರಾಮಚಂದ್ರಪ್ಪ | ಬಿಳಿ ಜೋಳ | ಪ್ರ. | 7 |
| 13. | ಹುಣಿಸೇ ಕಟ್ಟೆಯ ಬೋರೇ ಗೌಡ | ಕೆಂಪು ಜೋಳ | ದ್ವಿ | 4 |
| 14. | ಗೊಣ್ಣೂರಿನ ಬಾಸನಾಯಕ | ಜವೆಗೋದಿ | ಪ್ರ. | 8 |
| 15. | ಬೈರಾವರದ ರಾಮನಾಯಕ್ | ಸಾಮೆ | ತೃ. | 2 |
| 16. | ಹಾಯಕಲ್ಲು ರಂಗಯ್ಯ | ಸಜ್ಜೆ | ದ್ವಿ. | 4 |
| 17. | ಗಂಗಸಮುದ್ರದ ವೆಂಕಟಸುಬ್ಬಯ್ಯ | ಬರಗು | ದ್ವಿ. | 4 |
| 18. | ಸಿದ್ದನ ಹಳ್ಳಿಯ ಭೀಮಯ್ಯ ಗೌಡ | ಅಚ್ಚೆಳ್ಳು | ದ್ವಿ. | 4 |
| 19. | ಚಳ್ಳಕೆರೆಯ ಪಟೇಲ್ ಭಾಸ್ಕರಪ್ಪ | ಹೊಂಗೆ ಬೀಜ | ತೃ. | 2 |
| 20. | ಚಳ್ಳಕೆರೆಯ ಮಠದ ಚನ್ನವೀರಪ್ಪ | ನಾರು | ತೃ. | 4 |
| 21. | ಹಿರಿಯೂರಿನ ಹುಚ್ಚಣ್ಣ | ಹೊಗೆಸೊಪ್ಪು | ವಿ. | - |
| 22. | ದುರ್ಗದ ಜಮೀನ್ದಾರ್ ಸಿ.ಭೀಮರಾವ್ | ಬಾಳೆಹಣ್ಣು | ವಿ. | |

ಡಾ॥ ಶ್ರೀನಿವಾಸ ಹಾವನೂರ

# ಹಿಂದಿನ ಮುಲ್ಕೀ ಶಾಲೆಗಳ ವಿಸಿಟ್ – ಬುಕ್

ಗಣ್ಯವ್ಯಕ್ತಿಗಳು ಸಾರ್ವಜನಿಕ ಸಂಸ್ಥೆಯೊಂದಕ್ಕೆ ಭೆಟ್ಟಿ ಇತ್ತರೆ ಅವರ ಅಭಿಪ್ರಾಯವನ್ನು ಬರೆಯಿಸಿ ಕೊಳ್ಳುವುದಕ್ಕೆ ವಿಸಿಟ್‌ಬುಕ್ಕನ್ನು ನಾವು ಇಂದು ಬಳಸುತ್ತಿದ್ದೇವಷ್ಟೆ. ಕಳೆದ ೧೮೭೯ರಿಂದ ೧೯೩೮ ರವರೆಗೆ ಇಂಥ ವಿಸಿಟ್‌ಬುಕ್‌ಗಳು ಆಗಿನ ಮುಲ್ಕೀ ಶಾಲೆಗಳಲ್ಲಿ (ಪ್ರಾಥಮಿಕ ಶಾಲೆಗಳಲ್ಲಿ) ಬಳಕೆಯಲ್ಲಿದ್ದುವು. ಅವುಗಳಿಂದ ಆಗಿನ ಶಿಕ್ಷಣದ ಸ್ಥಿತಿಗತಿಯನ್ನು ಅಧಿಕೃತವಾಗಿ ತಿಳಿಯಬಹುದಾದರೂ ಇತಿಹಾಸ ಸಂಶೋಧನೆಯ ಸಂದರ್ಭದಲ್ಲಿ ಇದೊಂದು ನಗಣ್ಯವಾದ ಸಾಧನ. ಆದರೆ ಈ 'ವಿಸಿಟ್ ಬುಕ್'ನಲ್ಲಿಯ ಅಭಿಪ್ರಾಯಗಳನ್ನು ವಿಶ್ಲೇಷಿಸಿದಾಗ ಶಿಕ್ಷ ವಿಚಾರ ಮಾತ್ರವಲ್ಲದೆ, ಆಗಿನ ಗ್ರಾಮಜೀವನದ ಅಂಶಗಳು ತಿಳಿದು ಬರುವುವು. ಮುಂಬಯಿ ಕರ್ಣಾಟಕದ ಪೂರ್ವಾಧುನಿಕ ಕಾಲ (೧೮೦೦– ೧೯೨೦) ಸಾಮಾಜಿಕ ಅಧ್ಯಯನ ಯೋಜನೆಯ ನಿಮಿತ್ತ, ಇಂಥ 'ವಿಸಿಟ್ ಬುಕ್'ಗಳು ನನಗೆ ಅಲ್ಲಲ್ಲಿ ನೋಡದೊರೆತವು. ಅವುಗಳಿಂದ ತಿಳಿದುಬಂದ ಕೆಲವು ವಿಚಾರಗಳನ್ನು ಈಗ ಪ್ರಸ್ತುತ ಪಡಿಸುವೆ.

ಮುಂಬಯಿ ಸರ್ಕಾರವು ಕ್ರಿ.ಶ.೧೮೭೮ರಲ್ಲಿ ಒಂದು ಪರಿಪತ್ರವನ್ನು ಹೊರಡಿಸಿ, ಪ್ರತಿಯೊಂದು ಮುಲ್ಕೀ ಶಾಲೆಯವರು 'ವಿಸಿಟ್ ಬುಕ್' ಇರಿಸಬೇಕು ಎಂದು ವಿಧಿಸಿದರು.

ಸರಕಾರಕ್ಕೆ ಇದರ ಅವಶ್ಯಕತೆ ಅನ್ನಿಸಿದ್ದರ ಹಿನ್ನೆಲೆ ಹೀಗಿದೆ. ೧೮೭೦ ದಶಕದಲ್ಲಿ ಸರಕಾರೀ ಶಾಲೆಗಳು ಇದ್ದವು, ಜೊತೆಗೆ ಖಾಸಗೀ ಅಥವಾ ಗಾವಠೀ ಶಾಲೆಗಳೂ ಇದ್ದವು. ಸರಕಾರವು ಸಹಾಯಕ ಅನುದಾನವನ್ನುಕೊಡತೊಡಗಿತು. ಆದರೆ ಶಿಕ್ಷಕರ ಸಂಬಳ, ಫೀ ಹಣ, ವಿದ್ಯಾರ್ಥಿ ಹಾಜರಿ ಪರೀಕ್ಷೆ ಇವಾವುವೂ ಸರಕಾರದನೇರ ಆಡಳಿತದಲ್ಲಿರಲಿಲ್ಲ. ಆದರೆ ಅನುದಾನ ಕೊಡುತ್ತಿತಾದ್ದರಿಂದ ಪರ್ಯಾಯ ರೀತಿಯಲ್ಲಿ ಹತೋಟಿಯಲ್ಲಿಟ್ಟುಕೊಳ್ಳಬೇಕೆಂದು ಸರಕಾರಕ್ಕೆ ಅನಿಸಿತು. ಜಿಲ್ಲೆಗೆ ಒಬ್ಬ ಡೆಪ್ಯೂಟಿ ಎಜ್ಯು.ಇನ್‌ಸ್ಪೆಕ್ಟರ್; ಅವರ ಕೈಯಲ್ಲಿ ಒಬ್ಬಿಬ್ಬ ಅಸಿಸ್ಟೆಂಟರು ಇರುತ್ತಿದ್ದರು ಶಾಲೆಗಳಿಗೆ ಭೆಟ್ಟಿ ಕೊಡುತ್ತಿದ್ದರು. ಆದರೆ ಎರಡು ಬಗೆಯ ಶಾಲೆಗಳಿರುತ್ತೆ, ಅವುಗಳ ಸಂಖ್ಯೆ ಸ್ವಾಭಾವಿಕವಾಗಿಯೇ ಹೆಚ್ಚುತ್ತಿರುವಾಗ ಈ ಶಿಕ್ಷಣಾಧಿಕಾರಿಗಳಿಗೆ ಎಲ್ಲ ಶಾಲೆಗಳ ಉಸ್ತುವಾರಿಯನ್ನು ಸಮರ್ಪಕವಾಗಿ ಮಾಡುವುದು ಅದೆಂತು ಸಾಧ್ಯ?

ಅದಕ್ಕೇನೆ ಈ ವಿಸಿಟ್ ಬುಕ್‌ಗಳಲ್ಲಿ ಶಿಕ್ಷಣಖಾತೆಯವರಲ್ಲದೆ ಆ ಊರಿನ ಗಣ್ಯ ನಾಗರಿಕರು, ಸ್ಕೂಲ್ ಕಮಿಟಿ ಮೆಂಬರರು, ರೆವಿನ್ಯೂ ಅಥವಾ ಸರಕಾರೀ ಖಾತೆಯು (ಅಂಚೆ, ಆರೋಗ್ಯ ಯಾವುದೂ!) ಅಧಿಕಾರಿಗಳು ಶಾಲೆಯ[1] ವಿಸಿಟ್ ಬುಕ್‌ನಲ್ಲಿ ಬರೆಯಬೇಕು ಎಂದು ಸರಕಾರವು ಅಪೇಕ್ಷಿಸಿತು.

ಏನನ್ನು ಬರೆಯಬೇಕು? ಇದಕ್ಕಾಗಿ ಶಿಕ್ಷಣ ಖಾತೆಯು ಒಂದು ಸೂಚಿಕೆಯನ್ನು (format) ತಯಾರಿಸಿತು. ಸುರುವಿಗೆ ವಿದ್ಯಾರ್ಥಿ ಸಂಖ್ಯೆ; ಅದರಲ್ಲಿ ಹಾಜರಿದ್ದವರ ಸಂಖ್ಯೆ ಕೊಡಬೇಕು. ಅನಂತರ "ವೇಳಾಪತ್ರಕದಂತೆ ಕೆಲಸ ನಡೆದಿದೆಯೋ ಹೇಗೆ", "ಕಾಗದ ಪತ್ರಗಳನ್ನು ಸರಿಯಾಗಿ ಇಟ್ಟಿದ್ದಾರೆಯೋ ಹೇಗೆ?" "ಶಾಲಾಕಟ್ಟಡ ಸುಸ್ಥಿತಿಯಲ್ಲಿ ಅದೆಯೋ ಹೇಗೆ?" ಇವಿಷ್ಟಕ್ಕೆ ಉತ್ತರಿಸಿ "ಒಟ್ಟಿನ ಸ್ಥಿತಿ ಹೇಗೆ" ಎಂಬುದಕ್ಕೆ ಅಭಿಪ್ರಾಯ ಬರೆಯಬೇಕಾಗುತ್ತಿತ್ತು.

ಹತ್ತು ವರ್ಷಗಳ ಅನಂತರ (೧೯–೮–೧೮೮೯) ಸರಕಾರವು ಈ ಸಂಬಂಧದ ನಿಯಮಗಳಲ್ಲಿ ಸುಧಾರಣೆ ಮಾಡಿತು. ಅವುಗಳಲ್ಲಿ "ಮಾಸ್ತರರು ವರ್ಗವಾಗಿ ಎರಡನೇ ಕಡೆಗೆ ಹೋಗುವಾಗ್ಗೆ ಈ ಪುಸ್ತಕವನ್ನು ತಮ್ಮ ಕೂಡ ಒಯ್ಯಬಾರದು" ಎಂಬ ನಿಯಮವೂ ಒಂದಾಗಿದ್ದಿತು! ಕಾರಣವನ್ನು ಯಾರೂ ಊಹಿಸಬಹುದು.

ಅನೇಕ ಹಳೆಯ ಶಾಲೆಗಳಲ್ಲಿ ಇಂಥ ವಿಸಿಟ್ ಬುಕ್‌ಗಳು ಈಗಲೂ ಉಳಿದುಕೊಂಡಿವೆ. ಆ ಪೈಕಿ ಧಾರವಾಡಜಿಲ್ಲೆ, ಹಾವೇರಿ ತಾಲೂಕಿನ ಎರಡು ಊರುಗಳ (ಗುತ್ತಲ ಮತ್ತು ಹಾವನೂರು) ಶಾಲೆಗಳ ಇಂಥ ಬುಕ್‌ಗಳನ್ನು ಮಾದರಿಗಾಗಿ ಎತ್ತಿಕೊಳ್ಳುವೆ. ಅವುಗಳ ಒಟ್ಟಿನ ಪರಿಶೀಲನೆಯಿಂದ ಆಗ ಪ್ರಾಥಮಿಕ

ಶಿಕ್ಷಣದ ಪದ್ಧತಿ, ಪರೀಕ್ಷೆಗಳು, ಶಿಕ್ಷಕರ ಯೋಗ್ಯತೆ – ಅಯೋಗ್ಯತೆ, ಸರಕಾರದ ಧೋರಣೆ, ಶಿಸ್ತಿನ ಪಾಲನೆ, ಊರವರಿಗೂ – ಮಾಸ್ತರರಿಗೂ ಇರುವ ಸಂಬಂಧ – ಇವನ್ನು ಸುಲಭವಾಗಿ ಗುರುತಿಸಬಹುದು.

ಈ ಎರಡು ಶಾಲೆಗಳ ಕ್ರಿ.ಶ.೧೮೭೬ ರಿಂದ ೧೯೧೯ ರವರೆಗಿನ, ಎಂದರೆ ಸುಮಾರು ೪೦ ವರ್ಷಗಳಲ್ಲಿ ಬರೆಯಲಾದ ಅಭಿಪ್ರಾಯಗಳು ಬಹಳವೇನೂ ಇಲ್ಲ. ಅವುಗಳ ಧೋರಣೆಯನ್ನು ಕೆಲವು ಬಿಚ್ಚುನುಡಿಯವು, ಇನ್ನು, ಹಲವು ವಿಧಾಯಕ ಸ್ವರೂಪದವು. ಮತ್ತೆ ಕೆಲವು ಮಾಸ್ತರ ಜನರು ಹೇಳಿ ಬರೆಯಿಸಿದವುಗಳು. ಇದು ೧೯–೧–೧೮೭೬ ಒಂದು ಶರಾ:

"ಸಾಲಿಯು ಸಾಧಾರಣ ಸ್ಥಿತಿಯಲ್ಲಿ ಅದೆ. ಹುಡುಗರು ಕಡಿಮೆ ಇದ್ದಾರೆ. ಮೇಲಿನ ವರ್ಗಗಳ ಹುಡುಗರು ಶಾಲಾಕ್ಕೆ ಬರುವದಿಲ್ಲಾ. ಮಾಸ್ತರರು ಮುದುಕರಿದ್ದಾರೆ. ಯಿವರಿಗೆ ಪೆನ್ಶನ್ ದೊರೆಯಲಿಕ್ಕೆ ಇನ್ನೂ ೧೧ ವರ್ಷ ಬೆಕು. ಇವರನ್ನು ಸ್ವತಂತ್ರಶಾಲೆಯ ಮಾಸ್ತರರಾಗಿ ಯಿಡುವುದಕ್ಕಿಂತಲೂ ದೊಡ್ಡ ಶಾಲೆಯಲ್ಲಿ ಇಷ್ಟೇ ಪಗಾರದ ಶಿಕ್ಷಕರಾಗಿ ಇಡುವದು ನೆಟ್ಟಗೆ."

– ಕವಿತೆಯ ಅರ್ಥ, ವ್ಯಾಕರಣ ಇವು ಚೆನ್ನಾಗಿ ಬರುವುದಿಲ್ಲ. ನಾಲ್ಕನೆಯ ಇಯತ್ತೆಯ ಹುಡುಗರು ಅನೇಕ ವಿಷಯಗಳಲ್ಲಿ 'ಕಡಿಮೆಯಿದ್ದಾರೆ' (ಕಚ್ಚಾ ಇದ್ದಾರೆ)

ಆಗಿನ ಮುಲ್ಕೀ ಶಾಲೆಗಳಲ್ಲಿ ವಾರ್ಷಿಕ ಪರೀಕ್ಷೆಗಳು ಡಿಸೆಂಬರದಿಂದ ಮಾರ್ಚ್‌ವರೆಗಿನ ಅವಧಿಯಲ್ಲಿ ಜರುಗುತ್ತಿದ್ದವು. ಈ ದೀರ್ಘ ಕಾಲಾವಧಿಯ ಕಾರಣವೆಮದರೆ ಅವನ್ನು ಇನ್ಸ್‌ಪೆಕ್ಟರರೇ ಸ್ವಯಂ ಬಂದು ತೆಗುದಿಕೊಳ್ಳಬೇಕಿತ್ತು. ಆಗ ಶಾಲಾ ಕಮಿಟಿಯ ಸದಸ್ಯರು ಹಾಜರರಿಬೇಕಿತ್ತಲ್ಲದೆ, ಊರಿನ ಸದ್ಗೃಹಸ್ಥರಿಗೂ ಆಮಂತ್ರಣ ಕೊಡಬೇಕು ಎಂಬ ನಿಯಮವಿದ್ದಿತು. ಹೀಗೆ ಪರೀಕ್ಷೆಗಳೆಂದರೆ ಆ ಊರಿನಲ್ಲಿಒಂದು ಸಡಗರದ ಸಮಾರಂಭವೇ ಆಗಿರುತ್ತಿತ್ತು. ಪರೀಕ್ಷೆ ತೆಗೆದುಕೊಂಡ ಮೇಲೆ ಇನ್ಸ್‌ಪೆಕ್ಟರರು 'ವಿಸಿಟ್‌ಬುಕ್' ನಲ್ಲಿ ಫಲಿತಾಂಶದ ಸಾರವನ್ನು ಬರೆಯುತ್ತಿದ್ದರು. ಆಗಿನ ಪರೀಕ್ಷಾಕ್ರಮದ ಬಗ್ಗೆ ಇದು ತುಸು ಬೆಳಕನ್ನು ಚೆಲ್ಲುವುದಾದ್ದರಿಂದ ಗುತ್ತಲಶಾಲೆಯ ೧೮೭೭ರ ಫಲಿತಾಂಶವನ್ನು ಕೊಡುತ್ತಿದ್ದೇನೆ.

| ಇಯತ್ತೆ | ವಿದ್ಯಾರ್ಥಿ | ೧ನೇ | ೨ನೇ | ೩ನೇ | ೪ನೇ2 | ಪಾಸಾದವರ ಸಂಖ್ಯೆ | |
|---|---|---|---|---|---|---|---|
| ಬಿನ್ ಇಯತ್ತೆ | ೧೧ | – | ಪರೀಕ್ಷೆ ತಗೊಳ್ಳಲಿಲ್ಲ | | – | – | |
| ೧ | ೯ | ೬ | ೩ | ೩ | – | – | ೩ |
| ೨ | ೭ | ೪ | ೨ | ೨ | ೬ | ೩ | ೨ |
| ೩ | ೬ | ೨ | ೨ | ೨ | ೫ | ೩ | ೨ |
| ೪ | | - ವಿದ್ಯಾರ್ಥಿಗಳೇ ಇಲ್ಲ - | | | | | |
| ೫ | ೧ | ಇವರು ಪರೀಕ್ಷೆ ತಗೊಳ್ಳಲಿಲ್ಲ. | | | | | |
| ೬ | ೨ | | | | | | |

ಇದೇ ರೀತಿಯಲ್ಲಿ ಬೇರೆ ಸಂದರ್ಶಕ – ಅಧಿಕಾರಿಗಳು ತಮ್ಮ ಸ್ಪಷ್ಟವಾದ ಅಭಿಪ್ರಾಯಗಳನ್ನು ಲಿಖಿಸಿದ್ದಾರೆ :

–"ಗಣಿತ ವಿಷಯದಲ್ಲಿ ಹುಡುಗರು ಕಚ್ಚಾ ಇದ್ದಾರೆ..... ವ್ಯಾಕರಣ ನೆಟ್ಟಗೆ ಕಲಿಸಬೇಕು"

ಆಗಿನ ಯಾವುದೇ ಪ್ರಾಥಮಿಕ ಶಾಲೆಯ ಏಳ್ಗೆ ಅಥವಾ ಇಳಿವು ಅಲ್ಲಿಯ ಶಿಕ್ಷಕರ ವಿಶೇಷತಃ ಹೆಡ್ ಮಾಸ್ತರರ ಮೇಲೆ ಅವಲಂಬಿಸಿತ್ತು. ವಿದ್ಯಾದಾನವು ಒಂದು ಪವಿತ್ರ ಕಾರ್ಯವೆಂದು ಪರಿಭಾವಿಸಿ, ನಿಷ್ಠೆಯಿಂದ ತಮ್ಮ ವೃತ್ತಿಯಲ್ಲಿ ತೊಡಗಿದ್ದ ಅನೇಕ ಶಿಕ್ಷಕರು ಹಿಂದಿನ ಎರಡು–ಮೂರು ತಲೆಮಾರಿನಲ್ಲಿ ಆಗಿ

ಹೋದರು. ಆದಕ್ಕೆ ಈ ವಿಸಿಟ್ ಬುಕ್‌ಗಳಲ್ಲಿ ಸ್ಪಷ್ಟವಾದ ನಿದರ್ಶನಗಳು ದೊರೆಯುತ್ತವೆ. ಅಂಥ ಇಬ್ಬರು ಹೆಡ್ ಮಾಸ್ತರರನ್ನು ಉಲ್ಲೇಖಿಸುವೆ. ಒಬ್ಬರು ಹಾವನೂರಿನಲ್ಲಿ ೧೯೦೧ರಿಂದ ೧೯೦೯ ರವರೆಗೆ ಇದ್ದ ವಿನಾಯಕ ಪಾಠಕ ಎಂಬುವರು. ಇನ್ನೊಬ್ಬರ ಗುತ್ತಲದಲ್ಲಿ ೧೯೦೫ರಿಂದ ೧೯೦೮ರವರೆಗೆ ಇದ್ದ ವೆಂ.ತಿ.ಕುಲಕರ್ಣಿ – ಅರ್ಥಾತ್ ಸುಪ್ರಸಿದ್ಧ ಕಾದಂಬರಿಕಾರ ಗಳಗನಾಥರು.

ವಿನಾಯಕ ಪಾಠಕರ ಬಗ್ಗೆ ೧೯೦೧ರಲ್ಲಿ ವಿ.ಕ .ಜೋಗಳೇಕರ ಎಂಬ ಬೇರೊಂದು ಖಾತೆಯ (ಅಂಚೆ?) ಅಧಿಕಾರಿಗಳು ಹೀಗೆ ಬರೆದಿದಾರೆ.

" The school is showing signs of improvement under the new Head-Master, who is a painstaking teacher. The Head-master tells me that he is in need of a trained hand. And if provided, he assures that he would be able to increase the attendance and improve the state of the school in all respects."

ಈ ಹೇಳಿಕೆಯ ಹಿಂದಿರುವ ಹೆಡ್–ಮಾಸ್ತರ ಶಿಕ್ಷಣದ ಬಗ್ಗೆ ಕಾಳಜಿ ಮತ್ತು ಪ್ರಗತಿಪರ ದಷ್ಟಿಯನ್ನು ಗಮನಿಸಬೇಕು. ಒಬ್ಬ 'ಟ್ರೇಂಡ್' ಅಸಿಸ್ಟೆಂಟ್‌ನನ್ನು ಬೇಡಿದ್ದಾರೆ.. ಕಾರಣವೆಂದರೆ, ಅವರೇ ಟ್ರೇನಿಂಗ್ ಪಡೆದಿರಲಿಲ್ಲ! ಕ್ರಿ.ಶ.೧೯೦೫ರಲ್ಲಿ ಅವರು ಟ್ರೇಂಡ್ ಆಗಿ ಬಂದರೆಂದು ವಿಸಿಟ್ ಬುಕ್‌ನಿಂದ ಪರೋಕ್ಷವಾಗಿ ತಿಳಿದು ಬರುತ್ತದೆ. ಮರುವರ್ಷದ ಒಂದು ಶರಾ ಹೀಗಿದೆ:

"ಈ ಶಾಲೆಯು ಕ್ರಮೇಣ ಸುಧಾರಿಸುತ್ತ ನಡೆದಿದೆ. ಮತ್ತೂ ಎರಡನೇ ಅಸಿಸ್ಟೆಂಟರು ಮಿ। ಕುಲಕರ್ಣಿ – ಇವರ ಸಹಾಯದಿಂದಲೂ ಉತ್ಸಾಹದಿಂದಲೂ ತಾಲಿಮ ಮತ್ತು ಹೂದೋಟ ಇವೆರಡರ ಕೆಲಸ ಚಂನಾಗಿ ನಡೆದಿದೆ... ಶಿಕ್ಷಣದಲ್ಲಿ ಉಪಯೋಗವಾಗುವಂಥ ಕೆಲವು ಚಿತ್ರಪಟಗಳು ನೋಡಿ ಸಂತೋಷವಾಯಿತು.... ಊರ ಪ್ರಮುಖ ಜನರೂ ಗೌಡರೂ ಶಾಲೆಯ ಹತ್ತಿರ ಒಂದು ಬಾವಿಯನ್ನು ಆಗೆಸಿದ್ದಾರೆ. ಆದರಿಂದ ಶಾಲೆಯ ಹೂದೋಟಕ್ಕೆ ಬಹಳ ಉಪಯೋಗವಾಗುತ್ತದೆ."

ಮುಂದೆ ೨೧ನೇ ಡಿಸೆಂಬರ್ ೧೯೦೭ರಲ್ಲಿ ಈ ಷರಾ ಇದೆ :

" ಶಾಲೆಯು ತಪಾಸು ಮಾಡಿತು. ಅಭ್ಯಾಸ ಶಿಕ್ಷಣ ಪದ್ಧತಿ, ಹುಡುಗರ ಸಂಖ್ಯೆ ಇವುಗಳನ್ನು ಕುರಿತು ಬಹಳ ಸುಧಾರಣೆ ತೋರಿ ಬರುತ್ತದೆ. ಹೆಡ್ –ಮಾಸ್ತರರು ಕೈಕೆಳಗಿನ ಅಸಿಸ್ಟೆಂಟರನ್ನು ಒಳ್ಳೆ ಮನಸಿನಿಂದಾನಡೆಸಿಕೊಂಡಿರುವುದರಿಂದಾ ಅವರಿಗೆ ಮಾನ್ಯರೂ ಆಗಿರುತ್ತಾರೆ. ಎಲ್ಲರಲ್ಲಿ ಶಾಲೆಯು ಮಾದರಿ ಶಾಲೆಯಂತಾಹೆಸರು ಪಡಬೇಕೆಂಬ ಆಕಾಂಕ್ಷೆ ಕಂಡು ಬರುವುದು"

ಮೇಲೆ ಹೇಳಿದ ಜೋಗಳೇಕರರು ೧೯೦೯ರಲ್ಲಿ, ತಮ್ಮ ಖಾತೆಯ ಕೆಲಸಕ್ಕೆಂದು ಹಾವನೂರಿಗೆ ಬಂದಾಗ ಮತ್ತೊಮ್ಮೆ ಶಾಲೆಗೆ ಭೆಟ್ಟಿಕೊಡಬಯಸಿದರು. ಆದರೆ ಅಂದು ರವಿವಾರ! ಆದಾಗ್ಯೂ ಹೆಡ್–ಮಾಸ್ತರರು ತಮ್ಮ ಬಗ್ಗೆ ಹಾಗೂ ಶಾಲೆಯ ಬಗ್ಗೆ ಸದ್ಭಾವನೆಯನ್ನು ಇರಿಸಿಕೊಂಡಿದ್ದ ಆ ಅಧಿಕಾರಿಗಳಾಗಿ ರವಿವಾರವಾಗಿದ್ದರೂ ಕೆಲ ವಿದ್ಯಾರ್ಥಿಗಳನ್ನು. ಜಮಾಯಿಸಿದರು. ಹಾಜರಿದ್ದವರ ಸಂಖ್ಯೆಯನ್ನು ವಿಸಿಟ್‌ಬುಕ್‌ನಲ್ಲಿ ಕಾಣಿಸಬೇಕು? ಹೌದು. ಆದರೆ ಜೋಗಳೇಕರರು ಹಿಂದಿನ ದಿನದ ಹಾಜರು ಸಂಖ್ಯೆಯನ್ನು ಕಾಣಿಸಿದ್ದಾರೆ. ಎಂದಿನಂತೆ ಶಾಲಾ ಪ್ರಗತಿಯ ಬಗ್ಗೆ ಅಭಿಪ್ರಾಯ ಕೊಟ್ಟಿದ್ದಾರೆ. ಅಲ್ಲದೆ ಇನ್ನೂ ಒಂದು ಮಾತನ್ನು ಸೇರಿಸಿದ್ದಾರೆ – "ಈ ಸುಯೋಗ್ಯ ಹೆಡ್‌ಮಾಸ್ತರರನ್ನು ಇನ್ನೂ ಹತ್ತು ವರ್ಷ ಅಲ್ಲಿಯೇ ಇರಸಬೇಕು" – ಎಂದು!

ಗುತ್ತಲ ಶಾಲೆಗೆ ಬರೋಣ. ಆ ಶಾಲೆಯಲ್ಲಿ ಗಳಗನಾಥರು ನಾಲ್ಕು ವರ್ಷಗಳ ಕಾಲ ಮಾತ್ರವೇ, ಪಾಠಕರಂತೆ ಹೆಡ್‌ಮಾಸ್ತರಾಗಿಯೇ ಕೆಲಸಮಾಡಿದರು. ಹಾವನೂರ ಶಾಲೆಯ ಬಳಿ ಒಂದು ಬಾವಿಯನ್ನು ತೋಡಿಸಿದ್ದಂತೆ ಗಳಗನಾಥರೂ ೧೯೦೭ರಲ್ಲಿ ಹಾಗೇನೇ ಗುತ್ತಲದಲ್ಲಿ ಮಾಡಿದ್ದಾರೆ. ಅವರಿಗೂ ಓರ್ವ ಸಮರ್ಥ ಅಸಿಸ್ಟೆಂಟ್ ಇದ್ದರು. 'He has a good assistant in Mr. P.N.Patil who makes good models' ಎಂಬುದಾಗಿ ಸ್ವತಃ ಕಲೆಕ್ಟರನೇ ಶಾಲೆಗೆ ಭೆಟ್ಟಿಕೊಟ್ಟಾಗ (೧೧-೩-೧೯೦೭) ವಿಸಿಟ್ ಬುಕ್‌ನಲ್ಲಿ ಬರೆದಿದ್ದಾನೆ. ಗಳಗನಾಥರ ಸಹೋದ್ಯೋಗಿಗಳನ್ನು ಹೊಗಳುವ ವಿಚಾರದಲ್ಲಿ ಬಿ.ವಿ.ಕೇತಕರ ಎಂಬ ಶಿಕ್ಷಣಾಧಿಕಾರಿಯು ಒಂದು ಹೆಜ್ಜೆ ಮುಂದೆ ಹೋಗಿದ್ದಾನೆ.

" The assistants instead of disliking the Vigoroeus discipline appear well pleased and show their appreciation of it even in the absence of the Head-Master (Oct.1905)

ಗಳಗನಾಥರ ಕಾಲದ ವಿಸಿಟ್ ಬುಕ್‌ನಲ್ಲಿ ಅವರ ಶಿಕ್ಷಣ ಪದ್ಧತಿಯ ಬಗ್ಗೆ ಒಂದು ವಿಶಿಷ್ಟ ಒಕ್ಕಣಿಕೆಯಿದೆ. ಆ ಶಾಲೆಯಲ್ಲಿ ಎರಡು ಬಗೆಯ ಬಜೆಟ್ ಇತ್ತಂತೆ. ಒಂದು ಸರಕಾರಿ ಹಣದ ಜಮಾ ಮತ್ತು ವೆಚ್ಚದ್ದು. ಇನ್ನೊಂದು ಪಾಠಕ್ರಮದ್ದು! ಮುಂಬರುವ ತಿಂಗಳಲ್ಲಿ ಯಾರು ಯಾರು ಎಷ್ಟೆಷ್ಟು ಅಭ್ಯಾಸಭಾಗವನ್ನು (portion) ಮಾಡಿ ಮುಗಿಸಬೇಕೆಂದು ಮುಂಗಡ ಗೊತ್ತು ಪಡಿಸಿದ್ದರು. ಹೆಡ್‌ಮಾಸ್ತರರು ಕಾಲಕಾಲಕ್ಕೆ ಆ ಬಗ್ಗೆ ವಿಚಾರಿಸುತ್ತಿದ್ದರು.[3]

ಇದಾಗಿ ೧೦-೧೨ ವರ್ಷಗಳ ಅನಂತರದ (೮-೩-೧೯೧೯) ಒಂದು ಶರಾವನ್ನು ಇದ್ದುದಿದ್ದಂತೆ ನಿವೇದಿಸಿ, ನನ್ನ ಮಾತನ್ನು ಮುಗಿಸುವೆ:

" Visited the school at 8.00 a.m. The second Assistant - Master had not come and his students were idle. Such dereliction of duty on the part of Asst. Master is intolerable."

Sd/-
(3cd Asst. D.E.I)

P.S. The Second Assistant came to the school at 8.20 a.m., when I was leaving.

---

## ಪಶ್ಚಾತ್ ಟಿಪ್ಪಣಿ (Post-Script)

ಕ್ರಿ.ಶ. ೧೯೩೮ರಲ್ಲಿ ಮುಂಬಯಿ ಸರಕಾರವು ಪ್ರಾಥಮಿಕ ಶಿಕ್ಷಣವನ್ನು ಪೂರ್ಣವಾಗಿ ತನ್ನ ನಿಯಂತ್ರಣದಲ್ಲಿಇಟ್ಟುಕೊಂಡಿತು. ಶಿಕ್ಷಕನಿಗೆ ಆ ಹಿಂದೆ ಶಾಲಾಪ್ರಗತಿಗೆ ಅನುಗುಣವಾಗಿ ವರಮಾನ ದೊರೆಯುತ್ತಿದ್ದದ್ದು ಹೋಗಿ ನಿಯಮಿತವಾಗಿ ತಿಂಗಳು ತಿಂಗಳು ಪಗಾರ ಬರತೊಡಗಿದಾಗ, ಹಳ್ಳಿಯ ಶಾಲೆಗಳಲ್ಲಿ ಮಾಸ್ತರರು,ರಜಾ ಬರೆದಿಟ್ಟು ಹೋಗಿಬಿಡುವುದು, ಆ ಕಾಲಕ್ಕೆ ಇನ್‌ಸ್ಪೆಕ್ಟರರು ಬಂದಿಲ್ಲವಾದರೆ, ಅದನ್ನು ಹರಿದು ಹಾಕಿ ಬಿಡುವುದು. ಹಾಜರಿ ಬರೆಯುವುದು, ಮುಂತಾದ ಉಪಕ್ರಮಗಳು ಕ್ರಮೇಣ ಆರಂಭವಾದುವು.

---

1. ಬೇರೆ ಜಿಲ್ಲೆಯ ಅಧಿಕಾರಿಯೊಬ್ಬರು ರಜೆಯಲ್ಲಿ ಒಂದು ಹಳ್ಳಿಗೆ ಬಂದಿದ್ದಾಗ ಶಾಲೆಗೆ ಭೆಟ್ಟಿಕೊಟ್ಟು ಶರಾ ಬರೆದ ಉದಾಹರಣೆಯೂ ಇದೆ.
2. ಇಲ್ಲಿಯ ''೧ನೇ...., ೪ನೇ ''ಎಂಬುದು ನನಗೆ ಸ್ಪಷ್ಟವಾಗಿ ತಿಳಿದಿಲ್ಲ.
3. ವಿಸಿಟ್ ಬುಕ್‌ನಿಂದಲೇ ಹೆಚ್ಚಾಗಿ ತೆಗೆದುಕೊಂಡ ಗಳಗನಾಥರ ಬಗೆಗಿನ ಇನ್ನು ಕೆಲವು ಅಭಿಪ್ರಾಯಗಳನ್ನು ನನ್ನ 'ಗಳಗನಾಥ ಮಾಸ್ತರರು' (ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟಣೆ, ೧೯೭೨) ಗ್ರಂಥದಲ್ಲಿ ಕೊಟ್ಟಿದ್ದಿದೆ.

ಡಾ॥ ಲೀಲಾ ಬಿ.

# ಸಾಮಾಜಿಕ ಸುಧಾರಣೆಯಲ್ಲಿ ಥಿಯಾಸಫಿಯ ಪಾತ್ರ: ಮೈಸೂರಿಗೆ ಸಂಬಂಧಿಸಿದಂತೆ

ಥಿಯಾಸಫಿ ಅಥವಾ ಬ್ರಹ್ಮಜ್ಞಾನ ಸಂಸ್ಥೆ 19ನೇ ಶತಮಾನದ ಕೊನೆಯಲ್ಲಿ (1975) ರಷ್ಯದ ಮಹಿಳೆ ಹೆಚ್.ಪಿ. ಬ್ಲೋವಟ್ಸ್ಕಿ ಮತ್ತು ಅಮೇರಿಕದ ವಕೀಲ ಪತ್ರಕಾರ ಕರ್ನಲ್ ಹೆನ್ರಿ ಆಲ್ಕಾಟ್ ನ್ಯೂಯಾರ್ಕನಲ್ಲಿ ಒಂದಾಗಿ ಯತ್ನಿಸಿ ಸ್ಥಾಪಿಸಿದ ಸಂಸ್ಥೆ. ದಿವ್ಯಜ್ಞಾನ ಸಂಸ್ಥೆಯ ಮೂಲ ಉದ್ದೇಶ; ಪ್ರಪಂಚದಲ್ಲಿ ಸೌಹಾರ್ದವನ್ನು ಉಂಟುಮಾಡುವದು, ವಿಶ್ವ ಶಾಂತಿಯನ್ನು ಹಬ್ಬುವದು, ಸರ್ವಧರ್ಮಗ್ರಂಥಗಳ ಅಭ್ಯಾಸ ಮತ್ತು ಜನರಿಗೆ ಪಕ್ಷಪಾತವಿಲ್ಲದೆ ಸರ್ವಧರ್ಮ ಸಾರಾಂಶವನ್ನು ತಿಳಿಸುವದು ಮತ್ತು ಗಹನವಾಗಿರುವ ಅಧ್ಯಾತ್ಮ ವಿಷಯಗಳನ್ನು ಕೂಲಂಕಷವಾಗಿ ವಿಮರ್ಶಿಸಿ ಕಂಡು ಹಿಡಿಯುವದು ಮತ್ತು ಅತೀಂದ್ರಿಯ ಶಕ್ತಿ ವೃದ್ಧಿಪಡಿಸುವದು ಆಗಿತ್ತು[1].

1878ರಲ್ಲಿ ಎಸ್.ಪಿ. ಬ್ಲೊವಾಟ್ಸ್ಕಿಯು ತನ್ನ ಸಹಾಯಕ ಕರ್ನಲ್ ಆಲ್ಕಾಟ್ ಒಡಗೂಡಿ ಮುಂಬಯಿನಲ್ಲಿದ್ದ ಆರ್ಯಸಮಾಜವನ್ನು ಸಂಪರ್ಕಿಸಿ ತಮ್ಮ ತತ್ವ ಆರ್ಯ ಸಮಾಜದೊಂದಿಗೆ ಹೊಂದಾಣಿಕೆಯಾದ್ದರಿಂದ ಮುಂಬಯಲ್ಲಿದ್ದ ಸ್ವಾಮಿದಯಾನಂದರನ್ನು ಕಂಡು ಅವರೊಡಗೂಡಿ ಕೆಲಸವನ್ನು ಹಮ್ಮಿಕೊಂಡರು. ಆದರೆ ಈ ಹೊಂದಾಣಿಕೆ ಬಹುಬೇಗ ಮುರಿಯಿತು. ಭಾರತದಲ್ಲಿ ಥಿಯಾಸಫಿ ಪಂಥಕ್ಕೆ ಬಹುಬೇಗ ಚಾಲನೆ ದೊರೆಯಿತು. 1882ರಲ್ಲಿ ಬ್ಲೊವಾಟ್ಸ್ಕಿಯು ಕರ್ನಲ್ ಆಲ್ಕಾಟ್ ಒಡಗೂಡಿ ಭಾರತವನ್ನೆಲ್ಲಾ ಸಂದರ್ಶಿಸಿ ಅಪಾರ ಶಿಷ್ಯವೃಂದವನ್ನು ಸಂಪಾದಿಸಿದರು. ಅವರಲ್ಲಿ ಅನೇಕ ಸ್ಥಳೀಯರು, ವಿದೇಶಿಯರೂ ಇದ್ದರು. 1882 ರಲ್ಲಿ ಮದ್ರಾಸಿನ ಅಡ್ಯಾರ್‌ನಲ್ಲಿ ತಮ್ಮ ಸಂಸ್ಥೆಯನ್ನು ಸ್ಥಾಪಿಸಿದರು.

ಥಿಯಾಸಪಿ ಪಂಥಕ್ಕೆ ಮುಂಚೆ ಬ್ರಹ್ಮಸಮಾಜಕ್ಕೆ ಒಲಿದಿದ್ದ ಹಲವಾರು ವಿದ್ಯಾವಂತ ಕುಲೀನರು ಥಿಯಾಸಫಿಗೆ ಒಲಿದರು. ಇದಕ್ಕೆ ಕಾರಣ 19ನೇ ಶತಮಾನದ ಪೂರ್ವಾರ್ಧದಲ್ಲಿ ಆಂಗ್ಲ ವಿದ್ಯಾಭ್ಯಾಸ ಮಾಡಿದ ಹಲವಾರು ಜನರಲ್ಲಿ ಫಿರಂಗಿಯವರ ಅನುಕರಣೆ ಕಡಿಮೆಯಾಗುತ್ತಾ ಬಂತು. ಬ್ರಹ್ಮಸಮಾಜದಲ್ಲಿರುವ ಶ್ರದ್ಧೆ ಕಡಿಮೆಯಾಗಿ ರಾಷ್ಟ್ರೀಯ ಭಾವನೆ ತಲೆದೋರಿತು. ಜನರಿಗೆ ಆಗ ಬೇಕಾದದ್ದು ಹಿಂದೂಸ್ತಾನದ ಮೇಲ್ಮೆಯನ್ನೂ ಮತ್ತು ಹೆಚ್ಚಳಿಕೆಯನ್ನೂ ತೋರಿಸುವಂತ ಒಂದು ಚಳುವಳಿ. ಬ್ರಹ್ಮಸಮಾಜಕ್ಕೆ ಸೇರಿದ ಹಲವಾರು ಜನ ಸಮಾಜವನ್ನು ಎದುರಿಸುವದು ಕಷ್ಟವಾಗಿತ್ತು. ತಮ್ಮ ಸಹಬಂಧುಗಳೊಡನೆ ಕೂಡುವದು ಮತ್ತು ಚಿಕ್ಕ ಪುಟ್ಟ ಕರ್ಮಗಳಿಗೂ ಸಮಾದಲ್ಲಿ ಘರ್ಷಣೆ ಉಂಟಾಗುವುದು ಸಹಜವಾಗಿತ್ತು. ಬ್ರಹ್ಮ ಸಮಾಜದ ತತ್ವಕ್ಕೆ ಒಳಪಟ್ಟ ಹಲವಾರು ಜನ ಸಮಾಜವನ್ನು ಎದುರಿಸಿ ಅವಹೇಳನೆಯನ್ನು ಸಹಿಸ ಬೇಕಾಗಿತ್ತು. "Theosophy came to these classes of people as a variable gospel of peace and salvation It claimed much higher wisdom than that of modern rationalism, offered an apologoy in defence of the prevailing Hindu customs and practices and thus affected a reconciliation between the conscience of the educated and the customs and tradition of their Society".[2]

"ಇಂಡಿಯಾ ದೇಶವು ತನ್ನ ಪ್ರಗತಿಗೆ ಆಂಗ್ಲರ ಕಡೆಗೆ ನೋಡಬೇಕಾಗಿಲ್ಲ. ಪುರಾತನ ತತ್ವಗಳ ಅರಿಮೆಯಿಂದ ಹಿಂದೂ ದೇಶದ ಉನ್ನತಿ ಸಾಧ್ಯ[3]"

---

*ಈ ಲೇಖನಕ್ಕೆ ಆಧಾರ ಗ್ರಂಥ, ಮುಂಬಯಿ ವಿಶ್ವವಿದ್ಯಾನಿಲಯದ ಗ್ರಂಥಭಂಡಾರ, ಥಿಯಾಸಫಿ ಸೊಸೈಟಿ ಮುಂಬಯಿ, ಬೆಂಗಳೂರು, ಬಿಡಿ ಪತ್ರಿಕೆ ಮತ್ತು ಲೇಖನಗಳು.*

ಥಿಯಾಸಫಿಯ ಉದ್ದೇಶ ಇದೇ ಆಗಿದ್ದರಿಂದ ಬಹುಜನ ಇದಕ್ಕೆ ಒಲಿದರು. ಥಿಯಾಸಫಿಯು ಹಿಂದುತ್ವವನ್ನು ಎತ್ತಿಹಿಡಿದು ನೈತಿಕ, ಧಾರ್ಮಿಕ ಪುನರುಜ್ಜೀವನಕ್ಕೆ ಶ್ರಮಿಸಿತು. 1884 ರಲ್ಲಿ ಇಂಡಿಯಾದಲ್ಲಿ ಥಿಯಾಸಫಿಯ 100 ಶಾಖೆಗಳಿದ್ದವು.

ಮೈಸೂರಿನ ಸಮಾಜಿಕ ಸುಧಾರಣೆಯಲ್ಲಿ ಆರ್ಯ ಸಮಾಜದ ಮುನ್ನಡೆಯನ್ನು ಕಾಣಬಹುದಾದರೂ (1894) ಥಿಯಾಸಫಿ ಇದಕ್ಕೆ ಮೊದಲೇ ತನ್ನ ಹೆಜ್ಜೆಯನ್ನು ಇಟ್ಟಿತ್ತು. (1886).

ಥಿಯಾಸಫಿಯು ಬೆಳವಣಿಗೆಯನ್ನು ವೀಕ್ಷಿಸಿದಾಗ ಅದು ಮೈಸೂರಿನ ಪಲವಾರು ಭಾಗಗಳಲ್ಲಿ ವಿಸ್ತರಿಸಿದ್ದನ್ನೂ ಕಾಣಬಹುದು. (1886-1969) 69 ಕುಟೀರಗಳಿದ್ದು. ಅದರಲ್ಲಿ 17 ಜಾಗದಲ್ಲಿ ಥಿಯಾಸಫಿಗೆ ಸ್ವಂತ ಕಟ್ಟಡವಿದ್ದುದು ವ್ಯಕ್ತವಾಗಿದೆ. 1968ರಲ್ಲಿ 1322 ಸದಸ್ಯತ್ವವನ್ನ ಹೊಂದಿತ್ತು[4]. ಚಿತ್ರದುರ್ಗದಲ್ಲಿ (1905) ಥಿಯಾಸಫಿ ಸಂಘ ಪ್ರಗತಿಯನ್ನು ಕಾಣಬಹುದು. ಅತಿ ಹೆಚ್ಚಿನ ಸಂಖ್ಯೆಯಲ್ಲಿ ಸದಸ್ಯರಿದ್ದುದು ಬೆಂಗಳೂರಿನಲ್ಲಿ. ಬೆಂಗಳೂರಿನಲ್ಲಿ ಎರಡು ಕುಟೀರಗಳಿದ್ದು 244 ಜನ ಸದಸ್ಯರಿದ್ದರು. ಮೈಸೂರಿನ ದಿವಾನರಾಗಿದ್ದ ಶೇಷಾದ್ರಿ ಐಯರ್‌ರವರಿಗೆ ಥಿಯಾಸಫಿಯಲ್ಲಿ ಹೆಚ್ಚಿನ ಶ್ರದ್ದೆ ಇದ್ದುದು ವ್ಯಕ್ತವಾಗಿದೆ. ಶೇಷಾದ್ರಿ ಐಯರ್ ಥಿಯಾಸಫಿಯ ಸ್ಥಾಪಕರಾದ ಆಲ್ಕಾಟರವರನ್ನು ಬೆಂಗಳೂರಿಗೆ ಬರಮಾಡಿ ಅವರ ಜೊತೆ ಯೋಗ, ಅದ್ವೈತವನ್ನು ಚರ್ಚಿಸಿದ್ದು ಆಲ್ಕಾಟ್ ರವರ ದಿನಚರಿಯಿಂದ ಗೊತ್ತಾಗುತ್ತದೆ[5]. ಆಲ್‌ಕಾಟ್‌ರವರು ಬೆಂಗಳೂರಿನಲ್ಲಿ ಎರಡು ಕುಟೀರಗಳನ್ನು ಸ್ಥಾಪಿಸಿದ್ದಲ್ಲದೆ ಮೂರು ದಿವಸ ಸೆಂಟ್ರಲ್ ಕಾಲೇಜಿನ ಆವರಣದಲ್ಲಿ ತಮ್ಮ ಭಾಷಣವನ್ನು ಮಾಡಿ, ತಮ್ಮ ಭಾಷಣದ ಎರಡನೇಯ ದಿನ ಭಾಷಣಕ್ಕೆ ಟಿಕೆಟ್ ಮಾರಬೇಕಾಯಿತು ಎಂದಿದ್ದಾರೆ[6]. ಸ್ವತಃ ಶೇಷಾದ್ರಿ ಐಯರ್ ಥಿಯಾಸಫಿಗೆ ಸದಸ್ಯರಾದರು (1 Aug 1886). ಆಲ್‌ಕಾಟರವರು ತಮ್ಮ ಮೂರನೆಯ ಭಾಷಣಕ್ಕೆ (ವಾಯುಲೋಕ) ಮೈಸೂರಿನ ವಿದ್ವಾಂಸರ ನೆರವನ್ನು ಪಡೆದರು. ಆಲ್‌ಕಾಟರವರು 24.11.1887ರಂದು ಮತ್ತೊಮ್ಮೆ ಥಿಯಾಸಫಿಯ ಸಂಘಕ್ಕೆ ಭೇಟಿಯಿತ್ತು ತಮ್ಮ ವಾಕ್‌ಪಟುತ್ವದಿಂದ ಅನೇಕ ಸದಸ್ಯರನ್ನುಗಳಿಸಿದರು. 1893ರಲ್ಲಿ ಡಿಸೆಂಬರ್ ಆನಿಬೆಸೆಂಟರು ಮೇಯೋಹಾಲಿನಲ್ಲಿ 'ಥಿಯಾಸಫಿ ಮತ್ತುಎಥಿಕ್ಸ್' ಬಗ್ಗೆ ಮಾತಾಡಿದರು. ಅವರ ಮತ್ತೊಂದು ಭಾಷಣ ಲಾಲ್ ಬಾಗ್‌ನಲ್ಲಿ ನಡೆಯಿತು. ದಿವಾನ ಶೇಷಾದ್ರಿ ಐಯರ್ ಅಲ್ಲಿ ಹಾಜರಿದ್ದರು.

ಈ ಮೇಲಿನ ಹೇಳಿಕೆಯಿಂದ ಒಂದು ಅಂಶ ಸ್ಪಷ್ಟವಾಗಿದೆ. ಅದೆಂದರೆ ಮೈಸೂರಿನಲ್ಲಿ ಥಿಯಾಸಫಿಯ ಚಾಲನೆಗೆ ರಾಜಾಶ್ರಯದ ಪ್ರೋತ್ಸಾಹವಿತ್ತು[7].

ಥಿಯಾಸಫಿ ಸಂಘದ ಚಾಲನೆಯಲ್ಲಿ ಮುಖ್ಯ ಪಾತ್ರವಹಿಸಿದವರು ಸರ್ಕಾರದ ಅಧಿಕಾರಿಯಾದ ಕೆ.ಎಸ್. ಚಂದ್ರಶೇಖರ್ ಐಯರ್. ಇದಕ್ಕೆ ಮೈಸೂರು ಮಹಾರಾಜರಾದ ನಾಲ್ವಡಿ ಕೃಷ್ಣರಾಜರು ಪರೋಕ್ಷವಾಗಿ ಸಹಾಯ ಮಾಡಿದಂತೆ ಕಾಣುತ್ತದೆ. ಸರ್ಕಾರದ ಆಜ್ಞೆಯಂತೆ8 ಥಿಯಾಸಫಿಯ ಕಟ್ಟಡಕ್ಕೆ ನಿವೇಶನ ನೀಡಿತು ಮತ್ತು ನಿವೃತ್ತ ಅಧಿಕಾರಿ (ಇಂಜಿನಿಯರ್) ವೈ.ಶ್ರೀನಿವಾಸರಾಯರು ಕಟ್ಟಡವನ್ನು ಕಟ್ಟಿಕೊಡಲು ಒಪ್ಪಿ, (10 ಜನವರಿ 1909) ಕಟ್ಟಡದ ಶಂಕುಸ್ಥಾಪನೆ ಡಾ॥ಆನಿಬೆಸೆಂಟರೇ ಮಾಡಿದರು[9].

ಥಿಯಾಸಫಿ ಸಂಘ ಮುಖ್ಯವಾಗಿ ಮೈಸೂರಿನಲ್ಲಿ ತಲೆ ಎತ್ತಲು ಕಾರಣ, ಸಂಘದವರ ನಿಷ್ಠೆ ಮತ್ತು ತತ್ವಪ್ರಚಾರಕರ ಕಾರ್ಯ ತತ್ಪರತೆ ಕಾರಣ. ಥಿಯಾಸಫಿಯ ತತ್ವಪ್ರಚಾರಕ್ಕೆ ಮೇಲ್ವಿಚಾರಕರು ಇದ್ದು ಉಪಸಂಘಗಳು ಸರಿಯಾಗಿ ಕೆಲಸ ಮಾಡುತ್ತಿವೆಯೇ ಎಂದು ವರದಿ ಒಪ್ಪಿಸ ಬೇಕಾಗಿತ್ತು ಮತ್ತು ಉಪಸಂಘಗಳಲ್ಲಿ, ಉಪನ್ಯಾಸ ಮಾಲಿಕೆ, ತತ್ವಪ್ರಚಾರ, ಸಮಾಜಸೇವೆ ಇವುಗಳ ಕಾರ್ಯ ಕೈಗೊಳ್ಳಬೇಕಾಗಿತ್ತು. Theosophy in India (1904 - 1910) ಎಂಬ ಮಾಸ ಪತ್ರಿಕೆಯಿಂದ ಈ ಅಂಶ ಸ್ಪಷ್ಟವಾಗಿದೆ. ಥಿಯಾಸಫಿಗೆ ಹೆಚ್ಚಿನ ಸಂಖ್ಯೆಯಲ್ಲಿ ಸದಸ್ಯರಿದ್ದುದು, ವಕೀಲರು[10], ಉಪಾಧ್ಯಾಯರು ಮತ್ತಿತರು. ಮುಂಬಯಿಯ ಥಿಯಾಸಫಿ ಸಂಘಕ್ಕೆ ಮೈಸೂರಿನ ಬಿ.ಸುಬ್ರಹ್ಮಣ್ಯನವರನ್ನು ಕರೆಸಿ ಉಪನ್ಯಾಸ ಮಾಡಿಸಿದ್ದುಂಟು[11] ಮತ್ತು ಎಸ್.ರಾಘವೇಂದ್ರರಾವ್ ಎಂಬ ಕನ್ನಡಿಗರು 1899ರಲ್ಲೇ ಮುಂಬಯಿಂದ ಬನಾರಸ್‌ಗೆ ಥಿಯಾಸಫಿಯ ಪ್ರಚಾರಕ್ಕೆ ಹೋದವರಲ್ಲಿ ಮೊದಲಿಗರು[12].

ಥಿಯಾಸಫಿ ಸಂಘವು 'ಸುಪಂಥ' ಎಂಬ ಮಾಸ ಪತ್ರಿಕೆಯನ್ನು ಥಿಯಾಸಫಿಯ ಪ್ರಚಾರಕ್ಕೋಸ್ಕರ ಜುಲೈ 1910ರಲ್ಲಿ ಹೊರಡಿಸಿತು. ಅದರಲ್ಲಿ ಮುಖ್ಯವಾದ ಅಧ್ಯಾತ್ಮಕ ವಿಷಯವಲ್ಲದೆ, ಸ್ತ್ರೀ ವಿದ್ಯಾಭ್ಯಾಸದ ಬಗ್ಗೆ ಲೇಖನಗಳು, ಸ್ತ್ರೀಗೆ ದೈಹಿಕ ವಿದ್ಯಾಭ್ಯಾಸ, ಕಲಾ ಕೌಶಲಾಭ್ಯಾಸ, ಶಾಸ್ತ್ರ ವಿದ್ಯಾಭ್ಯಾಸ, ಬುದ್ಧಿಕೌಶಲಾ ಭ್ಯಾಸ,

ಪಾರಮಾರ್ಥಿಕಾಭ್ಯಾಸ ಇವುಗಳ ಅವಶ್ಯಕತೆಯ ಬಗ್ಗೆ ಅಧಿಕಾರಯುತವಾದ ಲೇಖನಗಳನ್ನು ಪ್ರಕಟಿಸುತ್ತಿತ್ತು.

"ಕಾಲೋಚಿತವಾಗಿ ತಕ್ಕಮಟ್ಟಿಗೆ ಸ್ತ್ರೀಗೆ ಇಂಗ್ಲಿಷ್ ವಿಧ್ಯಾಭ್ಯಾಸವನ್ನು ಮಾಡಿಸಬೇಕು, ಇದರಿಂದ ಗಂಡಸ ರಮನಸ್ಸಿನಲ್ಲಿ ಇಂಗ್ಲೀಷರ ಅಭಿಪ್ರಾಯಗಳು ಎಷ್ಟರ ಮಟ್ಟಿಗೆ ಪ್ರವೇಶಿಸಿದೆ? ಹೊರಗಿನ ಪ್ರಪಂಚ ಏನಾಗಿದೆ ಎಂಬುದನ್ನು ತಿಳಿದುಕೊಳ್ಳಬೇಕು."[13]

'ಸುಪಂಥ' ಎಂದರೆ ಒಳ್ಳೆಯ ಮಾರ್ಗ. ವೇದವು ಹೇಳುವ ಮಾರ್ಗವಲ್ಲವೆ ಒಳ್ಳೆಯ ಮಾರ್ಗ? ಲೌಕಿಕ ವ್ಯಾಪಾರಗಳಲ್ಲಿ ಎಷ್ಟು ಭೇಧವಿದ್ದರೂ ಧರ್ಮವನ್ನಾ ಚರಿಸುವ ವಿಷಯದಲ್ಲಿ ಪರಸ್ಪರ ಭೇಧವೇನೂ ಇರತ ಕ್ಕದ್ದಲ್ಲ. ಈ ಸಿದ್ದಾಂತವನ್ನು ಅನುಸರಿಸಿ ಸುಪಂಥ ಪತ್ರಿಕಾದ್ವಾರಾ ವೇದೋಕ್ತ ಮಾರ್ಗವನ್ನು ಎಲ್ಲರೂ ತಿಳಿಯುವಂತೆ ವಿದ್ಯಾಸಮಾಜದವರು ಪ್ರಚಾರ ಪಡಿಸಿರುವರು[14].

ಮೈಸೂರಿನ ಕ್ರೌನ್‌ಪ್ರೆಸ್‌ನಲ್ಲಿ ಮುದ್ರಿತವಾಗುತ್ತಿದ್ದ 'ಸುಪಂಥ' ಮಾಸಪತ್ರಿಕೆಯಾಗಿ ೧ ರೂ ಬೆಲೆಯಿತ್ತು. 'ಸುಪಂಥ'ವನ್ನು ಹಲವಾರು ವರುಷ ಸಂಪಾದಕರಾಗಿ ನಡೆಸಿದವರು ಮೈಸೂರಿನ ಓರಿಯಂಟಲ್ ಲೈಬ್ರರಿಯ ಲೈಬ್ರರಿಯನ್ ಎ.ಮಹದೇವ ಶಾಸ್ತ್ರಿಗಳು ಮತ್ತು ಮೈಸೂರು ಮಹಾರಾಜ ಕಾಲೇಜಿನ ಅಸಿಸ್ಟೆಂಟ್ ಮಾಸ್ಟರ್ ಎ.ವೆಂಕಟೇಶಯ್ಯನವರು. ಇವರು ಅಂಬಳೆ ಅಣ್ಣಯ್ಯ ಪಂಡಿತರ ಮೊಮ್ಮಕ್ಕಳು. ಎ.ಮಹದೇವ ಶಾಸ್ತ್ರಿಗಳು ಮದ್ರಾಸಿನ ಅಡಿಯಾರ್ ಲೈಬ್ರರಿಗೆ, ಏ.ವೆಂಕಟೇಶಯ್ಯನವರಿಗೆ ಕೋಲಾರಕ್ಕೆ ಹೋಗಬೇಕಾಗಿ ಬಂದಾಗ, ವೆಂಕಣ್ಣಭಟ್ಟರು ಸಂಪಾದಕತ್ವವನ್ನು ವಹಿಸಿ ಕೊಂಡರು. ಆದರೆ ಆರ್ಥಿಕ ಮುಗ್ಗಟ್ಟಿನಿಂದ ಪತ್ರಿಕೆ ಬಹುಕಾಲ ನಡೆಯದೆ ನಿಂತಿತು. ವೆಂಕಣ್ಣಭಟ್ಟರು 'ಬ್ರಹ್ಮವಿದ್ಯೆ' ಎಂಬ ಪತ್ರಿಕೆಯನ್ನು ಪ್ರಾರಂಭಿಸಿ, ಅದೂ ನಿಲ್ಲಬೇಕಾಯಿತು. ಬ್ರಹ್ಮ ತತ್ವಪ್ರಚಾರಕ್ಕೆ ಪತ್ರಿಕೆಯ ಅವಶ್ಯಕತೆ ಇದ್ದುದರಿಂದ 1928ರಲ್ಲಿ 'ದಿವ್ಯಜ್ಯೋತಿ' ಉದಯಿಸಿತು. ಎ.ವೆಂಕಟೇಶಯ್ಯನವರು ಪತ್ರಿಕೆಯನ್ನು ಬಹುಕಾಲ ನಡೆಸಿದರು. ಅವರ ಬಳಿಕ ಜವಾಬ್ದಾರಿ ಹೊತ್ತ ಎ.ವಾಸುದೇವಯ್ಯ, ಟಿ.ಎನ್. ಜಯದೇವಣ್ಣ ಮತ್ತು ಈಗ ಸಿ.ಎನ್ .ನಾಗರಾಜ್‌ರವರಿಂದ 'ದಿವ್ಯಜ್ಯೋತಿ' ಜೀವಂತ ವಾಗಿದೆ.[15]

ಥಿಯಾಸಫಿಯ ಸಂಘ ಹಲವಾರು ಪುಸ್ತಕ ಪ್ರಕಟ ನೆಗಳನ್ನು ಕೈಗೊಂಡಿದ್ದಲ್ಲದೆ ಹಲವರಿಂದ 'ದಿವ್ಯಜ್ಞಾನ' ಸಂಸ್ಥೆಯ ವಿಷಯವಾಗಿ ಬರೆಸಿತೂ ಕೂಡ. 'ಸುಪಂಥ'ದ ಸಂಪಾದಕರಾಗಿದ್ದ ಎ.ವೆಂಕಟೇಶಯ್ಯನವರು 'ಸಾಧನ ಚತುಷ್ಟಯ', 'ಮನಶ್ಶಕ್ತಿ', 'ಆರ್ಯರ ನಾಗ ರೀಕತೆ', 'ಶಿಷ್ಯತ್ವಪ್ರಾಪ್ತಿ' ಮತ್ತು 'ಭಗವದ್ಗೀತಾ ರಹಸ್ಯ ಟೀಕಾ ತಾತ್ಪರ್ಯ'ವನ್ನು ಪ್ರಕಟಿಸಿದರು. ಮತ್ತೊಬ್ಬ ಥಿಯಾ ಸಫಿ ಮುಖ್ಯಸ್ಥರಾದ ವಿ.ವೆಂಕಣ್ಣಭಟ್ಟರು, 'ಬ್ರಹ್ಮ ವಿ ದ್ಯಾದರ್ಪಣ', 'ಪರಾ ವಿದ್ಯೆ' ಎಂಬ ಪುಸ್ತಕವನ್ನು ಬರೆದರು. ಕಳಲೆ ಮಾಧವ ರಾವ್‌ರವರು 'ಮನುಷ್ಯ ಅವನ ದೇಹಗಳು' ಎಂಬ ಪುಸ್ತಕ ಪ್ರಕಟಿಸಿದ್ದಾರೆ. ಮೈಸೂರಿನ ಸಂಘದ ಸದಸ್ಯರಾದ ಎ.ವೆಂಕಟ್ರಾಮ ಪಂಡಿತರ ಪ್ರವೃತ್ತಿಮಾರ್ಗ ಮತ್ತು ನಿವೃತ್ತಿಮಾರ್ಗ, ಆತ್ಮವಿಚಾರ ಇವೆಲ್ಲಾ ಸಂಘದವತಿಯ ಪ್ರಕಟಣೆಗಳು.

ಥಿಯಾಸಫಿ ಸಂಘವು ಹಣವನ್ನು ಕೂಡಿಸಿ ಹಲ ವಾರು ಪುಸ್ತಕಗಳನ್ನು ಕನ್ನಡಿಸಿದೆ. 'Kannada Translation of II part of Study in Conciousness' (2), 'Translation of theoutlines of Theosophy' and (3) 'Translation of Practical Theosophy.' ಇವುಗಳು ಮುಖ್ಯವಾದವು. ಎ.ಸುಬ್ರಹ್ಮಣ್ಯರವರ 'ಮಕ್ಕಳೊಡನೆ ಹೇಗೆ ವರ್ತಿಸಬೇಕು' ಮತ್ತು ಎ.ವಾಸು ದೇವಯ್ಯನವರ "ಥಿಯಾಸಫಿ ಕೈಪಿಡಿ" ಉಪಯುಕ್ತ ವಾಗಿದೆ. ಶ್ರೇಯಸ್ಸು, ಸಮತ್ವ, ಆತ್ಮಾ ವಲಂಬನ, ಈಶ್ವರಪೂಜೆ ಮತ್ತು ಪುರುಷಾತ್ಮ-ಅಂತರಾತ್ಮ ಮತ್ತು ದೇಹಾತ್ಮ ಎಂಬ ಪುಸ್ತಕಗಳು ಸಂಘದ ವತಿಯಿಂದ ಟಿ.ವಿ.ರಾಚಪ್ಪನವರು ಪ್ರಕಟಿಸಲು ಸಾಧ್ಯವಾಯಿತು. ಶ್ರೀಮತಿ. ಎಮ್.ಕೆ.ಇಂದಿರಾ ಅವರ ಒಂದು ಕಾದಂಬರಿ ತಮ್ಮ ಸೋದರಮಾವ ಅನಂತಯ್ಯನವ ರನ್ನು (ಥಿಯಾಸಫಿ ಸಂಘಕ್ಕೆ ಸೇರಿದವರು) ಆದರಿಸಿದೆ.[16]

ಸರಕಾರದ ಅಧಿಕಾರದಲ್ಲಿದ್ದ ಹಲವಾರು ಅಧಿಕಾ ರಿಗಳು ಥಿಯಾಸಫಿಯ ಬೆಳವಣಿಗೆಯಲ್ಲಿ ಭಾಗವಹಿಸಿ ದ್ದನ್ನು ಕಾಣಬಹುದು.

ಕೆ.ಎಸ್.ಚಂದ್ರಶೇಖರ ಐಯ್ಯರ್: ಕೆ.ಎಸ್ .ಚಂದ್ರ ಶೇಖರ್ ಐಯ್ಯರ್ ಅವರು (1886-1946) ತಮ್ಮ ತಂದೆಯವರಾದ ತಿರುಚನಾಪಳ್ಳಿಯ ದಿವಾನ್ ಶಂಕರ್ ಐಯ್ಯರ್‌ರವರ ಹತ್ತಿರವಿದ್ದ ಥಿಯಾಸಫಿ ಗ್ರಂಥಗಳಿಂದ ಪ್ರಭಾವಿತರಾದರು. ಮೈಸೂರು ಸರ್ಕಾರದ ಸಿವಿಲ್ ಸರ್ವಿಸ್‌ನಲ್ಲಿ ತೇರ್ಗಡೆಹೊಂದಿ 1892ರಲ್ಲಿ ಅಸಿಸ್ಟೆಂಟ್ ಕಮಿಷನ್‌ರಾಗಿ, ನ್ಯಾಯ ಮೂರ್ತಿಯಾಗಿ ಸೇವೆ ಸಲ್ಲಿ

ಸಿದರು. ಥಿಯಾಸಫಿಗೆ ಒಲಿದು ಅದರ ಪ್ರಚಾರಕ್ಕೆ ಬಹು ಮಟ್ಟಿಗೆ ಕಾರಣರಾದರು. ಬೆಂಗಳೂರು ಥಿಯಾಸ ಫಿಯ ಕಟ್ಟಡಕ್ಕೆ ಶ್ರಮಿಸಿದ್ದಲ್ಲದೆ ತಮ್ಮ ತಂದೆಯವರ ಹೆಸರಿನಲ್ಲಿ ಶಂಕರಯ್ಯಹಾಲ್ ಎಂಬ ಸಂಗೀತ ಮಂದಿರ ಕಟ್ಟಿಸಿರು ತ್ತಾರೆ. ಸಿಟಿ ಇನ್ಸಿಟ್ಯೂಟ್ ಕಾರಣಕರ್ತ. ಅನಿ ಬೆಸೆಂಟ್ ಶಂಕ ರಯ್ಯಹಾಲಿನಲ್ಲಿ ಭಾಷಣ ಮಾಡಿದ್ದುಂಟು. ಪಾರ್ವತಮ್ಮ ಚಂದ್ರಶೇಖರ್ ಐಯ್ಯರ್ ಮಹಿಳೆಯರ ಏಳ್ಗೆಗೆ ಶ್ರಮಿಸಿ ದರು. ಮಹಿಳಾ ಸೇವಾ ಸಮಾಜವನ್ನು ಸ್ಥಾಪಿಸಿ ಬುಲ್ವಾ ಎಂಬ ಉದ್ಯಾನವನ್ನು ಮತ್ತು ಪಾರ್ವತಮ್ಮ ಆಸ್ಪತ್ರೆ ಯನ್ನು ಕಟ್ಟಿಸಿ ಜನೋಪಕಾರ ಮಾಡಿದ್ದಾರೆ. ಇದಲ್ಲದೆ 'ಮಾತೃಭೂಮಿಗೆ ಮಹಿಳೆಯರ ಕರ್ತವ್ಯ', ('ಸುಪಂಥ' Vol.VI No.1, July 1915) ಎಂಬ ಲೇಖನವನ್ನು ಪ್ರಕಟಿಸಿ ಸ್ತ್ರೀಯರನ್ನು ಜಾಗೃತಿಗೊಳಿಸಿದರು.[17]

ಎ.ವೆಂಕಟೇಶಯ್ಯ: 50 ವರುಷಗಳಿಂದ ಥಿಯಾ ಸಫಿಗೆ ಹೆಚ್ಚಿನ ಸೇವೆ ಸಲ್ಲಿಸಿದ್ದ ಎ.ವೆಂಕಟೇಶಯ್ಯ (1866-1946)ಬ್ರಹ್ಮ ವಿದ್ಯಾಪ್ರಚಾರಕರು. ಮೈಸೂರು ಹೈಸ್ಕೂಲಿನಲ್ಲಿ ಹೆಡ್‌ಮಾಸ್ಟರ್ ಆಗಿ ಭೌತಶಾಸ್ತ್ರವನ್ನು ಕಲಿಸುತ್ತಿದ್ದರು. 1910ರಲ್ಲಿ 'ಸುಪಂಥ' ಮತ್ತು (1928) 'ದಿವ್ಯಜ್ಯೋತಿ' ಸಂಪಾದಕರಾಗಿ ಮೈಸೂರು ಲಾಡ್ಜ್ ಆರ್ಗನೈಸರ್ ಸೆಕ್ರೆಟರಿಯಾಗಿ, ಕರ್ನಾಟಕ ಫೆಡರೇಷನ್ ಪ್ರೆಸಿಡೆಂಟರಾಗಿಯೂ ಕೆಲಸಮಾಡಿದರು. ಇವರ ಭೋದನೆಯಿಂದ ಅನೇಕರಿಗೆ ಥಿಯಾಸಫಿಯಲ್ಲಿ ಶ್ರದ್ಧೆ ಉಂಟಾಯಿತು. ಸಾಧನ ಚತುಷ್ಟಯ, ಪತಂಜ ಲಿಯ ಯೋಗಸೂತ್ರವ್ಯಾಖ್ಯಾನ, ಭಗವದ್ಗೀತಾ ವ್ಯಾಖ್ಯಾನ ಪುಸ್ತಕಗಳನ್ನು ಬರೆದಿದ್ದಲ್ಲದೆ, ಥಿಯಾಸ ಫಿಯ ಉಪನ್ಯಾಸಕರಾಗಿ, ಹರಿಕಥೆ ಮೂಲಕ ಥಿಯಾ ಸಫಿಯ ಪ್ರಚಾರ ಮಾಡಿದರು. ಇವರ ಭೋದನೆ ಯಿಂದ ಅನೇಕರಿಗೆ ಥಿಯಾಸಫಿಯಲ್ಲಿ ಶ್ರದ್ಧೆ ಉಂಟಾ ಯಿತು. ವೇದಾಂತಶಾಸ್ತ್ರನುಸಾರ ವಿಧಿವತ್ತಾಗಿ ಸನ್ಯಾಸ ಸ್ವೀಕರಿಸಿ ಕೃಷ್ಣಾನಂದರಾಗಿ ಸಮಾಧಿಸ್ತರಾದರು.

ಕೆ.ನರಹರಿಶಾಸ್ತ್ರಿ : ಕೆ.ನರಹರಿಶಾಸ್ತ್ರಿಗಳು (1874-1954) ಆರ್ಯಬಾಲಿಕಾ ಪಾಠಶಾಲೆಯ ಹೆಡ್ ಮಾಸ್ಟರ್ ಆಗಿ, 50 ವರುಷದ ಹಿಂದೆಯ ಮೈಸೂರಿನ ಥಿಯಾಸಫಿ ಪಂಥಕ್ಕೆ ಒಲಿದರು. ತಮ್ಮ ಹೆಡ್‌ಮಾಸ್ಟರ್ ಪದವಿಗೆ ರಾಜೀನಾಮೆಯಿತ್ತು ಥಿಯಾಸಫಿಗೆ ಸೇರಿ, ಲಾಡ್ಜ್ ಆರ್ಗನೈಸರ್ ಮತ್ತು ಜನರಲ್ ಸೆಕ್ರೆಟರಿ ಆಗಿ ಥಿಯಾಸಫಿಯ ವಿಚಾರವಾಗಿ ವಿಶೇಷ ಪ್ರಚಾರ ಕೈಗೊಂಡರು. ಕರ್ನಾಟಕ, ರಾಯಲ ಸೀಮಾ, ಆಂಧ್ರ ಮತ್ತು ಕೇರಳ ಫೆಡರೇಷನ್‌ನಲ್ಲೂ ಕೆಲಸ ಮಾಡಿದ್ದಲ್ಲದೆ ಅಡ್ಯಾರ್ ಭಾರತ ಸೇವಾ ಸಮಾಜಕ್ಕೆ 30,000 ರೂ. ಕೊಡಿಸಿದರು. ಕೆ.ನರಹರಿ ಶಾಸ್ತ್ರಿಗಳು ಹರಿಕಥೆ ಮತ್ತು ಮ್ಯಾಜಿಕಲ್ಯಾಂಟರ್ನ್ ಮೂಲಕ ಫಲ ಪ್ರದವಾಗುವಂತೆ ಥಿಯಾಸಫಿ ಪ್ರಚಾರ ಮಾಡುತ್ತಿದ್ದರು.

ರಾಜಪ್ಪ : ಎ.ವೆಂಕಟೇಶಯ್ಯನವರಿಂದ ಥಿಯಾಸ ಫಿಯ ಬಗ್ಗೆ ಸ್ಫೂರ್ತಿ ಹೊಂದಿದ ರಾಜಪ್ಪನವರು 2-7-1898 - 22-11-1967 ಮೈಸೂರು ವಿಶ್ವವಿದ್ಯಾನಿ ಲಯದ ಬಿ.ಎ.ಬಿ.ಟಿ. ಡಿಗ್ರಿ ಪಡೆದು, 1925ರಲ್ಲಿ ಬಂಗಾರು ಪೇಟೆಯಲ್ಲಿ ಉಪಧ್ಯಾ ಯರಾಗಿದ್ದಾಗ ದಾರಿಯಲ್ಲಿ ಥಿಯಾಸಫಿ ಸೊಸೈಟಿ ಹಲಗೆ ನೋಡಿ, ಒಳಹೊಕ್ಕು ಥಿಯಾಸಫಿ ಪುಸ್ತಕಗಳನ್ನು ಓದಿ ಪ್ರಭಾವಿ ತರಾದರು. ಸ್ಕೂಲ್ ಇನ್‌ಸ್ಪೆಕ್ಟರ್ ಹುದ್ದೆಯಲ್ಲಿದ್ದರಾ ಜಪ್ಪ ಊರೂರು ತಿರುಗುತ್ತ ಸಮಯ ಸಿಕ್ಕಾಗ, ಥಿಯಾಸಫಿಯ ಪ್ರಚಾರ ಮಾಡುತ್ತಿದ್ದರು. 1954ರಲ್ಲಿ ರಾಜಪ್ಪ ಬೆಂಗಳೂರಿನಲ್ಲಿ ನೆಲಸಿದರು. ಮತ್ತು ಥಿಯಾಸಫಿಯ ಲಾಡ್ಜಿನ ಸೆಕ್ರೆಟರಿಯಾಗಿ ಮತ್ತು ಪ್ರೆಸಿಡೆಂಟರಾಗಿ ಶ್ರಮಿಸಿದರು. ಇವರ ನೇತೃತ್ವದಲ್ಲಿ ಥಿಯಾಸಫಿಯ ಸದಸ್ಯತ್ವ ಹೆಚ್ಚಿತು. "ಹಿರಿಯರಾಗಿದ್ದು ದೇಹ ಕುಗ್ಗುವರೆಗೂ ಕರ್ನಾಟಕದಲ್ಲಿ ಪ್ರವಾಸ ಮಾಡುತ್ತಾ ಥಿಯಾಸಫಿಯ ಪ್ರಚಾರವನ್ನು ಮಾಡುತ್ತಿರುವದನ್ನು ನಾವೆಲ್ಲಾ ಕಂಡಿರುವೆವು. ಇವರ ಪ್ರಭಾವಕ್ಕೆ ಒಳಗಾಗಿ ಒಬ್ಬ ಪಾದ್ರಿ ಮತ್ತು ಮುಸ ಲ್ಮಾನ ಬಂಧುಗಳು ಥಿಯಾಸಫಿಗೆ ಸೇರಿದ್ದನ್ನು ನೋಡಿ ರುವೆವವು".[18] ರಾಜಪ್ಪ 66 ಮೂಲ ಗ್ರಂಥಗಳನ್ನು ಕನ್ನಡಿಸಿರುವರು. ರಾಜಪ್ಪನವರ 'ಹೆಂಡತಿ ಬಸಮ್ಮ ಮನೆ ಮನೆಗೂ ಹೋಗಿ, ಹಳ್ಳಿಯ ಸ್ತ್ರಿಯರ ಸಂಗಡ ವ್ಯವಹರಿಸಿ ಸತ್ಸಂಗ, ಶುಚಿತ್ವ ಇವುಗಳನ್ನು ಹಳೇಪಾ ಳ್ಯದ ಹೆಂಗಸರಿಗೆ ಭೋಧಿಸಿ ಅವರುಗಳನ್ನು ಜಾಗೃತ ಗೊಳಿಸಿದನ್ನು ಸ್ಮರಿಸಬೇಕು.

ಆರ್ ರಘುನಾಥರಾವ್ : ಸೆಂಟ್ರಲ್ ಕಾಲೇಜಿನಲ್ಲಿ ಉಪಾಧ್ಯಾರಾಗಿದ್ದ ಆರ್. ರಘುನಾಥರಾಯರು, ಇಂಗ್ಲಿಷ್, ಚರಿತ್ರೆ, ಭೂವಿವರಣೆ ಮತ್ತು ಭಾಷಾಂತ ರೀಕರಣಗಳಲ್ಲಿ ಭೋಧಕರಾಗಿದ್ದರು. ಸಾಮಾಜಿಕ ಸುಧಾರಣೆಯಲ್ಲಿ ಮುಖ್ಯಪಾತ್ರವಹಿಸಿ, 'ದಿವ್ಯಜ್ಞಾನ' ಸೊಸೈಟಿಯ ಸದಸ್ಯರಾಗಿದ್ದರು. 'ಸನಾತನ ಧರ್ಮ ದೀಪಿಕೆ' ಎಂಬ ಗ್ರಂಥವು ಅನಿಬೆಸೆಂಟ್‌ರವರ ಪ್ರೇರಣೆ ಯಿಂದ ಬರೆದದ್ದು, ಹಿಂದೂಮತದ, ಅಂಧ 'ಶ್ರದ್ಧೆಯನ್ನು ಹೋಗಲಾಡಿಸಿ ವೈದಿಕ ಮತದ ಪುನರು ಜ್ಜೀವನ ಮಾಡಬೇಕೆಂಬುದು ಮಾಲಿಕೆಯ ಉದ್ದೇಶ. ಇದಕ್ಕೆ ಒಪ್ಪಿದ್ದ ರಘುನಾಥರಾಯರು, ಸ್ತ್ರೀಪುರ್ನವಿವಾ

ಹದ ಬಗ್ಗೆ ನಿಯೋಗ ವಿಧಿಯ ವಿಚಾರವೆಂಬ ಗ್ರಂಥದಲ್ಲಿ ಯೋಚಿಸಿದ್ದರು. ಸಮಾಜ ಸುಧಾರಕರಿದ್ದರೂ ಅವರ ಜೀವನ ಪೂರ್ವ ಸಂಪ್ರದಾಯವಾಗಿತ್ತು.[19]

ಥಿಯಾಸಫಿಯು ದೈವಜ್ಞಾನಕ್ಕೆ ಸೀಮಿತವಾಗದೆ, ಸಾಮಾಜಿಕ ಕಾರ್ಯಗಳಿಗೂ ಗಮನಕೊಟ್ಟಿತ್ತು. ಮಕ್ಕಳ ಕೂಟದ ಆರ್.ಕಲ್ಯಾಣಮ್ಮ ಥಿಯಾಸಫಿಯ ಸದಸ್ಯರಾಗಿ, ಸಾಮಾಜಿಕ ಸೇವೆಯಲ್ಲಿ ತೊಡಗಿದ್ದರು ಮತ್ತು ಮಕ್ಕಳಿಗಾಗಿ ಶ್ರಮಿಸಿದರು. ಮಹಿಳೆಯರಿಗಾಗಿ ಶ್ರಮಿಸಿದ ಪಾರ್ವತಮ್ಮ ಚಂದ್ರಶೇಖರರವರ 'ಮಹಿಳಾ ಸೇವಾ ಸಮಾಜವು' ಸ್ತ್ರೀಯರ ಏಳ್ಗೆಗಾಗಿ ಶ್ರಮಿಸುತ್ತಿರುವ ಮತ್ತೊಂದು ಸಂಸ್ಥೆ. ಕೆ.ಎಚ್.ರಾಮಯ್ಯನವರ ಬೆಂಗಳೂರು ಇನ್ಸಿಟ್ಯೂಟ್ ಆಫ್ ಟೆಕ್ನಾಲಜಿ ಉನ್ನತ ಮಟ್ಟದ ತಾಂತ್ರಿಕ ಜ್ಞಾನವನ್ನು ಪ್ರೋತ್ಸಾಹಿಸಿದೆ. ನ್ಯಾಷನಲ್ ಎಜುಕೇಷನ್ ಅಂಗ ಸಂಸ್ಥೆಯಾಗಿ ಪ್ರಾರಂಭಿಸಿದ ನ್ಯಾಷನಲ್ಲಿ ಹೈಸ್ಕೂಲ್ ಮತ್ತು ಕಾಲೇಜು ಯಶಸ್ವಿಯಾಗಿದೆ.[20] ಇದಲ್ಲದೆ ಅಂಗಹೀನರಿಗೆ ಸೇವೆ, ಕುರುಡರಿಗೆ ಚಿಕಿತ್ಸೆ, ಕೈದಿಗಳ ಸುಧಾರಣೆ ಕೈಗೊಂಡಿತ್ತು.

1920ರ ನಂತರ ಥಿಯಾಸಫಿಯು ತನ್ನ ಕಾರ್ಯವನ್ನು ಮುಂದುವರಿಸಿತಾದರೂ, ಗಾಂಧಿಜೀಯವರ ಪ್ರಭಾವ ಜನರ ಮೇಲೆ ಹೆಚ್ಚಿನ ಪರಿಣಾಮವನ್ನು ಬೀರಿತು. ಥಿಯಾಸಫಿಯ ಅನೇಕ ಜನರು ಸ್ವಾತಂತ್ರದ ಚಳುವಳಿಯಲ್ಲಿ ಸೇರಿದರು. ಮತ್ತು 1933ರಲ್ಲಿ ಡಾ॥ಅನಿಬೆಸೆಂಟರವರ ಸಾವಿನಿಂದ ಥಿಯಾಸಫಿ ಸಂಘದ ಬಗ್ಗೆ ಜನರಲ್ಲಿ ಉತ್ಸಾಹ ಕಡಿಮೆಯಾಯಿತು. ಆದರೆ ಥಿಯಾಸಫಿ ಚಳವಳಿ ಇಂದಿಗೂ ಮುಂದುವರಿದಿದೆ. ಮೈಸೂರು ಸಂಸ್ಥಾನದ ಪ್ರದೇಶದಲ್ಲಿ ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತನ್ನದೇ ಮುದ್ರೆಯೊತ್ತಿದೆ.

---

(1) ವಿಶ್ವಕೋಶ, ಭಾಗ ೯ ಪು.276.
(2) Sita Ram Singh, 'Nationalism and Social Reform in India'. P.22. 1968.
(3) B.C.pal, 'Memories' Vol.I P.425; K.C.vyas, 'The Social Renaissance in India'.
(4) ಥಿಯಾಸಫಿ ವಜ್ರ ಮಹೋತ್ಸವ ಸ್ಮಾರಕ ಸಂಚಿಕೆ, 1969.
(5) Olcott Henry Steel, 'Old Diary Leaves; the Only Authentic History of the Theosophical Society, Vol-III, P.373. 1904.
(6) Ibid, P.373.
(7) Ibid, P.49-50 See also 'One Hundred years of Theosophy in Bangalore', 1886-1986. (Souvenir. The Bangalore City, Civil Lodge)
(8) order dated 31/Jan/1909, 31st July 1909 30th Sept. 1913. General Revenue Department File.
(9) 'Hundred years of Theosophy in Bangalore'
(10) 'Theosophy in India', 1904-1910
(11) K.J.B. Wadia, 'Fifty years of Theosophy in Bombay' 1931.
12) Ibid, P.62 Vol.I, No.7, Jan 1911 P.217.
(13) 'ಸುಪಂಥ' ಬೇರೆ ಬೇರೆ ಊರಿನಲ್ಲಿರುವ ಥಿಯಾಸಫಿ ಸಂಘಗಳ ಕಾರ್ಯಚಟುವಟಿಕೆಯನ್ನು ಇದು ಪ್ರಕಟಿಸುತ್ತಿತ್ತು.
(14) 'ಸುಪಂಥ' Vol. II Nov. 1911 P.6.
(15) ಡಿ.ಆರ್.ವೆಂಕಟರಮಣ, 'ಕಾಲು ಶತಮಾನ ಕಂಡ ಕನ್ನಡ ಪತ್ರಿಕೆಗಳು' ಪು.166, 1990.
(16) ಈ ವಿಚಾರವನ್ನು, ನನಗೆ ತಿಳಿಸಿಕೊಟ್ಟ ಶ್ರೀಮಾನ್.ನಿಟ್ಟೂರ ಶ್ರೀನಿವಾಸರಾಯರಿಗೆ ನಾನು ಆಭಾರಿ. ಇದಲ್ಲದೆ ಹಲವಾರು ಮಹನೀಯರ ವಿಚಾರವನ್ನು ನನಗೆ ತಿಳಿಸಿರುತ್ತಾರೆ.
(17) ವೈ.ಶ್ರೀನಿವಾಸರಾವ್, (Retd. Suptd. Engineer), ಮೈಸೂರು ಸಿವಿಲ್ ಸರ್ವಿಸ್‌ನ ಡಿ.ಶ್ರೀನಿವಾಸ ಐಯ್ಯಂಗಾರ್, ಕೆ.ವೆಂಕಟರಾಮಯ್ಯ, ಹೈಕೋರ್ಟ ಅಡ್ವೋಕೇಟ್ ವಾಸುದೇವಮೂರ್ತಿ, ಮತ್ತು ಪಾಪಣ್ಣ, ಶಾಂಪುರ ಗುರುಮೂರ್ತಿ, ಥಿಯಾಸಫಿಯ ಸಂಘಕ್ಕೆ ಶ್ರಮಿಸಿದರು. 'ಸುಪಂಥ' ಪತ್ರಿಕೆಯು 1928ರಲ್ಲಿ ದಿವ್ಯಜ್ಯೋತಿ ಎಂದಾಯಿತು.
18. 'ದಿವ್ಯಜ್ಯೋತಿ' Vol.60, No.12, Dec.1987. P.349.
19. ಡಿ.ವಿ.ಗುಂಡಪ್ಪ, ಜ್ಞಾಪಕ ಚಿತ್ರಶಾಲೆ, Vol.I, P.182-183.
20. 'One Hundred Years of Theosophy in Bangalore'.

ಎ.ಡಿ. ಕೃಷ್ಣಯ್ಯ

# ಚಿತ್ರದುರ್ಗದ ಒನಕೆ ಓಬವ್ವಳು – ಚಾರಿತ್ರಿಕ ವ್ಯಕ್ತಿ

ಚಿತ್ರದುರ್ಗದ ಇತಿಹಾಸವು ಅಲ್ಲಿನ ನಾಯಕರ ಪರಾಕ್ರಮದ ಅಪೂರ್ವ ಘಟನಾವಳಿಗಳಿಗೆ ಹೆಸರಾಗಿದೆ. ಇದರೊಡನೆ, ರಾಯಸದವರಸೇವೆಯಲ್ಲಿ ನಿರತರಾದ ವರ, ಸ್ವಾಮಿ ನಿಷ್ಠೆ, ನಾಡಭಕ್ತಿಯೊಡನೆ ಒಡೆಯರಿಗೆ ನಿಸ್ವಾರ್ಥಸೇವೆ, ಸ್ವಾರ್ಥತ್ಯಾಗ– ಬಲಿದಾನಗಳಿಗೆ ಅಭಾವವಿರದ ಸತ್ರಮಿಗಳಿಗೆ ಹೆಸರಾದದ್ದು ಇಲ್ಲಿನ ಇತಿಹಾಸ. ಇಂತಹ ಸನ್ನಿವೇಶಗಳಲ್ಲಿ ಕೀರ್ತಿಗಳಿಸಿದ ಚಿತ್ರದುರ್ಗದ ವೀರವನಿತ ಓಬವ್ವಳ ಅಸಮಾನ್ಯ ರೋಮಾಂಚನಕಾರಿ ಘಟನೆಯು ಚಿತ್ರದುರ್ಗದ ಇತಿಹಾಸದಲ್ಲಿನ ಒಂದು ಅವಿಭಾಜ್ಯ ಅಂಗವಾಗಿದೆ ಎಂಬುದು ಸರ್ವವಿಧಿತ.

ಈ ಒನಕೆ ಓಬವ್ವಳು, ಏಕಾಂಗಿಯಾಗಿ, ಯಾವ ಶಸ್ತ್ರಾಸ್ತ್ರಗಳಿಲ್ಲದೆ ಕೇವಲ ಒಂದು ಒನಕೆಯಿಂದಲೇ ಹಲವಾರು ಶತ್ರು ಸೈನಿಕರನ್ನು ಸಂಹರಿಸಿ ತನ್ನ ಸ್ವಾಮಿ ಭಕ್ತಿ ಮತ್ತು ಕರ್ತವ್ಯ ನಿಷ್ಠೆಯನ್ನು ತೋರುವುದ ಮೂಲಕ ಚಿತ್ರದುರ್ಗವನ್ನು ರಕ್ಷಿಸಿದಳೆಂಬುದು ವಿದಿತ ಈ ಘಟನೆ ಸಂಭವಿಸಿ ಸುಮಾರು ಇನ್ನೂರ ಇಪ್ಪತ್ತಾರು ವರ್ಷಗಳುರುಳಿವೆ. ಚಿತ್ರದುರ್ಗದ ಇತಿಹಾಸವು ಎಡಬಿಡದ ಸಂಶೋಧನೆ, ವಿಮರ್ಶೆ ಮತ್ತು ಚಿಂತನ –ಮಂಥನಗಳಿಗೆ ಒಡ್ಡಿ ಕೊಳ್ಳುತ್ತಿರುವುದಾಗಿದ್ದರೂ, ಈ ಒಬವ್ವೆಯ ಬಗ್ಗೆ ಯಾವ ನಿರ್ಧಿಷ್ಟ ಸಂಶೋಧನೆಗಳು ಈವರೆಗೆ ಹೊರಬರಲಿಲ್ಲ.

ಚಿತ್ರದುರ್ಗದ ಇತಿಹಾಸ ಘಟನೆಗಳನ್ನು ಸುಮಾರು ಇನ್ನೂರು ವರುಷಗಳ ಹಿಂದೆಯೇ, ಇಲ್ಲವೆ ಇದರ ಇತಿಹಾಸ ರಚನೆಯ ಕಾಲದಲ್ಲಿಯೇ ತೆಗೆದು ಕೊಂಡು, ಅಂದು ದೊರೆಯಬಹುದಾದ ದಾಖಲೆ, ಮಾಹಿತಿ ಮತ್ತು ಜನಜನಿತ ಸತ್ಯಾಂಶಗಳನ್ನು ತುಲನಾತ್ಮಿಸಿ, ಒರೆಗೆ ಹಚ್ಚಿದ್ದಲ್ಲಿ, ಓಬವ್ವಯ ಚಾರಿತ್ರಿಕ ವ್ಯಕ್ತಿತ್ವ ಮತ್ತು ಘಟನೆಯ ನಿಜಾಂಶ ಭಾವನೆಗಳನ್ನು ಯಾವ ಸಂದೇಹಕ್ಕು ಎಡೆಗೊಡದೆ ಸ್ಪಷ್ಟ ಅಭಿಪ್ರಾಯಗಳನ್ನೇ ದಾಖಲಿಸಬುದಾಗಿತ್ತು. ಆದರೆ, ಆ ಬಗೆಯ ನ್ಯಾಯ ಮಾರ್ಗದ ಇತಿಹಾಸಕ್ಕೆ ಉತ್ತೇಜನ ಪಡೆಯಲಾಗಿಲ್ಲ.

ಓಬವ್ವೆಯ ಬಗ್ಗೆ . ಇತ್ತೀಚೆಗೆ ಪ್ರಕಟವಾದ ಪ್ರಬಂಧಗಳು ಪುಸ್ತಕಗಳು, ಒನಕೆ ಓಬವ್ವೆಯ ನಿಜ ವೃತ್ತಾಂತಗಳನ್ನೀಯದೆ, ಆಕೆಯ ಸಾಹಸ ಘಟನೆಗಳನ್ನು ವಿವರಿಸಿ, ಇತಿಹಾಸಕಾರರಲ್ಲಿ ಮೂಡಿದ್ದ ಸಂದೇಹಗಳನ್ನು ನಿವಾರಿಸುವಲ್ಲಿ ವಿಫಲವಾಗಿ, ಅದೊಂದು ಐತಿಹ್ಯ ಇಲ್ಲವೇ ಜನಾನುರಾಗಿ ಜಾನಪದ ಸಾಹಿತ್ಯವೇನೋ ಎಂಬ ಭಾವ ಮೂಡಿಸಿದ್ದಾವೆಂದೇ ತೀರ್ಮಾನಿಸಬಹುದು.

ಉದಾಹರಣೆಗೆ, ಮೊಟ್ಟಮೊದಲಿಗೆ, ಈ ಒಬವ್ವೆಯ ಚರಿತ್ರೆಯನ್ನು, ವೀರಮಾತೆ ಒನಕೆ ಓಬವ್ವಯೆಂಬ ಶೀರ್ಷಿಕೆ ಹೊತ್ತು ಚಿತ್ರದುರ್ಗದ ಜಿಲ್ಲಾತಿಹಾಸ ಸಂಶೋಧನಾ ಮಂಡಳಿಯು ಹೊರತಂದ 'ಚಂದ್ರವಳ್ಳಿ'[1] ಎಂಬ ಗ್ರಂಥದಲ್ಲಿ ಪ್ರಕಟಗೊಂಡಿತು. ಇಲ್ಲಿನ ಉಲ್ಲೇಖಗಳು, ಅಂದಿಗೆ ದೊರೆತ ದಾಖಲೆ ಮತ್ತು ಕೈಫಿಯತ್ತುಗಳನ್ನು ಪರಿಶೀಲಿಸಿ ಸೂಕ್ತ ತೀರ್ಮಾನ ತೆಗೆದುಕೊಳ್ಳುವ ಪ್ರಯತ್ನಗಳನ್ನು ನಡೆಸಲಿಲ್ಲ ವೆಂದೇ ಬಾವಿಸಬಹುದು.

ಎರಡನೇಯದಾಗಿ, 'ಭಾರತದ ಧೀರಮಹಿಳೆ ಚಿತ್ರದುರ್ಗದ ಒನಕೆ ಓಬವ[2] ಎಂಬ ಗ್ರಂಥವು ಹೊರಬಂದಾಗ, ಅದು ಮತ್ತೂ ಹೆಚ್ಚಿನ ದಾಖಲೆಗಳನ್ನೊದಗಿಸಿ ನಿರೂಪಣೆಗೊಂಡಿದ್ದರು, ಇತಿಹಾಸಕಾರರು, ಹಿಂದಿನ ಭಾವನೆಗಳನ್ನೇ ಮುಂದುವರಿಸಿ ಮೌನಿಗಳಾದರು. ಹೀಗೆ ಈ ಘಟನೆಯನ್ನು ಯಾವ ಪ್ರಬಲಕಾರಣಗಳನ್ನು ಸೂಚಿಸದೆ, ಇತಿಹಾಸಕಾರರು ಮರೆತು ಮರೆಮಾಜಿಸಿದರು, ಸುಮಾರು ಇನ್ನೂರು ವರ್ಷಗಳವರೆಗೆ, ಬಹುಶಃ ಸಮಂಜಸ ದಾಖಲೆಗಳ ಅಭಾವವೆಂಬ ನಿರ್ಧಾರ ಭಾವನೆಯಿಂದ.

ಹೀಗಿದ್ದರೂ, ಮೇಲಿನ ಪುಸ್ತಕ ಪ್ರಬಂಧಗಳು, ಇತಿಹಾಸಕಾರರಲ್ಲಿ ಸುಪ್ತ ಸಂಶೋಧನಾಭಾವ ಮೂಡಿಸಿ, ಅವರಲ್ಲಿ ಚಿಂತನ – ಮಂಥನಗಳನ್ನುಂಟು ಮಾಡಿ, ಲಭ್ಯವಾದ ದಾಖಲೆಗಳನ್ನು ಪರಿಶೀಲಿಸಿ, ಒನಕೆ ಓಬವ್ವಳ ಚರಿತ್ರೆಯ ಬಗ್ಗೆ ಒಂದು ನಿರ್ಧಾರಕ್ಕೆ

ಬರಲು ಅನುವು ಮಾಡಿಕೊಟ್ಟಿತು. ತತ್ಪರಿಣಾಮವಾಗಿ, ಕರ್ನಾಟಕ ಇತಿಹಾಸ ಅಕಾಡಮಿಯು ದಾವಣಗೆರೆ ನಗರ ದಲ್ಲಿ ಏರ್ಪಡಿಸಿದ್ದ ಇತಿಹಾಸ ಸಮ್ಮೇಳನದಲ್ಲಿ, ಶ್ರೀ ಲಕ್ಷ್ಮಣ ತೆಲಗಾವಿಯವರು, "ಚಿತ್ರದುರ್ಗದ ಒನಕೆ ಓಬವ್ವೆಯ ಘಟನೆ, ಚಾರಿತ್ರಿಕ ವಿಮರ್ಶೆ," ಎಂಬ ಶೀರ್ಷಿಕೆಯಲ್ಲಿ ಒಂದು ಪ್ರಬಂಧವನ್ನು ಮಂಡಿಸಿದರು.

ಈ ಪ್ರಬಂಧವು ಚಿತ್ರದುರ್ಗದ ಒನಕೆ ಓಬವ್ವಳ ಚರಿತ್ರೆಯನ್ನು ಕುರಿತು ಈ ಕೆಳಗಿನ ಅಭಿಪ್ರಾಯಗಳನ್ನು ವಿಮರ್ಶಿಸಿದೆ. ೧) ಓಬವ್ವಳು ಚಾರಿತ್ರಿಕ ವ್ಯಕ್ತಿಯೆ? ೨) ಆಕೆಯ ಸಾಹಸಕಾರ್ಯ ವಾಸ್ತವಿಕತ್ರೆಯೇ? ೩) ಚಿತ್ರದುರ್ಗದ ಕೋಟೆಯೊಳಗೆ ಈಕೆಯ ನಡೆಸಿದ ಘಟನೆಯ ಸ್ಥಳವು ಸಮರ್ಥನೀಯವೇ ಮೊದಲಾದುಗ ಳನ್ನು ಸೂಚಿಸುವುದು. ಈ ವಿಮರ್ಶೆಯು, ಓಬವ್ವಳು, ಚಾರಿತ್ರಿಕ ವ್ಯಕ್ತಿ ಮತ್ತು ಆಕೆಯ ಸಾಹಸ ಘಟನೆಯು ವಾಸ್ತವ್ಯವೆಂಬ ಅವರ ಒಟ್ಟಾರೆ ತೀರ್ಮಾನವು, ಅಂದು ನಡೆದ ಸತ್ಯಾಂಶದ ನಿಷ್ಪಕ್ಷಪಾತದ ತೀರ್ಮಾನ ವೆಂದು ಒಪ್ಪಿಕೊಳ್ಳಬಹುದು. ಆಗಿನ ವಾಸ್ತವಿಕತೆಗೆ ಅಮೋಘ ಘನತೆಯನ್ನು ತಂದಿದೆ ಎಂದು ಮೆಚ್ಚಲೂ ಬಹುದು.[3]

ಈ ಬಗೆಯ ಸಂಶೋಧನೆಯ ತೀರ್ಮಾನವನ್ನು, ಚಿತ್ರದುರ್ಗದ ಇತಿಹಾಸ ರಚಿಸುವಾಗಲೇ ಕೈಗೆತ್ತಿ ಕೊಂಡು ನಿರ್ಧರಿಸಿದ್ದರೆ, ಅದೊಂದು ಅತಿ ಮಹತ್ವದ ಇತಿಹಾಸ ಸಂಶೋಧನೆಯಾಗಿ, ಯಾವ ಸಂದರ್ಭದಲ್ಲೂ ಪ್ರಸ್ತುತದಲ್ಲಿ ಉದ್ಭವಿಸಿರುವ ಸಂದೇಹಗಳಿಗೆ ಅವಕಾಶ ವೀಯುತ್ತಿರಲಿಲ್ಲ. ಆಗಿನ ಇತಿಹಾಸಕಾರರನೇಕರು ಈ ಘಟನೆಯ ಮಹತ್ವವನ್ನು ಸ್ಪಷ್ಟವಾಗಿ ಅವಲೋಕಿಸ ಬಲ್ಲವರಾಗಿದ್ದರೂ, ಈ ಒನಕೆ ಓಬವ್ವಳು ಕೇವಲ ಒಬ್ಬ ಸಾಮಾನ್ಯನ ಹೆಂಡತಿಯಾಗಿ ಅದರಲ್ಲೂ ದಲಿತ ಮಹಿಳೆಯಾಗಿದ್ದವಳಿಗೆ ಇತಿಹಾಸದಲ್ಲಿ ಸ್ಥಾನಾರ್ಹತೆಯು ಅನಾದಾರಣೀಯ ವೆಂಬ ಪೂರ್ವಪೀಡಿತ ಭಾವಾವೇಶ ಗಳ ಪ್ರಭಾವ ಕ್ಕೊಳಗಾಗಿದ್ದರೆಂಬುದು ಅವರ ಮೌನವೇ ಸಾಕ್ಷೀಕರಿಸುತ್ತಿದೆ.

ಉದಹರಿಸಬೇಕೆಂದರೆ, ಚಿತ್ರದುರ್ಗದ ಇತಿಹಾಸ ಘಟನೆಗಳನ್ನು ಬಹುಸೂಕ್ಷ್ಮವಾಗಿ ಗಮನಿಸಿದ ದಿವಂಗತ ಪುಲ್ಲೂರು ಶ್ರೀನಿವಾಸ ಜೋಯಿಸರೂ ಸಹ, ಈ ಓಬ್ಬವವೆಯ ಘಟನೆಯ ಬಗ್ಗೆ ಅಂದು ಪ್ರಚಲಿತವಿದ್ದ ವಿಷಯಗಳನ್ನು ಮಾಮೂಲಿನಂತೆ ನಮೂದಿಸಿದರೇ ಹೊರತು ಇದರ ಪರಣಾಮಕಾರಿ ಸತ್ಯಾನ್ವೇಷಣೆಗೆ ಆದ್ಯತೆನೀಡದಿದ್ದುದೊಂದು ದುರ್ದೈವ ವೆಂದೇ ಪರಿಗಣಿಸಬೇಕಾಗಿದೆ. ಜೊತೆಗೆ, ಇವರು, ದೊರೆತ ದಾಖಲೆಗಳ ಸತ್ಯಾಸತ್ಯತೆಗಳ ಬಗ್ಗೆ ಮತ್ತು ಅವುಗಳು ಅಧಿ ಕೃತವೇ ಅಥವಾ ಕಪಟದ ಸೃಷ್ಟಿಗಳೇ ಎಂಬ ಭಾವನೆಗಳನ್ನು ಕಳೆಯಲಿಲ್ಲವೆಂದೂ ತೀರ್ಮಾನಿಸ ಬಹುದು. ಹೀಗೆಯೇ ಅನೇಕ ಇತಿಹಾಸಕಾರರು ಅಲಕ್ಷ್ಯಭಾವ ತಳೆದು, ಅನು ಮಾನಾಸ್ಪದಗಳಿಗೆ ಹೆಚ್ಚಿನ ಆಧ್ಯತೆ ನೀಡಿದರು. ದೊರೆತ ದಾಖಲೆಯೊಂದರಲ್ಲಿ, ಈಕೆಯ ಒನಕೆಯ ಪೆಟ್ಟಿಗೆ ಬಲಿ ಯಾದವರು ಇನ್ನೂರರಿಂದ ಮುನ್ನೂರವರೆಗೆಂದು ತಿಳಿಸು ವುದು.[4] ಮೈಸೂರು ರಾಜ್ಯದ ಚಿತ್ರದುರ್ಗ ಜಿಲ್ಲೆಯ ಗೆಜೆಟಿಯರ್‌ನಲ್ಲಿ, ಒನಕೆ ಓಬವ್ವಳು ಬೇಡರ ಮಹಿಳೆ,[5] ಆದರೆ ಆಕೆ ಕಹಳೆಯವನ ಹೆಂಡತಿ ಎಂದು ತಪ್ಪಾಗಿ ದಾಖಲಿಸಿದ್ದಾರೆ, ದಳವಾಯಿ ಕಾಟಪ್ಪ ನಾಯಕರ ದಾಖಲೆಯಲ್ಲಿ[6] ಒನಕೆ ಓಬವ್ವಳ ಚಾರಿತ್ರಿಕ ವ್ಯಕ್ತತ್ವದ ಜೊತೆಗೆ, ಆಕೆಯು ನಡೆಸಿದ ಸಾಹಸ ಘಟ ನೆಯನ್ನು ವಿವರವಾಗಿ ದಾಖಲಿಸಿದ್ದಾರೆ. ಜೊತೆಗೆ, ಅಗಸನಕಲ್ಲು ಗ್ರಾಮವನ್ನು ಜಹಗೀರಿಯನ್ನಾಗಿ ಒನಕೆ ಓಬವ್ವಳಿಗೆ ಮತ್ತು ಅವರ ವಂಶೀಕರಿಗೆ ರಾಜಾ ಮದ ಕರಿ ನಾಯಕರು ಇತ್ತಿದ್ದ ದಾಖಲೆಗಳು ಸಹ ಹೊಂದಿದೆ. ಶ್ರೀ ಜಯಣ್ಣ ಮತ್ತು ಶ್ರೀ ಹೆಚ್, ಶ್ರೀ ಶೈಲಾರಾಧ್ಯರು ಒದಗಿಸಿರುವ ಕೈಫಿಯತ್‌ನಲ್ಲಿಯೂ ಈಕೆಯ ಅಸ್ತಿತ್ವ ಮತ್ತು ಘಟನೆಯ ಬಗ್ಗೆ ದಾಖಲಾತಿ ಇದೆ.

"ಈ ಸಂಶೋಧನೆಗಳು ಮೇಲೆ ಸೂಚಿಸಿರುವ ಮೂಲ ದಾಖಲೆಗಳಿಗಿಂತ ಹೆಚ್ಚಿನ ಮಾಹಿತಿ, ಸ್ಪಷ್ಟ ವಿವರಣೆ ಅಧಿಕೃತ ಗೊಳಿಸಬಹುದಾದ ಬೇರೆ ದಾಖ ಲೆಗಳನ್ನು ನಿರೀಕ್ಷಿಸಿದರೂ, ಅವುಗಳ ಇರುವಿಕೆಯೇ ಸಂದೇಹ. ಇಲ್ಲವೇ ಇತಿಹಾಸಕಾರರು ಇಂದು ನಿರೀಕ್ಷಿ ಸಬಹುದಾದ ಸಂದೇಹಗಳನ್ನು ಕುರಿತು ದಾಖಲಾತಿ ಯಾಗಿರುವ ಮಾಹಿತಿಗಳು ಇಲ್ಲದೇ ಇರಬಹುದು. ಏಕೆಂದರೆ, ಅಂದು ಈ ಘಟನೆಯ ಬಗ್ಗೆ ನಾವು ತಳೆ ಯಬಹುದಾಗಿರುವ ಇಂದಿನ ಸಂದೇಹಗಳೇ ಅಂದು ಉದ್ಭವಿಸುತ್ತಿರಲಿಲ್ಲ.

ಇನ್ನು, ಈ ಒನಕೆ ಓಬವ್ವಳ ಸಾಹಸ ಘಟನೆಯು ನಿಶೆಯಲ್ಲಿ ಸಂಭವಿಸಿದೆ ಎಂಬ ತೀರ್ಮಾನವು ಸಂಶ ಯಾಸ್ಪದ[7] ವಾಸ್ತವವಾಗಿ ಈ ಘಟನೆಯು ಹಗಲಲ್ಲೇ, ಅದು ಮಧ್ಯಾನ್ಹದ ನಂತರವೇ ನಡೆದಿದೆ. ಕಾರಣ, ಓಬವ್ವೆಯ ಪತಿ, ಮದ್ದಹನುಮಪ್ಪನು, ತನ್ನ ಕಾವಲು

ತಾಣ, ಕಹಳೆಯ ಬುರುಜಿನಿಂದ ಮಧ್ಯಾಹ್ನದ ನಂತರ ತನ್ನ ಊಟಕ್ಕಾಗಿ ಸ್ವಲ್ಪಕಾಲಮಾತ್ರ ಕೆಳಗಿಳಿಯುತ್ತಿದ್ದನು. ಇವನ ಚಲನವಲನೆಗಳನ್ನು ಶತ್ರುಗಳು ಗಮನಿಸಿ, ಅವರ ಕಾರ್ಯಚಟುವಟಿಕೆಗಳನ್ನು, ಅವನು (ಮದ್ದಹನುಮಪ್ಪನು) ಕಾವಲಿನ ಬುರುಜಿನ ಮೇಲೆ ಇಲ್ಲದಿರುವಾಗ ಮಾತ್ರವೇ, ಅವರು ಕಂಡುಕೊಂಡಿದ್ದ ಕಳ್ಳಗಂಡಿಯಲ್ಲಿಯೇ ಕೋಟೆ ಪ್ರವೇಶಿಸಲು ನಿರ್ದೇಶನ ಪಡೆದಿದ್ದರು. ಓಬವ್ವಳು, ಆ ಕಳ್ಳಗಿಂಡಿಯ ಸಮೀಪದಲ್ಲಿದ್ದ ನೀರಿನ ಕೊಳಕ್ಕೆ ನೀರಿಗಾಗಿಯೇ ಹೋಗುವುದು ರೂಢಿ ಮತ್ತು ಅದನ್ನು ಹಗಲಲ್ಲಿ ಮಾತ್ರವೇ ನಿರೀಕ್ಷಿಸಬಹುದೇವಿನಾ, ರಾತ್ರಿಯಲ್ಲಿ ಆಕೆ ನೀರಿಗಾಗಿ ಹೋಗುವುದು ಅಸಂಭವ ಹಾಗೂ ಆವೇಳೆಯಲ್ಲಿ ಮದ್ದಹನುಮಪ್ಪನಿಗೆ ಮೊಸರು ಅನ್ನವನ್ನು ಉಣ್ಣಬಡಿಸಿ ಹೊರಬಂದಳೆಂಬುದು ಸಮಂಜಸ ವಾಗಲಾರದು. ಅಲ್ಲದೆ, ಅದು ಹಾಡುಹಗಲಾದುದರಿಂದ ಶತ್ರುಗಳು ಅಲ್ಲಿದ್ದ ಗಿಡಮರಗಳ ಮಧ್ಯದಲ್ಲಿ ಕಾವಲಿನವರ ಕಣ್ಣುತಪ್ಪಿಸಿ, ಆ ಜಾಗದಲ್ಲಿ ಜಮಾವಣೆಯಾಗಲೂ ಸಾಧ್ಯವಾಗುವುದು. ಜೊತೆಗೆ ಶತ್ರುಸೈನಿಕರು, ಓಣಿಯಲ್ಲಿ ಬರುತ್ತಿದ್ದುದನ್ನು ಗಮನಿಸುವುದು ಸಂದೇಹಾಸ್ಪದ. ಅಂತೆಯೇ ಹಟಾತ್ತನೆ ಮುತ್ತಿಗೆ ಪ್ರಯತ್ನಿಸುವ ಶತ್ರುಸೈನಿಕರು, ಸಾಮಾನ್ಯವಾಗಿ, ಗುಂಪುಗುಂಪಾಗಿ ಮುಂದುವರಿಯುವರೇ ವಿನಾ, ಓಣಿಯಲ್ಲಿ ಒಬ್ಬೊಬ್ಬರಾಗಿ ಬರುತ್ತಿದ್ದರೆಂದು ಊಹಿಸುವುದು ದುಸ್ಸಾಧ್ಯ. ಎಲ್ಲಕ್ಕೂ ಮಿಗಿಲಾಗಿ, ಒನಕೆ ಓಬವ್ವಳ ಆ ಸಾಹಸ ಘಟನೆಗೆ ಮಹಾ ಪ್ರೋತ್ಸಾಹದಾಯಕ ಸನ್ನಿವೇಶವೆಂದರೆ, ಒನಕೆಯ ಓಬವ್ವಳು ಆ ಕಳ್ಳಗಂಡಿಯ ಮರೆಯೊಂದರಲ್ಲಿ ನಿಂತು ಶತ್ರುಸೈನಿಕರಿಗೆ ಅಗೋಚರವಾಗಿರಲು ನೆರವಾಗಬಲ್ಲ ಬೃಹದಾಕಾರದ ಬಂಡೆಗಳ ಮರೆಯು ಉತ್ತಮವಾಗಿತ್ತು. ಆ ಕಳ್ಳಗಂಡಿಯಲ್ಲಿ ಒಮ್ಮೆತೂರಿದ ನಂತರ, ಇತರರಿಗೆ ಅವನು ಮರೆಯಾಗಿ ಸ್ವಲ್ಪದೂರ ತೆವಳಿಕೊಂಡು ಮೇಲೇರಿ, ಬಾಗಿಲ ಕಿಂಡಿಯಲ್ಲಿ ತಲೆಯು ಮಾತ್ರವೇ ಹೊರ ತೂರಿಸಿಕೊಂಡು ಮೇಲೇರಬೇಕಾಗಿತ್ತು. ಇಷ್ಟುಕಾಲ ಒಬ್ಬ ಸೈನಿಕನಿಗೆ ಕೋಟೆಯ ಒಳಹೋಗಲು ಬೇಕಾಗಿದ್ದುದರಿಂದ, ಒನಕೆಯ ಓಬವ್ವಳಿಗೆ ಹೊರ ಹೊರಡುವ ತಲೆಯನ್ನು ಒನಕೆಯ ಒಂದೇ ಪೆಟ್ಟಿನಿಂದಲೇ ಜಜ್ಜಿ ಹೋಗುವಂತೆ ಹೊಡೆಯಲು ಮತ್ತು ಆಶರೀರವನ್ನು ಎಳೆದು ಬೇರೆಡೆಗೆ ಎಸೆಯಲು ಅಲ್ಪ ಸಮಯ ದೊರೆಯುತ್ತಿತ್ತು. ಈ ಬಗೆಯ ಸನ್ನಿವೇಶವೇ ಓಬವ್ವಳಿಗೆ ಆ ರೋಮಾಂಚಕಾರೀ ಸಂಘಟನೆಗೆ ನೆರವು ನೀಡಿದ್ದವು. ಇದನ್ನು ಸೂಕ್ಷ್ಮವಾಗಿ ಗಮನಿಸುವುದು ಸೂಕ್ತ. ಇಂತಹ, ಮಂದಗತಿಯ ಶತ್ರುಸಂಹಾರ ನಡೆಸಲು ಈಗ ಸರ್ವರಿಂದಲೂ ಒಪ್ಪಿಗೆ ಪಡೆದಿರುವ ಒನಕೆ ಓಬವ್ವಳ ಕಿಂಡಿಯೇ ಆ ಘಟನೆಗೆ ಅತಿ ಪ್ರೋತ್ಸಾಹಕ ತಾಣ ಅದು ನಿಜವಾಗಿಯೂ ಘಟನೆ ನಡೆದ ಸ್ಥಳ.

ಇನ್ನು ಈ ಘಟನೆ ನಡೆದ ಕಾಲ, ವ್ಯತ್ಯಾಸ, ಸಮಾಧಿಯ ನೆಲೆ, ಆ ಘಟನೆಯ ನಂತರವೂ ಓಬವ್ವಳು ಜೀವಿಸಿದ್ದುದು, ಆಕೆಯ ಮನೋಕ್ಲೇಶ, ಅಪ್ರಾಪ್ತ ವಯಸ್ಸಿನಲ್ಲಿ ಮರಣ, ಆಕೆಗೆ ನೀಡಿದ ರಾಜಮರ್ಯಾದೆ ಮುಂತಾದುಗಳ ಬಗ್ಗೆ ಒಡ್ಡಿರುವ ಸಂಶಯಗಳು ಹಾಗೆಯೇ ಉಳಿಯುವುವು. ಆದರೆ, ಆಕೆಯ ನಿಸ್ವಾರ್ಥಸೇವೆಯ ಮಹತ್ವನ್ನರಿತ ರಾಜಾವೀರ ಮದಕರಿನಾಯಕರು ಆಕೆಗೆ ರಾಜಮರ್ಯಾದೆಗೆ ತಕ್ಕಂತ ಗೌರವ ನೀಡಿದುದು, ಮತ್ತು ಆಕೆಯ ಮರಣಾನಂತರ, ದೇವತೆಯಾದದ್ದು ಸತ್ಯ. ಆಕೆಯ ವಂಶಜರಾದ ನಮಗೆ ಅಂದು ರಾಜರೇ ಮಾಡಿಸಿಕೊಟ್ಟ ಒನಕೆ ಓಬವ್ವಳ ಕೀಲುಪೆಟ್ಟಿಗೆಯನ್ನು ವಂಶಪಾರಂಪರ್ಯವಾಗಿ, ಪೂಜೆ, ಜಲದಿ ಉತ್ಸವ, ಮೆರವಣಿಗೆ ಮುಂತಾದುವುಗಳನ್ನು ನೆರವೇರಿಸಿಕೊಂಡೇ ಬಂದಿರುವುದಲ್ಲದೆ, ಈ ವಂಶಜರಿಗೆ ಇಂದಿಗೂ ಎಲ್ಲಾ ಶುಭಮಹೂರ್ತಗಳಲ್ಲಿ "ಒನಕೆ ಓಬವ್ವಳ ವೀಳ್ಯೆ"ಯನ್ನಿತ್ತು ಆಕೆಗೆ ಗೌರವ ಸಲ್ಲಿಸುವುದು, ಒಂದು ಅನೂಚಾರನದ ಸಾಂಪ್ರದಾಯಿಕ ಪದ್ಧತಿ, ಇನ್ನೂ ಅಸ್ತಿತ್ವದಲ್ಲಿದೆ. ಈ ಮೊದಲಾದ ವಿಷಯಗಳನ್ನು ಸಮರ್ಥಿಸಲು ದಾಖಲೆಗಳಿಗೆ ಬದಲು ಆ ವಸ್ತುಗಳೇ ಸಾಕ್ಷಿ.

ಮೇಲಾಗಿ, ಈ ಒನಕೆ ಓಬವ್ವ ದೇವತೆಯಾಗಿದ್ದು, ದೊರೆಗಳಿಂದಲೇ ದೇವಸ್ಥಾನವೊಂದು ನಿರ್ಮಿಸುವ ಮೊದಲೇ ಆ ರಾಜಾ ವೀರಮದಕರಿಯವರ ಆಳ್ವಿಕೆ ಕೊನೆಗೊಂಡುದ್ದರಿಂದ ದೇವತೆಯಾದ ಓಬವ್ವಳು ದೇವಸ್ಥಾನವಿಲ್ಲದ ದೇವತೆಯಾದರೂ, ಈಗಲೂ ಆ ದೇವರ ವಾರ್ಷಿಕ ಉತ್ಸವಗಳು ಕ್ರಮಬದ್ಧವಾಗಿ ಗುಪ್ತವಾಗಿ ನೆರವೇರಿಸುವರು ಆ ದೇವತೆಯ ಕೀಲುಪೆಟ್ಟಿಗೆ ಆಭರಣ ಮತ್ತು ಖಡ್ಗಗಳನ್ನು ಮನೆಯೊಂದರಲ್ಲಿಸಿಕೊಂಡಿರುವುದು ಖಚಿತ ಸಾಕ್ಷಿಯಾಗಿದೆ. ಈ ದೇವತೆಯ ಜಲಧಿ ಉತ್ಸವಗಳನ್ನು ಸುಮಾರು ಕ್ರಿ.ಶ .1858ರಿಂದಲೂ ನಡೆಸಿಕೊಂಡು ಬಂದಿರುವ ದಾಖಲಾತಿಗಳಿವೆ. ಇವೆಲ್ಲವೂ ತುಂಬಾ ಶಿಥಿಲವಾಗಿ, ದೂಳಾಗಿವೆ. ಇವುಗಳಲ್ಲೊಂದನ್ನು ಜೋಡಿಸಿ ಬರೆದುಕೊಂಡ ದಾಖಲೆಯು, ಈ ಕೆಳಗಿನಂತಿದೆ. ಇದು ಒನಕೆ ಓಬವ್ವಳ ಕೀಲುಪೆಟ್ಟಿಗೆಯೊಳಗಿರುವ ಭೂತಾಳಿವಿಗ್ರಹ

ತಯಾರಿಕೆಯ ಸಂಬಂಧ ಖರ್ಚಿನ ಪಟ್ಟಿಯನ್ನು ಸೂಚಿಸುವುದು.

1. ಸ್ವ ಸಾವಿರದ ಒಂಭೈನೂರ ಹದಿನೈದನೆ ಇಸ್ವಿ ಪುಷ್ಯ ಶುದ್ಧ ಬಹುಳದಲ್ಲಿ, ವನಕೆ ಬಂಡಿ ಓಬಜ್ಜಿಗೆ ವಿಗ್ರಹ ಮಾಡಿಸುವುದಕ್ಕೆ ತಗುಲಿದ ಖರ್ಚುವೆಚ್ಚ. ಭೂತಾಳಿ ಮರ ತರುವುದಕ್ಕೆ ಕೆರ್ಚು - ೧೦ ತೆಂಗಿನ ಕಾಯಿಗೆ ೧೦ ಆಣೆಗಳು, ೧೦ ಬಾಳೇಹಣ್ಣುಗಳಿಗೆ ಐದು ದುಡ್ಡು, ಉತ್ತುತ್ತಿ ಹಣ್ಣು, ಕೊಬ್ರಿಬಟ್ಟಲು ೧ ಆಣೆ, ಒಂದು ಕಟ್ಟು ವೀಳೆದೆಲೆ, ಅಚ್ಚೇರು ಅಡಿಕೆ, ೫೦ ನಿಂಬೇಕಾಯಿ, ೨ ಸೇರು ಮೊಸರು, ೨ ಸೇರು ಕುಮುಕುಮ, ೨ ಆಣೆ ಬುಕಿಟ್ಟು, ದೂದಿನ ಕಡ್ಡಿ ೧ ಆಣೆ, ಕರ್ಪೂರ ೧ ಆಣೆ, ಲೋಬಾನ ೧ ಆಣೆ, ಬೆಲ್ಲ ೨ ಸೇರು, ೨ ಆಣೆ ಅಕ್ಕಿ, ವಡಕಲು, ಕಡ್ಲೆಕಾಳು ಅಚ್ಚೇರು ೫ ಬಿಲ್ಲೆ, ಅರ್ಧಪಾವು ಎಳ್ಳು ೩ ಬಿಲ್ಲೆ, ಪೂಜೆಹಣ ೩ ಆಣೆ ವರಿಸ್ವರದು ೮ ಆಣೆ, ೧ ಕುರಿ ೨ ರೂಪಾಯಿ ೪ ಆಣೆಗಳು, ಮೆಣಸಿನ ಕಾಯಿ ೫ ಆಣೆ, ಸಂಬಾರ ೨ ಆಣೆ, ಜೋಗೂಟದ ಬತ್ಯೆ ೨ ರೂಪಾಯಿಗಳು........... (ಇನ್ನು ಮುಂದುವರಿದಿದೆ, - ಅಸ್ಪಷ್ಟ - ಬಿಕಲಂ ಬರಹ.) ಹೀಗೆಯೇ ಮತ್ತೊಂದು ಕಾಗದದ ದಾಖಲೆಯು ಓಬವ್ವಳ ವಂಶಸ್ಥರು, ಟೀಪುಸುಲ್ತಾನರ ಆಳ್ವಿಕೆಗೊಳಪಟ್ಟಾಗ, ಇವರ ಉದ್ಯೋಗಕ್ಕೆ ಧಕ್ಕೆಬಂದು, ಜೀವನೋಪಾಯಕ್ಕಾಗಿ, ಚಿತ್ರದುರ್ಗವನ್ನು ತೊರೆದು ಹತ್ತಿರದ ಹಳ್ಳಿ ದೊಡ್ಡಶಿದ್ದವ್ವನ ಹಳ್ಳಿಗೆ ಹೋಗಲು ನಿರ್ಧರಿಸಿ ಹೊರಡುವಾಗ ಓಬವ್ವಯ ದಾಯಾದಿ ಅಣ್ಣತಮ್ಮಂದಿರು ಮತ್ತು ಸಂಬಂಧಿಕರು ಒಟ್ಟಾಗಿ ಸೇರಿ ತೀರ್ಮಾನ ತೆಗೆದುಕೊಂಡು ಚಿತ್ರದುರ್ಗವನ್ನು ಬಿಡುವವೊದಲು ದಾಖಲಿಸಿಟ್ಟುಕೊಂಡಿದ್ದ ಹಳೆಯ ಧೂಳಿಡಿದ ಕಾಗದವೊಂದರಿಂದ, ಸಾಧ್ಯವಾದುದನ್ನು ಎತ್ತಿಬರೆದಿರುವುದ ನಕಲು; ಮಧ್ಯಭಾಗದಿಂದ ಪ್ರಾರಂಬಿಸಿದೆ.

2. "................... ಒನಕೆ ಓಬವ್ವಳ ಸಮಾಧಿಗೆ ಅಣ್ಣತಮ್ಮಂದಿರುಗಳು ಹೋಗಿ, ಎಡೆಬಿಡಾರದಿಂದ ಪೂಜೆಗೈದು, ಕಂಗೆಟ್ಟು ದಿಕ್ಕುಪಾಲಾಗಿ ಹೋದವರಲ್ಲಿ, ರಣಕಹಳೆಬಾಲಪ್ಪ ಒಬ್ಬನು. ದೊಡ್ಡಶಿದ್ದವ್ವನ ಹಳ್ಳಿಗೆ ಬೆಳಗಿನ ನಾಲ್ಕುಗಂಟೆಯಹೊತ್ತಿಗೆ ತಲುಪಿ, ಗ್ರಾಮದ ಗೌಡನಾಗಿದ್ದ ನಾಡಿಗೆ ಐಯ್ಯಣ್ಣನ ಅಪ್ಪಣೆ ಪಡೆದು, ಸೇಂದಿ ಮಾರುವವರಾದ ಈಡಿಗರ ಯಲ್ಲಪ್ಪ, ವಸೂರಪ್ಪ, ಮತ್ತು ಓಬಳಪ್ಪ ಇವರ ತೋಟದಲ್ಲಿ ಇಳಿದುಕೊಂಡರು. ಇವರ ಸಂಗಡ ರಾತ್ರಿಯಲ್ಲಿ ದೊಡ್ಡಹನುಮಪ್ಪ, ವಟ್ಟೀಬಾಲಪ್ಪ, ಏಕನಾಥಪ್ಪ, ಗಡ್ಡದ ಹುಚ್ಚಪ್ಪ, ಆನೆಪ್ಪ ಇವರುಗಳೊಡನೆ ತಮ್ಮ ಹೆಂಡತಿ ಮಕ್ಕಳ ಕೂಡೆ, ನಗನಾಣ್ಯಗಳು ಅಂದರೆ, (೪೦೦೦) ನಾಲ್ಕು ಸಾವಿರ ವರಹಗಳು, (೧೨,೦೦೦) ಹನ್ನೆರಡು ಸಾವಿರ ರೂಪಾಯಿಗಳು (೩೦,೦೦೦) ಮೂವತ್ತು ಸಾವಿರ ಹೊನ್ನುಗಳು, ಚಿನ್ನ ಮತ್ತು ಬೆಳ್ಳಿ ಒಡವೆಗಳು, ಎರಡು ಕಂಚಿನ ಕಹಳೆಗಳು, ಎರಡು ತಗಡಿನ ಕಹಳೆಗಳು, ಯುದ್ಧಕವಚ, ಉಕ್ಕಿನದು - ೧ ಒಂದು ಸುರಾಯಿ ಕತ್ತಿ, ೧೬ ಕತ್ತಿಗಳು, ೨ ಗುರಾಣಿಗಳು, ಹಲವಾರು ಬಿರುದು ಬಾವಲಿಗಳಿರುವ ಬಟ್ಟೆಗಂಟುಗಳು, ಕಾಗದ ಪತ್ರಗಳಿಂದ ಕೂಡಿದ್ದವು. ನಾಲ್ಕು ಕುದುರೆಗಳ ಮೇಲೆ ಹೇರಿಕೊಂಡು ಶಾಲಿವಾಹನ ಶಕ - ೧೭೦೧ ಪಾಲ್ಗುಣ ಮಾಸ........ವಾರ.....ಕ್ರಿ.ಶ.1779ರ ಏಪ್ರೆಲ್ ೫ನೇ ತಾರೀಖು ರಾತ್ರಿ ೨ ಗಂಟೆಗೆ ದುರ್ಗವನ್ನು ತೊರೆದು ದೊಡ್ಡಶಿದ್ದವ್ವನಹಳ್ಳಿಗೆ ಬಂದರು....." (ಇನ್ನೂ ತುಂಬಾ ಇದೆ, ಆದರೆ ಅಸ್ಪಷ್ಟ.)

ಇಂತಹ, ಗಮನಿಸಬಹುದಾದ, ಮತ್ತು ಪರಿಗಣನೆಗೆ ಅರ್ಹವಾದ ಅನೇಕ ಕಾಗದ ಪತ್ರಗಳು ಅಪಾರ ಕಾಲ ಕಳೆದವುಗಳಾಗಿ ಸುಕ್ತ ರಕ್ಷಣೆಯನ್ನರಿಯದೆ ಶಿಥಿಲವಾಗಿ ನಾಶವಾಗಿವೆ. ಅವುಗಳನ್ನು ನಿಜರೂಪದಲ್ಲಿ ನಿರೀಕ್ಷಿಸುವುದು ದುಸ್ಸಾಧ್ಯ.

ಈ ಮೇಲಿನ ವಿವರವು ಇತಿಹಾಸಕ್ಕೆ ಅದರಲ್ಲೂ ಒನಕೆ ಓಬವ್ವಳ ಚಾರಿತ್ರಿಕ ವ್ಯಕ್ತಿ ಎಂದು ಸಾಧಿಸುವುದಕ್ಕೆ ಯಾವ ಬಗೆಯಲ್ಲೂ ನೆರವಾಗದು. ಇದೊಂದು ಅನಗತ್ಯ ದಾಖಲೆ ಎಂದು ಭಾವಿಸಬಹುದು, ಇತಿಹಾಸ ತಜ್ಞರು. ಆದರೆ, ಇದರಲ್ಲಡಗಿರುವ, ಮುಗ್ಧತೆ, ನ್ಯಾಯನಿಷ್ಠೆ ಮತ್ತು ಓಬವ್ವಳ ಬಗ್ಗೆ ತಳೆದಿರುವ ಅನಾದರಣೆ ಇಲ್ಲಡಗಿರುವ ಅಸಾಮಾನ್ಯ ಸಹಜತೆಯನ್ನು ದೂರಮಾಡುವಂತಿಲ್ಲ. ದೇವತೆಯಾಗಿ ಇಂದಿಗೂ ಇವರ ವಂಶದವರು ಪೂಜಿಸುತ್ತಿರುವವರಲ್ಲಿ, ಒಂದು ಬಗೆಯ ಅವರ್ಣನೀಯ ಅನುಮಾನದ ಭಾವನೆಗಳನ್ನು ಮೂಡಿಸಿ, ಅವರ ಭಾವಾವೇಶಗಳನ್ನು ಭಗ್ನಗೊಳಿಸುವುದು ಸಂಶೋಧನೆಯೇ? ಅಂದಮಾತ್ರಕ್ಕೆ ಈ ಬಗೆಯ ಸಂಶೋಧನೆಗಳನ್ನು, ಸತ್ಯಾನ್ವೇಷಣೆಗಳನ್ನು ಮುಂದುವರಿಸಬಾರದೆಂಬ ಸ್ವಾರ್ಥಭಾವನೆ ಇವರದಲ್ಲ. ಸಂಶೋಧನಕಾರರು, ಈಕೆಯ (ಒನಕೆ ಓಬವ್ವಳ) ಬಗೆಗೆ ಯಾವ ಬಗೆಯ ಸತ್ಯವನ್ನು ಹೊರತಂದರೂ, ಸರ್ವಮನ್ನಣೆಯನ್ನು, ಕೃತಜ್ಞತೆಯನ್ನು ಸೂಚಿಸುವರು.

ಮೇಲಿನ ಸಮಾಲೋಚನೆಗಳನ್ನು ವೀರವನಿತೆ, ಒನಕೆ ಓಬವ್ವಳು ಚಾರಿತ್ರಿಕ ವ್ಯಕ್ತಿ ಎಂಬುದನ್ನು ಯಾವ ಕಾರಣಕ್ಕೂ ಸಂಶಯಿಸುವುದು ಅನಗತ್ಯ. ಇದನ್ನು ಸ್ಪಷ್ಟೀಕರಿಸುವ ದಾಖಲೆಗಳು ಈಗ ಲಭ್ಯವಾಗಿವೆ. ಈಗ ಲಭ್ಯವಿರುವ ದಾಖಲೆಗಳನ್ನು, ಅನಗತ್ಯ ಶಂಕೆಗೆ ಗುರಿಮಾಡುವುದರ ಬದಲು ಅದರಲ್ಲಿ ಮೂಡಿಬಂದಿರುವ ಸೂಕ್ಷ್ಮಾತಿ ಸೂಕ್ಷ್ಮಗಳ ಉದಾರ ವಿಚಕ್ಷಣತೆಯ ಭಾವ ಮತ್ತು ಸತ್ಯಾಸತ್ಯಗಳ ತುಲನಾತ್ಮಕತೆಯ ಧೀಮಂತಿಕೆ ಹೊಂದಿ ಮುನ್ನಡೆಯಬೇಕು. ದಾಖಲೆಗಳೇ ದುರ್ಲಭವಾಗುವ ಸನ್ನಿವೇಶಗಳ ಪರಂಪರೆಗೆ ಸೇರಿದ ಈ ಸಾಮಾನ್ಯ ಮಹಿಳೆಯ ಬಗ್ಗೆ ಮತ್ತು ಆ ಕಾಲದಲ್ಲಿ ಗೌರವ ಇರುವಷ್ಟಾದರೂ ಮೂಡಿಬಂದಿರುವುದು, ಎಲ್ಲಾ ಬಗೆಯ ಅನುಮಾನಗಳಾಚೆಯ ಸತ್ಯವನ್ನೇ ಪ್ರಸ್ತುತ ಗೊಳಿಸುವುದು. ಒನಕೆ ಕಿಂಡಿ, ಒನಕೆ ಓಬವ್ವಳ ಬಾಗಿಲು, ಈ ಮೊದಲಾದ ಸನ್ನಿವೇಶಗಳಲ್ಲಿ

'ಒನಕೆ' ಎಂಬ ಶಬ್ದದ ಉಗಮ, ಬಳಕೆ ಮುಂತಾದುವುಗಳತ್ತ ಗಮನಹರಿಸ ಬೇಕಾದ ಅವಶ್ಯಕತೆ, ಈ ನಮ್ಮ ಸಂದೇಹಗಳ ನಿವಾರಣೆಗೆ ಯಾವ ಬಗೆಯ ಸತ್ಯವನ್ನೂ ನೀಡದು. ಒನಕೆ ಓಬವ್ವಳಬಗೆಗೆ, ಇದುವರೆಗೂ ಅಧಿಕೃತ ಸಂಶೋಧನೆಗಳು ಹೊರಬಂದಿಲ್ಲದಿರುವುದರಿಂದ ಉಂಟಾಗಿದ್ದ ಗಂಭೀರ ಪರಿಸ್ಥಿತಿಯನ್ನು, ಶ್ರೀ ಲಕ್ಷ್ಮಣ ತೆಲಗಾವಿಯವರ ಸಂಶೋಧನಾ ಪ್ರಬಂದ "ಚಿತ್ರದುರ್ಗದ ಒನಕೆ ಓಬವ್ವ: ಚಾರಿತ್ರಿಕ ವಿಮರ್ಶೆ' ಎಂಬುದು, ತಕ್ಕಮಟ್ಟಿಗೆ ಸುಧಾರಿಸಿದೆ, ಸ್ಫೂರ್ತಿ ನೀಡಿದೆ, ಮರೆತುಮೌನತಾಳಿದ್ದ ಆ ಭಾಗದ ಸಂಶೋ ಧನೆಗೆ, ಅವ್ಯಾಹತವಾಗಿ ಸಾಧಿಸಬಹುದಾದ ಸಂಶೋಧನೆಗೊಂದು ಸ್ಫೂರ್ತಿ ನೀಡಿದೆಯಲ್ಲದೆ, ಇನ್ನು ಅನೇಕ ಇತಿಹಾಸ ಸಂಶೋಧಕರ ಕಾರ್ಯಕ್ಷೇತ್ರಗಳನ್ನು ಇಲ್ಲಿಯವರೆಗೆ ವಿಸ್ತರಿಸಲು ಪ್ರೇರಕವಾಗಿದೆ. ಇದರ ಮುನ್ನಡೆಯು ಅನೇಕ ಮಹಾತ್ಸಾಧನೆಗಳಿಗೆ ಪೂರಕವಾಗಿದೆ ಎಂದು ನಿರೀಕ್ಷಿಸಲಾಗಿದೆ.

---

## ಅಡಿ ಟಿಪ್ಪಣಿಗಳು

1. 'ಚಂದ್ರವಳ್ಳಿ' ಸಂಪಾದಕರು ಡಾ॥ ಎಂ.ವಿ. ಶ್ರೀನಿವಾಸ ಮತ್ತು ಲಕ್ಷ್ಮಣತೆಲಗಾವಿಯವರು
2. 'ಭಾರತದ ಧೀರ ಮಹಿಳೆ ಚಿತ್ರದುರ್ಗದ ಒನಕೆ ಓಬವ್ವ', ಎ.ಡಿ. ಕೃಷ್ಣಯ್ಯ
3. ಕರ್ನಾಟಕ ಇತಿಹಾಸ ಅಕಾಡಮಿಯ 'ಇತಿಹಾಸ ದರ್ಶನ', ಸಂ. ೫, ಪುಟ ೨೫೨ ರಿಂದ ೨೬೯
4. ಚಿತ್ರದುರ್ಗದ ಪಾಳೆಗಾರರು, ಬೆಂಗಳೂರು ೧೯೨೪ ಪುಟ ೬೧-೬೪
5. ಮೈಸೂರು ರಾಜ್ಯದ ಚಿತ್ರದುರ್ಗ ಜಿಲ್ಲೆಯ ಗೆಜೆಟಿಯರ್, ೧೯೬೭, ಪುಟ ೩೦೩
6. ದಳವಾಯಿ ಕಾಟಪ್ಪನಾಯಕನ ಕೈಫಿಯತ್ ಈತನು ಬಿಚ್ಚುಗತ್ತಿ ಭರಮಣ್ಣನಾಯಕನ ಎರಡನೆಯ ಹೆಂಡತಿ ಸಿದ್ದಮ್ಮನಾಗತಿಯ ಮಗ, ಇದು ಶ್ರೀ ಟಿ.ಯರ್ಗಂಡುಲಿಯವರಲ್ಲಿದೆ
7. ಶ್ರೀ ಜಯಣ್ಣ ಮತ್ತು ಶ್ರೀ ಹೆಚ್. ಶ್ರೀಶೈಲಾರಾಧ್ಯರು ಇತ್ತಿರುವ ಕೈಪಿಯತ್ ಶ್ರೀ. ಶ್ರೀಶೈಲಾರಾಧ್ಯರಲ್ಲಿದೆ

ಜೆ.ವಿ.ಗಾಯತ್ರಿ

# ಮೈಸೂರು ಅರಮನೆಯ ಸರಸ್ವತಿ ಭಂಡಾರ

ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ಸ್ವತಃ ಸಂಸ್ಕೃತ ಮತ್ತು ಕನ್ನಡದಲ್ಲಿ ಅನೇಕ ಕೃತಿಗಳನ್ನು ರಚಿಸಿದ ಕೀರ್ತಿ ಪಡೆದಿದ್ದರು. 1831ರಲ್ಲಿ ಆಡಳಿತವನ್ನು ಇಂಗ್ಲೀಷ್ ಸರ್ಕಾರದ ವಶಕ್ಕೊಪ್ಪಿಸಿದ ನಂತರವೂ ಇವರ ಆಸ್ಥಾನವು ಸುಪ್ರಸಿದ್ಧ ವಿದ್ವಾಂಸರಾದ ಕುಣಿಗಲ್ ರಾಮಾಶಾಸ್ತ್ರಿ, ಕವಿ ವರದಾಚಾರ್ಯ, ಆನಂದಾಳ್ವಾರ್, ಕುಂಭಕೋಣದ ಶೇಷಾಚಾರ್ಯ, ವಿಷ್ಣುಪಾದಾಚಾರ್ಯರಿಂದ ಅಲಂಕರಿಸಲ್ಪಟ್ಟಿತ್ತು. ಇವರು 'ಶ್ರೀ ತತ್ವನಿಧಿ', 'ಗಣಿತ ಸಂಗ್ರಹ', 'ಸೌಗಂಧಿಕಾಪರಿಣಯ', 'ಸಂಖ್ಯಾರತ್ನಾಕೋಶ', 'ಕರ್ನಾಟಕ ಭಾಷಾನುವಾದ', 'ಮಹಾಕೋಶಸುಧಾಕರ' ಇತ್ಯಾದಿ ಪ್ರಾಚೀನ ಗ್ರಂಥವನ್ನು ದೇವತಾಚಿತ್ರಗಳೊಡನೆ ಅಂಬಾವಿಲಾಸ ಮುದ್ರಾಕ್ಷರ ಶಿಲಾಯಂತ್ರದಲ್ಲಿ ಅಚ್ಚುಹಾಕಿಸಿ ಸಮುಖದ ವಿದ್ವಾಂಸರಿಗೆ ಉಚಿತವಾಗಿ ನೀಡಿದ್ದರು[1].

ಮೈಸೂರಿನ ವಿದ್ವಾಂಸರಲ್ಲದೆ ನೆರೆಯ ಸಂಸ್ಥಾನಗಳಾದ ಮಹಾರಾಷ್ಟ್ರ ಮತ್ತು ತಂಜಾವೂರಿನ ವಿದ್ವಾಂಸರು ಸಹ ಮುಮ್ಮಡಿ ಕೃಷ್ಣರಾಜರ ಪ್ರೋತ್ಸಾಹಕ್ಕೆ ಪಾತ್ರರಾದರು. ಪೇಶ್ವೆಗಳ ಅವನತಿಯ (1818) ನಂತರ ಅನೇಕ ಮರಾಠಾ ವಿದ್ವಾಂಸರು ಮೈಸೂರಿನ ರಾಜಾಶ್ರಯವನ್ನು ಅವಲಂಬಿಸಿದರು. ಮುಮ್ಮಡಿ ಕೃಷ್ಣರಾಜ ವಿರಚಿತ ಕೃತಿಗಳೇ ಅಲ್ಲದೆ ಈ ವಿದ್ವಾಂಸರು ಕಲೆ, ಸಾಹಿತ್ಯ, ಧರ್ಮ, ತರ್ಕ, ಇತಿಹಾಸ, ಇತ್ಯಾದಿ ವಿಷಯಗಳಿಗೆ ಸಂಬಂದಿಸಿದಂತೆ ರಚಿಸಿದ ಸಂಸ್ಕೃತ ಮತ್ತು ಕನ್ನಡ ಕೃತಿಗಳು, ಪ್ರಾಚೀನ ತಾಳೆಗರಿ ಗ್ರಂಥಗಳು, ಕಡಿತಗಳು ಹಾಗೂ ಅರಮನೆ ಮುದ್ರಾಕ್ಷರ ಶಾಲೆಯಲ್ಲಿ ಅಚ್ಚಾದ ಪಲವಾರು ಮುದ್ರಿತ ಗ್ರಂಥಗಳ ಅಪೂರ್ವ ಸಂಗ್ರಹವೇ ಸರಸ್ವತಿ ಭಂಡಾರವೆಂದು ಪ್ರಸಿದ್ಧವಾದ ಅರಮನೆಯ ಗ್ರಂಥ ಭಂಡಾರ.

ಮೈಸೂರು ಅರಮನೆಯು 1897ರಲ್ಲಿ ಅಗ್ನಿ ದುರಂತಕ್ಕೀಡಾದಾಗ ಉತ್ತರಭಾಗದಲ್ಲಿದ್ದ ಸರಸ್ವತಿ ಭಂಡಾರವು ಸಹ ಸುಟ್ಟು ನಾಶವಾಯಿತು. ಅನೇಕ ಸಂಸ್ಕೃತ ಹಸ್ತಪ್ರತಿಗಳು, ಗ್ರಂಥಗಳು ಮತ್ತು ತಾಳೆಗರಿ ಪತ್ರಗಳು ನಾಶವಾದವು[2]. ಮಹಾರಾಣಿ ವಾಣಿವಿಲಾಸ ಸನ್ನಿಧಾನದವರು ಅರಮನೆ ಚಾಮುಂಡಿ ತೊಟ್ಟಿ ಇಲಾಖೆಯಲ್ಲಿದ್ದ ಶಾರದಾ ವಿಗ್ರಹವನ್ನು ಜಗನಮೋಹನ ಚಿತ್ರಶಾಲೆಯಲ್ಲಿ ಪ್ರತಿಷ್ಠಾಪಿಸುವುದರೊಡನೆ ಸರಸ್ವತಿ ಸರಸ್ವತಿಭಂಡಾರದ ಪುನರಜ್ಜೀವನ ಕಾರ್ಯ ಪ್ರಾರಂಭಿಸಿದರು. ಹಲವಾರು ಕನ್ನಡ ಮತ್ತು ಸಂಸ್ಕೃತದ ಪ್ರಾಚೀನ ಗ್ರಂಥಗಳ ಪುನರ್ ಸಂಗ್ರಹದೊಡನೆ ಭಂಡಾರವನ್ನು ಅರಮನೆ ಕಛೇರಿಯ ಆಂಗ್ಲ ಭಂಡಾರದೊಡನೆ ವಿಲೀನಗೊಳಿಸಿದರು. 1905ರಲ್ಲಿ ಭಂಡಾರವು ಆಂಗ್ಲ ಗ್ರಂಥಭಂಡಾರದಿಂದ ಬೇರ್ಪಟ್ಟು ಓರ್ವ ಅಧಿಕಾರಿಯ ಮೇಲ್ವಿಚಾರಣೆಗೆ ಒಳಪಡಿಸಲ್ಪಟ್ಟಿತು. ಜಗನಮೋಹನ ಚಿತ್ರಶಾಲೆಯಲ್ಲಿದ್ದ ಸರಸ್ವತಿಭಂಡಾರವನ್ನು ನವೆಂಬರ್ 1928ರಲ್ಲಿ ಮಹಾರಾಜ ಸಂಸ್ಕೃತ ಪಾಠಶಾಲೆಯೊಡನೆ ಸೇರಿಸಿ ಪಾಠಶಾಲೆಯ ಮಧ್ಯದ ತೊಟ್ಟಿಗೆ ಸ್ಥಳಾಂತರಿಸಲಾಯಿತು[3]. ಇಲ್ಲಿ ಡ್ಯೂವಿರವರ ದಶಾಂಕ ಪದ್ಧತಿ ಮತ್ತು ವೇದೀಕಶಾಸ್ತ್ರ ಕ್ರಮದಂತೆ ಗ್ರಂಥಗಳ ಪುನರ್‌ಜೋಡಣೆ ಕಾರ್ಯ ಪ್ರಾರಂಭಿಸಲಾಯಿತು. ಈ ಸಮಯದಲ್ಲಿ ಭಂಡಾರದಲ್ಲಿ 1,675 ಓಲೆಗರಿ ಹಸ್ತಪ್ರತಿಗಳು ಮತ್ತು 2,426 ಪುಸ್ತಕಗಳು ಇದ್ದವು[4].

ಭಂಡಾರದ ಗ್ರಂಥಗಳ ವ್ಯವಸ್ಥಿತ ಜೋಡಣೆ ಕಾರ್ಯ ಪ್ರಾರಂಭಿಸಿದವರು ಪ್ರಾಚ್ಯ ಸಂಶೋಧನಾ ಸಂಸ್ಥೆಯ ಕ್ಯುರೇಟರ್‌ರಾದ ಶಾಮಾಶಾಸ್ತ್ರಿ ಮತ್ತು ಲಕ್ಷ್ಮಿಪುರಂ ಶ್ರೀನಿವಾಸಾಚಾರ್ಯರವರು. ಭಂಡಾರದ ಎರಡನೆಯ ಪಂಡಿತರಾದ ಶ್ರೀನಿವಾಸ ದೇಶಿಕಾಚಾರ್ಯರ 1919ರ ವರದಿಯಂತೆ "ಚೋಳ ದೇಶದಿಂದ ಕೂಟ ಲೇಖಕರನ್ನು ಬರಮಾಡಿಕೊಂಡು ಅವರಿಂದ ಗ್ರಂಥಗಳನ್ನು ಬರೆಸುತ್ತಿದ್ದರು[5]." ಹಸ್ತಪ್ರತಿಗಳನ್ನು ಹೊಲಿದು ಅದರ ಮೇಲೆ ಚಿತ್ರಗಾರರಿಂದ ನಂಬರು ವಿಳಾಸಗಳನ್ನು ಬರೆಸುತ್ತಿದ್ದರು. ಹಸ್ತಪ್ರತಿಗಳನ್ನು ಬಟ್ಟೆಯ ಗಂಟುಗಳಲ್ಲಿಟ್ಟು, ಕ್ರಿಮಿನಾಶಕ ನುಸಿಗುಳಿಗೆಗಳನ್ನಿರಿಸಿ ಜೋಡಿಸಿಡುತ್ತಿದ್ದರು; ಹಸ್ತಪ್ರತಿಗಳ ಸಂರಕ್ಷಣೆಗಾಗಿ ಭಂಡಾರದಲ್ಲಿ ತಯಾರಿಸಲಾದ ಎಣ್ಣೆಯನ್ನು ಲೇಪಿಸಿಡುತ್ತಿದ್ದರು. ಗ್ರಂಥಗಳಿಗೆ ಕ್ಯಾಲಿಕೊ ಮತ್ತು ಕಿತ್ತಾನಾರಿ

ನಿಂದ ರಟ್ಟುಕಟ್ಟುತ್ತಿದ್ದರು. ಇಬ್ಬರು ಲೇಖಕರಿಗಳು ರೂ 15.00ರ ವೇತನದ ಮೇರೆಗೆ ಹಸ್ತಪ್ರತಿಗಳನ್ನು ಪ್ರತಿ ಮಾಡಲು ನಿಯುಕ್ತರಾಗಿದ್ದರು[6]. ನವರಾತ್ರಿಯ ಸಮಯದಲ್ಲಿ ರಾಜಧಾನಿಯ ಲೇಖಕರಲ್ಲದೆ ಪರಸ್ಥಳದವರಿಂದಲೂ ಗ್ರಂಥಗಳನ್ನು ಪ್ರತಿ ಮಾಡಿಸುತ್ತಿದ್ದರು. ಸರಸ್ವತಿ ಪೂಜೆಯ ದಿನದಂದು ದಂಪತಿಪೂಜೆ ಕಟ್ಟೆಯನ್ನು ಏರ್ಪಡಿಸಿ ಚಾಮುಂಡಿ ತೊಟ್ಟಿಯ ವಿದ್ವಾಂಸ ದಂಪತಿಗಳಿಗೆ ಸರಸ್ವತಿದೇವಿಯ ವಿಗ್ರಹ, ಶಾಲು ಮತ್ತು ಸೀರೆಗಳೊಂದಿಗೆ ಸನ್ಮಾನಿಸುತ್ತಿದ್ದರು.

ಮಹಾರಾಣಿ ವಾಣಿವಿಲಾಸ ಸನ್ನಿಧಾನದವರ ಅಪ್ಪಣೆಯಂತೆ ಪ್ರಾರಂಭಿಸಲ್ಪಟ್ಟ ಹಸ್ತಪ್ರತಿಗಳ ಪ್ರತಿ ಮಾಡುವ ಮತ್ತು ಪ್ರಾಚೀನ ಗ್ರಂಥಗಳ ಮುದ್ರಣ ಕಾರ್ಯ ಮುಂದುವರಿಯಿತು. ಅರಮನೆಯು ಬೆಂಕಿಯ ದುರಂತಕ್ಕೀಡಾದ ಕೂಡಲೇ ಅರಮನೆ ಕಂಟ್ರೋಲರ್ ಕಛೇರಿಯ ಮುನ್ಷಿ ಶ್ರೀನಿವಾಸಮೂರ್ತಿಯವರು ಮುಮ್ಮಡಿ ಕೃಷ್ಣರಾಜ ಒಡೆಯರ್ ವಿರಚಿತ 'ಸೌಗಂಧಿಕಾಪರಿಣಯ' ಮತ್ತು 'ಸಹಸ್ರಾಯುಕಥೆ' ಗಳ ಪುನಃ ಮುದ್ರಣ ಕೈಗೊಂಡಿದ್ದರು[7].

ಕರ್ನಾಟಕ ಕಾವ್ಯ ಕಲಾನಿಧಿ ಮಾಸಪತ್ರಿಕೆಯ ಸಹಸಂಪಾದಕರಾದ ಎಂ.ಎ. ರಾಮಾನುಜೈಯಂಗಾರರು ಮತ್ತು ಚಾಮುಂಡಿತೊಟ್ಟಿಯ ಗುಂಡ್ಲುಪಂಡಿತ ಲಕ್ಷ್ಮಣಾಚಾರ್ಯರಿಗೆ ಮುಮ್ಮಡಿ ಕೃಷ್ಣರಾಜರ ಕೃತಿಗಳ* ಪುನಮುದ್ರಣಕ್ಕೆ ಅನುಮತಿ ನೀಡಲಾಗಿತ್ತು. ಎಂ.ಎ. ರಾಮಾನುಜೈಯ್ಯಂಗಾರರು ಚಿಕ್ಕದೇವ ರಾಜ ವಿರಚಿತ ಚಿಕ್ಕದೇವರಾಯ ಬಿನ್ನಪಂ, ಗೀತಾಗೋಪಾಲಂ ಇತ್ಯಾದಿ ಕೃತಿಗಳನ್ನು ಪ್ರಕಟಿಸಿತ್ತು[9].

ಕೆಲವು ಅಪರೂಪದ ಹಸ್ತಪ್ರತಿಗಳನ್ನು ವಿವಿಧೆಡೆಗಳಿಂದ ಭಂಡಾರದಲ್ಲಿ ಸಂಗ್ರಹಿಸಿಡಲಾಗಿತ್ತು. ಇವುಗಳಲ್ಲಿ ತಿರುಪತಿಯಿಂದ ಸಂಗ್ರಹಿಸಿದ ಆನಂದಭಟ್ಟನ ಗಜಶಾಸ್ತ್ರ ಕೃತಿ [10] ಮತ್ತು ಪಂಡಿತರತ್ನ ಕಾಶಿವೆಂಕಟಾಚಲಶಾಸ್ತ್ರಿ ನೀಡಿದ 1,224 ಗ್ರಂಥಗಳು ಮತ್ತು 54 ಹಸ್ತಪ್ರತಿಗಳು[11] ಅತ್ಯಂತ ಉಪಯುಕ್ತವಾದವು. 1936-37ರಲ್ಲಿ ಭಂಡಾರವು 5,455 ಪುಸ್ತಕಗಳು, 744 ತಾಳೆಗರಿ ಗ್ರಂಥಗಳು ಮತ್ತು 108 ಹಸ್ತಪ್ರತಿಗಳನ್ನೊಳಗೊಂಡಿತ್ತು[12]. ಕಾಲಕ್ರಮೇಣ ಈ ಸಂಖ್ಯೆ ವೃದ್ಧಿಯಾಗಿ 1959-60ರಲ್ಲಿ 2,724 ಓಲೆಗರಿ ಗ್ರಂಥಗಳು, 5,987 ಮುದ್ರಿತ ಪುಸ್ತಕಗಳು, 22 ಖಾಸಾ ಪಾರಾಯಣ ಪುಸ್ತಕಗಳು ಮತ್ತು 154 ಪಂಚಾಂಗಗಳಿದ್ದವು[13].

ವೇದ, ಪ್ರಯೋಗ, ನಿಬಂಧ ಇತಿಹಾಸ, ಪುರಾಣ ಸ್ತೋತ್ರ ಪದ್ಯಕಾವ್ಯ, ಗದ್ಯಕಾವ್ಯ, ಚಂಪುನಾಟಕ, ಅಲಂಕಾರಶಾಸ್ತ್ರ, ವ್ಯಾಕರಣ, ಶಿಲ್ಪಶಾಸ್ತ್ರ, ಭರತಶಾಸ್ತ್ರ, ಮಂತ್ರಶಾಸ್ತ್ರ, ಜ್ಯೋತಿಷ, ಆಗಮ, ನ್ಯಾಯಶಾಸ್ತ್ರ, ಪೂರ್ವಮೀಮಾಂಸ, ವೇದಾಂತ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದ ಅಪ್ರಕಟಿತ ಕನ್ನಡ ಮತ್ತು ಸಂಸ್ಕೃತ ಹಸ್ತಪ್ರತಿಗಳನ್ನು ಮುದ್ರಿಸಿ ನಾಡಿನ ವಿದ್ವಾಂಸರೆಲ್ಲರಿಗೂ ವಿತರಿಸಲಾಗುತ್ತಿತ್ತು. 1912-13ರಲ್ಲಿ ಭಂಡಾರದಲ್ಲಿದ್ದ 150 ಓಲೆಗರಿಗ್ರಂಥಗಳ ವಿವರಣಾತ್ಮಕ ಸೂಚಿಯನ್ನು ಸಿದ್ಧಪಡಿಸಲಾಗಿತ್ತು[14]. ಹಸ್ತಪ್ರತಿಗಳ ಮತ್ತು ಗ್ರಂಥಗಳ ಮುದ್ರಿತ ಸೂಚಿಯನ್ನು 1940ರಲ್ಲಿ ಪ್ರಕಟಿಸಲಾಗಿತ್ತು[15]. ಭಂಡಾರದ ಗ್ರಂಥ ಸಂಗ್ರಹದ ವಾರ್ಷಿಕ ತಪಾಸಣೆಯನ್ನು 1942ರಲ್ಲಿ ಪಾಠಶಾಲೆಯ ಪ್ರಾಧ್ಯಾಪಕರುಗಳು ಕೈಗೊಂಡರು. ಸಿ. ಕೃಷ್ಣಮೂರ್ತ್ಯಾಚಾರ್ಯ, ಪಿ. ನಾರಾಯಣಶಾಸ್ತ್ರಿ ಮತ್ತು ಜೋಯಿಸ್ ವೆಂಕಟಾಚಾರ್ಯರನ್ನೊಳಗೊಂಡ ಸಮಿತಿಯು 1946ರಲ್ಲಿ ನೀಡಿದ ವರದಿಯಂತೆ ನಿಯತ ಕಾಲಿಕೆಗಳು ಮತ್ತು ಪುಸ್ತಕಗಳ ಬಿಡಿ ಪ್ರತಿಗಳನ್ನು ಮೈಸೂರಿನಲ್ಲಿರುವ ಶಾಲಾ ಗ್ರಂಥಾಯಗಳಿಗೂ ಮತ್ತು ಬೆಟ್ಟದ ಚಾಮುಂಡೇಶ್ವರಿ ದೇವಸ್ಥಾನಕ್ಕೂ ವಿತರಿಸಲಾಯಿತು.[16]

ಹೀಗೆ ಅರಮನೆ ಸರಸ್ವತಿ ಭಂಡಾರವು ತನ್ನ ಅಪಾರ ಗ್ರಂಥಸಂಪತ್ತಿನಿಂದ ವಿದ್ವತ್‌ಲೋಕಕ್ಕೆ ಮಹತ್ವಪೂರ್ಣ ಸೇವೆ ಸಲ್ಲಿಸಿದೆ.

# ಅಡಿ ಟಿಪ್ಪಣಿಗಳು

1. ಬಿ. ರಾಮಕೃಷ್ಣರಾವ್, ಶ್ರೀಮನ್ಮ ಹಾರಾಜರವರ ವಂಶಾವಳಿ, ಭಾಗ-2, ಮೈಸೂರು, 1922 ಪುಟ 171-72
2. ಅರೆ ಸರ್ಕಾರಿ ಸಂಖ್ಯೆ: 111, ಮೈಸೂರು, 8ನೇ ಏಪ್ರಿಲ್ 1897, ಮೈಸೂರು ಸರ್ಕಾರದ ನಡವಳಿಕೆಗಳು,
3. ಅರಮನೆ ಕಛೇರಿ ಕಡತ, ಕ್ರಮಸಂಖ್ಯೆ: 14, 5:261, 1922-28
4. ಅರಮನೆ ಆಡಳಿತ ವರದಿ, 1930-31, ಪು 25
5. ಆರ್.ಎಸ್. ಶಿವಗಣೇಶಮೂರ್ತಿ, "ಮೈಸೂರಿನಲ್ಲಿ ಸಂಸ್ಕೃತ ವಿದ್ವತ್ತು ಬೆಳೆದು ಬಂದ ಬಗೆ", ವಜ್ರ ದೀಪ್ತಿ, ಕನ್ನಡ ಸಾಹಿತ್ಯ ಸಮ್ಮೇಳನದ ವಜ್ರಮಹೋತ್ಸವ ಸ್ಮರಣ ಸಂಚಿಕೆ, ಮೈಸೂರು, 1991, ಪು. 11
6. ಅರಮನೆ ಕಂಟ್ರೋಲರ್ ಕಛೇರಿ ಕಡತ ಸಂಖ್ಯೆ: 14, 1902-21
7. ಅರಮನೆ ಕಂಟ್ರೋಲರ್ ಕಛೇರಿ ಕಡತ ಸಂಖ್ಯೆ: 4, 1894-1904

* ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರಿಂದ ವಿರಚಿತವಾದ ಕನ್ನಡ ಗ್ರಂಥಗಳು ಕೆಳಕಂಡಂತಿವೆ

1. ಸೌಗಂಧಿಕಾ ಪರಿಣಯ, 2. ಸಂಕ್ಷೇಪ ಸೌಗಂಧಿಕಾಪರಿಣಯ, 3. ಷಟ್ಪದಿ ರೂಪವಾದ ಸೌಗಂಧಿಕಾಪರಿಣಯ, 4. ಸಂಖ್ಯಾರತ್ನಮಾಲಾ, 5. ಕೃಷ್ಣಕಥಾಸಾರಸಂಗ್ರಹ, 6. ಕೃಷ್ಣಕಥಾರತ್ನಾಕರ, 7. ಮೈಸೂರು ಸಂಸ್ಥಾನದ ರಾಜವಿಜಯ, 8. ಪ್ರಭಾವತೀ ಹರಣ, 9. ಉಷಾಪರಿಣಯ, 10. ರುಕ್ಮಿಣೀಕಲ್ಯಾಣ, 11. ಗಜೇಂದ್ರಮೋಕ್ಷ, 12. ಸಾವಿತ್ರ್ಯುಪಾಖ್ಯಾನ, 13. ಸ್ಯಮಂತಾಕೋಪಾಖ್ಯಾನ, 14. ಧ್ರುವಚರಿತ, 15. ನಳಕೂಬರವಿಲಾಸ, 16. ಚಾಮುಂಡಾಗಂಜೀಫು ಇಸ್ಪೇಟು ಮುಂತಾದ್ದು ಆಟದ ಶ್ಲೋಕ (ಕೋಷ್ಟಕ), 18. ಶಾಕುಂತಲಾ ಕಥೆ, 19. ಮಾಲವಿಕಾಗ್ನಿಮಿತ್ರ, 20. ವಿಕ್ರಮೋರ್ವಶೀಯ, 21. ಜಾತಕಸಾಮ್ರಾಜ್ಯ, 22. ಚತುರಂಗಸಾರಸರ್ವ, 23. ಶ್ರೀತತ್ವ ನಿಧಿ, 24. ಶ್ರೀಮುದ್ರಾಮಾಯಣ ತಾತ್ಪರ್ಯವಿಶಾಷ್ಟಕು, 25. ಪಂಚತಂತ್ರ, 26. ಬತ್ತೀಪುತ್ಥಳಿಕಥಾ, 27. ಕಾದಂಬರಿ ಕಥೆ, 28. ದೇವಿಭಾಗವತದ ಕಥೆ, 29. ಶ್ರೀಭಾಗವತದ ಕಥೆ, 30. ಮಹಾಭಾರತ ಕಥೆ, 31. ಯಾದವಗಿರಿ ಮಹಾತ್ಮೆ, 32. ಶಂಕರಸಂಹಿತಾ.

8. ಅದೇ
9. ಅದೇ
10. ಅರಮನೆ ಆಡಳಿತ ವರದಿ 1930-31, ಪುಟ 25
11. ಅರಮನೆ ಆಡಳಿತ ವರದಿ 1936-37, ಪುಟ 31
12. ಅದೇ
13. ಅರಮನೆ ಆಡಳಿತ ವರದಿ, 1959-60
14. ಸರಸ್ವತಿ ಭಂಡಾರದ ವಾರ್ಷಿಕ ವರದಿಗಳು, 1928-29, 1934-35, 1935-36 ಮತ್ತು 1936-37.
15. ಅರಮನೆ ಕಛೇರಿ ಕಡತ ಸಂಖ್ಯೆ: 7:261, 1920-26
16. ಸರಸ್ವತಿ ಭಂಡಾರದ ಕಡತ ಸಂಖ್ಯೆ: 164, 25(1):447, 1942-49

ಎಂ.ಬಿ. ಪಾಟೀಲ

# ಕರ್ನಾಟಕದಲ್ಲಿ ಪಟ್ಟಣ ಸಹಕಾರಿ ಬ್ಯಾಂಕುಗಳ ಪ್ರಾರಂಭ

ಭಾರತದಲ್ಲಿ ಸಹಕಾರಿ ಚಳುವಳಿ ವ್ಯಾಪಕವಾಗಿ ಮೂಡಿಬರಲು ಅಂದು ಇದ್ದ ಹಲವಾರು ಆರ್ಥಿಕ, ಸಾಮಾಜಿಕ ಕಾರಣಗಳಲ್ಲಿ, ಆರ್ಥಿಕ ಕಾರಣಗಳು ಬಹು ಮುಖ್ಯವಾದವುಗಳು, ಅಂದಿನ ಬ್ರಿಟಿಷ್ ಸರ್ಕಾರ ಭಾರತದ ರೈತರ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸಲು ಜಾರಿಗೆ ತಂದ ಅನೇಕ ಕಡಿಮೆ ಬಡ್ಡೀದರದ ಯೋಜನೆಗಳು ಅಂದರೆ: ತಕಾವಿಸಾಲ ಕಾನೂನು (೧೮೭೬), ಡೆಕ್ಕನ್ ರೈತರ ಪರಿಹಾರ ಕಾನೂನು (೧೮೭೯), ಭೂ ಸುಧಾರಣಾಸಾಲ ಕಾನೂನು (೧೮೮೩) ಮುಂತಾದ ಪರಿಹಾರ ಸೂಚಕ ಕಾನೂನುಗಳು ನಿರೀಕ್ಷಿಸಿದ ಫಲ ನೀಡದೆ ಇದ್ದದ್ದು.

## ಕರ್ನಾಟಕದಲ್ಲಿ ಸಹಕಾರ ವ್ಯವಸ್ಥೆ

ಭಾರತದಲ್ಲಿ ೧೯೦೪ರ ಸಹಕಾರಿ ಕಾನೂನು ವಿದ್ಯುಕ್ತವಾಗಿ ಜಾರಿಯಲ್ಲಿ ಬರುವ ಮೊದಲೇ ಸಹಕಾರಿ ತತ್ವಗಳನ್ನು ವ್ಯವಹಾರದಲ್ಲಿ ಮೈಗೂಡಿಸಿ ಕೊಂಡು ರಚಿತವಾದ ಹಲವಾರು ಸಾಂಸ್ಥಿಕ ಹಣಕಾಸು ಸಂಸ್ಥೆಗಳು ಇದ್ದವು ಎಂದು ಹಳೆಯ ದಾಖಲೆಗಳಿಂದ ತಿಳಿದುಬರುವದು. ೧೮೮೯ರಲ್ಲಿ ಬರೋಡಾದಲ್ಲಿ ಪ್ರಾರಂಭಿಸಲಾದ 'ವಿಠ್ಠಲ ಲಕ್ಷ್ಮಣ ಕಾರ್ಲೆಕರ್ ಅನ್ಯೋನ್ಯ ಸಹಕಾರ ಮಂಡಳಿ' ಭಾರತದಲ್ಲಿನ ಪಟ್ಟಣ ಸಹಕಾರಿ ಬ್ಯಾಂಕುಗಳಲ್ಲಿ ಮೊದಲನೆಯದು ಎಂದು ಗುರುತಿಸಲಾಗಿದೆ. ಅದರಂತೆ 'ಮಾದರಿ ಮೈಸೂರು' ಸಂಸ್ಥಾನದಲ್ಲಿ ಸಹಕಾರಿ ತತ್ವ ಮತ್ತು ಕೂಡುಬಂಡವಾಳ ಸಂಸ್ಥೆ (ಕಂಪನಿ) ಯ ನಿಯಮಾವಳಿಗಳನ್ನು ಸಂಯೋಜಿಸಿಕೊಂಡು ಸರ್ಕಾರವೇ ಹಣತೊಡಗಿಸಿ ೧೮೯೪ರಲ್ಲಿಯೇ 'ವ್ಯವಸಾಯ ಅಭಿವೃದ್ಧಿ ಬ್ಯಾಂಕುಗಳನ್ನು' ಪ್ರಾರಂಭಿಸಿ ಈ ಸಂಸ್ಥೆಗಳು ೧೯೨೦ ರವರೆಗೆ ಕಾರ್ಯನಿರ್ವಹಿಸಿ ಅವುಗಳು ಕಡಿಮೆ ಬಡ್ಡಿಗೆ ನೀಡುತ್ತಿದ್ದ ಸಾಲದ ದುರುಪಯೋಗವಾಗಿ ಅವುಗಳನ್ನು ಅನಿವಾರ್ಯವಾಗಿ ಸರ್ಕಾರ ಮುಚ್ಚಬೇಕಾಯಿತು. ಸರ್ಕಾರವು ಈ ಬ್ಯಾಂಕ್‌ಗಳಿಗೆ ಶೇ ೪ರ ಬಡ್ಡೀದರದಲ್ಲಿ ಸಾಲನೀಡುತ್ತಿತ್ತು. ಈ ಸಂಸ್ಥೆಗಳು ರೈತರಿಗೆ ಶೇ ೫ರ ದರದಲ್ಲಿ ದೀರ್ಘಾವಧಿ ಸಾಲಗಳನ್ನು ಜಮೀನು ಅಭಿವೃದ್ಧಿಗೆ ಮತ್ತು ಹಳೆಯಸಾಲ ತೀರಿಸಲು ನೀಡುತ್ತಿದ್ದರು. ೧೮೯೪-೯೮ರ ಮಧ್ಯದಲ್ಲಿ ಮೈಸೂರು ಪ್ರಾಂತ್ಯದಲ್ಲಿ ಇಂತಹ ಬ್ಯಾಂಕುಗಳು ಸುಮಾರು ೩,೦೦೦ ಸದಸ್ಯರನ್ನೊಳಗೊಂಡು ಕಾರ್ಯ ನಿರ್ವಹಿಸುತ್ತಿದ್ದವು.

## ಪಟ್ಟಣ ಸಹಕಾರಿ ಬ್ಯಾಂಕುಗಳ ಅವಶ್ಯಕತೆ

೧೯೦೪ರ ಕೇಂದ್ರಸರ್ಕಾರದ ಸಹಕಾರಿ ಕಾನೂನು ಪ್ರಮುಖವಾಗಿ ಗ್ರಾಮೀಣ ಪ್ರದೇಶದ ರೈತರಿಗೆ ರಿಯಾಯತಿ ಬಡ್ಡಿದರದಲ್ಲಿ ಕೃಷಿಸಾಲವನ್ನು ಒದಗಿಸಲು ಪ್ರಾಥಮಿಕ ಪತ್ತಿನ ಸಹಕಾರಿ ಸಂಘಗಳನ್ನು ಸ್ಥಾಪಿಸುವದಾಗಿತ್ತು. ಈ ಕಾನೂನನ್ನು ಪ್ರಾಂತೀಯ ಸರ್ಕಾರಗಳೂ ತಮ್ಮ ವ್ಯಾಪ್ತಿಯಲ್ಲಿ ಅಳವಡಿಸಿ ಕೊಳ್ಳಬಹುದಾಗಿತ್ತು.

ಆದರೆ ನಗರ ಮತ್ತು ಅರೆನಗರ ಪ್ರದೇಶಗಳಲ್ಲೂ ಸುಲಭ ಸಾಲ ಸೌಲಭ್ಯಗಳನ್ನು ಒದಗಿಸಲು ಸಾಂಸ್ಥಿಕ ಹಣಕಾಸು ಸಂಸ್ಥೆಗಳ ಕೊರತೆ ಬಹು ಮಟ್ಟಿಗೆ ಇತ್ತು. ಅಂದು ಇಂದಿನಂತೆ ನಗರ ಪ್ರದೇಶಗಳಲ್ಲಿ ವಾಣಿಜ್ಯ ಬ್ಯಾಂಕುಗಳ ಜಾಲ ವ್ಯಾಪಕವಾಗಿ ಹರಡಿರಲಿಲ್ಲ. ಖಾಸಗಿ ಲೇವಾದೇವಿಗಾರರು ಮಾತ್ರ ಈ ಕೊರತೆಯನ್ನು ತುಂಬಲು ಉತ್ಸುಕರಾಗಿದ್ದರು. ಮುಂದೆ ೧೯೧೨ರಲ್ಲೂ ಸಹಕಾರಿ ಕಾನೂನಿಗೆ ತಿದ್ದುಪಡಿ ಮಾಡಿದಾಗ ಇದು ಸಾಧ್ಯವಾಯಿತು. ನಗರ ಪ್ರದೇಶಗಳ ಮಧ್ಯಮ ವರ್ಗದವರ, ನೌಕರರ, ಶ್ರಮಿಕರ, ನಿಯಮಿತ ಆದಾಯದವರ ಮತ್ತು ಇತರರ ವ್ಯವಸಾಯೇತರ ಚಟುವಟಿಕೆಗಳಿಗೆ ಸಾಲ ಸೌಲಭ್ಯಾರ್ಥ ಅವಶ್ಯಕತೆಯನ್ನು ಪೂರೈಸಲು ಈ ಸಂಸ್ಥೆಗಳು ಇಂದಿನಂತೆ ಅಂದೂ ಸಹ ಹೆಚ್ಚು ಅವಶ್ಯಕವೆನಿಸಿದವು.

## ಮೈಸೂರು ಸಹಕಾರಿ ಕಾನೂನು ೧೯೦೫

ಮೈಸೂರು ಪ್ರಾಂತ್ಯದಲ್ಲಿ ೧೯೦೫ರಲ್ಲಿ ಜಾರಿಯಲ್ಲಿ ತರಲಾದ ಸಹಕಾರಿ ಕಾನೂನು ಇಂಡಿಯಾ ಸರ್ಕಾರದ ೧೯೦೪ರ ಸಹಕಾರಿ ಕಾನೂನಿಗಿಂತ ಅನೇಕ ವಿಷಯಗಳಲ್ಲಿ ಹೆಚ್ಚು ವ್ಯಾಪಕ ಮತ್ತು ಪ್ರಗತಿಪರ ವಿಚಾರದಿಂದ ಪ್ರೇರೇಪಿತವಾಗಿತ್ತು. ಈ ಕಾನೂನಿನ ಅನ್ವಯ, ನಗರ ಪ್ರದೇಶದಲ್ಲಿಯೂ ಸಹಕಾರಿ ಸಾಲ ಸಂಸ್ಥೆಗಳನ್ನು. (ಅರ್ಬನ್ ಕ್ರೆಡಿಟ್ ಸೊಸಾಯಿಟಿ) ಮತ್ತು ಇತರೇ ಸಾಲೇತರ ಉದ್ದೇಶದ ಸಹಕಾರಿ ಸಂಸ್ಥೆಗಳನ್ನು ರಚಿ

ಸಲು ಅವಕಾಶ ಮಾಡಿಕೊಡಲಾಗಿತ್ತು. ೧೯೦೭ರಲ್ಲಿ ಮೈಸೂರು ಸರ್ಕಾರದವರು ಒಬ್ಬ ವಿಶೇಷಾಧಿ ಕಾರಿಯನ್ನು ಲಂಡನ್ ಮತ್ತು ಯುರೋಪ್ ದೇಶಕ್ಕೆ ಕಳುಹಿಸಿ ಅಲ್ಲಿಯ ಸಹಕಾರಿ ಚಳುವಳಿಯ ಅಧ್ಯಯನ ನಡೆಸಿ ಅದೇ ಮಾದರಿ ಯಲ್ಲಿ ಮೈಸೂರು ರಾಜ್ಯದಲ್ಲಿ ಸಹಕಾರಿ ಚಳುವಳಿಯನ್ನು ಮುಂದುವರೆಸಲು ಯೋಜಿಸಲಾಯಿತು.

## ರಾಜ್ಯದ ಪ್ರಥಮ ಪಟ್ಟಣ ಸಹಕಾರಿ ಬ್ಯಾಂಕುಗಳು

ಲಭ್ಯ ಇರುವ ದಾಖಲೆಗಳ ಪ್ರಕಾರ ಕರ್ನಾಟಕ ದಲ್ಲಿ ಪ್ರಾರಂಭಿಸಲಾದ ಮೊದಲನೆಯ ಪಟ್ಟಣ ಸಹ ಕಾರಿ ಬ್ಯಾಂಕ್ 'ಗದಗ-ಬೆಟಗೇರಿ ಸಹಕಾರಿ ಬ್ಯಾಂಕ್' (೧೯೦೫ ಮೇ ತಿಂಗಳಲ್ಲಿ) ಹಿಂದಿನ ಬೊಂಬಾಯಿ ಪ್ರಾಂತ್ಯದಲ್ಲಿ ೧೯೦೪ರ ಕಾನೂನಿನ ಅನ್ವಯ ರಚಿತ ವಾದ ಮೊದಲನೆಯ ಸಹಕಾರಿ ಬ್ಯಾಂಕ್ ಇದಾಗಿ ತ್ತೆಂದು ಹೇಳಲಾಗಿದೆ. ಅದರ ಸ್ಥಾಪನೆಗೆ ಮೂಲ ಪ್ರೇರಕರುಒಬ್ಬ ಸ್ಥಳೀಯ ಜರ್ಮನ್ ಕ್ರೈಸ್ತ ಮಿಷನರಿ ಎಂದು ಹಿರಿಯರು ಹೇಳುವರು. ಸ್ಥಳೀಯ ನೇಕಾರರಿಗೆ ಸುಲಭ ಸಾಲ ಸೌಲಭ್ಯ ಒದಗಿಸುವ ಉದ್ದೇಶದಿಂದ ಈ ಸಂಸ್ಥೆಯನ್ನು ಪ್ರಾರಂಭಿಸಲಾಗಿತ್ತು. ಆದರೆ ಈ ಸಂಸ್ಥೆ ಹೆಚ್ಚುಕಾಲ ಬದುಕಲಿಲ್ಲ. ರಾಜ್ಯದ ಎರಡನೆ ಸಹಕಾರಿ ಬ್ಯಾಂಕ್ ಅದೇ ವರ್ಷದ ಡಿಶೆಂಬರದಲ್ಲಿ ಬೆಂಗಳೂರು ಸಿಟಿ ಕೊ.ಆಪ್. ಸೊಸಾಯಿಟಿ ಎಂಬ ಹೆಸರಿನಲ್ಲಿ ಬೆಂಗಳೂರಿನಲ್ಲಿ ಮತ್ತು ಬೆಳಗಾವಿ ಜಿಲ್ಲೆಯ ಬೈಲ್ಲದ ಬಾಗೇವಾಡಿಯಲ್ಲೂ ಪ್ರಾರಂಬಿಸಲ್ಪಟ್ಟಿತು.

೧೯೦೬ರ ಸುಮಾರಿಗೆ ಕರ್ನಾಟಕದ ಪ್ರಮುಖ ಅಂದರೆ, ಬೆಳಗಾವಿ, ಗೊಕಾಕ, ಮೈಸೂರು, ಧಾರ ವಾಡ, ಶಿರಾ ಮುಂತಾದ ನಗರಗಳಲ್ಲಿ ಅಸ್ತಿತ್ವಕ್ಕೆ ಬಂದರೆ, ಕೋಲಾರ (೧೯೧೦), ಕುಮಟಾ, ವಿಜಾ ಪುರ, ಶಿವಮೊಗ್ಗೆಗಳಲ್ಲಿ ೧೯೧೨ರ ಸುಮಾರಿಗೆ ಇಂತಹ ಸಂಸ್ಥೆಗಳು ಮೂಡಿಬಂದವು. ಹಳೇ ಮೈಸೂರು ಪ್ರದೇಶದಲ್ಲಿ ಈ ಸಂಸ್ಥೆಗಳು ೧೯೦೫ರ ಕಾನೂನಿನ ಅನ್ವಯ ಪ್ರಾರಂಭಿಸಲ್ಪಟ್ಟರೆ ಉಳಿದ ಪ್ರದೇಶಗಳಲ್ಲಿ ೧೯೧೨ರ ಸಹಕಾರಿ ಕಾನೂನಿನ ಅನ್ವಯ ಮೂಡಿ ಬಂದವು.

(ರಾಜ್ಯದ ಬಹುಪಾಲು ಅರ್ಬನ್ ಬ್ಯಾಂಕುಗಳು ಪ್ರಾರಂಭದಲ್ಲಿ 'ಕ್ರೆಡಿಟ್ ಸೊಸಾಯಿಟಿ' ಎಂದು ಪ್ರಾರಂಭಗೊಂಡರೂ ಕಾಲಕ್ರಮೇಣ ತಮ್ಮ ಸಂಪತ್ತಿನ ಸ್ಥಿತಿಗತಿಗಳನ್ನು ಸುಧಾರಿಸಿಕೊಂಡು ಕಾರ್ಯ ವ್ಯಾಪ್ತಿ ಪ್ರದೇಶವನ್ನು ವಿಸ್ತರಿಸಿಕೊಂಡು ಪಟ್ಟಣ ಸಹಕಾರಿ ಬ್ಯಾಂಕುಗಳಾಗಿ ಪರಿವರ್ತಿತವಾಗಿವೆ)

## ಬ್ಯಾಂಕೇತರ ಚಟುವಟಿಕೆಗಳು

ಭಾರತಸರ್ಕಾರದ ಬ್ಯಾಂಕಿಂಗ್ ಕಂಪನಿಗಳ ನಿಯಂತ್ರಣ ಕಾನೂನು ೧೯೪೯ ಇದು ಸಹಕಾರಿ ಬ್ಯಾಂಕುಗಳಿಗೆ ೧೯೬೬ರಲ್ಲಿ ಅನ್ವಯವಾಗುವ ಪೂರ್ವ ದಲ್ಲಿ ಅನೇಕ ಪಟ್ಟಣ ಬ್ಯಾಂಕುಗಳು ಸ್ಥಳೀಯ ಸಮಸ್ಯೆ ಗಳಿಗೆ ಸ್ಪಂದಿಸುತ್ತ, ವಿವಿಧ ಜನೋಪಯೋಗಿ, ಬ್ಯಾಂಕೇತರ ಚಟುವಟಿಕೆಗಳಲ್ಲಿ ತಮ್ಮನ್ನು ಹೆಚ್ಚಾಗಿ ತೊಡಗಿಸಿ ಕೊಂಡು ತಮ್ಮ ಆದಾಯವನ್ನು ಹೆಚ್ಚಿಸಿ ಕೊಂಡವು. ಉದಾ: ಹೊನ್ನಾವರ ಅರ್ಬನ್ ಬ್ಯಾಂಕ್ ಎರಡನೆ ಮಹಾಯುದ್ಧದ ಕಾಲದಲ್ಲಿ ಬೆಸ್ತರಿಗೆ ಮೀನು ಬಲೆಗೆ ನೂಲು ಒದಗಿಸುವುದು, ಪಡಿತರ ವಿವರಣೆ, ಮುಂತಾದ ಬ್ಯಾಂಕೇತರ ಚಟುವಟಿಕೆಗಳನ್ನು ಮಾಡುತ್ತಿ ತ್ತು. ಉತ್ತರ ಕನ್ನಡ ಜಿಲ್ಲೆಯ ಅನೇಕ ನಗರ ಸಹಕಾರಿ ಬ್ಯಾಂಕುಗಳು ೧೯೬೬ರವರೆಗೆ ನಿಯಂತ್ರಿತ ವಸ್ತುಗಳನ್ನು ನ್ಯಾಯಬೆಲೆಗೆ ಒದಗಿಸುತ್ತಿದ್ದವು. ೧೯೬೬ರ ನಂತರ ನಗರ ಸಹಕಾರಿ ಬ್ಯಾಂಕುಗಳು ಯಾವದೇ ರೀತಿಯ ಬ್ಯಾಂಕೇತರ ಚಟುವಟಿಕೆಗಳನ್ನು ಕೈಗೊಳ್ಳಲು ನಿರ್ಬಂಧಿ ಸಲಾಗಿದೆ ಅಲ್ಲದೇ ಅವುಗಳ ಮೇಲೆ ಭಾರತೀಯ ರಿಜರ್ವ ಬ್ಯಾಂಕಿನ ನಿಯಂತ್ರಣವೂ ಉಂಟು.

## ಸಾಮಾಜಿಕ ನ್ಯಾಯ

ಸ್ಥಳಿಯ ಪರಿಸರ ದಲ್ಲಿ, ಸ್ಥಳೀಯರಿಂದ ಈ ಬ್ಯಾಂಕುಗಳನ್ನು ಪ್ರಾರಂಬಿಸಿದ ಮುಖ್ಯ ಉದ್ದೇಶ ಸ್ಥಳೀಯ ಜನಸಾಮನ್ಯರ ಆರ್ಥಿಕ; ಸಾಮಾಜಿಕ ಸಮ ಸ್ಯೆಗಳಿಗೆ ಪರಿಹಾರ ಒದಗಿಸುವದು. ಈ ಸೇವೆಯನ್ನು ಈ ವರ್ಗದ ಬ್ಯಾಂಕುಗಳು ಸದಸ್ಯರಿಗೆ ಸಲ್ಲಿಸಿದ ಬಗ್ಗೆ ಅನೇಕ ಉತ್ತಮ ಉದಾಹರಣೆಗಳು ಉಂಟು. ಮೈಸೂರು ನಗರದ ಆರ್ಯಭಗಿನಿ ಮಹಿಳೆಯರ ಸಹ ಕಾರಿ ಸಂಘ (೧೯೨೫), ಸ್ಥಳೀಯ ಬಡಕುಟುಂಬಗಳ ಬೆರಣಿ (ಕುಳ್ಳು) ಮತ್ತು ಮೊಸರು ಮಾರುವ ಮಹಿಳೆ ಯರನ್ನು ಖಾಸಗಿ ಸಾವುಕಾರರ ಶೋಷಣೆಯಿಂದ ತಪ್ಪಿಸುವ ಉದ್ದೇಶದಿಂದ ಪ್ರಾರಂಬಿಸಲಾಯಿತು ಎಂದು ತಿಳಿದುಬರುವದು. ಅದರಂತೆ ಉತ್ತರಕನ್ನಡದ ಅರ್ಬನ್ ಬ್ಯಾಂಕ್ ೧೯೩೦-೪೦ರ ದಶಕದಲ್ಲಿ ತೋಟದ ಬೆಳೆಗಾರರ ಆರ್ಥಿಕ ಮುಗ್ಗಟ್ಟಿನ ದಿನಗಳಲ್ಲಿ ಸದಸ್ಯರಿಂದ ಸಾಲದ ಬಾಕಿಯಾಗಿ ಪಡೆದುಕೊಂಡ ಜಮೀನನ್ನು ಇತರರಿಗೆ ಮಾರದೇ ಪುನಃ ಅದೇ

ಸದಸ್ಯರಿಗೆ ಸಾಲ ಹಿಂದಕ್ಕೆ ನೀಡಿದಾಗ್ಗೆ ಕೊಂಡಬೆಲೆಗೇ ಮಾರಿ, ನಿಜವಾದ ಅರ್ಥದಲ್ಲಿ ಸಹಕಾರಿ ಬ್ಯಾಂಕಾಗಿ ಇಂದು ರಾಜ್ಯದ ಪ್ರಮುಖ ಬ್ಯಾಂಕುಗಳಲ್ಲಿ ಒಂದಾಗಿದೆ.

೧೯೨೯–೩೦ರ ಜಾಗತಿಕ ಆರ್ಥಿಕ ಹಿನ್ನಡೆಯ ಅವಧಿಯಲ್ಲಿ ಇತರೆಡೆಯಂತೆ ಕೊಡಗಿನಲ್ಲೂ ರೈತರು ಕುಸಿಯುತ್ತಿದ್ದ ಕಾಫೀ ಬೆಲೆಗಳಿಂದ ಮತ್ತು ಕುಗ್ಗುತ್ತಿದ್ದ ಬೇಡಿಕೆಗಳಾದ ಆರ್ಥಿಕ ಸಂಕಷ್ಟದಲ್ಲಿ ಬಳಲುತ್ತಿದ್ದಾಗ ಬ್ಯಾಂಕು ತನ್ನದೇ ಆದ 'ಋಣಬಡಂಬಡಿಕೆ ಸಮಿತಿ' ಯನ್ನು ರಚಿಸಿ ೧೯೩೪ರಿಂದ ೧೯೪೫ರ ಅವಧಿಯಲ್ಲಿ ಲಕ್ಷಾಂತರ ರೂಪಾಯಿ ಸಾಲವನ್ನು ರೈತರಪರವಾಗಿ ಖಾಸಗಿ ಸಾಲಗರಿಗೆ ಪಾವತಿಮಾಡಿ ಸದರಿಸಾಲವನ್ನು ೫ ರಿಂದ ೧೦ ವರ್ಷದ ಕಂತುಗಳಲ್ಲಿ ಸುಲಭ ಬಡ್ಡಿ ಯೊಂದಿಗೆ ಬ್ಯಾಂಕ್‌ಗೆ ಮರುಪಾವತಿ ಮಾಡುವಂತೆ ಯೋಜನೆ ರೂಪಿಸಿ ರೈತರ ಸಂಕಷ್ಟದ ದಿನಗಳಲ್ಲಿ ನಿಜವಾದ ಸಹಕಾರಿ ಆಯಿತು. ಇವು ಕೇವಲ ಕೆಲವು ಉದಾಹರಣೆಗಳು.

### ಪ್ರಾರಂಭದಲ್ಲಿ ಕೋಮುವಾದಿ ಬ್ಯಾಂಕುಗಳು

ಅಂದಿನ ಪರಿಸ್ಥಿತಿಗೆ ಅನುಗುಣವಾಗಿ ಈ ಸ್ಥಳೀಯ ಬ್ಯಾಂಕುಗಳು ಸ್ಪರ್ಧಾತ್ಮಕ ಮನೋಭಾವನೆಯಿಂದ ಮುಂದುವರೆಯಲು ಮತ್ತು ಆಯಾ ಜಾತಿ/ಮತ ಪಂಗಡದವರ ಹಿತ ರಕ್ಷಣೆ ಮಾಡಲು ಅನೇಕ ಸಂದರ್ಭಗಳಲ್ಲಿ ಧರ್ಮ, ಜಾತಿ, ವ್ಯಕ್ತಿಗಳ ಮತ್ತು ಪ್ರಾದೇಶಿಕ ಹೆಸರಿನಿಂದ ಸಂಸ್ಥೆಗಳನ್ನು ಆರಂಭ ಮಾಡಿದ್ದು ಉಂಟು. (ಈ ವಿಚಾರದಲ್ಲಿ ವಾಣಿಜ್ಯ ಬ್ಯಾಂಕುಗಳು ಹೊರತಾಗಿಲ್ಲ)

ಉದಾ: ವೀರಶೈವ ಬ್ಯಾಂಕ್, ನಗರದ ಸಹಕಾರಿ ಬ್ಯಾಂಕ್, ಬಸವೇಶ್ವರ ಬ್ಯಾಂಕ್, ಮರಾಠಿ ಬ್ಯಾಂಕ್, ಕಾಳಿದಾಸ ಬ್ಯಾಂಕ್, ರೆಡ್ಡಿ ಬ್ಯಾಂಕ್, ಗೌಡಸಾರಸ್ವತ ಬ್ಯಾಂಕ್, ಶಾಮರಾವ ವಿಠ್ಠಲ ಬ್ಯಾಂಕ್, ಮುಸ್ಲೀಮ ಬ್ಯಾಂಕು ಮುಂತಾದವುಗಳು. ಅನೇಕ ಸಂದರ್ಭಗಳಲ್ಲಿ ಭಾಷಾಭಿಮಾನದಂತ ಸೂಕ್ಷ್ಮ ವಿಷಯಗಳೂ ಇಂತಹ ಬ್ಯಾಂಕುಗಳ ರಚನೆಗೆ ಮತ್ತು ಮುನ್ನಡೆಗೆ ಕಾರಣವಾಗಿವೆ.

ಉದಾ: ಧಾರವಾಡ ಕೆ.ಸಿ.ಸಿ. ಬ್ಯಾಂಕ್, ೧೯೧೫ರಲ್ಲಿ ಲಿಂಗಾಯಿತರಿಂದ, ರೆಡ್ಡಿಬ್ಯಾಂಕ್ ೧೯೧೪ರಲ್ಲಿ, ರೆಡ್ಡಿ ಜನಾಂಗದವರಿಂದ, ೧೯೦೭ರಲ್ಲಿ ಬಹುಸಂಖ್ಯಾತ ಮರಾಠಿ ಭಾಷಿಕ ರೇಲ್ವೆ ನೌಕರರಿಂದ ಪ್ರಾರಂಭವಾದ ಸದರ್ನ ಮರಾಠಾ ಬ್ಯಾಂಕಿನ ಪ್ರತಿಸ್ಪರ್ಧಿಗಳಾಗಿ ಪ್ರಾರಂಭಿಸಲ್ಪಟ್ಟವು. ಇದೇ ಕಾರಣದಿಂದ ಮುಂದೆ ೧೯೫೬ರಲ್ಲಿ ಮರಾಠಾ ಬ್ಯಾಂಕಿನ ಹೆಸರನ್ನು ಶ್ರೀ ಮಹಾಲಕ್ಷ್ಮಿ ಬ್ಯಾಂಕೆಂದು ಪುನರ್ ನಾಮಕರಣ ಮಾಡಲಾಯಿತು.

### ವಾಣಿಜ್ಯ ಬ್ಯಾಂಕುಗಳ ಹಿನ್ನಡೆ

ಸ್ಥಳೀಯ ಸಹಕಾರಿ ಬ್ಯಾಂಕುಗಳು ಪ್ರಾಬಲ್ಯ ಹೊಂದಿದ್ದ ಅನೇಕ ಪ್ರದೇಶಗಳಲ್ಲಿ ವಾಣಿಜ್ಯ ಬ್ಯಾಂಕುಗಳು ತಡವಾಗಿ ಮೂಡಿಬಂದವು. ಧಾರವಾಡ ಜಿಲ್ಲೆಯಲ್ಲಿ ೧೯೦೬ರಿಂದ ೧೯೪೦ರ ವರೆಗಿನ ೪೪ ವರ್ಷಗಳ ಅವಧಿಯಲ್ಲಿ ಜಿಲ್ಲೆಯ–ವಿವಿಧ ಸ್ಥಳಗಳಲ್ಲಿ ೧೭ ಸಹಕಾರಿ ಬ್ಯಾಂಕುಗಳು ಮೂಡಿ ಬಂದವು. ಆದರೆ ಜಿಲ್ಲೆಯ ಪ್ರಥಮ ಸ್ಥಳೀಯ ವಾಣಿಜ್ಯ ಬ್ಯಾಂಕು ೧೯೨೯ರಲ್ಲಿ ಹಾನಗಲ್ಲಿನಲ್ಲಿ, ೧೯೩೦ರಲ್ಲಿ ಹುಬ್ಬಳ್ಳಿಯಲ್ಲಿ ಮೂಡಿಬಂದವು.

ಬೆಳಗಾವಿ ಜಿಲ್ಲೆಯಲ್ಲಿ ೧೯೦೮–೧೯೪೮ರ ಅವಧಿಯಲ್ಲಿ ಕೇವಲ ನಾಲ್ಕು ಸ್ಥಳೀಯ ವಾಣಿಜ್ಯ ಬ್ಯಾಂಕುಗಳು ಮೂಡಿಬಂದರೆ ಇದೇ ಅವಧಿಯಲ್ಲಿ ಜಿಲ್ಲೆಯ ವಿವಿಧ ಸ್ಥಳಗಳಲ್ಲಿ ಪ್ರಾರಂಭವಾದ ಸಹಕಾರಿ ಬ್ಯಾಂಕುಗಳ ಸಂಖ್ಯೆ ೧೪ ಆಗಿತ್ತು. ಉತ್ತರ ಕನ್ನಡ ಜಿಲ್ಲೆಯಲ್ಲಿ ಸ್ಥಳೀಯ ವಾಣಿಜ್ಯ ಬ್ಯಾಂಕ್ ಪ್ರಾರಂಭವಾದದ್ದು ೧೯೪೦ರಲ್ಲಿ. ಅದುವರೆಗೆ ಈ ಜಿಲ್ಲೆಯಲ್ಲಿ ಆರು ಸಹಕಾರಿ ಬ್ಯಾಂಕುಗಳು ಪ್ರಾರಂಭಗೊಂಡಿದ್ದವು. ಗುಲಬರ್ಗ ಜಿಲ್ಲೆಯಲ್ಲಿ ೧೯೩೯ರ ವರೆಗೆ ಯಾವ ವಾಣಿಜ್ಯ ಬ್ಯಾಂಕು ವ್ಯವಹರಿಸುತ್ತಿರಲಿಲ್ಲ. ೧೯೩೨ರಲ್ಲಿ ಪ್ರಾರಂಭವಾದ ನಗರ ಸಹಕಾರಿ ಬ್ಯಾಂಕ್, ಸ್ಥಳೀಯ ಬ್ಯಾಂಕಿಂಗ್ ಸೇವೆಗಳ ಅವಶ್ಯಕತೆಗಳನ್ನು ಪೂರೈಸುತ್ತಿತ್ತು. ಕೊಡಗು ಪ್ರದೇಶದಲ್ಲಿ ಸ್ಥಳೀಯವಾಗಿ ಸಹಕಾರಿ ಬ್ಯಾಂಕುಗಳು ಹೆಚ್ಚು ಮುನ್ನಡೆ ಸಾಧಿಸಿದ್ದರಿಂದ ಸರ್ಕಾರವೇ ವಾಣಿಜ್ಯ ಬ್ಯಾಂಕುಗಳ ಸ್ಥಾಪನೆಗೆ ಒಂದು ರೀತಿಯಲ್ಲಿ ತಡೆಯನ್ನು ಹಾಕಿತ್ತು.

### ಸಹಕಾರಿ ಬ್ಯಾಂಕುಗಳ ಇಂದಿನ ಚಿತ್ರ

ದೇಶದಲ್ಲಿರುವ ನಗರಸಹಕಾರಿ ಬ್ಯಾಂಕುಗಳ ಸಂಖ್ಯೆ ೧೩೪೦ ಈ ಬ್ಯಾಂಕುಗಳು ಭಾರತದ ಕೇವಲ ನಾಲ್ಕು ರಾಜ್ಯಗಳಲ್ಲಿ ಕೇಂದ್ರೀಕೃತವಾಗಿವೆ. ಮಹಾರಾಷ್ಟ್ರ, ಗುಜರಾತ್, ಕರ್ನಾಟಕ ಮತ್ತು ತಮಿಳು ನಾಡು. ಈ ನಾಲ್ಕು ರಾಜ್ಯಗಳಲ್ಲೂ ದೇಶದ ಒಟ್ಟು ಸಂಖ್ಯೆಯ ಶೇ ೭೮% ಕೇಂದ್ರಕೃತವಾಗಿವೆ. ಅವುಗಳಲ್ಲಿ

ಕರ್ನಾಟಕದ ಸಾಧನೆ ಮೂರನೆಯದು. ನಂತರದ ಸ್ಥಾನ ಆಂಧ್ರ, ಕೇರಳ, ಪಶ್ಚಿಮಬಂಗಾಳದ್ದು. ದೇಶದ ಪ್ರಮುಖ ೩೧ ಬಹುದೊಡ್ಡ ಸಹಕಾರಿ ಬ್ಯಾಂಕುಗಳಲ್ಲಿ (ದುಡಿಯುವ ಬಂಡವಾಳ ರೂ ೨೫ ಕೋಟಿಗೂ ಹೆಚ್ಚಿಗೆ) ೧೯ ಮಹಾರಾಷ್ಟ್ರದಲ್ಲಿ, ೧೦ ಗುಜರಾತ್ ಮತ್ತು ಕರ್ನಾಟಕ, ಗೋವಾಗಳಲ್ಲಿ ತಲಾ ಒಂದರಂತೆ ಇರುವವು.

ಕರ್ನಾಟಕದಲ್ಲಿ ೧೯೮೭ರಲ್ಲಿ ಇದ್ದಂತೆ ೨೧೭ ನಗರ ಸಹಕಾರಿ ಬ್ಯಾಂಕುಗಳು ೧೭೯ ಶಾಖೆಗಳನ್ನು ಹೊಂದಿದ್ದವು. ಅವುಗಳ ಸದಸ್ಯರ ಸಂಖ್ಯೆ ಸುಮಾರು ೧೦ಲಕ್ಷ, ಷೇರು ಬಂಡವಾಳ ರೂ ೨೫.೧೫ ಕೋಟಿ, ಠೇವಣಿ ಸಂಗ್ರಹಣೆ ರೂ ೩೧೭ ಕೋಟಿ ಆಗಿದ್ದರೆ, ಇವುಗಳ ಸದಸ್ಯರಿಗೆ ನೀಡಿದ ಸಾಲ ಮತ್ತು ಗಳಿಸಿದ ಲಾಭ ಕ್ರಮವಾಗಿ ರೂ ೨೫೫ ಕೋಟಿ ಮತ್ತು ೯ ಕೋಟಿ ಎಂದು ವರದಿಯಾಗಿದೆ. ಒಟ್ಟು ಬ್ಯಾಂಕುಗಳಲ್ಲಿ ೧೧ ಹೊರತು ಪಡಿಸಿ ಎಲ್ಲಾ ಬ್ಯಾಂಕುಗಳು ಲಾಭ ಗಳಿಸಿದ್ದವು.

ದೇಶದ ನೂರು ಪ್ರಮುಖ ಸಹಕಾರಿ ಬ್ಯಾಂಕುಗಳ ಪೈಕಿ ಬೆಂಗಳೂರಿನ ಮೂರು ಬ್ಯಾಂಕುಗಳು ಸೇರಿದೆ. ಮಲ್ಲೇಶ್ವರಂ ಬ್ಯಾಂಕ್ (೧೯೨೧), ಕರ್ನಾಟಕ ಕೈಗಾರಿಕಾ ಅಭಿವೃದ್ಧಿ ಬ್ಯಾಂಕ್ (೧೯೫೨), ಮತ್ತು ಅಮಾನತ್ ಬ್ಯಾಂಕ್ (೧೯೭೭). ಕರ್ನಾಟಕ ಕೈಗಾರಿಕಾ ಬ್ಯಾಂಕ್ ರಾಜ್ಯಸರ್ಕಾರದ ಒಡೆತನಕ್ಕೆ ಸೇರಿದೆ.

ಡಾ|| ಆರ್.ಎಂ.ಷಡಕ್ಷರಯ್ಯ

# ಬೀದರ್‌ಜಿಲ್ಲೆಯ ಶೈವ ಧರ್ಮ

ಶೈವ ಪಾಶುಪತ ಸಿದ್ಧಾಂತ ಪ್ರತಿಪಾದಕ ಶ್ರೀಕಂಠ. ಇದನ್ನು 'ಮಹಾಭಾರತ' ಶಾಂತಿಪರ್ವದಲ್ಲಿ ಹೇಳಿದೆ. ಅಭಿನವಗುಪ್ತನ (ಕ್ರಿ.ಶ.100) ತಂತ್ರಾವಲೋಕವು ಶ್ರೀಕಂಠನ ಜೊತೆಯಲ್ಲಿಯೇ ಲಕುಲೀಶನನ್ನು ಹೆಸರಿಸಿದೆ. ಇವರಿಬ್ಬರೂ ಶಿವಶಾಸನದ ಪ್ರತಿಪಾದನೆಗೆ ಅಧಿಕಾರಿಗಳೆಂದು ಅಭಿಪ್ರಾಯಪಟ್ಟಿದೆ.[1]

ಮಹಾಕೂಟದ ಮುಕುಟೇಶ್ವರ ದೇವಾಲಯದಲ್ಲಿ ಲಕುಲೀಶನ ಶಿಲ್ಪವಿದೆ.[2] ಬಾದಾಮಿಯಲ್ಲಿ ಲಕುಲೀಶನ ದೇವಸ್ಥಾನದಲ್ಲಿ ಲಕುಲೀಶನ ಮೂರ್ತಿಯಿದೆ.[3] ಕೈಯಲ್ಲಿ ದಂಡವಿಡಿದು ಲಕುಲೀಶನು ನಿಂತ-ಕುಳಿತ ಭಂಗಿಯಲ್ಲಿದ್ದಾನೆ. ಸು.ಕ್ರಿ.ಶ.8ನೇ ಶತಮಾನದ ಶಿವಲಿಂಗ ಹೊತ್ತು ನಿಂತ ಭಕ್ತರ ಶಿಲ್ಪಗಳನ್ನು ಇನ್ನೊಂದೆಡೆ ಕಾಣುತ್ತೇವೆ. ಈ ಶಿಲ್ಪಗಳು ಮಹಾಕೂಟ,[4] ಜಾಲಿಹಾಳ,[5] ಎಲಿಫೆಂಟಾ[6] ಮುಂತಾದ ಕಡೆಗಳಲ್ಲಿವೆ. ಕ್ರಿ.ಶ.11-17ನೆಯ ಶತಮಾನದಲ್ಲಿ ಶಿವಲಿಂಗವನ್ನು ಕೈಗಳಲ್ಲಿ ಹಿಡಿದು ಆರಾಧಿಸುವ ಶಿಲ್ಪಗಳು ಬಹು ಕಡೆಯಲ್ಲಿವೆ. ಈ ಶಿಲ್ಪಗಳು ಮೂರು ಮಾದರಿಯಲ್ಲಿ ಕಾಣಿಸಿಕೊಂಡಿವೆ. ಮೊದಲನೆಯದು ಶಿವಶರಣ ಗುಂಡಬ್ರಹ್ಮಯ್ಯ ಶೂಲವೇರಿ ಕುಳಿತು ಕೈಗಳಲ್ಲಿ ಶಿವಲಿಂಗ ಹಿಡಿದುಕೊಂಡಿರುವುದು. ವೀರಭದ್ರನ ಜಡೆಯಲ್ಲಿ ತೋರಿಸಿದ ಶಿವಲಿಂಗ ಎರಡನೇಯದಾಗಿದೆ.[7] ಶಿವಲಿಂಗವನ್ನು ಕೈಯಲ್ಲಿ ಹಿಡಿದು ಕುಳಿತ-ನಿಂತ ಶಿವಶರಣರನ್ನು ಮೂರನೇ ಗುಂಪಿಗೆ ಸೇರಿಸಬಹುದು. ದಂಡವಿಡಿದವರನ್ನು ಲಕುಲೀಶನೆಂದು, ದೇಹದ ವಿವಿಧ ಅಂಗಾಂಗಗಳಲ್ಲಿ ಶಿವಲಿಂಗಗಳನ್ನು ಹೊತ್ತ ಅಥವಾ ಹಿಡಿದವರನ್ನು ಮಹೇಶ್ವರರೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[8]

ಪಾಶುಪತ, ಕಾಳಾಮುಖ, ಕಾಪಾಲಿಕರಲ್ಲಿ ಕಾಳಾಮುಖರು ತಮ್ಮ ಆಚರಣೆಗಳಿಂದ ಒಂದೇ ಗುಂಪಿಗೆ ಸೇರುತ್ತಾರೆ. 1) ಕಾಳಾಮುಖರು (ಅಸಿತ ವಕ್ತ್ರ) ಮುಖದ ಮೇಲೆ ಕಪ್ಪುಗೆರೆ (ಭಸ್ಮವನ್ನು) ಹಚ್ಚಿಕೊಳ್ಳುವರು. 2) ಪಾಶುಪತರು ದಿನದಲ್ಲಿ ಮೂರು ವೇಳೆ ಭಸ್ಮ ಧರಿಸುವರು. ಇವರಿಬ್ಬರೂ ಒಂದೇ. ಕನ್ನಡ ಶಾಸನಗಳಲ್ಲಿ[9] ಇವರಿಬ್ಬರೂ ಬೇರೆ ಬೇರೆ ಎಂದು ಸ್ಪಷ್ಟವಾಗಿ ಹೇಳಿಲ್ಲ.

### ದೇವಾಲಯ – ಶಿಲ್ಪಗಳು :

ನಮ್ಮ ಅಧ್ಯಯನ ಪರಿಮಿತಿಯಲ್ಲಿ ಪಾಶುಪತ ಕಾಳಾಮುಖ ಪರಂಪರೆ ಬೀದರ ಜಿಲ್ಲೆಯಲ್ಲಿ ಕ್ರಿ.ಶ.11-13ನೇ ಶತಮಾನದಲ್ಲಿ ಪ್ರಭಾವಶಾಲಿಯಾಗಿ ಪ್ರಸರಿಸಿದಂತೆ ಕಾಣುತ್ತದೆ. ಈ ಭಾಗದಲ್ಲಿ ಕಾಣಿಸಿಕೊಂಡ ಹಲವಾರು ಶೈವ ದೇವಾಲಯಗಳು, ವಿಗ್ರಹಗಳು ಮತ್ತು ಆಚಾರ್ಯರು ಪಾಶುಪತ ಕಾಳಾಮುಖರ ಗುಂಪಿಗೆ ಸೇರಿದವರುಗಳೆಂದು ಹೇಳಬಹುದಾಗಿದೆ. ಈ ಜಿಲ್ಲೆಯ ಪ್ರತಿಯೊಂದು ಹಳ್ಳಿಗಳಲ್ಲಿ ಕನಿಷ್ಠ ಒಂದಾದರೂ ದೇವಾಲಯವಿದ್ದಿತು. ಈಗ ಕೆಲವೇ ದೇವಾಲಯಗಳು ಮಾತ್ರ ಅಲ್ಲಲ್ಲಿ ಕಾಣಸಿಗುವುವು. ಬಸವಕಲ್ಯಾಣ ತಾಲೂಕಿನ ಉಮಾಪುರ, ನಾರಾಯಣಪುರ, ಹಳ್ಳಿ, ಬೆಟ್ಟ, ಉಜಳಂ, ಮಿರ್ಕಲ್, ಮುಚ್ಚಳಂಬಾ; ಭಾಲ್ಕಿ ತಾಲೂಕಿನ ಗೋರಚಿಂಚೊಳ್ಳಿ, ಹುಮನಾಬಾದ ತಾಲೂಕಿನ ಜಲಸಂಗಿ ಗ್ರಾಮಗಳಲ್ಲಿ ಶೈವಧರ್ಮಕ್ಕೆ ಸೇರಿದ ಅಲ್ಪಸ್ವಲ್ಪ ಶಿಥಿಲಗೊಂಡ ದೇವಸ್ಥಾನಗಳಿವೆ. ಬಹುತೇಕ ಗ್ರಾಮಗಳಲ್ಲಿ ದೇವಾಲಯದ ಅವಶೇಷಗಳು ಜೀರ್ಣಗೊಂಡು ಚದುರಿಹೋಗಿವೆ.

ಹನ್ನೆರಡು ಶೈವ ದೇವಾಲಯಗಳು ಬಸವಕಲ್ಯಾಣ ನಗರ ಒಂದರಲ್ಲೇ ಇದ್ದವು. ಹಲವಾರು ಸ್ಥಳೀಯ ಶಾಸನಗಳು ಅಲ್ಲಿದ್ದ ಶೈವ ದೇವಾಲಯಗಳ ಮಾಹಿತಿಯನ್ನು ನೀಡುತ್ತವೆ. ಅವುಗಳು ಅಣದೂರು, ಖಣೆರಂಜೋಳ, ಬೆಲ್ಲರಗಿ, ಅಲೆಂಬರ, ಬಗದಲ್, ರಾಜಗೀರ್, ಬೀದರ್ ತಾಲೂಕಿನಲ್ಲಿ; ಭಾಲ್ಕಿ, ಚಂದಾಪುರ, ಮೈಲಾರ, ಮೈನಳ್ಳಿ, ಲಂಜವಾಡ, ಹಾಲಳ್ಳಿ, ಬ್ಯಾಲಳ್ಳಿ, ಮಾಸಿಮೋಡು, ಘೋರಚಿಂಚೊಳ್ಳಿ, ಅಳಲಾಯಿ, ಬೀರಿ(ಬಿ), ಧನ್ನೂರ, ಭಾಲ್ಕಿ ತಾಲೂಕಿನಲ್ಲಿ; ಮುಚ್ಚಳಾಂಬ ಬಸವಕಲ್ಯಾಣ, ಗೋರ್ಟ, ಹಳ್ಳಿ, ಮಿರ್ಕಲ್, ಹುಲಸೂರು, ಘಾಟಬೋರಾಳ, ಮೋರಖಂಡಿ, ಉಜಳಾಂ, ಶಿವಪೂರ, ಧನ್ನೂರ, ಉಮಾಪುರ ಇತ್ಯಾದಿ. ಬಸವಕಲ್ಯಾಣ ತಾಲೂಕಿನಲ್ಲಿ; ಬನಹಳ್ಳಿ,

ಜಲಸಂಗಿ, ಹಿಲಾಲಪೂರ ಹುಮನಾಬಾದ ತಾಲೂಕಿನಲ್ಲಿ; ಔರದ, ಔರದ ತಾಲೂಕಿನಲ್ಲಿ ಇದ್ದವು. ಉಮಾಪುರದ ಮಹೇಶ್ವರ, ನಾರಾಯಣಪುರದ ಘಟ್ಟಿಬಾಳಯ್ಯ, ಜಲ ಸಂಗಿಯ ಶಿವದೇವಾಲಯ ಮತ್ತು ಮಿರ್ಕಲ್ಲಿನ ಬಾವಿ ದೇವಾಲಯಗಳು ಅಧ್ಯಯನಕ್ಕೆ ಬಹು ಮಹತ್ವದ್ದಾಗಿವೆ. ಶೈವ ಧರ್ಮದ ವೈವಿಧ್ಯಮಯ ಶಿಲ್ಪಗಳು ಈ ಜಿಲ್ಲೆ ಯಲ್ಲಿವೆ. ಇವುಗಳಲ್ಲಿ ಶೈವ ಯತಿಯರ ಮತ್ತು ಭಕ್ತರ ಶಿಲ್ಪಗಳು ಶೈವ ಧರ್ಮದ ಅಧ್ಯಯನಕ್ಕೆ ತುಂಬಾ ಮಹತ್ವದ್ದಾಗಿವೆ. ಯತಿಗಳು ಕೈಗಳಲ್ಲಿ ಪಾನಪಾತ್ರ ಹಿಡಿದು ಕುಳಿತ ಒಂದೆರಡು ಶಿಲ್ಪಗಳು ಬಸವಕಲ್ಯಾ ಣದ ಮ್ಯೂಜಿಯಂನಲ್ಲಿವೆ. ಇವರು ಕಾಪಾಲಕರಾಗಿ ದ್ದಾರೆ. ಈ ಶಿಲ್ಪಗಳ ಬಗ್ಗೆ ಈಗಾಗಲೇ ಅಧ್ಯಯನ ಮಾಡಲಾಗಿದೆ. ರಾಜಕುಮಾರನೊಬ್ಬನು ಪ್ರಸನ್ನ ಮುದ್ರೆಯಲ್ಲಿ ಕೈಗಳನ್ನು ಹಿಡಿದು ಯೋಗಮುದ್ರೆಯಲ್ಲಿ ಕುಳಿತಿರುವ ಮತ್ತೊಂದು ಶಿಲ್ಪ ಅಲ್ಲಿದೆ. ಇವನು ಕೈಗ ಳಲ್ಲಿ ರುದ್ರಾಕ್ಷಿ ಸರಗಳನ್ನು ಇನ್ನಿತರ ಅಂಗಾಂಗಗಳಲ್ಲಿ ಆಭರಣಗಳನ್ನು ಕಟ್ಟಿಕೊಂಡಿರುವನು. ಇಲ್ಲಿಯ ಶಿಲ್ಪಗಳ ಅಧ್ಯಯನವನ್ನು ಪ್ರತ್ಯೇಕವಾಗಿ ಮಾಡಲಾಗಿದೆ.[10] ಕಾಳಾಮುಖ ಶೈವರು ಈ ಭಾಗದಲ್ಲಿ ನೆಲೆಸಿದ್ದ ರೆಂಬುದು ಸ್ಪಷ್ಟವಾಗುತ್ತದೆ.

ಗಣೇಶ, ಶಿವಲಿಂಗ, ಚತುರ್ಮುಖಲಿಂಗ, ಕಾರ್ತಿ ಕೇಯ, ಶಿವ, ಉಮಾ–ಮಹೇಶ್ವರ, ನಟರಾಜ, ಗಜ ಮರ್ಧನ, ನಂದಿ, ತ್ರಿಪುರಾಂತಕ ಶಿವ, ಭೈರವ, ಚಾಮುಂಡಿ, ಮಹಿಷಾಸುರ ಮರ್ದಿನಿ, ಸಪ್ತಮಾತೃಕೆ ಯರು ಮುಂತಾದ ಶೈವ ಶಿಲ್ಪಗಳು ಅಲ್ಲಲ್ಲಿ ಬೆಳಕಿಗೆ ಬಂದಿವೆ.[11] ಈ ಭಾಗದ ಹಲವಾರು ಶಿಲ್ಪಗಳನ್ನು ಈಗಾಗಲೇ ತಕ್ಕಮಟ್ಟಿಗೆ ಅಧ್ಯಯನ ಮಾಡಲಾಗಿದೆ. ಶಿಲ್ಪ–ದೇವಾಲಯಗಳ ಅಧ್ಯಯನದಿಂದ ಬೀದರ ಜಿಲ್ಲೆ ಯಲ್ಲಿ ಶೈವ ಧರ್ಮವು ಸು.ಕ್ರಿ.ಶ.8ನೇ ಶತಮಾನದಲ್ಲಿ ಪ್ರಭಾವಶಾಲಿಯಾಗಿ ಪ್ರಸರಿಸಿದ್ದಿತೆಂದು ಹೇಳಬಹುದು. ಬಸವಕಲ್ಯಾಣ ತಾಲೂಕಿನ ಮೊರಖಂಡಿ ಗ್ರಾಮದಲ್ಲಿ ಈ ಕಾಲದ ಶಿವಲಿಂಗ, ಗಣೇಶ, ದ್ವಾರಪಾಲಕ, ಪ್ರತ್ಯೇಕ ಸಪ್ತಮಾತೃಕೆಯರ ಶಿಲ್ಪಗಳು ಕಂಡುಬಂದಿರು ವುದು ಗಮನಾರ್ಹ. ಬೀದರ ಜಿಲ್ಲೆಯಲ್ಲೇ ಈ ಶಿಲ್ಪ ಗಳು ಅತ್ಯಂತ ಪ್ರಾಚೀನದ್ದಾಗಿವೆ. ಮುಂದೆ ಈ ಧರ್ಮವು ಹಲವು ಶತಮಾನಗಳವರೆಗೆ (ಸು.ಕ್ರಿ .ಶ.14ನೇ ಶತಮಾನ) ಶಕ್ತಿಯುತವಾಗಿ ಬೆಳೆದು ಈ ಭಾಗದಲ್ಲಿ ಗಟ್ಟಿಯಾಗಿ ನೆಲೆಯೂರಿದ್ದಿತು. ರಾಜಕೀಯ ಪರಿಸ್ಥಿತಿ ಬದಲಾದ ನಂತರ ಕೇವಲ ಅದರ ಪ್ರಭಾವ ಕಡಿಮೆ ಆದಂತೆ ತೋರುತ್ತದೆ.

ಶೈವ ದೇವಾಲಯಗಳ ಪೂಜೆ, ಪುನಸ್ಕಾರ, ಪಂಚೋಪಚಾರ, ದೇವರ ಅಂಗಭೋಗ, ಖಂಡಸ್ಫುಟಿತ ಜೀರ್ಣೋದ್ಧಾರ, ತಪೋಧನ ವಿದ್ಯಾರ್ಥಿಗಳ ಆಹಾರ –ಔಷಧ ಮೊದಲಾದುವುಗಳಿಗೆ ದಾನ ನೀಡಿದ ವಿಷಯ ಹಲವಾರು ಶಾಸನಗಳಲ್ಲಿ ಉಲ್ಲೇಖವಾಗಿದೆ. ಅವುಗಳಲ್ಲಿ ಹೆಚ್ಚಿನ ಪಾಲು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದವು. ಇನ್ನುಳಿದವು ಕಳಚೂರಿ, ಸೇವುಣ ಮತ್ತು ಮೊಹಮ್ಮದ ಬಿನ್ ತುಘಲಕ್ ಇವರ ಕಾಲ ದ್ದಾಗಿವೆ. ತುಘಲಕ್‌ನ ಕಾಲದಲ್ಲಿ ಬಸವಕಲ್ಯಾಣದ ಮಧುಕೇಶ್ವರ ದೇವಾಲಯದ ಜೀರ್ಣೋದ್ಧಾರ ಹಾಗೂ ಪೂಜಾವ್ಯವಸ್ಥೆಯನ್ನು ಪುನಃ ಕಲ್ಪಿಸಿದ ಸಂಗತಿ ಬೀದರ ಜಿಲ್ಲೆಯ ಚರಿತ್ರೆಯಲ್ಲೇ ಅಪೂರ್ವ ದಾಖಲೆಯಾಗಿದೆ.[12]

## ಪರಿಚರ ವರ್ಗ :

ದೇವಾಲಯಗಳನ್ನು ನೋಡಿಕೊಳ್ಳಲು ಪ್ರತ್ಯೇಕ ಪರಿಚರವರ್ಗ ವಿದ್ದಿತು. ಆಸ್ಥಾನಿಕ ಪೂಜಾರಿ (ಬಸವಕ ಲ್ಯಾಣ) ಅಥವಾ ಪೂಜಾರಿ ಮಾಣಿಗಳು (ಬ.ಕ, ಗೋರ್ಟಾ, ಮುಚ್ಚಳಾಂಬ) ಅಥವಾ ಪಾವನ ಮಾಣಿ ಗಳು (ಗುಡೂರು), ಹಾಡುವ ಅಮ್ಮಡಿ (ಗೋರ ಚಿಂಚೊಳ್ಳಿ) ಗೀತವಾದ್ಯ ಪರಿವಾರದವರು (ಗೋರ್ಟಾ), ದೇವದರದಸಿಂಗೆ ಮತ್ತು ಪುರಾಣ ಹೇಳುವವನು (ಮುಚ್ಚಳಾಂಬ), ಕಮ್ಮಾರ, ಕಲ್ಕುಟಿಗ (ಗೋರ್ಟಾ), ವೇಳೆ ನೋಡುವವನು (ಬ.ಕ, ಮುಚ್ಚ ಳಾಂಬ ಇತ್ತಾದಿ), ಗೊರವರು (ಬ.ಕ, ಮುಚ್ಚ ಳಾಂಬ), ಸ್ಥಾನಾಚಾರ್ಯ ಮುಂತಾದವರು ದೇವಾಲ ಯದ ಪರಿಚರವರ್ಗ ದವರಾಗಿದ್ದರೆಂದು ಅಲ್ಲಿಯ ಶಾಸನಗಳಿಂದ ತಿಳಿದು ಬರುತ್ತದೆ.

ಬೀದರ ಜಿಲ್ಲೆಯ ಶಾಸನಗಳಿಂದ ಹಲವಾರು ಆಚಾರ್ಯರ ಹೆಸರುಗಳು ಉಕ್ತವಾಗಿವೆ. ಗುಡೂರಿನ (ಕ್ರಿ.ಶ.1082) ದೇಶಾಂತರಿ ಪಾಶುಪತಾಚಾರ್ಯ ಶ್ರೀ ರತ್ನರಾಶಿ; ಗೋರಚಿಂಚೊಳ್ಳಿಯ (ಕ್ರಿ.ಶ.1137) ಉತ್ತ ರೇಶ್ವರದ ಆಚಾರ್ಯ, ಭೀಮದೇವ, ಪಂಡಿತದೇವ ಮತ್ತು ಮಲ್ಲಿಕಾರ್ಜುನ; ಬಸವಕಲ್ಯಾಣದ (ಕ್ರಿ.ಶ.1143) ಆಚಾರ್ಯದೇವ ಶಿವಪಂಡಿತ; ಗೋರ್ಟದ ರುದ್ರಮಿಶ್ರ; ರಂಜೋಳಧ (ಕ್ರಿ.ಶ.1207) ಚಂದ್ರಭೂಷಣ ಮುನಿ ಮತ್ತು ಸೋಮೇಶ್ವರದೇವ;

ಲಂಜವಾಡದ – ಪ್ರಭಚಾವುಣ್ಣಮಯ್ಯ ಮತ್ತು ಮರಿಕ ಲ್ಲಿತಮ್ಮಳ ಸಿರ್ಕ; ಚಂದಾಪೂರದ ಭೋಗದೇವ ಭಟ್ಟೋಪಾಧ್ಯಾಯ ಮತ್ತು ಲಕ್ಷ್ಮೀಧರ ಭಟ್ಟೋಪಾ ದ್ಯಾಯ ಇವರು ಮುಖ್ಯವಾಗಿ ಕಾಣಿಸಿ ಕೊಳ್ಳುವರು. ಇವರು ಈ ಭಾಗದ ವಿವಿಧ ಸ್ಥಾನಗಳಲ್ಲಿ ಪ್ರಭಾವಶಾ ಲಿಗಳಾಗಿ ನೆಲೆನಿಂತವರಾಗಿದ್ದಾರೆ. ಇವರ ಕೆಲವು ವೈವಿಧ್ಯಮಯ ವಿಷಯಗಳನ್ನು ಇಲ್ಲಿಯ ಶಾಸನಗಳು ನೀಡುತ್ತವೆ.

ಈ ಧರ್ಮದ ಶ್ರೀರತ್ನರಾಶಿ ಪಂಡಿತನೆಂಬವನು ಪಾಶುಪತ ಆಚಾರ್ಯ. (ಕ್ರಿ.ಶ.1082) ಇವನು ದೇಶಾಂತರಿಯಾಗಿದ್ದಾನೆ. ಪಾಶುಪತ ಶಾಖೆಗೆ ಸೇರಿದ ಈ ಒಬ್ಬ ಆಚಾರ್ಯ ಬೀದರಜಿಲ್ಲೆಯಲ್ಲಿ ಕಾಣಿಸಿ ಕೊಂಡಿದ್ದಾನೆ. ಇನ್ನುಳಿದವರು ಶೈವರಲ್ಲಿ ಯಾವ ಗುಂಪಿಗೆ ಸೇರಿದವರು ಎಂಬುದು ಕಂಡುಬರುವುದಿಲ್ಲ. ಸ್ಥಾನಚಾರ್ಯರು ವೇದಾಸಕ್ತರೆಂಬುದನ್ನು ಬ್ರಾಹ್ಮಣರಂತೆ ಯಮ, ನಿಯಮ, ಸ್ವಾಧ್ಯಾಯ, ಧ್ಯಾನ, ಧಾರಣ ದೊಂದಿಗೆ ಜಪ ಹೋಮಾನುಷ್ಠಾನದಲ್ಲಿ ವಿಮಳಮತಿ ಯಾಗಿದ್ದರು. ಗೋರ್ಟಾದ ನಗರೇಶ್ವರ ದೇವಾಲಯ ಮುಂದಿನ ಶಾಸನದಿಂದ ಈ ವಿಷಯ ತಿಳಿಯುತ್ತದೆ. ಇಲ್ಲಿಯ ರುದ್ರಮಿಶ್ರಪಂಡಿತನು ಯಜ್ಞಯಾಗಗಳನ್ನು (ಮಹಾಕೃತುಗಳನ್ನು) ಆಚರಿಸುವುದರಲ್ಲಿ ಬಹು ನಿಪುಣ. ಕಲ್ಯಾಣ ಚಾಲುಕ್ಯರ ಅರಸ ಆರನೇ ವಿಕ್ರ ಮಾದಿತ್ಯ ಇವನು ಆಚರಿಸಿದ ಯಜ್ಞಗಳನ್ನು ಮೆಚ್ಚಿ ದತ್ತಿಯನ್ನು ತಾಮ್ರಶಾಸನದ ಮುಖಾಂತರ ನೀಡಿದ್ದಾನೆ. ಹಾಗೂ ಇವನನ್ನು 'ಅಯ್ಯ' ಎಂದು ಶಾಸನದಲ್ಲಿ ಸಂಬೋಧಿಸಲಾಗಿದೆ. ಇಲ್ಲಿಯ ಒಂದು ಶಾಸನ ಈ ವಿಷಯವನ್ನು ತಿಳಿಸುತ್ತದೆ. ಇದರಿಂದ ರುದ್ರಮಿಶ್ರನು ಈ ಅರಸನ ಒಬ್ಬ ರಾಜಗುರುವಾಗಿದ್ದನೆಂದು ತರ್ಕಿಸ ಬಹುದು. ತರ್ದವಾಡಿನಾಡಿನ ಬಾಗೇವಾಡಿಯ ಗೋವರ್ಧ ಭಟ್ಟೋಪಾಧ್ಯಾಯ ಮತ್ತು ಅರಸಿಕಬ್ಬೆಯ ರ ಮಗ ಇವನಾಗಿದ್ದಾನೆ. ಇವರ ಕುಲ ದೇವರು ಕುಂಭೇಶ್ವರ. ಇದೇ ಶಾಸನವು ಈ ವಿವರಗಳನ್ನು ನೀಡಿದೆ.[13] ತರ್ದವಾಡಿ ನಾಡಿನ ಬಾಗೇವಾಡಿಯ ಈ ಕಾಲದ ಶಾಸನಗಳಲ್ಲಿ ಇವರ ತಂದೆ ತಾಯಿಗಳ ಅಥವಾ ಇವರ ಮತ್ತು ಇವನ ಕುಲದೇವರಾದ ಕುಂಭೇಶ್ವರ ದೇವರ ಉಲ್ಲೇಖ ಕಂಡುಬಂದಿಲ್ಲವೆಂದು ಡಾ: ಬಿ.ಆರ್.ಗೋಪಾಲ ಅವರು ಈಗಾಗಲೇ ಅಭಿ ಪ್ರಾಯಪಟ್ಟಿದ್ದಾರೆ. ಈ ಅಭಿಪ್ರಾಯವು ಸರಿ ಇರು ವದು ನನ್ನ ಅಧ್ಯಯನದಲ್ಲೂ ಕಂಡು ಬಂದಿದೆ. ಆದರೆ ತರ್ದವಾಡಿ ನಾಡಿನಲ್ಲಿದ್ದ ಬಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಚಡಚಣ ಗ್ರಾಮದಲ್ಲಿ ಒಂದು ಕುಂಭೇಶ್ವರ ದೇವಾಲಯ (ಕ್ರಿ.ಶ.1067) ಯಿದ್ದಿತು. ಅಲ್ಲಿಯ ಒಂದು ಶಾಸನ[14] ಈ ವಿಷಯವನ್ನು ಉಲ್ಲೇಖಿಸಿರು ವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

## ರಾಜಗುರುಗಳು

ಈ ಸ್ಥಾನಚಾರ್ಯರು ಇನ್ನಿತರ ಭಾಗದಂತೆ ವಿದ್ಯಾಪ್ರೇಮಿಗಳಾಗಿದ್ದರು. ದೇವಸ್ಥಾನ–ಮಠಗಳಲ್ಲಿನ ತಪೋಧನರು ಮತ್ತು ಮಾಣಿಗಳಿಗೆ ವಿದ್ಯಾದಾನದ ವ್ಯವಸ್ಥೆಯನ್ನು ಕಲ್ಪಸಿದವರಾಗಿದ್ದಾರೆ. ನಾಡಿನ ಸಂಸ್ಕೃ ತಿಯ ನಿರ್ಮಾಣದಲ್ಲಿ ಪ್ರಧಾನ ಪಾತ್ರವಹಿಸಿ ಜನಸಾ ಮಾನ್ಯರಿಂದ ಹಿಡಿದು ರಾಜಮನೆತನದವರೆಗೆ ಗೌರವ ಪಡೆದಿರುವುದರಲ್ಲಿ ಸಂದೇಹವಿಲ್ಲ. ಇವರಲ್ಲಿ ಭೋಗ ದೇವ ಭಟ್ಟೋಪಾಧ್ಯಾಯ (ಚಂದ್ರಪೂರ), ರುದ್ರಮಿಶ್ರ (ಗೋರ್ಟ) ಇವರು ರಾಜಮನ್ನಣೆ ಪಡೆದು ರಾಜ ಪೂಜಿತರಾದ ವಿಷಯ ತಿಳಿದು ಬಂದಿದೆ. ಭೋಗದೇವ ಭಟ್ಟೋಪಾಧ್ಯಾಯನೆಂಬವನು ಆರನೇ ವಿಕ್ರಮಾದಿತ್ಯನ ಮಗ ಯುವರಾಜ ಮಲ್ಲಿಕಾರ್ಜುನನ ರಾಜಗುರುವಾಗಿ ದ್ದನೆಂದು ಶಾಸನದಲ್ಲಿ ಉಲ್ಲೇಖವಾಗಿದೆ. ಇವನು ಚಂದಾಪೂರದ ಒಂದು ಶಾಸನದಲ್ಲಿ ಕಾಣುತ್ತಾನೆ. ಇವನ ಹೆಸರಿಗೆ ಅಲ್ಲಿಯ ಮಂಜೆರಾ ತೀರದ ಮೇಲೆ ಭೋಗೇಶ್ವರ ದೇವರ ಪ್ರತಿಷ್ಠಾಪನೆಯನ್ನು ಆತನ ಮಗ ಲಕ್ಷ್ಮೀಧರ ಭಟ್ಟೋಪಾಧ್ಯಾಯ ಮಾಡಿದನು. ಬಹುಶಃ ಈ ದೇವರ ಪೂಜೆ, ಪುನಸ್ಕಾರ ಇತ್ಯಾದಿ ವ್ಯವಸ್ಥೆಗೆ ನೇರವಾಗಿ ಆರನೆಯ ವಿಕ್ರಮಾದಿತ್ಯ ಕೈಯಿಂದಲೇ ಎರಡು ವೃತ್ತಿ ಪಡೆದನೆಂದು ಈ ಶಾಸ ನವು ಉಲ್ಲೇ ಖಿಸಿರುವುದು ಮಹತ್ವದ ಸಂಗತಿಯಾಗಿದೆ. ನಾಮಾಂ ಕಿತ, ಕಾಲಮಾನ, ರಾಜಮನೆತನ ಹಾಗೂ ಈ ಅರ ಸುಮನೆತನದ 6ನೇ ವಿಕ್ರಮಾದಿತ್ಯನಿಂದ ಎರಡು ವೃತ್ತಿ ಪಡೆದ ಸಂಗತಿ. ಈ ದೇವಾಲಯದ ಪೂಜೆ, ಪುನ ಸ್ಕಾರ ಇತ್ಯಾದಿ ವ್ಯವಸ್ಥೆಗೆ ಈ ವೃತ್ತಿಗಳನ್ನು ವಿನಿ ಯೋಗಿಸಿದ ವಿಷಯವೂ ಚಂದಾಪೂರ ಶಾಸನದಲ್ಲಿ ಉಲ್ಲೇಖವಾಗಿರುವುದು ಗಮನೀಯ. ಇದರಿಂದಾಗಿ ಇವನು ತೀರಿದ ಬಳಿಕ ಇವನ ಹೆಸರಿನಲ್ಲಿ ದೇವಾ ಲಯವನ್ನು ಚಂದಾಪೂರದಲ್ಲಿ ಕಟ್ಟಲಾಯಿತೆಂಬುದು ಸ್ಪಷ್ಟವಾಗುತ್ತದೆ. ಹಾಗೂ ಇವನೇ ಯುವರಾಜ ಮಲ್ಲಿ ಕಾರ್ಜುನನ ರಾಜಗುರುವಾಗಿರಬಹುದೆಂದು ತರ್ಕಿಸ ಬಹುದು.

ದೇವಾಲಯಗಳನ್ನು ಕಟ್ಟಿಸುವುದು, ದಾನ ದತ್ತಿಗಳನ್ನು ನೀಡುವುದು, ಸ್ವೀಕರಿಸುವುದು, ಸಂರಕ್ಷಿಸಿ ಕೊಂಡು ಹೋಗುವುದು ಪಾಶುಪತ ಕಾಳಾಮುಖಾ ಚಾರ್ಯರ ಪ್ರಧಾನ ಕಾರ್ಯಗಳಲ್ಲಿ ಕೆಲವಾಗಿವೆ. ಇದನ್ನು ಬೀದರ ಜಿಲ್ಲೆಯ ಹಲವಾರು ಶಾಸನಗಳ ಫಲಶೃತಿಗ ಳಲ್ಲಿ ಕಾಣಬಹುದು.

ಈ ಭಾಗದಲ್ಲಿ ಹಲವಾರು ಮಠಗಳಿದ್ದವು. ಅವು ಗಳಲ್ಲಿ ಮೂಡಣ ಮಠ, (ಮಿರ್ಕಲ್, ಗೋರ್ಟ) ಮತ್ತುಪಂಚಮಠಸ್ಥಾನಗಳು (ಅವೆಂಬರ, ಬರೂರು) ಮುಖ್ಯವಾಗಿವೆ.

ದೇವಾಲಯಗಳು ನೈಷ್ಟಿಕ ಸ್ಥಾನಗಳಾಗಿದ್ದವು. ಅವುಗಳಿಗೆ ಹೊಂದಿ, ಮಠ, ಸತ್ರ(ಛತ್ರ), ತೋಟ, ಬಾವಿ, ಗದ್ದೆ ಮತ್ತು ಅಕ್ಕಿ ಧಾನ್ಯಗಳ ಅಂಗಡಿಗಳು ಇದ್ದವು. ದೇವರಿಗೆ ಮೂರು ಸಲ ಪೂಜೆ (ತ್ರಿಕಾಳ ಪೂಜೆ) ಸಮಯದಲ್ಲಿ ಸಂಗೀತ, ವಾದ್ಯ, ನೃತ್ಯ ನಡೆ ಯುತ್ತಿದ್ದವು. ಅಲ್ಲಿ ಅಗ್ನಿಷ್ಟಿಗಳು ಇದ್ದವು.

## ವೀರಶೈವ

ವೀರಶೈವ ಧರ್ಮ ಮಾರ್ಗದ ಷಟ್‌ಸ್ಥಲ, ಅಷ್ಟಾ ವರಣ, ಪಂಚಾಚಾರಗಳು ಬಸವಕಲ್ಯಾಣದ ಶಿವಶರ ಣರ ಹೊಸ ತಾತ್ವಿಕ ನಿಲುವಿನ ಕೊಡುಗೆಗಳೆಂದು ಹೇಳಬಹುದಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಇದು ನಿರ್ದಿಷ್ಟವಾದ ಸ್ವರೂಪವನ್ನು ಪಡೆಯಿತು. ಸರ್ವಸಮಾನತೆಯು ತನ್ನ ಆಶಯವನ್ನು ದೊಡ್ಡ ಪ್ರಮಾಣದಲ್ಲಿ ಈಡೇರಿಸುವ ಶಕ್ತಿಯುತ ಧರ್ಮವಾಗಿ ಪರಿಣಮಿಸಿತು. ಕಲ್ಯಾಣ ಚಾಲುಕ್ಯರ ಅಂತ್ಯ ಕಾಲಕ್ಕಾ ಗಲೇ ಅಲ್ಲಿಯ ಅರಸ, ಅಧಿಕಾರಿ, ಅಗ್ರಹಾರ, ಮಠ ಮತ್ತು ವ್ಯಾಪಾರಿಗಳ ಪ್ರಭಾವ ಗಾಢವಾಗಿ ಸಮಾಜದ ಮೇಲೆ ಬೀರಿದ್ದಿತು. ಸಾಮಾನ್ಯ ಜನವರ್ಗಕ್ಕೆ ಶಿವಶರ ಣರ ಇಷ್ಟಲಿಂಗ, ಕಾಯಕ, ದಾಸೋಹ ತತ್ವಗಳು ಬಹು ಉಪಯೋಗವೆನಿಸಿದಂತೆ ಕಾಣುತ್ತದೆ.

ಶ್ರೀಶೈಲ ಪ್ರಾಚೀನ ಕಾಲದಿಂದಲೂ ದಕ್ಷಿಣ ಭಾರತದಲ್ಲಿ ಒಂದು ಮಹತ್ವದ ಶೈವ ಕೇಂದ್ರವಾಗಿದೆ. ಇದರ ಮೂಲ ಹೆಸರು ಶ್ರೀಪರ್ವತ. ಶ್ರೀಶೈಲ ಮಲ್ಲಿ ಕಾರ್ಜುನನ ಭಕ್ತರು ದೇಶದ ವಿವಿಧ ಭಾಗದಲ್ಲಿದ್ದಾರೆ. ಕ್ರಿ.ಶ.11-12ನೇ ಶತಮಾನದಲ್ಲಿ ಬೀದರ ಜಿಲ್ಲೆಯ ಕಲ್ಯಾಣಕ್ಕೂ ಮತ್ತು ಶ್ರೀಪರ್ವತಕ್ಕೆ ಹೆಚ್ಚಿನ ಸಂಪರ್ಕವಿ ದ್ದಿತು. ಹಲವಾರು ಶಿವ-ಶರಣರು ಶ್ರೀಶೈಲದವರೆಗೆ ನಡೆದುಕೊಂಡು ಹೋದ ಸಂಗತಿಗಳು ವಚನಸಾಹಿತ್ಯ ದಿಂದ ತಿಳಿದುಬರುತ್ತದೆ. ಹಾಗೂ ಅದರ ಭಕ್ತರು ಈ ಪ್ರದೇಶದಲ್ಲಿ ಇದ್ದರು.

ಬೀದರ ತಾಲೂಕಿನ ಸಿರ್ಸಿಯ ಈ ಕಾಲದ ಒಂದು ಶಾಸನವು ಈ ಕುರಿತು ಮಹತ್ವದ ಸಂಗತಿ ಯನ್ನು ನೀಡುತ್ತದೆ. ಅಜ್ಜೇಶ್ವರ ದೇವರ ಅಳಿಯನೆಂಬ ವನೊಬ್ಬನು ಶ್ರೀಪರ್ವತಕ್ಕೆ ಹೋಗಿ ಲಿಂಗ ತಂದ ನೆಂತಲೂ ಮತ್ತು ಆ ಲಿಂಗವನ್ನು ಅಲ್ಲಿಯ ಚಾವುಣ್ಡ ಮಯ್ಯನೆಂಬವನಿಗೆ ಕೊಟ್ಟು ಪ್ರತಿಷ್ಠೆ ಮಾಡಿದನೆಂದು ಕಾಣುತ್ತದೆ. ಈ ಚಾವುಣ್ಡಮಯ್ಯನೆಂಬವನು ಅಲ್ಲಿಯ ಒಬ್ಬ ಅಧಿಕಾರಿಯಾಗಿರಬೇಕು. ಈ ಲಿಂಗಕ್ಕೆ ಬಿಟ್ಟದ ತ್ತಿಯ ವಿವರಗಳು ಉಲ್ಲೇಖವಾಗಿಲ್ಲದಿದ್ದರೂ ರಾಜರ ಕ್ಷತ ಧರ್ಮವೆಂದು ಈ ಶಾಸನದಲ್ಲಿ ಹೇಳಿರುವುದು ಗಮನೀಯ.

ಸಾಮಾಜಿಕ-ಧಾರ್ಮಿಕ ಕ್ರಾಂತಿ ಪುರುಷರಾಗಿದ್ದ ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ, ಮಡಿವಾಳ ಮಾಚಯ್ಯ, ನೂಲಿ ಚಂದಯ್ಯ, ಸೊಡ್ಡಲ ಬಾಚರಸ ಮುಂತಾದವರ ವಚನ ಸಾಹಿತ್ಯ ಮಹತ್ವ ದ್ದಾಗಿವೆ. ಇಲ್ಲಿಯ ಕ್ರಿ.ಶ.11-1326ರ ಕೆಲವು ಶಾಸನ ಗಳು ಶಿವಶರಣರಾದ ಕೇಶಿಮಯ್ಯ, ದಂಡನಾಯಕ, ಬಾಚರಸ, ಮಡಿವಾಳ ಮಾಚ(ಕೆ)ಯ್ಯ, ಮಧುವರಸ ರನ್ನು ಹಾಗೂ ಇಂದಿಗೂ ಕಾಣುವ ಗವಿ-ದೇವಾಲ ಯಗಳು ಕೆಲವು ಶಿವಶರಣರಿಗೆ ಸೇರಿರುವುದು ಗಮನಾರ್ಹ.

## ಅಡಿ ಟಿಪ್ಪಣಿ

1. ತಿಪ್ಪೇರುದ್ರಸ್ವಾಮಿ, ಎಚ್, 'ವಚನಗಳಲ್ಲಿ ವೀರಶೈವಧರ್ಮ' ಪು.59.
2. ದೇಸಾಯಿ ಪಿ.ಬಿ., 'ಬಸವೇಶ್ವರ ಅಂಡ್ ಹಿಜ್‌ಟೈಮ್ಸ್'.
3. ಅದೇ.
4. ಈ ಶಿಲ್ಪ ಮಹಾಕೂಟದಲ್ಲಿದೆ.
5. ಡಾ. ಅ.ಸುಂದರ ಅವರು ಇಲ್ಲಿ ಪತ್ತೆಹಚ್ಚಿದ್ದಾರೆ. ಇಲ್ಲಿಯ ಸಪ್ತಮಾತೃಕೆಯರ ಶಿಲ್ಪದಲ್ಲಿ ಶಿವವೀಣಾಧಾರಿಯಾಗಿದ್ದು ಆತನ ಬೆನ್ನಮೇಲೆ ಊರ್ಧ್ವವಾಗಿ ಶಿವಲಿಂಗವಿದೆ.
6. ಡಾ|| ಕೆ.ವಿ.ಸೌಂದರರಾಜನ್ ಈ ವಿಷಯವನ್ನು ತಿಳಿಸಿದ್ದಾರೆ.
7. ಉಜ್ಜೈನಿ, ಹಂಪಿ, ಹಿರೇಕೆರೂರು ಮುಂತಾದ ಸ್ಥಳಗಳಲ್ಲಿ ವೀರಭದ್ರನ ಕಿರೀಟದಲ್ಲಿ ಶಿವಲಿಂಗ ಧರಿಸಿರುವುದನ್ನು ನಾನು ನೋಡಿರುವೆನು.
8. ಡಾ|| ಕೆ.ವಿ.ಸೌಂದರರಾಜನ್ ಅವರು ಈ ಅಭಿಪ್ರಾಯವನ್ನು 1989ರಲ್ಲಿ ವ್ಯಕ್ತಪಡಿಸಿದ್ದಾರೆ. (ಅವರಉಪನ್ಯಾಸದಲ್ಲಿ).
9. ಚಿದಾನಂದ ಮೂರ್ತಿ, ಎಂ. 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಪುಟ.148.
10. "ಬಸವಕಲ್ಯಾಣದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಮಹತ್ವ" ಈ ನನ್ನ ಲೇಖನ ಶ್ರೀಶ್ಯಾ. ಶಿವಶಂಕರಪ್ಪ ಇವರ ಅಭಿನಂದನ ಗ್ರಂಥಕ್ಕಾಗಿ ಈಗ ಅಚ್ಚಿನಲ್ಲಿದೆ.
11. ಷಡಕ್ಷರಯ್ಯ ಆರ್.ಎಂ.1982; "ಬಸವಕಲ್ಯಾಣದಲ್ಲಿ ಕಂಡುಬಂದ ಶೈವ ಶಿಲ್ಪಗಳು", 'ಕರ್ನಾಟಕ ಭಾರತಿ', ವಿ.ವಿ, ಧಾರವಾಡ.
12. ಎ.ಎಸ್.ಆರ್., ನಿಜಾಮ್ ಡೊಮಿನಿಯನ್ಸ್, 1936-37, ಪುಟ.43-45.
13. ಕುಲಕರ್ಣಿ ವಿ.ಎಸ್. 1979: 'ಹಿಸ್ಟಾರಿಕಲ್ ಅಂಡ್ ಕಲ್ಚರಲ್ ಆಸ್ಪೆಕ್ಟ್ಸ್ ಅರೌಂಡ್ ಬಸವಕಲ್ಯಾಣ', ಭಾಗ-2, ಪಿ.ಹೆಚ್.ಡಿ. ಥೀಸೀಸ್, ಕರ್ನಾಟಕ ವಿ.ವಿ., ಧಾರವಾಡ.
14. ಎಸ್.ಐ.ಐ., XX , 133.
15. ಷಡಕ್ಷರಯ್ಯ ಆರ್.ಎಂ., 1984: 'ಆರ್ಕ್ಯಾಂಜಿ ಇನ್ ಬೀದರ ಡಿಸ್ಟ್ರಿಕ್ಟ್ ವಿತ್ ಸ್ಪೆಷಲ್, ರೆಫರೆನ್ಸ್ ಟು ಮಾಂಜ್ರಾ ಅಂಡ್ ಕಾರಂಜಾ ವ್ಯಾಲೀಸ್, ಪಿಹೆಚ್‌ಡಿ ಥೀಸೀಸ್, ಕ.ವಿ.ವಿ. ಧಾರವಾಡ.

## ಕೃತಜ್ಞತೆಗಳು

*ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ.ಎಸ್.ರಾಮೇಗೌಡ ಅವರು ಬೀದರ ಜಿಲ್ಲೆಯಲ್ಲಿ ಅನ್ವೇಷಣೆ ಕೈಗೊಂಡು ಸಮಗ್ರ ಅಧ್ಯಯನಕ್ಕೆ ಪರವಾನಿಗೆ ನೀಡಿದರು. ಬಸವಕಲ್ಯಾಣದ ಮ್ಯೂಜಿಯಂ ಮತ್ತು ಇನ್ನಿತರ ಭಾಗದ (ಅಲ್ಲಿಯ) ಪ್ರಾಚ್ಯ ಅವಶೇಷಗಳ ಅಧ್ಯಯನಕ್ಕೆ ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತುಗಳ ನಿರ್ದೇಶಕರು ಪರವಾನಿಗೆ ನೀಡಿರುವರು. ನನ್ನ ಗುರುಗಳಾದ ಡಾ.ಅ.ಸುಂದರ ಅವರುವಿವಿಧರೀತಿಯಲ್ಲಿ ಸಲಹೆ ಸೂಚನೆಗಳನ್ನು ನೀಡಿರುವರು. ಇವರೆಲ್ಲರಿಗೂ ನಾನು ಋಣಿಯಾಗಿದ್ದೇನೆ.*

ಡಾ॥ ಎಂ.ಬಿ.ರಾಜಾಮಣಿ

# ಒಗ್ಗಟ್ಟಿನ ವರ್ತನೆಯ ಒಂದು ಸಾಮಾಜಿಕ ಉಲ್ಲೇಖ

(15ನೇ ಶತಮಾನದ ಒಂದು ಶಾಸನದ ಹಿನ್ನೆಲೆಯಲ್ಲಿ)

ಕರ್ನಾಟಕವು ಆರಂಭದಿಂದಲೂ ಒಂದು ಸಾಮಾಜಿಕ ಸಂಸ್ಕೃತಿಯ ಉತ್ತಮ ನೆಲೆಯಾಗಿದೆ. ಸಾಮಾಜಿಕ ಜೀವನದ ವೈವಿಧ್ಯತೆ ಮತ್ತು ಆಳ, ಸಾಮಾಜಿಕ ಆದರ್ಶ ಮತ್ತು ಸಾಮಾಜಿಕ ಮೌಲ್ಯಗಳ ಅರಿವು – ಇವುಗಳಲ್ಲಿ ಅವರ ಸಾಧನೆ, ಅದರಲ್ಲಿರುವ ತಾಳ್ಮೆ, ಸಹಿಷ್ಣುತೆ, ಸೇವೆ ಮತ್ತು ತ್ಯಾಗದ ಮನೋಭಾವ – ಈ ಎಲ್ಲವೂ ಗಣನೀಯವಾಗಿದೆ. ಅವರ ಸಾಮಾಜಿಕ ಜೀವನವೂ ಮುಖ್ಯವಾಗಿ ಧಾರ್ಮಿಕ ರೂಪ ಮತ್ತು ಧಾರ್ಮಿಕಸ್ಫೂರ್ತಿಯುಳ್ಳದ್ದಾಗಿದೆ. ಹೇಗೆಂದರೆ, ಅವರ ಎಲ್ಲ ಕಾರ್ಯಗಳ ಹಿಂದೆಯೂ ದೇವರನ್ನು ಸಂಪ್ರೀತಿಗೊಳಿಸುವ ಮತ್ತು ತಮ್ಮ ವೈಯುಕ್ತಿಕ ಮತ್ತು ಸಾಮಾಜಿಕ ಜೀವನದಲ್ಲಿ ಮಾಡುವ ಒಳ್ಳೆಯ ಕೃತಿಗಳಿಂದ ಪುಣ್ಯವನ್ನು ಸಂಪಾದಿಸುವ ಉದ್ದೇಶವಿದೆ. ಹೀಗೆ ಅವರ ಸಾಮಾಜಿಕ ಜೀವನವೂ ಒಂದು ಸಮಾಜೋಧಾರ್ಮಿಕ ಜೀವನಾವಾಗಿತ್ತು. ಇಂತಹ ಜೀವನದ ಮುಖ್ಯ ಲಕ್ಷಣವೆಂದರೆ, ಸಾಮುದಾಯಿಕ ಮತ್ತು ಸಹಕಾರಮಯ ಜೀವನ, ಧಾರ್ಮಿಕವಾದ ರೀತಿ ನೀತಿಗಳಿಂದ ನಿಯಂತ್ರಿಸಲ್ಪಟ್ಟ ಕೂಡು ಜವಾಬ್ದಾರಿ ಮತ್ತು 'ಒಟ್ಟು ಜೀವನ'. ಪ್ರತೀಯೊಂದು ಅಗ್ರಹಾರ ಮತ್ತು ಪ್ರತೀಯೊಂದು ಹಳ್ಳಿಯೇ ಒಂದೊಂದು ಚಿಕ್ಕ ಸಮುದಾಯವೆನಿಸಿದ್ದವು. ಇವು ಒಂದು ನಿರ್ದಿಷ್ಟ ಭೌಗೋಳಿಕ ಕ್ಷೇತ್ರವನ್ನು ಒಳಗೊಂಡಿತ್ತು. ಅದರೊಂದಿಗೆ, ಕೆಲಸವನ್ನು ಪರಿಣತೆ ಮತ್ತು ಪರಸ್ಪರ ಅವಲಂಬನೆಗಳಿಂದ ಕೂಡಿದ್ದಾಗಿ ವಿಭಾಗಿಸಿದ ಕಾರ್ಯ ವರ್ಗೀಕರಣವಿತ್ತು. ಮತ್ತು ಅವರ ಚಟುವಟಿಕೆಗಳನ್ನು ವ್ಯವಸ್ಥೆಗೊಳಿಸುವಂತೆ ಎಲ್ಲರಿಗೂ ಸಮಾನವಾದ ಸಂಸ್ಕೃತಿ ಮತ್ತು ಸಾಮಾಜಿಕ ಪದ್ಧತಿಯಿತ್ತು. ಈ ಜನರಲ್ಲಿ ಕೂಡಾ ಒಗ್ಗಟ್ಟಿನ ಪ್ರಜ್ಞೆಯುಳ್ಳವರಾಗಿದ್ದು, ತಾವು ಒಂದು ಸಮುದಾಯಕ್ಕೆ ಸೇರಿದವರೆಂಬ ಭಾವನೆಯು ಇತ್ತು. ಆದ್ದರಿಂದ ಈ ಜನರು ಒಂದು ವ್ಯವಸ್ಥಿತ ರೀತಿಯಲ್ಲಿ ಒಟ್ಟಾಗಿ ಕಾರ್ಯ ತತ್ಪರರಾಗ ಬಲ್ಲವರಾಗಿದ್ದರು. ಈ ಲೇಖನವೂ ಈಅಂಶಗಳನ್ನು, ಒಂದು ೧೫ನೇ ಶತಮಾನದ ಶಾಸನವನ್ನು ಪರಿಶೀಲಿಸುವುದರೊಂದಿಗೆ ಸ್ಪಷ್ಟ ಪಡಿಸುತ್ತದೆ[1].

ಕ್ರಿ.ಶ. ೧೫ನೇ ಶತಮಾನದ ಲಿಪಿಯಲ್ಲಿರುವ ಈ ಶಾಸನವು ಮಿರ್ಲೆಯ ರಾಮದೇವ ದೇವಾಲಯದಲ್ಲಿ ನವರಂಗದ ವಿತಾನದಲ್ಲಿ ಇದೆ. ಈ ಶಾಸನದಲ್ಲಿರುವುದೇನೆಂದರೆ: ಉದ್ಭವ ಸರ್ವಜ್ಞಪುರ, ವಿದ್ಯಾನಿಧಿ ದಕ್ಷಿಣ ವಾರಣಾಸಿ ಎನಿಸಿ ಅಗ್ರಹಾರವಾಗಿದ್ದ ಹಂಪಾಪುರದ ಮಹಾಜನರಿಗೂ ಮತ್ತು ಹಳ್ಳಿಹಿರಿಯೂರಿನ ಗೌಡುಪ್ರಜೆಗಳಿಗೂ, ಅವರ ಹಳ್ಳಿಯಲ್ಲಿ ೮–೧೦ ಕಡೆ ಒಡೆದು ಹೋಗಿದ್ದ ಒಂದು ಕಟ್ಟೆಯ ದುರಸ್ತಿಗಾಗಿ ಹಣ ಸಂಗ್ರಹಿಸಲಾಗಲಿಲ್ಲ. ಆಗ, ಅವರೆಲ್ಲರೂ ಒಟ್ಟಾಗಿ ಸೇರಿ ಒಂದು ಮನೆ, ನಾಲ್ಕು ಸೀಮೆಯೊಳಗಿದ್ದ ಗದ್ದೆ ಮತ್ತು ಹೊಲವನ್ನು ಸಿಂಗೇರಿಯ ಪರಮಹಂಸ ಪರಿವ್ರಾಜಕಾಚಾರ್ಯ ನಾರಸಿಂಹ ಭಾರತಿ ಒಡೆಯರ ಶಿಷ್ಯರಾದ ಭಾರತೀಪುರದ ಚಿಕ್ಕದೀಕ್ಷಿತರಿಗೆ ಮಾರಿ ಹಣವನ್ನು ಸಂಗ್ರಹಿಸುವುದೆಂದು ನಿರ್ಧರಿಸಿದರು. ಶಾಸನ ದಲ್ಲಿರುವಂತೆ, ನಾಲ್ಕು ಸೀಮೆಯೊಳಗಿರುವ ಉತ್ತರದ ಬೀದಿಯ ಬ್ರಹ್ಮಪುರದಲ್ಲಿರುವ ಪೂರ್ವ–ಪಶ್ಚಿಮ ೧೨ ಕೈ ಉದ್ದದ ಮನೆಯನ್ನು ಮಾರುವುದೆಂದು ತೀರ್ಮಾನಿಸಲಾಯಿತು. ಈ ಮನೆಯು ಕೃಷ್ಣಭಟ್ಟರ ಮನೆಯಿಂದ ಪಶ್ಚಿಮಕ್ಕೂ, ಸೂರ್ಯ ವೀದಿ (ಬಹುಶಃ ಪೂರ್ವ–ಪಶ್ಚಿಮವಾಗಿರುವ ಹಳ್ಳಿಯ ಮುಖ್ಯಬೀದಿ ಇರಬೇಕು) ಯಿಂದ ಉತ್ತರಕ್ಕೂ, ಅತಿರಾತ್ರೇಯಾಜಿ ದೀಕ್ಷಿತರ (ಮನೆ) ಯಿಂದ ಪೂರ್ವಕ್ಕು ಮತ್ತು ಶೂದ್ರ ಮನೆಗಳಿಂದ ದಕ್ಷಿಣಕ್ಕೂ ಇತ್ತು. ಈ ಮನೆಗೆ ಆಗ ಪ್ರಚಲಿತವಿದ್ದ ಬೆಲೆಗೆ ತಕ್ಕಂತೆ ಮಾರಾಟದ ಬೆಲೆ ೧೦ಹೊನ್ನು ಎಂದು ನಿಗದಿ ಪಡಿಸಲಾಯಿತು.

ಅಂತೆಯೇ, ಅವರು ವಿನಿಯೋಗ ಮಾಡಬೇಕಾಗಿದ್ದ ಗದ್ದೆಯು ಪಶ್ಚಿಮ ಮನೆಗಳಲ್ಲಿ (Quarters), ಪೂರ್ವ ಮನೆಗಳಲ್ಲಿರುವ ಸೋವಣ್ಣ ಮತ್ತು ಶ್ರೀಧರ ದೇವನ ತೋಟದಿಂದ ಪಶ್ಚಿಮಕ್ಕೂ, ಪಶ್ಚಿಮದ ಅಡ್ಡಕಟ್ಟೆಯ ಅರಣೆಯಿಂದ ಉತ್ತರಕ್ಕೂ, ಹರಿಭಟ್ಟನ ಗದ್ದೆಯಿಂದ ಪೂರ್ವಕ್ಕೂ ಮತ್ತು ವಿಜಯಾಪುರದ ಗಂಗಣ್ಣ

ಗದ್ದೆಯಿಂದ ದಕ್ಷಿಣಕ್ಕೂ ಇತ್ತು. ಸ್ಥಳೀಯ ಅಳತೆಯಂತೆ, ಖಂಡುಗ ಬೆಳೆಯಬಲ್ಲ ಭೂಮಿಗೆ ೧೦ ವರಹದಂತೆ ಇದರ ಮಾರಾಟದ ಬೆಲೆಯನ್ನು ೧೨೦ ವರಹ ಎಂದು ನಿಗದಿಪಡಿಸಲಾಯಿತು. ಪೂರ್ವಕ್ಕಿದ್ದ ೩೦೦ ಅಳತೆ ಅಥವಾ ೧೫೦ ಕಂಬ (poles)ವುಳ್ಳ ಹೊಲವನ್ನು ೧೦೦ ಅಳತೆಯನ್ನು ಹೊರತುಪಡಿಸಿ, ೧೦ ಹೊನ್ನಿಗೆ ಮಾರಾಟ ಮಾಡಲಾಯಿತು. ಒಟ್ಟಾರೆ ಗದ್ದೆ, ಹೊಲ ಮತ್ತು ಮನೆಯನ್ನು ಚಿಕ್ಕದೀಕ್ಷಿತನಿಗೆ ಮಾರಿದ್ದರಿಂದ ಮಹಾಜನ ಮತ್ತು ಗೌಡುಪ್ರಜೆಗಳಿಗೆ ೧೫೦ ಹೊನ್ನು ದೊರಕಿತು. ಈ ಬೆಲೆಯನ್ನು ಆ ಕಾಲದಲ್ಲಿದ್ದ ಚಾಲ್ತಿ ಬೆಲೆಗೆ ತಕ್ಕಂತೆ ಮಧ್ಯಸ್ಥಿಕೆಯವರಿಂದ ನಿಗದಿಪಡಿಸಲಾಗಿತ್ತು ಮತ್ತು ಈ ವ್ಯವಹಾರವನ್ನು ಎರಡೂ ಕಡೆಯವರು ಒಪ್ಪಿಕೊಂಡರು.

ಮಹಾಜನ ಮತ್ತು ಗೌಡುಪ್ರಜೆಗಳಿಬ್ಬರೂ ಈ ಹಣವನ್ನೂ ಕಾಲುವೆ ಮತ್ತು ಕಟ್ಟೆಗಾಗಿ ವಿನಿಯೋಗಿಸಿ ತಕ್ಕ ಪರಿಹಾರದ ಹಣವನ್ನೂ ನೀಡಿ ಮಿಕ್ಕದ್ದನ್ನು ಹಾಗೇ ಉಳಿಸಿಕೊಂಡರು. ಹೀಗೆ, ಮನೆ, ಗದ್ದೆ, ಹೊಲವನ್ನು ಚಿಕ್ಕ ದೀಕ್ಷಿತನಿಗೆ ಕೊಡುವ ಮೊದಲು ವಾಮನ ಮುದ್ರೆಯ ಕಲ್ಲನ್ನು ಅವುಗಳ ಸೀಮೆಯ ನಾಲ್ಕೂ ಕಡೆ ನೆಟ್ಟು ಅವುಗಳು ಇನ್ನು ಹಳ್ಳಿಯ ಸ್ವತ್ತಲ್ಲ, ಅದನ್ನು ಯಾರೂ ಅತಿಕ್ರಮಿಸಬಾರದೆಂದು ಸ್ಪಷ್ಟಪಡಿಸಿದರು. ಹಾಗೆ ನೋಡಿದರೆ ಆ ವಾಮನ ಮುದ್ರೆ ಕಲ್ಲುಗಳು ಅತಿಕ್ರಮ ಪ್ರವೇಶದ ಸೂಚಕವಲ್ಲ. ಅವರು ಗುರು ನಾರಸಿಂಹಭಾರತಿ ಪುಣ್ಯಾರ್ಥವಾಗಿ ಕಾವೇರಿ ನದಿಯ ತಟದಲ್ಲಿ ಬ್ರಾಹ್ಮಣ ಭೋಜನಕ್ಕಾಗಿ ಒಂದು ಛತ್ರವನ್ನು ಸ್ಥಾಪಿಸಿ, ಈ ಎಲ್ಲವನ್ನೂ ಉಪಯೋಗಿಸಿಕೊಳ್ಳಬೇಕೆಂದು ಚಿಕ್ಕದೀಕ್ಷಿತನನ್ನು ಪ್ರಾರ್ಥಿಸಿದರು. ಇದರಿಂದ ಬರುವ ಹೊರೆಯನ್ನು ಧರ್ಮಶಾಸ್ತ್ರದಂತೆ (? ತಾವೇ ಹೊರುವುದಾಗಿ ಚಿಕ್ಕದೀಕ್ಷಿತನಿಗೆ ಸ್ಪಷ್ಟಪಡಿಸಿದರು. ಚಿಕ್ಕದೀಕ್ಷಿತನಿಂದ, ನಿಗದಿತವಾದ ಮಾರಾಟದ ಬೆಲೆ ಬಂದ ನಂತರ, ದಾಖಲೆಯ ಪ್ರತಿಯಾಗಿ ಊರ ಮಧ್ಯದಲ್ಲಿದ್ದ ಲಕ್ಷ್ಮೀನಾಥದೇವರ ದೇವಾಲಯದ ಮುಂದೆ ಶಾಸನವನ್ನು ಹಾಕಿಸಿದರು. ಇದು ಮುಂದೆಯೂ ತಪ್ಪದೆ ನಡೆಯುವಂತೆ, ಅವರು ಸಾಲುಗಾವೆ ಮತ್ತು ಮಿರ್ಲೆಯ ಮಹಾಜನರು ಚಾಮಯದೇವ, ಮಹಾಬಲೇಶ್ವರ ದೇವರ ಬೆಟ್ಟದ (ಮೈಸೂರಿನ ಚಾಮುಂಡಿ ಬೆಟ್ಟದ ಮಹಾಬಲೇಶ್ವರ ತೀರ್ಥವಿರಬೇಕು) ಗಣಾಚಾರಿ (ಶೈವ ಅರ್ಚಕರ ಮುಖ್ಯಸ್ಥ), ಸಮಯಕುಮಾರ (ಧರ್ಮದ ಪುತ್ರ, ಸಾತಾನಿಗಳ ಸಮುದಾಯವನ್ನು ಸೂಚಿಸಲು ಬಳಸುವ ಪದ), ಕೋಜಿಗಳ ಮಹಾನಾಯಕ, ಎರಡೂ ಅಗ್ರಹಾರಗಳ ಮಹಾಜನರು ಮತ್ತು ಎರಡೂ ಧರ್ಮಗಳ ಅನುಯಾಯಿಗಳು – ಇವರುಗಳನ್ನು ಸಾಕ್ಷಿಗಳೆಂದು ಒಪ್ಪಿದರು. ಈ ಧರ್ಮವು ಮುಂದುವರಿಯುವಂತೆ ಅವರು ಇನ್ನೊಂದು ವ್ಯವಸ್ಥೆಯನ್ನೂ ಮಾಡಿದರು. ಇದೇ ಮಾರಾಟದ ವಿಷಯವಿರುವ ಇನ್ನೊಂದು ಶಾಸನವನ್ನು ಬರೆದು ಮಿರ್ಲೆಯ ನಾರಸಿಂಹದೇವರ ಮುಂದಿಟ್ಟು ಅದನ್ನು ಮೇಲೆ ಹೇಳಿದ ಸಾಕ್ಷಿಗಳ ನಿಯಂತ್ರಣದಲ್ಲಿ ಇಡಲಾಯಿತು.

ಈ ಮೇಲಿನ ವಿವರಗಳು ಕರ್ನಾಟಕ ಸಮಾಜದಲ್ಲಿದ್ದ ಸಹಜೀವನ, ಕೂಡುಜವಾಬ್ದಾರಿ ಗಳನ್ನೊಳಗೊಂಡ ಒಗ್ಗಟ್ಟಿನ ವರ್ತನೆಯ ಆರೋಗ್ಯಕರ ಪರಂಪರೆಯನ್ನು ಸ್ಪಷ್ಟಪಡಿಸುತ್ತದೆ. ಇದರಿಂದ, ಈ ವ್ಯವಹಾರದಲ್ಲಿ ಪ್ರಮುಖ ಪಾತ್ರವಹಿಸಿದ ಮಹಾಜನ ಮತ್ತು ಗೌಡುಪ್ರಜೆಗಳು ಆ ಸ್ಥಳದಲ್ಲಿ ಒಪ್ಪಿತವಾದ ನಾಯಕರಾಗಿದ್ದರೆಂದು ಹೇಳಬಹುದು. ಅವರು ಮಾರಾಟ ಮಾಡಿದ್ದು ಸ್ವಂತ ಆಸ್ತಿಯಲ್ಲ, ಸಮುದಾಯದ ಆಸ್ತಿ ಮತ್ತು ಸಂಬಂಧಿಸಿದ ಸ್ಥಳೀಯರು ಸಮುದಾಯದ ದೃಷ್ಟಿಯಿಂದ ಅದನ್ನು ವಿನಿಯೋಗ ಮಾಡಲು ಅವರಿಗೆ ಅಧಿಕೃತ ಮನ್ನಣೆಯನ್ನು ನೀಡಿದ್ದರು.

ಅವರೂ ಈ ಆಸ್ತಿಯನ್ನು ತಮ್ಮ ಸ್ವಂತಕ್ಕಾಗಿ ಮಾರಲಿಲ್ಲ, ಆ ಸ್ಥಳದ ಕಾಲುವೆ ಮತ್ತು ಕಟ್ಟೆಯ ದುರಸ್ತಿಗೆ ಬೇಕಾದ ಹಣವನ್ನು ಕೂಡಿಸಲೆಂದು ಸಮುದಾಯದ ಉಪಯೋಗಕ್ಕಾಗಿಯೇ ಮಾರಿದರು. ಇದರಲ್ಲಿ ರಹಸ್ಯ ವ್ಯವಹಾರಗಳಾವುವೂ ಇಲ್ಲ. ಎಲ್ಲವೂ ಮುಕ್ತವಾಗಿದ್ದು, ಎಲ್ಲರಿಗೂ ತಿಳಿಯುವಂತೆ ಊರಿನ ಮಧ್ಯದಲ್ಲಿ ಶಾಸನವನ್ನೂ ಹಾಕಿಸಲಾಗಿತ್ತು. ಮತ್ತು ಆ ಸ್ಥಳದ ಮತ್ತು ಸುತ್ತಮುತ್ತಲ ಊರಿನ ಮುಖ್ಯಸ್ಥರು ಮಧ್ಯಸ್ಥರು, ಸಾಕ್ಷಿಗಳು ಮುಂತಾಗಿ ಇದರಲ್ಲಿ ಪಾತ್ರವಹಿಸಿದ್ದರು. ಆ ಸ್ಥಳದ ನಾಯಕರೂ ಕೂಡಾ ಈ ಮಾರಾಟದಿಂದ ಬಂದ ಹಣವು ಆ ಊರಿಗಾಗೇ ಉಪಯೋಗಿಸಲ್ಪಡುವಂತೆ ವ್ಯವಸ್ಥೆ ಮಾಡಿದ್ದರು. ಅವರು ಚಿಕ್ಕದೀಕ್ಷಿತನಿಗೆ, ಮನೆಯನ್ನು ಛತ್ರವಾಗಿ ಮಾಡುವಂತೆಯೂ, ಹೊಲಗದ್ದೆಯಿಂದ ಬಂದ ಆದಾಯವನ್ನು ಆ ಛತ್ರದ ಬ್ರಾಹ್ಮಣ ಭೋಜನಕ್ಕೆ ವಿನಿಯೋಗಿಸುವಂತೆಯೂ ಪ್ರಾರ್ಥಿಸಿಕೊಂಡತು. ಹೀಗೆ ಅವರು ಸ್ಥಳದ ಆಸ್ತಿಯ ಮೇಲೆ ಆಸಕ್ತಿಯುಳ್ಳವರಾಗಿ

ದ್ದರು. ಅವರಲ್ಲಿ 'ಸ್ವಸಮುದಾಯ ವೃತ್ತಿ'ಯು ಅಧಿಕವಾಗಿ ಪ್ರವೃತ್ತವಾಗಿತ್ತು. ಅಲ್ಲದೆ, ಬ್ರಾಹ್ಮಣಭೋಜನ ನೀಡುವುದರಿಂದ ಬರುವ ಪುಣ್ಯದ ಮೇಲಿನ ಅವರ ನಂಬಿಕೆಯೂ ಈ ಸ್ಥಳದಲ್ಲಿ ಮುಖ್ಯವಾಗಿತ್ತು. ಇದನ್ನು ಧಾರ್ಮಿಕ-ಆರ್ಥಿಕ ವ್ಯವಹಾರವೆಂದೂ ಹೇಳಬಹುದು. ಇಲ್ಲಿ ಅರ್ಥವೂ ಧರ್ಮದ ಮೇಲೆ ಮತ್ತು ಧರ್ಮಕ್ಕೆ ಅನುಗುಣವಾಗಿದೆ. ಏಕೆಂದರೆ, ಆ ಸ್ಥಳದ ಲಕ್ಷ್ಮೀನಾಥ ದೇವರನ್ನು ಮತ್ತು ಮಿರ್ಲೆಯ ನಾರಸಿಂಹ ದೇವರನ್ನೂ ಇಲ್ಲಿ ಸಾಕ್ಷಿಗಳೆಂದು ಹೇಳಿದೆ. ಈಮಾರಾಟದ ಶಾಸನದ ಕಲ್ಲಿನ ಪ್ರತಿಯನ್ನು ಲಕ್ಷ್ಮೀನಾಥದೇವ ಮತ್ತು ಮಿರ್ಲೆಯ ನಾರಸಿಂಹದೇವರ ದೇವಾಲಯದ ಮುಂದೆಯೂ ಇಡಲಾಗಿದೆ. ಈ ಮಾರಾಟದ ಪ್ರತಿಯನ್ನು ಮಹಾಜನ ಮತ್ತು ಗೌಡ ಪ್ರಜೆಗಳು ಅವಿರೋಧವಾಗಿ ಮತ್ತು ಮನಃಪೂರ್ವಕವಾಗಿ ಧಾರಾಪೂರ್ವಕವಾಗಿ ಹೊನ್ನಿನೊಂದಿಗೆ ಚಿಕ್ಕದೀಕ್ಷಿತನಿಗೆ ಕೊಟ್ಟರು.

ಹೀಗೆ, ಇಲ್ಲಿ ಮಹಾಜನ, ಗೌಡ ಪ್ರಜೆಗಳು ಮತ್ತು ಸ್ಥಳೀಯರು ಸಮಾನ ಅವಶ್ಯಕತೆ ಮತ್ತು ಉಪಯೋಗಕ್ಕಾಗಿ ಒಟ್ಟು ಸಮುದಾಯದ ಜವಾಬ್ದಾರಿಯನ್ನು ಹಂಚಿಕೊಳ್ಳುವ, ಪರಿಸ್ಥಿತಿಗೆ ತಕ್ಕ 'ಒಗ್ಗಟ್ಟಿನ ಪ್ರತಿಕ್ರಿಯೆ'ಯುಳ್ಳ ವರ್ತನೆಯನ್ನು ತೋರಿಸಿದ್ದಾರೆ. 'ಒಗ್ಗಟ್ಟಿನ ವರ್ತನೆ'ಯನ್ನು ಆಹ್ವಾನಿಸುವ ಇಂಥ ಪರಿಸ್ಥಿತಿಯಲ್ಲಿ, ಧಾರ್ಮಿಕ ರೂಢಿಯು ಅವರ ವರ್ತನೆಯನ್ನು ನಿಯಂತ್ರಿಸಿದೆ. ಇಲ್ಲಿನ ಸ್ಥಳೀಯ ಜನರಿಗೆ, ಸ್ಥಳೀಯ ಮುಖ್ಯಸ್ಥರಾದ ಮಹಾಜನ ಮತ್ತು ಗೌಡ ಪ್ರಜೆಗಳಿಗೆ ಬೆಂಬಲ ನೀಡುವಂತಹ ಅಭಿಪ್ರಾಯವೂ, ಸ್ಥಳೀಯ ಗುಂಪು ಮತ್ತು ಮೌಲ್ಯಗಳೊಂದಿಗೆ ಅತೀವ ಸಂಬಂಧವೂ, ಇದ್ದುದನ್ನು ಇಲ್ಲಿ ಗುರುತಿಸಬಹುದು. ಹೀಗೆ, ಇದು ಪಾರಂಪರಿಕವಾದ ಮತ್ತು ಸಮುದಾಯಾಧಾರಿತ ಸಂಬಂಧದ ಅನೌಪಚಾರಿಕತೆಯಿಂದ ಕೂಡಿದ ಆರಂಭಿಕ ಹಂತ ಗುಂಪಿನ ಸಾಮಾಜಿಕ ಸನ್ನಿವೇಶವಾಗಿದೆ.

*ಅನು: ಕು|| ಅಪರ್ಣ*

---

## ಅಡಿಟಿಪ್ಪಣಿ

1. ಎ.ಕ. 5 (ಪು.ಮು) ಕೃಷ್ಣರಾಜನಗರ 92, (1976)

ಡಾ॥ ರಾಧಾ ಕೃಷ್ಣಮೂರ್ತಿ

# ಸಂಸ್ಕೃತಕಾವ್ಯಗಳಲ್ಲಿ ರಾಜ ಮನೋರಂಜನೆಯಾಗಿ ಬೇಟೆ

ನಾಗರೀಕತೆಯ ಆರಂಭದ ಕಾಲದಿಂದಲೂ 'ಬೇಟೆ'ಯು ಒಂದು ಮೆಚ್ಚಿನ 'ಮನೋರಂಜನೆ'ಯಾಗಿ ಕುತೂಹಲಕರವಾಗಿ ಬಳಕೆಯಲ್ಲಿತ್ತು. ಮಾನವನಿಗೆ ವ್ಯವಸಾಯವು ಜೀವನೋಪಾಯವಾಗುವ ಮೊದಲು, ಬೇಟೆಯೇ ಅವನ ಆಹಾರಾನ್ವೇಷಣೆಯ ಮುಖ್ಯ ಮಾರ್ಗವಾಗಿತ್ತು. ಏಕೆಂದರೆ ಮನುಷ್ಯನು ಅವುಗಳನ್ನು ಹಿಡಿದು ಕೊಲ್ಲುವುದರ ಮುಲಕ, ಅದರ ಮಾಂಸವನ್ನು ತಿಂದು ಜೀವನ ನಡೆಸುತ್ತಿದ್ದನು. ಸಮಾಜವು ಪ್ರಗತಿ ಪಥದಲ್ಲಿ ಮುಂದುವರೆದಂತೆ ಬೇಟೆಯು, ಕೆಲವು ಬುಡಕಟ್ಟಿನ ಜನಾಂಗದವರ ಜೀವನನಿರ್ವಹಣೆಯ ಉದ್ಯೋಗವಾಗಿ ಪರಿಣಮಿಸಿತು. ಆದರೆ ಸಮಾಜದ ಶ್ರೀಮಂತ ಜನರಿಗೂ, ಆಳುವ ರಾಜರಿಗೂ, ಇದು ಆನಂದದಿಂದ ಕಾಲ ಕಳೆಯುವ ಮಾರ್ಗವಾಯಿತು.

ಪ್ರಾಗೈತಿಹಾಸಿಕ ಕಾಲದ ವರ್ಣಚಿತ್ರಗಳು ಪ್ರಾಣಿ. ಬೇಟೆಯ ಹಲವಾರು ದೃಶ್ಯವನ್ನು ಚಿತ್ರಿಸಿದರೆ, ಸಿಂಧೂಕಣಿವೆಯಲ್ಲಿ ದೊರೆತಿರುವ ಮುದ್ರೆಗಳು, ಬೇಟೆಗಿದ್ದ ಧಾರ್ಮಿಕ ಮಹತ್ವವನ್ನು ತಿಳಿಸುತ್ತವೆ. ಋಗ್ವೇದದ ಸೂಕ್ತಗಳಲ್ಲೂ ಬೇಟೆಗೆ ಸಂಬಂಧಿಸಿದ ವಿವರಗಳಿವೆ ಮತ್ತು ಸೂಕ್ತಕಾರರು, ನಿಷಾಧರನ್ನು ಉಲ್ಲೇಖಿಸುತ್ತಿದ್ದು ಈ ನಿಷಾಧರೆಂದರೆ ನುರಿತ ಬೇಟೆಗಾರರಾಗಿದ್ದು, ಬೇಟೆಯೇ ಅವರ ಉದ್ಯೋಗವಾಗಿತ್ತು. ಬೇಟೆಯು ರಾಜರ ವಿನೋದವಾಗಿತ್ತು. ಈ ವಿನೋದವನ್ನು ವಿಶೇಷ ಸಂದರ್ಭಗಳಲ್ಲಿ ಪ್ರದರ್ಶಿಸುತ್ತಿದ್ದರೆಂದು ಮೆಗಾಸ್ತಾನೀಸ್ ಮತ್ತಿತರರು ತಿಳಿಸಿರುತ್ತಾರೆ. 'ರಘುವಂಶ' 'ಕಾದಂಬರೀ' ಮೊದಲಾದ ಹಲವಾರು ಸಂಸ್ಕೃತ ಗ್ರಂಥಗಳಲ್ಲಿ ಬೇಟೆಗೆ ಸಂಬಂಧಿಸಿದ ಅನೇಕ ವಿವರಗಳು ದೊರೆಯುತ್ತವೆ. ಕೆಲವು ಕಾವ್ಯಗಳು ಬೇಟೆಯಾಡುವುದು ಆರೋಗ್ಯಕ್ಕೆ ಹಿತಕರವೆಂದೂ, ಆಡಳಿತ ನಿರ್ವಹಣೆಯ ಮಾಧ್ಯಮವೆಂದು ತಿಳಿಸಿವೆ.ಪ್ರಾಚೀನ ಭಾರತೀಯ ವಿಚಾರವೇತ್ತರಾದ ಕೌಟಿಲ್ಯ, ಮನು ಇವರೆಲ್ಲ ಕ್ರೌರ್ಯ ಮತ್ತು ಹಿಂಸೆಯನ್ನೊಳಗೊಂಡಿರುವ 'ಬೇಟೆಯ ವಿನೋದ'ವನ್ನು ತಿರಸ್ಕರಿಸುತ್ತಾರೆ. ಆದರೆ ಸಂಸ್ಕೃತ ಗ್ರಂಥವಾದ ದಂಡಿಯ ದಶಕುಮಾರ ಚರಿತವು ಬೇಟೆಯಿಂದಾಗ್ಬು ಹಲವಾರು ಪ್ರಯೋಜನಗಳನ್ನು ತಿಳಿಸಿರುತ್ತದೆ. ಸಂಸ್ಕೃತ ಗ್ರಂಥಗಳಲ್ಲಿ ಬೇಟೆಯ ಬಗೆಗೆ ದೊರೆಯುವ ವಿವಿಧ ಅಭಿಪ್ರಾಯಗಳನ್ನು ಗಮನಿಸುವುದು ಕುತೂಹಲಕರವಾಗಿದೆ.

ದಟ್ಟವಾದ ಸಂಪದ್ಭರಿತವಾದ ಅರಣ್ಯಗಳಿಂದ ಕೂಡಿದ ಕರ್ನಾಟಕದಲ್ಲಿ ರಾಜಮನೆತನದವರಿಗೆ ಮತ್ತು ಶ್ರೀಮಂತರಿಗೆ ಬೇಟೆಯು ಒಂದು ಸುವ್ಯವಸ್ಥಿತವಾದ ಕ್ರೀಡೆಯಾಗಿ ಬೆಳೆದು ಬಂದಿದೆ. ಕೆಲವು ಶಿಲಾಶಾಸನಗಳು ಇದರ ಬಗೆಗೆ ಬೆಳಕು ಚೆಲ್ಲಿವೆ. ಅನೇಕ ಶಿಲಾಶಾಸನಗಳು ಸಾಹಿತ್ಯದ ಆಕರಗಳೂ, ರಾಜರನೇಕರು ಬೇಟೆಗಾಗಿ ದಿಗ್ವಿಜಯ ಹೊರಟ್ಟಿದ್ದನ್ನು ತಿಳಿಸುತ್ತವೆ. ಬ್ರಿಟಿಷ್ ಮ್ಯೂಸಿಯಂನಲ್ಲಿರುವ ಮೂರನೇ ಗೋವಿಂದನ ತಾಮ್ರಪಟಗಳಿಂದ – ನಿಯುಕ್ತವಾದ ಅರಣ್ಯಗಳಲ್ಲಿ ಸಂರಕ್ಷಿಸಲ್ಪಟ್ಟಿದ್ದ ವನ್ಯಮೃಗಗಳನ್ನು ಬೇಟೆಯಾಡಿ ರಾಜರು, ಶ್ರೀಮಂತರು ಸಂತೋಷಿಸುತ್ತಿದ್ದರೆಂದು ತಿಳಿದುಬರುತ್ತದೆ. ಚಾಳುಕ್ಯರ ದೊರೆಗಳಾದ ಸೋಮೇಶ್ವರ, ಕುಮಾರಪಾಲ ಮೊದಲಾದವರಿಗೆ ಬೇಟೆಯು ಇಷ್ಟವಾಗಿತ್ತು. ವಸ್ತು ಸಂಗ್ರಹಾಲಯಗಳಲ್ಲಿ ಕರ್ನಾಟಕದ ರಾಜರು ಮತ್ತು ಶ್ರೀಮಂತರ ಬೇಟೆಯಾಡುತ್ತಿದ್ದದ ಈ ಚಿತ್ರಗಳನ್ನು, ವಸ್ತುಗಳನ್ನು ಪ್ರದರ್ಶಿಸಲಾಗಿದೆ. ಕರ್ನಾಟಕವು ಆನೆಗಳಿಗೆ ಹೆಚ್ಚು ಪ್ರಸಿದ್ಧವಾಗಿದ್ದು, ದಟ್ಟವಾದ ಅರಣ್ಯಗಳಿರುವಲ್ಲಿ, ಇತ್ತೀಚಿನವರೆಗೆ ಮದ್ದಾನೆಗಳನ್ನು ಹಿಡಿಯಲು 'ಖೆಡ್ಡಾ'ಗಳನ್ನೇರ್ಪಡಿಸುತ್ತಿದ್ದರು.

ಸಂಸ್ಕೃತ ಭಾಷೆಯಲ್ಲಿ 'ಬೇಟೆ' ಪದಕ್ಕೆ ಸಂವಾದಿಯಾಗಿ 'ಮೃಗಯಾ' ಎಂಬ ಪದವನ್ನು ಬಳಸುತ್ತಾರೆ ಮತ್ತು'ಶ್ಯೇನಾಪಾತ' ಎಂಬ ಪದವು ಇದೇ ಅರ್ಥದಲ್ಲಿ ಬಳಸಲಾಗುತ್ತದೆ. ಏಕೆಂದರೆ ಗಿಡುಗಗಳನ್ನು ಆಮಿಷವಾಗಿ ಹಾಕಿ ಬೇಟೆಯಾಡುವ ತರಬೇತಿ ನೀಡುತ್ತಿದ್ದರು. ಸಂಸ್ಕೃತ ಸಾಹಿತ್ಯ ಗ್ರಂಥಗಳಲ್ಲಲ್ಲದೇ, ಶಬ್ದಭಂಡಾರಗಳೆನ್ನಿಸಿರುವ 'ಮಾನಸೋಲ್ಲಾಸ', 'ಸಾಮ್ರಾಜ್ಯ ಲಕ್ಷ್ಮೀ ಪೀಠಿಕಾ', 'ಶ್ಯೇನಶಾಸ್ತ್ರಂ', 'ಗಜಶಾಸ್ತ್ರಂ'......ಮೊದಲಾದ

ವುಗಳಲ್ಲೂ ಬೇಟೆಯಲ್ಲಿ ಬಳಸುವ ವಿವಿಧ ತಂತ್ರಗಳ ಬಗೆಗೂ, ಕಾರ್ಯಗಳ ಬಗೆಗೂ ವಿವರವಾದ ವರ್ಣನೆಗಳನ್ನು ನೀಡುತ್ತಿವೆ. ವಿವಿಧ ಪ್ರಾಣಿಗಳನ್ನು ರೇಗಿಸುವ, ವಶಪಡಿಸಿಕೊಳ್ಳುವ, ಈ ಉದ್ದೇಶಕ್ಕಾಗಿ ಗಿಡುಗಗಳನ್ನು ಬಳಸುವ ತರಬೇತಿಯನ್ನು ನೀಡುವ ಕಲೆಯನ್ನು ಇದಕ್ಕಾಗಿ ಬಳಸುವ ವಿವಿಧ ಆಯುಧಗಳ ಬಗೆಗೆ, ಶಸ್ತ್ರಗಳ ಬಗೆಗೆ ವಿವರಣೆ ನೀಡುತ್ತವೆ. ಈ ಕೃತಿಗಳು ಆಡಳಿತದಲ್ಲಿರುವ ವ್ಯಕ್ತಿಗಳಿಗೆ – ಬೇಟೆಯು ಕೇವಲ ವಿನೋದಕ್ಕಾಗಿರದೇ ಇದು ಅವಶ್ಯಕ ಕಲೆಯಾಗಿದ್ದು ಇದು ಅವರಿಗೆ ಸೈನ್ಯ ಪದ್ಧತಿಯು ಜ್ಞಾನವನ್ನು, ರಾಜಕೀಯ ತಿಳುವಳಿಕೆಯನ್ನು ಹೆಚ್ಚುಸುತ್ತದೆಂದು ತಿಳಿಸುತ್ತವೆ. ಇಷ್ಟಲ್ಲದೆ, ಬೇಟೆಯು, ಕುಡಿತ, ಜೂಜುಗಳಂತೆ ಒಂದು ಕೆಟ್ಟ ಚಾಳಿಯೆಂದು, ತಿರಸ್ಕರಿಸಲ್ಪ ಡುವುದಾದರೂ, ಇದನ್ನು ಕ್ಷತ್ರಿಯರಿಗೆ ಧರ್ಮ, ಅರ್ಥ, ಕಾಮಗಳನ್ನು ಸಾಧಿಸುವ ಒಂದು ಮನೋರಂಜಕ ಮಾರ್ಗವೆಂದು ಪುರಸ್ಕರಿಸಲಾಗಿದೆ.

ಇಂದು ಅರಣ್ಯಜೀವಿಗಳ ಸಂರಕ್ಷಣಾರ್ಥವಾಗಿ 'ಬೇಟೆ'ಯನ್ನು ನಿಷೇಧಿಸಲಾಗಿದೆಯಾದರೂ, ಇದು ಕಲೆಗಾರರಿಗೆ, ಕವಿಗಳಿಗೆ, ನಾಟಕಕಾರರಿಗೆ ಮತ್ತು ಇತಿಹಾಸಜ್ಞರಿಗೆ ಒಂದು ಆಸಕ್ತಿದಾಯಕ ವಿಷಯವೇ ಆಗಿದೆ. ಆದುದರಿಂದ ಮೇಲಿನ ಅಂಶಗಳನ್ನು ವಿವರಿಸುತ್ತಾ – " ಸಂಸ್ಕೃತಗ್ರಂಥಗಳನ್ನಾಧರಿಸಿ ಶ್ರೀಮಂತರ ವಿನೋದ ಪ್ರಕಾರವಾದ ಬೇಟೆಯ ಮಹತ್ವವನ್ನು ಅದರ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಆಟದಿಂದಾಗುವ ಆನಂದದ ಮೌಲ್ಯಗಳನ್ನು ವಿವರಿಸುವ ಪ್ರಯತ್ನದ ಆಶಯವಾಗಿ ಈ ಲೇಖನ ಒಡಮೂಡಿದೆ.

*ಅನು .: ಕೊ. ವಸಂತಲಕ್ಷ್ಮಿ*

ಜಿ. ಸರ್ವಮಂಗಳ

# ಹುಂಚದ ಕಮಠೇಶ್ವರ : ಒಂದು ಅಪರೂಪ ಶೈಲಿಯ ದೇವಾಲಯ.

ಶಿವಮೊಗ್ಗ ಜಿಲ್ಲೆಯ ಹೊಸ ನಗರ ತಾಲೂಕಿನಲ್ಲಿರುವ ಹುಂಚ ಒಂದು ಸಣ್ಣ ಹಳ್ಳಿ. ಶಿವಮೊಗ್ಗ ನಗರದಿಂದ ಸು. ೬೦ ಕಿ.ಮೀ. ದೂರದಲ್ಲೂ ಹೊಸನಗರದ ನೈಋತ್ಯಕ್ಕೆ ೨೧ ಕಿ.ಮೀ. ದೂರದಲ್ಲಿದೆ.[1] ಇಲ್ಲಿರುವ ಪದ್ಮಾವತಿ ದೇವಾಲಯಕ್ಕೆ ಭಾರತದ ನಾನಾಕಡೆಗಳಿಂದ ಭಕ್ತರು ಬಂದು ದರ್ಶನ ಪಡೆಯುತ್ತಿರುವರು. ಇಂದಿಗೂ ಹುಂಚವು ಒಂದು ಪ್ರಸಿದ್ಧ ಜೈನತೀರ್ಥ ಕ್ಷೇತ್ರವಾಗಿದೆ. ಇಲ್ಲಿರುವ ಪ್ರಾಚೀನ ಅವಶೇಷಗಳು ಕ್ರಿ.ಶ. ೮ನೇ ಶತಮಾನಕ್ಕೆ ಸೇರಿದವಾಗಿದ್ದು, ಅವು ಈ ಗ್ರಾಮದ ಗತವೈಭವದ ಕುರುಹಾಗಿದೆ. ಇಲ್ಲಿರುವ ಕೆಲವು ಸ್ಮಾರಕಗಳು ಸು. ೮ ರಿಂದ ೧೨ನೇ ಶತಮಾನದ ಕಾಲಕ್ಕೆ ಸೇರಿದವಾಗಿವೆ.

ಪ್ರಾಚೀನ ಕಾಲದಲ್ಲಿ ಹುಂಚವು ಸಾಂತಳಿಗೆ ೧೦೦೦ಕ್ಕೆ ಸೇರಿದ ಸಾಂತರರ ರಾಜಧಾನಿಯಾಗಿತ್ತು. ಸಾಂತರರು ಕಲ್ಯಾಣಚಾಲುಕ್ಯರ ಸಾಮಂತ ರಾಜರಾಗಿದ್ದರು. ಈ ಸ್ಥಳಕ್ಕೆ ಹೊಂಬುರ್ಚ್ಚ, ಪೊಂಬುರ್ಚ್ಚ, ಪೊಂಬುರ್ಚ್ಚಪುರ, ಪಟ್ಟಿ ಪೊಂಬುರ್ಚ್ಚಪುರವೆಂಬ ಆನೇಕ ಹೆಸರುಗಳು ಶಾಸನಗಳಲ್ಲಿ ಉಕ್ತವಾಗಿದೆ ಮತ್ತು 'ಹುಂಚ' ಎಂಬ ಹೆಸರಿನ ವ್ಯುತ್ಪತ್ತಿಗೆ ಸಂಬಂಧಿಸಿದಂತೆ ಹಲವಾರು ಕತೆಗಳಿದ್ದು, ಇಲ್ಲಿ ಜಿನದತ್ತರಾಯನು, ರಾಜ್ಯಕಟ್ಟಿದನೆಂದು ಹೇಳುವರಾದರೂ, ಇವನೊಬ್ಬ ಐತಿಹಾಸಿಕ ವ್ಯಕ್ತಿ ಎಂಬುದು ಇನ್ನೂ ದೃಢವಾಗಿಲ್ಲ. ಸಾಂತರರ ರಾಜಧಾನಿಯಾಗಿ ಇದು ಉದಿಸುವ ಮೊದಲು, ಬನವಾಸಿ - ೧೨೦೦ ಒಂದು ಭಾಗವಾಗಿದ್ದು, ಸಾಂತಳಿಗೆ ೧೦೦೦ವು ಅಳ್ವಖೇಡ ೬೦೦೦ಕ್ಕೆ ಸೇರಿದ್ದು ಇದನ್ನು ಆಳುಪರು ಆಳುತ್ತಿದ್ದರು. ಕ್ರಿ.ಶ.೯ನೇ ಶತಮಾದ ಸುಮಾರಿಗೆ ಆಳುಪರ ಒಂದು ರಾಜಧಾನಿಯು ಪೊಂಬುರ್ಚ್ಚಪುರವಾಗಿದ್ದಿತು.[2]

ಇಲ್ಲಿರುವ ಅವಶೇಷಗಳು ಜೈನ ಮತ್ತು ಶೈವ ಮತಗಳೆರಡಕ್ಕೂ ಸೇರಿದವಾಗಿವೆ. ಇಲ್ಲಿರುವ ಎಲ್ಲಾ ಸ್ಮಾರಕಗಳನ್ನು ಗಮನಿಸಿದಾಗ, ಇಲ್ಲಿಯ ಕಮಠೇಶ್ವರ ದೇವಾಲಯವು ಅದರ ಅಪರೂಪದ ವಾಸ್ತು ವಿನ್ಯಾಸದಿಂದ ನಮ್ಮ ಗಮನವನ್ನು ಸೆಳೆಯುತ್ತದೆ.

**ದೇವಾಲಯದ ವರ್ಣನೆ :-** ಕಮಠೇಶ್ವರ ದೇವಾಲಯವು ಈಗಿರುವ ಜೈನಮಠದಿಂದ ಆಗ್ನೇಯಕ್ಕೆ ಸು.೧/೨ ಕಿ.ಮೀ ದೂರದಲ್ಲಿದೆ. ಇದು ಸುಸ್ಥಿತಿಯಲ್ಲಿರುವ ಬಳಪದ ಕಲ್ಲಿನ ಕಟ್ಟಡವಾಗಿದೆ. ಈ ದೇವಾಲಯದಲ್ಲಿ ೧) ಮಂಟಪದ ದ್ವಾರಬಂಧದ ಒಳಭಾಗದಲ್ಲೂ (ಕ್ರಿ.ಶ.೮೦೦)[3] ಮತ್ತು ೨) ದೇವಾಲಯದ ಮುಂಭಾಗದಲ್ಲೂ ಶಿಲಾಶಾಸನಗಳಿವೆ. ದೇವಾಲಯದ ಮುಂದಿರುವ ಶಾಸನ ಕ್ರಿ.ಶ.೧೨೮೮ರದಾಗಿದ್ದು,[4] ಸೇವಾನಾಯಕ, ಕೋಟಿನಾಯಕ, ಮಾರಸೊಡ್ಡದೇವ, ಮೊದಲಾದವರನ್ನು ಉಲ್ಲೇಖಿಸಿದ್ದು ಇವರು ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದರೆಂದು ತಿಳಿದು ಬರುತ್ತದೆ. ವಾಸ್ತುವಿನ ದೃಷ್ಟಿಯಿಂದ ಈ ದೇವಾಲಯವು ಅತ್ಯಾಸಕ್ತಿಯನ್ನು ಕೆರಳಿಸುತ್ತಿದ್ದು, ಈ ದೇವಾಲಯದ ಶೈಲಿ ಅನುಪಮವಾಗಿದೆ.

**ದೇವಾಲಯ ವಿನ್ಯಾಸ :-** ದೇವಾಲಯದಲ್ಲಿ ಗರ್ಭಗೃಹ ಮತ್ತು ಸಭಾ ಮಂಟಪ ಹೀಗೆ ಎರಡು ಭಾಗಗಳಾಗಿವೆ. ಇದರ ಮುಂದೆ ಮುಖಮಂಟಪ ಇದ್ದ ಸೂಚನೆ ಇಲ್ಲ. ಗರ್ಭಗೃಹದ ಒಳವಿಸ್ತೀರ್ಣವು ೨ X ೨ ಮೀ. ಗಳಾಗಿದ್ದು, ಮಂಟಪದ ವಿಸ್ತೀರ್ಣವು ೪ X ೪ ಮೀ. ಗಳಷ್ಟಿದೆ. ಸೂಕ್ಷ್ಮವಾಗಿ ಗಮನಿಸಿದಾಗ ಗರ್ಭಗೃಹ ಮತ್ತು ಮಂಟಪಗಳನ್ನು ಬೇರೆ ಬೇರೆಯಾಗಿ ರಚಿಸಿರುವಂತಿದೆ. ಮೊದಲಿಗೆ ಗರ್ಭಗೃಹವು ಸ್ವತಂತ್ರ ಗುಡಿ ಆಗಿದ್ದು ನಂತರದ ಕಾಲದಲ್ಲಿ ಮಂಟಪವನ್ನು ಸೇರಿಸಲಾಗಿದೆ. ಇದನ್ನು ಗೋಡೆಯ ಮೇಲಿನ ಕಪೋತದಲ್ಲಿ ಬಂದಿರುವ ಶಿಲ್ಪಗಳ ಪಟ್ಟಿಕೆಯು ಸ್ಪಷ್ಟಪಡಿಸುತ್ತದೆ ಮತ್ತು ಗರ್ಭಗೃಹದ ವಿತಾನವು ತಿಳಿಸುತ್ತಿದೆ. ಆದರೆ ಈ ಎರಡರ ರಚನೆಯು ಬಹುಕಡಿಮೆ ಅಂತರದ ಕಾಲದಲ್ಲಿಯೇ ಆಗಿರುವಂತಿದೆ.

**ಸಭಾಮಂಟಪ :-** ಇದರ ದ್ವಾರಬಂಧವು ಸರಳವಾದ ಮೂರು ಶಾಖೆಗಳನ್ನು ಹೊಂದಿದ್ದು ಅಡ್ಡ ತೊಲೆಯ ಮೇಲ್ಭಾಗದಲ್ಲಿ[5] ಪೂರ್ಣಕಂಭಗಳನ್ನು ಕೆತ್ತಿರುವುದು ಕುತೂಹಲಕಾರಿಯಾಗಿದೆ. ಇದು ಒಂದು ಅಪರೂಪದ ಲಕ್ಷಣ. ಸಭಾಮಂಟಪದ ಮಧ್ಯದಲ್ಲಿ[4]

ಕಂಬಗಳಿವೆ. ಇದರ ಭಿತ್ತಿಯಲ್ಲಿ ಕುಡ್ಯಸ್ತಂಭಗಳಿಲ್ಲ. ಈ ಕಂಬಗಳ ಮಧ್ಯದಲ್ಲಿ 'ನಂದಿ'ಯ ಬಿಂಬವಿದೆ. ಇದರ ಭುವನೇಶ್ವರಿಯಲ್ಲಿ ಅಷ್ಟದಿಕ್ಪಾಲಕರ ಮಧ್ಯೆ ನಟರಾಜನ ಬಿಂಬವಿದ್ದು, ಇದರೊಂದಿಗೆ ಗಣೇಶ, ಕಾರ್ತಿಕೇಯನ ಮೂರ್ತಿಗಳೂಇವೆ. ಇದರ ಅಂಚನ್ನು ಕಮಲದೊಂದಿಗೆ ಅಲಂಕರಿಸಲಾಗಿದೆ. ಉಳಿದ ಭುವನೇಶ್ವರಿಗಳಲ್ಲಿ ಅಲಂಕಾರವಿಲ್ಲ.

**ಕಂಬಗಳು** :– ಕಂಬಗಳು ಚೌಕಾಕಾರದ್ದು, ಎತ್ತರವಾದ ಪೀಠ, ಕೆಳಭಾಗದಲ್ಲಿ ಸರಳವಾದ ಚೌಕಾ ಕಾರದ ಖಂಡ, ಮಧ್ಯದಲ್ಲಿ ನೇರವಾದ ಪಟ್ಟಿಗಳಿಂದ ಕೂಡಿದ ಭಾಗವಿದೆ. ಇದರ ಮೇಲಿರುವ ಕಾಂಡವು ಮಣಿಮಾಲೆಯಿಂದ ಅಲಂಕಾರಗೊಂಡಿದೆ. ಇದರ ಮೇಲೆ ಸಣ್ಣಸಣ್ಣ ಚಿಕಣಿ ಬಿಂಬಗಳಿವೆ. ಇದರ ಉಳಿದ ಭಾಗಗಳಾದ ಕಳಸ, ತಾಡಿ, ಕುಂಭಗಳಿದ್ದು ಇದರ ಮೇಲೆ ಎರಡೆರಡು ಬಾರಿ ಅಡ್ಡ ಹಾಯುವ ಗೀಟುಗ ಳುಳ್ಳ ಮುಂಚಾಚಿದ ತರಂಗ ಬೋದಿಗೆಯಲ್ಲಿ ಮಧ್ಯ ಪಟ್ಟಿ ಇದೆ. ಸಭಾಮಂಟಪದ ಆಗ್ನೇಯದ ಸಪ್ತಮಾತೃ ಕೆಯರ ಪಟ್ಟಿಕೆಯು ನೆಲದ ಮೇಲಿದೆ.

**ಗರ್ಭಗೃಹದ ದ್ವಾರಬಂಧ** :– ಗರ್ಭಗೃಹದ ದ್ವಾರಬಂಧವು ಸಾಕಷ್ಟು ಕಿರಿದಾಗಿದ್ದು ವಜ್ರಶಾಖೆ, ರಜ್ಜುಶಾಖೆ ಮತ್ತು ಪತ್ರಶಾಖೆಗಳನ್ನು ಹೊಂದಿದೆ. ಇದರ ಲಲಾಟ ಪಟ್ಟಿಕೆಯಲ್ಲಿ ಗಜಲಕ್ಷ್ಮಿಯ ಬಿಂಬವಿದೆ. ಆದರೆ ಇಲ್ಲಿಯ ಕಪೋತದ ಕೆಳಭಾಗದಲ್ಲಿ ನರ್ತಕರ ಶಿಲ್ಪಗಳಿದ್ದು ಇವರೊಂದಿಗೆ ಇರುವವರು ಮೃದಂಗ, ಕಹಳೆ, ಕೊಳಲು ಮೊದಲಾದವನ್ನು ನುಡಿಸುತ್ತಿರುವಂತೆ ಬಿಡಿಸಲಾಗಿದೆ. ಮಂಟಪದ ಭಿತ್ತಿಯ ಎರಡು ಕಡೆಯೂ ಇಂಥ ಶಿಲ್ಪಗಳ ಪಟ್ಟಿಕೆ ಇದೆ. ಇದರಿಂದ ಈ ಭಾಗ ದಲ್ಲಿ ಮಾತ್ರ ಇಂಥ ಶಿಲ್ಪಗಳ ಅಲಂಕಾರವನ್ನು ಮಿತಿ ಗೊಳಿಸಲಾಗಿತ್ತೋ ಅಥವಾ ಪ್ರಸ್ತರದ ಸುತ್ತಲೂ ಅದು ಮುಂದುವರೆದಿದೆಯೋ ಹೇಳಲಾಗುತ್ತಿಲ್ಲ. ಗರ್ಭಗೃಹದ ಒಳಚಾವಣಿಯು ಬೋಳಾಗಿದೆ. ಇದರ ಮಧ್ಯಭಾಗದಲ್ಲಿರುವ ಎತ್ತರವಾದ ಪೀಠದ ಮೇಲೆ ಶಿವಲಿಂಗವಿದೆ.

ಅದಿಷ್ಠಾನವು ಜಗತಿ, ಉಪಾನ ಮತ್ತು ತ್ರಿಪಟ್ಟ ಕುಮುದಗಳನ್ನು ಒಳಗೊಂಡಿದೆ. ಭಿತ್ತಿಯ ಕೆಳಭಾಗವು ಸಮತಲವಾಗಿ ಮರದ ಜಾಲಂಧ್ರಗಳಂತೆ ರಚಿತವಾ ಗಿದೆ. ಭಿತ್ತಿಯ ಮೇಲ್ಭಾಗವು ಸರಳವಾಗಿದ್ದು ನಿಶ್ಚಿತವಾ ದಅಂತರದಲ್ಲಿ ಕುಡ್ಯಸ್ತಂಭಗಳನ್ನು ಹೊಂದಿದೆ. ಈ ಸ್ತಂಭಗಳು ಕೇವಲ ಸಭಾಮಂಟಪದ ಭಿತ್ತಿಯಲ್ಲಿ ಮಾತ್ರ ಕಾಣಬರುತ್ತಿದೆ.

**ಕಪೋತ** : – ಕಪೋತವು ಅಲ್ಲಲ್ಲೇ ಕೆತ್ತಲಾಗಿ ರುವ ಸುಂದರವಾದ 'ಗೂಡು' ಗಳನ್ನು ಹೊಂದಿದ್ದು, ಇದರಮೇಲ್ಛಾವಣಿಯು ಸಮತಳವಾಗಿದೆ. ಆದರೆ ಪಕ್ಕ ಗಳು ಇಳಿಜಾರಾಗಿ ರಚಿತವಾಗಿವೆ.

ಗರ್ಭಗೃಹದ ಮೇಲಿನ ಕಪೋತದಲ್ಲಿ 'ಹಾರ'ದ ಭಾಗವಿಲ್ಲ. ಬಾದಾಮಿ ಚಾಲುಕ್ಯರ ಕೆಲವು ಹೆಸರಿಸಲಾ ಗದ ದೇವಾಲಯಗಳಲ್ಲಿ ಈ ಲಕ್ಷಣವನ್ನು ಈಗಾಗಲೇ ಗುರುತಿಸಿರುತ್ತಾರೆ. ಉದಾಹರಣೆಗೆ : ಐಹೊಳೆಯ ರಾವಳಫಡಿಯ ದೇವಾಲಯ (ಸು.೭ನೇ ಶತಮಾನ)[6] ಆದರೆ ಈ ದೇವಾಲಯದ ಗರ್ಭಗೃಹದ ಮೇಲಿನ ಕಪೋತದಲ್ಲಿ ಎರಡು ಚೌಕಾಕಾರದ ಭಾಗಗಳಿದ್ದು ಮೇಲಿನ ಭಾಗವು ಚೌಕಾಕಾರದದ ಭೂಮಿಯಾಗಿದ್ದು, ಕೆಳಮುಖವಾಗಿ ಬಾಗಿದೆ. ಪ್ರತಿ ಭಾಗದ ಮಧ್ಯದಲ್ಲೂ ಸುಂದರವಾಗಿ ಅಲಂಕಾರವಾಗಿರುವ ಗೂಡುಗಳಿವೆ. ಆದರಿಂದ ಇದು ಏಕತಳ ವಿಮಾನ ಪದ್ಧತಿಯ ದೇವಾಲಯವಾಗಿದೆ.

**ಶಿಲ್ಪಗಳು** :– ಈ ದೇವಾಲಯವು ತನ್ನಲ್ಲಿರುವ ಮೂರ್ತಿಶಿಲ್ಪದ ಸೌಂದರ್ಯದಿಂದ ಪ್ರೇಕ್ಷಕರನ್ನು ಸೆಳೆ ಯುತ್ತದೆ. ಈ ಅಲಂಕಾರವು ಪ್ರಸ್ತರದ ಹೊರಭಾಗ ದಲ್ಲಿ ಸುತ್ತಲೂ ಕಾಣುತ್ತದೆ. ಇಲ್ಲಿ ಮಂಟಪದ ಒಳ ಭಾಗದಲ್ಲಿರುವ ಅಷ್ಟದಿಕ್ಪಾಲಕರ ಪಟ್ಟಿಕೆಯೂ, ಸಪ್ತ ಮಾತೃಕೆಯರ ಪಟ್ಟಿಕೆಯನ್ನು ಸೇರಿಸಬೇಕು. ಅಷ್ಟದಿಕ್ಪಾ ಲಕರ ಪಟ್ಟಿಕೆಯಲ್ಲಿ ಮಧ್ಯದ ಅಂಕಣದಲ್ಲಿ ಗಣೇಶ, ಕಾರ್ತಿಕೇಯರೊಂದಿಗೆ ಇರುವ ನಟರಾಜನ ಶಿಲ್ಪವಿದೆ. ಮತು ಪ್ರತಿದಿಕ್ಕಿನಲ್ಲೂ ಆಯಾ ದಿಕ್ಪಾಲಕರ ಶಿಲ್ಪಗಳು, ಅವರ ವಾಹನದೊಂದಿಗೆ ಇವೆ. ಇವು ಹೆಚ್ಚು ಅಲಂ ಕಾರಿಕವಾಗಿರದೇ, ನುರಿತವರ ಕೆಲಸದಂತಿಲ್ಲ. ಸಪ್ತಮಾ ತೃ ಕೆಯರ ಪಟ್ಟಿಕೆಯ ಸರಳವಾಗಿದೆ ಮತ್ತು ಪ್ರತೀ ಶಿಲ್ಪದ ಪೀಠದಡಿ ಇರುವ ಸಂಕೇತದಿಂದ ದೇವಿಯ ರನ್ನು ಗುರುತಿಸಬಹುದಾಗಿದೆ. ಗರ್ಭಗೃಹದ ದ್ವಾರ ಬಂಧದ ಕಪೋತದಲ್ಲಿನ ಶಿಲ್ಪಗಳ ಪಟ್ಟಿಕೆಯ ಬಗೆಗೆ ಈಗಾಗಲೇ ತಿಳಿಸಿದೆ. ಪ್ರಸ್ತರದ ಕಪೋತದಲ್ಲಿನ ಕೆಳ ಭಾಗದಲ್ಲಿರುವ ಶಿಲ್ಪಗಳ ಸಾಲಿನಲ್ಲಿ ಭೂತಗಣದಿಂದ ಹಿಡಿದು, ನರ್ತಕರ ಸಮೂಹದವರೆಗೆ ಚಿತ್ರಿಸಿದ್ದು, ಇಲ್ಲಿರುವ ಹಲವಾರು ವಿವಿಧ ಸಂಗೀತವಾದ್ಯಗಳನ್ನು ನುಡಿಸುತ್ತಿದ್ದಾರೆ. ಆನೆ, ಸಿಂಹ ಮೊದಲಾದ ಪ್ರಾಣಿಗಳ

ಚಿತ್ರವೂ ಇದೆ. ಆದರೆ ವಾತಾವರಣದ ಪ್ರಭಾವದಿಂದ ಶಿಲ್ಪಗಳು ಹಾಳಾದಂತಿವೆ.ಇಲ್ಲಿರುವ ಎರಡು ಪಂಚತಂತ್ರದ ಕತೆಗಳ ಶಿಲ್ಪಗಳ ಕುತೂಹಲ ಕೆರಳಿಸುತ್ತಿವೆ. ಅದರಲ್ಲಿ ಮೊದಲನೆಯದು ಹಾವು ಮತ್ತು ಮುಂಗುಸಿಯ ಕತೆಯಾಗಿದ್ದು ಇದನ್ನು ೨ ಪಟ್ಟಿಕೆಗಳಲ್ಲಿ ಕೆತ್ತಿದೆ ತೊಟ್ಟಿಲಿನ ಬಳಿಗೆ ಬರುತ್ತಿರುವ ಮೊದಲ ಪಟ್ಟಿಕೆಯಲ್ಲಿ, ಮುಂಗುಸಿಯನ್ನು ಸ್ತ್ರೀಯು ಕೊಲ್ಲುತ್ತಿರುವಂತ ಎರಡನೇ ಪಟ್ಟಿಕೆಯಲ್ಲಿ ಚಿತ್ರಿಸಲಾಗಿದೆ.

ಇದರಂತೆ ಕೆತ್ತಿರುವ ಮತ್ತೊಂದು ಕತೆಯಲ್ಲಿ – ಎರಡು ಹಂಸಗಳು ಒಂದು ಉದ್ದವಾದ ಕೋಲನ್ನು ಕಚ್ಚಿಕೊಂಡಿರುವ ಆಮೆಯನ್ನು ಮೇಲಕ್ಕೆ ಎತ್ತಿಕೊಂಡು ಹೋಗುತ್ತಿವೆ. ಇದರ ಕೆಳಗೆ ಒಂದು ಪ್ರಾಣಿ ಇದ್ದು ಭೂಮಿಯನ್ನು ಸಂಕೇತಿಸುತ್ತಿದೆ. ಶಿಲ್ಪದ ಅಲಂಕಾರಗಳಲ್ಲಿ, ಗಂಧರ್ವ ದಂಪತಿಗಳ ಶಿಲ್ಪವು ಸೇರುತ್ತದೆ. ಶಿಲ್ಪಿಯು ಇವನ್ನು ಎದ್ದು ಕಾಣುವಂತೆ ಮೂಡಿಸಿರುವುದಿಲ್ಲ. ಇವು ಹೆಚ್ಚು ಅಲಂಕಾರವಿರದೆ ಮಧ್ಯಮ ಗಾತ್ರದ್ದಾಗಿದೆ.

ಒಟ್ಟಿನಲ್ಲಿ ಕಮಠೇಶ್ವರ ದೇವಾಲಯವು ಕೆಲವು ಅಪರೂಪದ ಲಕ್ಷಣಗಳನ್ನು ಹೊಂದಿರುವ ವಿಶಿಷ್ಟ ದೇವಾಲಯವಾಗಿದೆ. ಈ ದೇವಾಲಯವು ಸಾಂತರ ವಾಸ್ತು ವಿನ್ಯಾಸದ ಆರಂಭಕಾಲವನ್ನು ಸೂಚಿಸುತ್ತಿದೆ. ಕಮಠೇಶ್ವರ ದೇವಾಲಯದಲ್ಲಿ ಗುರುತಿಸಬಹುದಾದ ಪ್ರಾದೇಶಿಕ ಶೈಲಿಯ ಕೆಲವು ಲಕ್ಷಣಗಳನ್ನು ಬೇರೆ ದೇವಾಲಯಗಳಲ್ಲಿ ಮುಂದುವರೆದಿವೆ. ಉದಾಹರಣೆಗೆ ಕಂಬಗಳ ಅಲಂಕಾರ ಮತ್ತು ಗರ್ಭಗೃಹದ ಮೇಲಿನ ಶಿಖರ,....ಇತ್ಯಾದಿ.

ಈ ದೇವಾಲಯದ ಕಂಬಗಳು ಬಹಳ ಸರಳವಾದ ಬ್ರಹ್ಮಕಾಂತ ರೀತಿಯಾಗಿದ್ದು, ಕಂಬದ ಕಾಂಡದ ಮೇಲ್ಭಾಗದಲ್ಲಿ ಮಾತ್ರ ಅಲಂಕಾರವಿದೆ. ನಂತರದ ಕಾಲದ ದೇವಾಲಯಗಳಲ್ಲಿ ಇದೇ ರೀತಿಯ ಕಂಬಗಳು ಹೆಚ್ಚು ಅಲಂಕಾರಿಕವಾಗಿವೆ. ಉದಾಹರಣೆಗೆ – ಬೋಗಾರ ಬಸ್ತಿ : ಕಾಂಡದ ಮಧ್ಯಭಾಗದಲ್ಲಿ ಸರಳವಾದ ಪಟ್ಟಿಗಳ ಬದಲು ಬಳ್ಳಿಯ ಅಲಂಕಾರವಿದೆ. ಇಲ್ಲಿಯ ಕಾಂಡದ ಮೇಲ್ಭಾಗದಲ್ಲಿ ಕಮಠೇಶ್ವರ ದೇವಾಲಯದ ಕಂಬಕ್ಕಿಂತ ಹೆಚ್ಚಿಗೆ ಅಲಂಕಾರವಿದೆ. ಇಲ್ಲಿ ಗ್ರಾಸಮುಖದ ಮೇಲೆ ಸುರಳಿಯ ಬಂಧವಿದೆ. ಮತ್ತು ಕಳಸದ ಭಾಗವು ಹೂವಿನ ಚಿತ್ತಾರದ ನಾಸಿಯಿಂದ ಅಲಂಕಾರವಾಗಿದೆ. ನಾಸಿ ಮಧ್ಯದಲ್ಲಿ ಆಸೀನ ಜಿನಬಿಂಬವಿದೆ.[7] ಕಮಠೇಶ್ವರ ದೇವಾಲಯದ ಕಂಬದಲ್ಲಿ ದಿಂಬಿನಂತಹ ಭಾಗವಿದ್ದು ನಂತರದ ಕಾಲದಲ್ಲಿ ಇದು ಚೌಕಾಕಾರದ ದಿಂಬಿನಂತಿದೆ, ಮೇಲೆ ಹೇಳಿರುವ ಮೂರು ದೇವಾಲಯಗಳಲ್ಲಿ ತರಂಗ ಬೋದಿಗೆ ಇವೆ. ಆದರೆ ಹುಂಚದ ಬೋದಿಗೆಗಳು ಬಾದಾಮಿ ಚಾಲುಕ್ಯರ ಬೋದಿಗೆಗಳಂತೆ ಬಾಗಿರದೇ ಸ್ವಲ್ಪ ನೇರವಾಗಿವೆ.

ಪ್ರಸ್ತರದ ಭಾಗದಲ್ಲಿ ಬಂದಿರುವ ಶಿಲ್ಪಗಳ ಸಾಲೇ ಇನ್ನೊಂದು ಮುಖ್ಯ ವಿಷಯ. ಬೋಗಾರ ಬಸದಿಯಲ್ಲಿ ಭೂತಮಾಲೆ, ಹಂಸಮಾಲೆ, ವ್ಯಾಳಮಾಲೆಗಳಿವೆ.[8] ಈ ಶೈಲಿಯ ದೇವಾಲಯಗಳಲ್ಲಿ ಮಾತ್ರ ಕಾಣಬಹುದಾದ ಇನ್ನೊಂದು ಲಕ್ಷಣವೆಂದರೆ ಇದರ ಶಿಖರದಲ್ಲಿ ಸಾಮಾನ್ಯವಾಗಿ ಸುಕನಾಸಿ ಇರದೇ ಬೆಳವಣಿಗೆ ಪಡೆದ ಕೂಟದಂತಿರುತ್ತದೆ. ಕಮಠೇಶ್ವರ ದೇವಾಲಯವು ಏಕತಳ ವಿಮಾನವಾಗಿದ್ದು, ಆದರೆ ಮುಂದಿನ ದೇವಾಲಯಗಳ ಶಿಖರವು ದ್ವಿತಳ ವಿಮಾನವಾಗಿರುತ್ತದೆ. ಆದರೆ ಕಮಠೇಶ್ವರ ದೇವಾಲಯದಲ್ಲಿ ಮಾತ್ರ ಇದು ಹೆಚ್ಚಾಗಿ ಬೆಳೆದಿರದೆ ನಂತರದ ದೇವಾಲಯಗಳ ವಿಮಾನ ಶೈಲಿಯು ಬೆಳೆದು ಬಂದ ರೀತಿಗೆ ಉದಾಹರಣೆಯಾಗಿದೆ. ನಂತರದ ಕಾಲದ ದೇವಾಲಯಗಳಲ್ಲಿ ಗ್ರೀವದ ಭಾಗದಲ್ಲಿ ಶಿಖರದ ಸ್ತೂಪಿಯ ಪಾದವಿದ್ದು, ಇದು ಪ್ರವೇಶದ್ವಾರವನ್ನು ಹೊಂದಿರುವ ವಿಸ್ತಾರವಾದ ಗೂಡಿನಂತಿರುತ್ತದೆ. ಇದನ್ನು ಬೋಗಾರ ಬಸದಿ ಮತ್ತು ಪಾರ್ಶ್ವನಾಥ ದೇವಾಲಯಗಳನ್ನು ಉದಾಹರಿಸಿ ತಿಳಿಯಬಹುದಾಗಿದೆ.[9] ಗೂಢ ಮಂಟಪದ ದ್ವಾರಬಂಧವು ಚೆನ್ನಾಗಿ ಬಾಗಿದ್ದು, ಸಾಕಷ್ಟು ಅಲಂಕಾರಿಕವಾಗಿದೆ. ಇದರ 'ಭದ್ರ'ದಭಾಗದಲ್ಲಿ ಶಾಲಾಪಂಜರವೂ, ಕರ್ಣದ ಭಾಗದಲ್ಲಿ ಕಪೋತ ಪಂಜರವೂ ಇದೆ. ಇದರ ಕಪೋತ ಪಂಜರದ ಲಕ್ಷಣವು ಈ ಶೈಲಿಯ ವಿಶೇಷ ಲಕ್ಷಣವಾಗಿದೆ.[10]

ಪಾರ್ಶ್ವನಾಥ ದೇವಾಲಯ 'ಕೂಡು'ಗಳ ಮೇಲಿನ ಮಹಾನಾಸಿಯು, ಹೆಚ್ಚು ಅಲಂಕಾರಿಕವಾಗಿದೆ. ಪಾರ್ಶ್ವನಾಥ ಬಸದಿಯಲ್ಲಾದರೆ ಶಿಖರವು ಪೂರ್ಣರೂಪವನ್ನು ಪಡೆದಿದೆ. ಒಟ್ಟಾರೆ, ಇವು ಈ ದೇವಾಲಯಗಳ ಗುಂಪಿಗೇ ವಿಶಿಷ್ಟವೆನಿಸುವ . ಶೈಲಿಯನ್ನು ಪ್ರತಿನಿಧಿಸುತ್ತದೆ.

ಪಾರ್ಶ್ವನಾಥ ದೇವಾಲಯದ ಸಭಾಮಂಟಪದಲ್ಲಿ ಮೇಲ್ಭಾವಣಿಯಲ್ಲಿ ಅಷ್ಟದಿಕ್ಪಾಲಕರ ಪಟ್ಟಿಕೆಯಿದೆ.

ಇಲ್ಲಿಮಧ್ಯದಲ್ಲಿ ಯಕ್ಷನ ಬಿಂಬವಿದ್ದು ಅದು ಹೆಚ್ಚು ಅಲಂಕಾರಯುತವಾಗಿದೆ.

ಒಟ್ಟಾರೆ ಶಾಸನದ ಆಧಾರದ ಮೇಲೆ ಕಮಠೇಶ್ವರ ದೇವಾಲಯವನ್ನು ಕ್ರಿ.ಶ.೮ನೇ ಶತಮಾನದ್ದೆಂದು ಸ್ಪಷ್ಟವಾಗಿ ಹೇಳಬಹುದು. ಈ ಗುಂಪಿನ ಸಾಂತರ ಕಾಲದ ದೇವಾಲಯಗಳಲ್ಲಿ ಇದು ಪ್ರಾಚೀನವಾದ್ದದಲ್ಲದೇ, ಮಲೆನಾಡಿನ ಪ್ರಾದೇಶಿಕ ಶೈಲಿಯ ದೇವಾಲಯಗಳ ಆರಂಭಕ್ಕೆ ಇದೊಂದು ಉದಾಹರಣೆ ಎನ್ನಬಹುದು.

ಅನುವಾದ. ಕೊ. ವಸಂತಲಕ್ಷ್ಮಿ

---

## ಅಡಿ ಟಿಪ್ಪಣಿಗಳು

1) 'Karnataka State Gazetteer, Shimoga District" - (1978) P.644.
2) K.V.Ramesh and Madhava N.Katti, 'The Origin and Early History of the Santarasas of Santalige - 1000' P.25.
3) E.C., VIII (Part II) ಶಾ.ಸಂ.62.
4) Ibid - ಶಾ.ಸಂ.61.
5) ಅದೇ.
6) ಡಾ॥ ಶ್ರೀನಿವಾಸ ಪಾಡಿಗಾರರು ನೀಡಿದ ಮಾಹಿತಿ.
7) Dhakhy M.A., 1988 'Encyclopedia of Indian Architecture South India' P.222.
8) Ibid P.222.
9) Ibid, P.217 - 225.
10) Ibid, P.222.

ದೇವರ ಕೊಂಡಾರೆಡ್ಡಿ

# ಶಿವಪುರದ ಶಾಸನ

ಮೈಸೂರು ಜಿಲ್ಲೆಯ ಗುಂಡ್ಲುಪೇಟೆಯಿಂದ ಬಾಚ ಹಳ್ಳಿಗೆ ಹೋಗುವ ದಾರಿಯಲ್ಲಿ ಕಲ್ಲು ಕಟ್ಟೆ ಅಣೆ ಕಟ್ಟೆಗೂ ಶಿವಪುರಕ್ಕೂ ಮಧ್ಯೆ ರಸ್ತೆಯ ಬಲಬದಿಗೆ ಈ ಶಾಸನವಿದೆ. ಶಿಲಾಶಾಸನವು ಮುಂದಕ್ಕೆ ವಾಲಿದ್ದು, ಶಾನವಿರುವ ಭಾಗ ತಕ್ಷಣ ಕಾಣಬರುವುದಿಲ್ಲ. ಶಾನವಿ ರುವ ಪ್ರದೇಶದ ಹೊಲದಲ್ಲಿ ಹಿಂದೆ ಗ್ರಾಮವಿದ್ದಿರಬ ಹುದಾದ ಲಕ್ಷಣಗಳು ಕಾಣಬರುತ್ತವೆ.

ಶಾಸನವು ೧.೨೫ ಮೀಟರ್ ಎತ್ತರ ೧.೧೦ ಮೀಟರ್ ಅಗಲವಿದೆ. ಶಾಸನದ ಮೇಲ್ಭಾಗದಲ್ಲಿ ಹಸುಕರುಗಳನ್ನು ಕೊರೆದಿದೆ ಬಳಸಿದ ಕಲ್ಲು ಕಣ ಶಿಲೆ ಯಾಗಿದ್ದು ಅಲ್ಲಲ್ಲಿ ಉಬ್ಬು ತಗ್ಗುಗಳಿಂದ ಕೂಡಿದ್ದು, ಅಕ್ಷರಗಳನ್ನು ಆಳವಾಗಿ ಕೆತ್ತಿರುವುದಿಲ್ಲ. ಶಾಸನದಲ್ಲಿ ೯ ಸಾಲುಗಳು ಪೂರ್ತಿ ಕಾಣುತ್ತವೆ. ಉಳಿದ ಸಾಲುಗಳಲ್ಲಿ ೧೦, ೧೧ ಮತ್ತು ೧೨ ನೇ ಸಾಲುಗಳಲ್ಲಿ ಕೆಲವು ಭಾಗ ಮಾತ್ರ ಕಾಣುತ್ತವೆ. ಉಳಿದಂತೆ ಮಣ್ಣಲ್ಲಿ ಸೇರಿ ಹೋಗಿವೆ.

ಸಾಲಿನ ಪ್ರಾರಂಭದಲ್ಲಿ ಅಕ್ಷರ ಚಿಕ್ಕದಾಗಿದ್ದು, ಬರಬರುತ್ತಾ ದಪ್ಪವಾಗುತ್ತಾ ಹೋಗಿವೆ. ಅನುಸ್ವಾರ ಕ್ಕಿಂತ ಅನುನಾಸಿಕವನ್ನು ಹೆಚ್ಚಾಗಿ ಬಳಸಿರುತ್ತಾರೆ. ಶಾಸನ ಪಾಠಪೂರ್ಣವಾಗಿ ಕನ್ನಡದಲ್ಲಿದೆ. ಅನೇಕ ಕಡೆ ಶಾಸನ ಪಾಠವನ್ನು ಸ್ಪಷ್ಟವಾಗಿ ಓದುವುದು ಮತ್ತು ಅರ್ಥೈಸುವುದು ಬಹು ಕಷ್ಟ. 'ರಳ'ದ ಪ್ರಯೋಗ ಸ್ಪಷ್ಟವಾಗಿದೆ. ಅಕ್ಷರಗಳಲ್ಲಿ 'ಪ, ಮ, ಲ, ನ' ಮುಂತಾದ ಅಕ್ಷರಗಳು೧೧ನೇ ಶತಮಾನದ ಉತ್ತರಾ ರ್ಧಕ್ಕೆ ಹಾಕಬಹುದಾಗಿದೆ. ಆದರೂ ಹೆಗ್ಗಡದೇವನ ಕೋಟೆ ತಾಲೂಕಿನ ಶಾಸನ (ಎ.ಕ. III (ಪು) ಹೆ.ಕೋ. ೫೯) ಮತ್ತು ನಂಜನಗೂಡಿನ ಶಾಸನ (ಎ.ಕ.III (ಪು) ನಂ.ಗೂ ೨೧೩) ಗಳಲ್ಲಿ ಅಯ್ಯಾವೊಳೆ ಐನೂರ್ವ್ವರ ಉಲ್ಲೇಖವಿರುವುದರಿಂದಲೂ, ಅವುಗಳ ಕಾಲ ಕ್ರಮಾ ವಾಗಿ ಕ್ರಿ.ಶ. ೧೦೩೩ ಮತ್ತು ೧೦೧೫ ಆಗಿರುವುದ ರಿಂದ ಇವುಗಳ ಸರಿಸುಮಾರಿನಲ್ಲಿಯೇ ಈ ಶಾಸನ ಉದಿಸಿರಬೇಕು. ಹೀಗಾಗಿ ಬಹುಶಃ ಸು. ಕ್ರಿ.ಶ. ೧೦೨೦ಕ್ಕೆ ಹಾಕಬಹುದಾಗಿದೆ. ಶಾಸನದಲ್ಲಿ ಐನೂರ್ವರ ಸಮುಯದ ಎಟ್ಟಿತ್ತರ ಉಲ್ಲೇಖವಿದ್ದು ಅದು ಅಂಗ, ವೆಂಗಿ, ಕಳಿಂಗ, ಕಾಶ್ಮೀರ, ಸಿಂಗಳ, ಚಕ್ರಗೊಟ್ಟ ಮುಂತಾದ ದೇಶಗ ಳೊಂದಿಗೆ ವ್ಯಾಪಾರ ನಡೆಸುತ್ತಿದ್ದರೆಂಬಂತೆ ಹೇಳಿರುತ್ತಾರೆ. ಇವರು ಹರಿಹರ, ಭಗವತಿ, ಬ್ರಹ್ಮ ಮುಂತಾದ ದೈವಗಳ ಆರಾಧಕರಾಗಿದ್ದರು. ಇವರು ತಮ್ಮನ್ನು ಭಟರಿಯ ಮಕ್ಕ ಳೆಂದು ಕರೆದುಕೊಂಡಿದ್ದಾರೆ. ಈ ಎಟ್ಟಿತ್ತರ ಸಮಯದವರು ಕುಪ್ಪದ ಭಗವತಿಗೆ ದಾನ ನೀಡುತ್ತಾರೆ.

ಈ ಶಾಸನದಲ್ಲಿ ಕೊಡಗೂರ್ನಾಡು, ಕುಡುಂಬಿ ನಾಡು ಮಲೆನಾಡು, ಕೊಜ್ಗನಾಡಿನ ಉಲ್ಲೇಖ ಬರು ತ್ತದೆ. ಕುಪ್ಪ ಎಂಬ ಊರಿನ ಉಲ್ಲೇಖ ಬರುತ್ತದೆ.

ಈಗ ಶಾಸನವಿರುವ ಸ್ಥಳದ ಹಿಂದಿನ ಹೊಲದ ಬಯಲೇ ಆಗಿದೆ, ಈ ಊರು. ಈ ಹೊಲವನ್ನು ಕುಪ್ಪದ ಹೊಲವೆಂದು ಈಗಲೂ ಕರೆಯುತ್ತಾರೆ. 'ಕುಪ್ಪದ ಭಗವತಿ' ಎಂದು ಕರೆಯುವ ದೇವಾಲಯವು ಈಗಿನ ಕಲ್ಲುಕಟ್ಟೆ ಅಣೆಕಟ್ಟೆಯಲ್ಲಿ ಮುಳುಗಿರುವ ದೇವಾಲಯಗಳಲ್ಲಿ ಒಂದಾಗಿರಬೇಕು.

ಶಿವಪುರದ ಶಾಸನ ಪಾಠ

೧.೨೫ ಮೀ X ೧.೧೦ ಮೀ.

1. ಸ್ವಸ್ತಿ ಸಮಸ್ತಾಙ್ಗಬೆಙ್ಗೆ ಕಳಿಙ್ಗ ಕಾಶ್ಮೀರ ಸಿಙ್ಗಳ ದ್ವೀಪ ಪಾರಸ.ಗ.

2. ಬರ್ಬರ ಸ್ವರ್ಣ್ನ ವಿಷಯ ಮಙ್ಗಳ ಮಾಪನ ಬೊಲ್ಲ ಗುರ್ಜ್ಜರ· ಶ್ರೇಷ್ಠ ಮಾ.....

3. ದಯಾ ತ್ರಿಮುಟಿ ಕೋ ಶ್ಠಳ ತುರುಷ್ಕ ಯುಧಯಾಣ್ಡ ಲಾ

4. ವಿ ಹಿಮಮನ್ತ ಭವ್ವಮ್ಬರುವ ಚಕ್ರಗೊಟ್ಟ ಬಲಿ ವಿಷ

5. ಯ ನಾಳಿಕೇಸರಮ್ಬೋದಿತ ಪುಣ್ಡರೀಕ ಲಮ್ಬಕ

